# ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳು
## (1948ರಿಂದ ಸಮಕಾಲೀನವರೆಗೆ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ರುದ್ರಕುಮಾರ್

ಮಾರ್ಗದರ್ಶಕರು
ಡಾ. ಎನ್. ಚಿನ್ನಸ್ವಾಮಿ ಸೋಸಲೆ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳು

## (೧೯೪೮ರಿಂದ ಸಮಕಾಲೀನವರೆಗೆ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
**ರುದ್ರಕುಮಾರ್**

ಮಾರ್ಗದರ್ಶಕರು
**ಡಾ. ಎನ್. ಚಿನ್ನಸ್ವಾಮಿ ಸೋಸಲೆ**
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ರುದ್ರಕುಮಾರ್** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳು**(೧೯೪೮ರಿಂದ ಸಮಕಾಲೀನವರೆಗೆ) ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ **ಚರಿತ್ರೆ** ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

ದಿನಾಂಕ : 20.04.2018

ಸ್ಥಳ : ವಿದ್ಯಾರಣ್ಯ

ಡಾ. ಎನ್. ಚಿನ್ನಸ್ವಾಮಿ ಸೋಸಲೆ
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಡಾ ಎನ್. ಚಿನ್ನಸ್ವಾಮಿ ಸೋಸಲೆ
ಪ್ರಾಧ್ಯಾಪಕರು
ಚರಿತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಸಂಶೋಧಕರ ಘೋಷಣಾ ಪತ್ರ

**ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳು(೧೯೪೮ರಿಂದ ಸಮಕಾಲೀನವರೆಗೆ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಚರಿತ್ರೆ ವಿಭಾಗದ, ಪ್ರಾಧ್ಯಾಪಕರಾದ **ಡಾ. ಎನ್. ಚಿನ್ನಸ್ವಾಮಿ ಸೋಸಲೆ**, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು


**ರುದ್ರಕುಮಾರ್**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬


ದಿನಾಂಕ : 20/04/2018
ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ : ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ಸ್ವರೂಪ
೧.೩. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ
೧.೪. ಅಧ್ಯಯನದ ವ್ಯಾಪ್ತಿ

## ಅಧ್ಯಾಯ : ಒಂದು

# ಪ್ರಸ್ತಾವನೆ

ಪ್ರಸ್ತುತ ಅಧ್ಯಯನವು ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳು(೧೯೪೮ರಿಂದ ಸಮಕಾಲೀನವರೆಗೆ) ಎಂಬ ವಿಷಯವನ್ನು ವಿವರವಾಗಿ ಹೊಂದಿದೆ. ಯಾದಗಿರಿ ಜಿಲ್ಲೆ ಎಂದರೆ, ಯಾದಗಿರಿ, ಶಹಾಪುರ, ಸುರಪುರ, ಹುಣಸಗಿ, ವಡಗೇರ, ಗುರುಮಠಕಲ್ ತಾಲ್ಲೂಕುಗಳ ಭಾಗಗಳನ್ನು ಒಳಗೊಂಡಿದೆ. ಯಾದಗಿರಿ ಜಿಲ್ಲೆಯು ಇಂದಿನ ಕರ್ನಾಟಕದ ಎರಡನೇ ಅತಿ ಚಿಕ್ಕ ಜಿಲ್ಲೆಯಾಗಿದೆ. ಈ ಹೊತ್ತಿನ ಯಾದಗಿರಿ ಜಿಲ್ಲೆಯ ಭೌಗೋಳಿಕ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು, ಈ ಭೌಗೋಳಿಕ ಪರಿಸರದ ಸಾಮಾಜಿಕ ಚಳುವಳಿಯ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಈ ಜಿಲ್ಲೆಯು ಮೌರ್ಯರ ಕಾಲದಲ್ಲಿ ದಖನ್ ಪ್ರದೇಶಕ್ಕೆ ಸೇರಿಕೊಂಡಿತ್ತು. ಅನಂತರದ ಕಾಲದಲ್ಲಿ 'ಕರ್ನಾಟಕ' ರಾಜ್ಯವು ರೂಪುಗೊಂಡ ಮೇಲೆ ಈ ಯಾದಗಿರಿ ಜಿಲ್ಲೆ ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿ ಒಳಗೊಂಡಿತು.

ಮಧ್ಯಯುಗದಲ್ಲಿ ಈ ಜಿಲ್ಲೆಯ ಭಾಗಗಳು ಬಹಮನಿ ಮತ್ತು ಆದಿಲ್‌ಶಾಹಿ ರಾಜ್ಯಗಳ ಆಳ್ವಿಕೆಗೆ ಒಳಪಟ್ಟಿದ್ದವು. ಆಧುನಿಕ ಕಾಲದಲ್ಲಿ ಈ ಜಿಲ್ಲೆಯ ಪ್ರದೇಶಗಳು ಹೈದರಾಬಾದ್ ನಿಜಾಮರ ಅಧೀನ ಪ್ರದೇಶವಾದ 'ಹೈದರಾಬಾದ್ ಕರ್ನಾಟಕ' ಎಂಬ ಪ್ರದೇಶದಲ್ಲಿದ್ದವು. 'ಹೈದರಾಬಾದ್ ಕರ್ನಾಟಕ' ಎನ್ನುವುದು ಬೀದರ್, ಗುಲಬರ್ಗಾ ಮತ್ತು ರಾಯಚೂರು ಈ ಮೂರು ಜಿಲ್ಲೆಗಳ ಭಾಗಗಳನ್ನು ಒಳಗೊಂಡಿದೆ. ಈ ಮೂರು ಜಿಲ್ಲೆಗಳು ರಾಜ್ಯಗಳ ಪುನರ್ವಿಂಗಡಣೆಯಾದಾಗ ಕರ್ನಾಟಕ ರಾಜ್ಯಕ್ಕೆ ಸೇರಿದವು. ಕರ್ನಾಟಕ ರಾಜ್ಯದಲ್ಲಿ ಗುಲ್ಬರ್ಗಾ ಜಿಲ್ಲೆ ಅತ್ಯಂತ ದೊಡ್ಡ ಜಿಲ್ಲೆ. ಗುಲ್ಬರ್ಗಾದಿಂದ ಯಾದಗಿರಿ ತಾಲ್ಲೂಕನ್ನು ಯಾದಗಿರಿ ಜಿಲ್ಲೆಯನ್ನಾಗಿ ೨೦೦೯ ಡಿಸೆಂಬರ್ ೩೦ರಂದು ವಿಭಜಿಸಿ ಪ್ರಸ್ತುತ ಅಧ್ಯಯನದ ಕ್ಷೇತ್ರವಾದ ಯಾದಗಿರಿ ಜಿಲ್ಲೆಯನ್ನು ಸ್ಥಾಪಿಸಲಾಯಿತು. ಹೀಗೆ ಈ ಜಿಲ್ಲೆಯ ಈ ಹೊತ್ತಿನ ಭೌಗೋಳಿಕ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಅದರ ಆಚೆ-ಈಚೆ ಈ ಜಿಲ್ಲೆಯಲ್ಲಿ ಸಂಘಟಿಸಿದ ಸಾಮಾಜಿಕ ಚಳುವಳಿಗಳನ್ನು, ಅದರಿಂದಾದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ವಿಶೇಷವಾಗಿ, ಈ ಅಧ್ಯಯನದಲ್ಲಿ ೧೯೪೮ರಿಂದ ಸಮಕಾಲೀನವರೆಗಿನ ಸಮಾಜದಲ್ಲಿ ಆದ ಸುಧಾರಣೆ ಹಾಗೂ ಬದಲಾವಣೆಗಳನ್ನು, ಅದರಲ್ಲೂ

ಬಹಳ ಮುಖ್ಯವಾಗಿ ಅಲ್ಪಸಂಖ್ಯಾತ, ಹಿಂದುಳಿದ, ದಲಿತ, ರೈತ, ಕಾರ್ಮಿಕ ಹಾಗೂ ಮಹಿಳೆಯರ ಬದುಕಿನಲ್ಲಿ ಆದ ಪಲ್ಲಟಗಳನ್ನು ಗುರುತಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಯಾವುದೇ ಒಂದು ದೇಶದ, ಪ್ರದೇಶದ ಹಾಗೂ ಸ್ಥಳದ ಇತಿಹಾಸವನ್ನು ಅವಲೋಕಿಸಿದಾಗ ಆಯಾ ಸಂದರ್ಭದಲ್ಲಿ ಹುಟ್ಟಿಕೊಳ್ಳುವ ಸಮಸ್ಯೆಗಳ ಕಾರಣಗಳಿಂದಾಗಿ ಚಳುವಳಿಗಳು ಹುಟ್ಟಿಕೊಂಡು, ನಿರಂತರವಾಗಿ ನಡೆದುಬಂದಿರುವುದು ಕಂಡುಬರುತ್ತದೆ. ಪ್ರತಿಯೊಂದು ಚಳುವಳಿಯೂ ಆಯಾ ದೇಶದ, ಆಯಾ ಪ್ರದೇಶದ ಸಮಾಜ, ಧರ್ಮ, ಜಾತಿ, ಸಮುದಾಯಗಳ ಹಿನ್ನೆಲೆಯಲ್ಲಿ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕಾರಣಗಳಿಗಾಗಿ ನಡೆದಿವೆ. ತಮ್ಮ ತಮ್ಮ ಸಮುದಾಯಗಳ ಅಸ್ತಿತ್ವದ ಉಳಿವಿಗಾಗಿ, ಸಮಾನತೆಗಾಗಿ ಹೋರಾಟಗಳು ನಿರಂತರವಾಗಿರುತ್ತವೆ. ಸಮಾಜದಲ್ಲಿನ ಅಸಮಾನತೆಯನ್ನು, ಅನ್ಯಾಯವನ್ನು, ಶೋಷಣೆಯನ್ನು ಪ್ರತಿಭಟಿಸಿ ತಮ್ಮ ಅಗತ್ಯಗಳನ್ನು ಪಡೆಯುವಲ್ಲಿ ಸೈದ್ಧಾಂತಿಕವಾಗಿ ಹೋರಾಟಗಳು ಸೃಷ್ಟಿಗೊಳ್ಳುತ್ತವೆ ಮತ್ತು ಪ್ರತಿಯೊಂದು ಹೋರಾಟಗಳು ತಮ್ಮದೇ ಆದ ಸಿದ್ಧಾಂತ, ಉದ್ದೇಶಗಳನ್ನಿಟ್ಟುಕೊಂಡು ಸಾಗುತ್ತವೆ. ಹೀಗೆ ಸಾಗುವ ಪ್ರಕ್ರಿಯೆಯಲ್ಲಿ ಹಲವು ಸ್ವರೂಪಗಳನ್ನು ಪಡೆದು ಹಲವು ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಅದರಲ್ಲೂ ಭಾರತದ ಸಂದರ್ಭದಲ್ಲಿ ರಾಜಕೀಯ ಚಳುವಳಿ ಮತ್ತು ಸಾಮಾಜಿಕ ಚಳುವಳಿಗಳು ಬೇರೆ ಬೇರೆ ಸ್ತರದಲ್ಲಿ ನಡೆದಿವೆ. ಈ ರೀತಿ ನಡೆದ ಚಳುವಳಿಗಳಿಂದ ಭಾರತೀಯ ಸಮಾಜದ ಸಮತೋಲನತೆ ಇಂದು ಒಂದು ಘಟ್ಟ ಮುಟ್ಟಿದೆ.

ಭಾರತದಂತಹ ವೈವಿಧ್ಯಮಯ ದೇಶದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯ ಪಾತ್ರ ಅತ್ಯಂತ ಮಹತ್ವವನ್ನು ಪಡೆದಿದೆ. ಸಮಾಜದ ಕಟ್ಟಕಡೆಯ ಮನುಷ್ಯನೂ ಕೂಡ ನೆಮ್ಮದಿಯಿಂದ ಬದುಕಬೇಕೆನ್ನುವುದು ಪ್ರಜಾಪ್ರಭುತ್ವದ ಆಶಯ. ಆದರೆ ಜಾರಿಯಲ್ಲಿರುವ ವ್ಯವಸ್ಥೆಯ ಆಧಾರದ ಮೇಲೆ ಹರಡಿ ಹಂಚಿ ಹೋಗಿರುವ ದುರ್ಬಲ ಸಮುದಾಯಗಳು ನಿರಾತಂಕವಾಗಿ ಬದುಕುವುದಕ್ಕೆ ಅಡ್ಡಿಯಾಗಿದೆ. ಇಂತಹ ಅವ್ಯವಸ್ಥೆಯನ್ನು ನಿವಾರಿಸಿ ಸಮಾನತೆಯನ್ನು, ಸ್ವಾತಂತ್ರ್ಯವನ್ನು ಜಾರಿಗೆ ತರುವ ಧ್ಯೇಯದಿಂದ ಅನೇಕ ಚಳುವಳಿಗಳು ನಡೆದಿವೆ ಮತ್ತು ನಡೆಯುತ್ತಿವೆ. ಇಂತಹ ಚಳುವಳಿಗಳ ಸಾಲಿನಲ್ಲಿ ತನ್ನದೇ ಆದ ವೈಶಿಷ್ಟ್ಯ ಗಳೊಂದಿಗೆ ಭಿನ್ನತೆಯೊಂದಿಗೆ ಚಳುವಳಿಯಲ್ಲಿ ತೊಡಗಿಕೊಂಡಿರುವ ಪ್ರದೇಶವೇ ಯಾದಗಿರಿ ಜಿಲ್ಲೆ.

ಹೈದರಾಬಾದ್ ನಿಜಾಮರ ಪ್ರಭುತ್ವದಿಂದ ಕರ್ನಾಟಕದ ಪ್ರಜಾಪ್ರಭುತ್ವದ ಜನಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರಗೊಂಡಾಗ, ಯಾದಗಿರಿ ಪ್ರದೇಶ ಮತ್ತು ಅದರ ಸಮೃದ್ಧಿಯ ಕನಸು ಕಂಡ ಈ ಜಿಲ್ಲೆಯ ಜನರಿಗೆ ಬದಲಾವಣೆಯು ನೆಮ್ಮದಿ ಮತ್ತು ಸುಧಾರಣೆಯನ್ನು ತರಲಿಲ್ಲ. ಬದಲಾಗಿ ನಿಜಾಮರ ಪ್ರಭುತ್ವದಿಂದ ಪ್ರಜಾಪ್ರಭುತ್ವದವರೆಗೆ ನಡೆದು ಬಂದ ದಾರಿ ಅಸಮಾನತೆಯ ದಾರಿಯಾಯಿತು. ಇಲ್ಲಿನ ಜನರ ಬದುಕು ಅಭಿವೃದ್ಧಿಯ ಚಾಲನೆಗೆ ಒಳಪಡದೆ ನಿಂತ ನೀರಾಯಿತು. ಭಾಷಾವಾರು ಪ್ರಾಂತ್ಯ ರಚನೆಯಾಗಿ ಅರ್ಧ ಶತಮಾನದ ನಂತರವೂ ಇಂದು ರಾಜ್ಯದ ಒಂದು ಭಾಗವು ಪ್ರಗತಿ ಹೊಂದಿ ಸಮರ್ಥವಾಗಿದ್ದರೆ ಅದೇ ರಾಜ್ಯದ ಇನ್ನೊಂದು ಭಾಗವು ಅಭಿವೃದ್ಧಿಯಿಂದ ವಂಚಿತವಾಗಿ ಯಾದಗಿರಿ ಜಿಲ್ಲೆಯು ಎಲ್ಲಾ ಕ್ಷೇತ್ರಗಳಲ್ಲಿಯೂ ಅತಿ ಹಿಂದುಳಿದಿದ್ದು ಇನ್ನೂ ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿದೆ.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಈ ಜಿಲ್ಲೆಯ ವಿವಿಧ ಕ್ಷೇತ್ರದಲ್ಲಿ ಆಗಿರುವ ಪ್ರಗತಿಯನ್ನು ಗಮನಿಸಿದರೆ ಸಾಕ್ಷರತೆಯ ಪ್ರಮಾಣ ಕಡಿಮೆಯಾಗುತ್ತಿರುವುದು, ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವುದು, ನೀರಾವರಿ ಯೋಜನೆಗಳು ಅಪೂರ್ಣವಾಗಿರುವುದು, ಸಾರಿಗೆ ಸಂಪರ್ಕ ವ್ಯವಸ್ಥೆ ಸರಿಯಾಗಿ ಇಲ್ಲದಿರುವುದು, ವಿದ್ಯುತ್ ಸಂಪರ್ಕದ ತೊಂದರೆ ಹಾಗೂ ಇಂತಹ ಅನೇಕ ಅಂಶಗಳು ಇಲ್ಲಿನ ಹಿಂದುಳಿದಿರುವಿಕೆಗೆ ಕಾರಣವಾಗಿರುವುದನ್ನು ಗಮನಿಸಬಹುದಾಗಿದೆ. ಹಾಗೆಯೇ ಈ ಜಿಲ್ಲೆಯಲ್ಲಿ ಪ್ರಬಲ ಜಾತಿ ವರ್ಗವು ತನ್ನ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳಲು ಹೇಗೆ ಪ್ರಭುತ್ವದ ಜೊತೆ ಹೊಂದಾಣಿಕೆಯನ್ನು ಮಾಡಿಕೊಂಡಿತು ಹಾಗೂ ಇಂತಹ ವ್ಯವಸ್ಥೆಯಲ್ಲಿ ಪ್ರಯೋಜನ ಪಡೆದ ವರ್ಗ ಯಾವುದು ಮತ್ತು ಶೋಷಣೆಗೆ ಒಳಗಾದ ವರ್ಗ ಯಾವುದು ಎನ್ನುವ ವಿಷಯ ಸಂಶೋಧನೆಗೆ ಸೂಕ್ತವಾಗಿದೆ.

ಹಿಂದುಳಿದ ಪ್ರದೇಶವಾದ ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳ ಪಾತ್ರದ ಬಗ್ಗೆ ಪ್ರಸ್ತುತ ಅಧ್ಯಯನ ಮಾಡಬೇಕಾದ ಅವಶ್ಯಕತೆ ಬಹಳ ಇದೆ. ಬಡತನ, ಅನಕ್ಷರತೆ, ನಿರುದ್ಯೋಗ, ಜಾತಿ ಪ್ರಾಬಲ್ಯತೆ ಮತ್ತು ಜಮೀನ್ದಾರಿ ಪದ್ಧತಿಗಳು ಇಂದಿಗೂ ಜಾರಿಯಲ್ಲಿರುವ ಈ ಜಿಲ್ಲೆಯಲ್ಲಿ ವಿವಿಧ ಮಾದರಿಯ, ವಿವಿಧೋದ್ದೇಶದ, ವಿವಿಧ ಸ್ವರೂಪದ ಚಳುವಳಿಗಳು ಹಾಗೂ ಪ್ರಜಾಪ್ರಭುತ್ವವಿರುವ ಇಂದಿನ ಹಂತದಲ್ಲಿ ಚಳುವಳಿಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಇಲ್ಲಿ ಸಮಯ ಸಂದರ್ಭಕ್ಕೆ ಹಾಗೂ ಆಯಾ ಸನ್ನಿವೇಶಕ್ಕೆ ತಕ್ಕಂತೆ ಚಳುವಳಿಗಳು ತಲೆ ಎತ್ತಿ ಕಾಲಕ್ರಮೇಣ ತನ್ನ ಚುರುಕುತನ ಕಳೆದುಕೊಂಡಿದ್ದರೆ, ಇನ್ನೂ ಕೆಲವು ಚಳುವಳಿಗಳು ಜೀವಂತವಾಗಿದ್ದು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಸಾಗುತ್ತಿವೆ. ಇಂತಹ ಪ್ರದೇಶದಲ್ಲಿ ಅಸಮಾನತೆ, ಶೋಷಣೆ, ದೌರ್ಜನ್ಯ, ನಿರ್ಲಕ್ಷ್ಯಗಳನ್ನು ವಿರೋಧಿಸಿ ಆರಂಭವಾದ ಹೋರಾಟಗಳು ಅದರಲ್ಲೂ ಕಾರ್ಮಿಕ, ರೈತ, ದಲಿತ ಹಾಗೂ ಮಹಿಳಾ ಚಳುವಳಿಗಳ ಹುಟ್ಟು, ಬೆಳವಣಿಗೆ ಮತ್ತು ಇವುಗಳ ಪರಿಣಾಮಗಳನ್ನು ಅಧ್ಯಯನ ಮಾಡುವ ಹಾಗು ವಿಶ್ಲೇಷಿಸುವ ಅವಶ್ಯಕತೆ ಇದೆ. ಹಾಗೆಯೇ ಚಳುವಳಿಗಳು ಸಾಮಾಜಿಕ ಬದಲಾವಣೆ ತರುವಲ್ಲಿ ನಿರ್ವಹಿಸಿದ ಪಾತ್ರ ಇತಿಹಾಸ ದಾಖಲಾತಿಗೆ ಅರ್ಹವಾಗಿದೆ. ಸ್ವಾತಂತ್ರ್ಯದ ನಂತರವೂ ಚಳುವಳಿಗಳು ನಿರೀಕ್ಷಿತ ಮಟ್ಟದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಜಾಗೃತಿಯನ್ನು ಏಕೆ ಮೂಡಿಸಿಲ್ಲ ಎನ್ನುವ ಅಂಶವೂ ಸಂಶೋಧಕರಿಗೆ ವಸ್ತು ಮೂಲ ವಿಷಯವಾಗಿದೆ. ಇಂತಹ ಯಾದಗಿರಿ ಜಿಲ್ಲೆಯ ಪ್ರದೇಶದ ಸಾಮಾಜಿಕ ಚಳುವಳಿಗಳ ಬಗ್ಗೆ ಇದುವರೆಗೆ ಆಗಿರುವ ಅಧ್ಯಯನಗಳು ಯಾವುವು, ಇದುವರೆಗೆ ಈ ವಿಷಯದ ಬಗ್ಗೆ ಯಾವ ದೃಷ್ಟಿಕೋನದಲ್ಲಿ ಅಧ್ಯಯನಗಳಾಗಿವೆ. ಪ್ರಸ್ತುತ ಸಂಶೋಧನೆಯ ದೃಷ್ಟಿಕೋನ ಏನು ಎನ್ನುವುದರ ಜೊತೆಗೆ ತುಲನಾತ್ಮಕ ಅಧ್ಯಯನವನ್ನು ಕೈಗೊಳ್ಳಲು ಪ್ರಯತ್ನಿಸಲಾಗಿದೆ.

"ಚಳುವಳಿ ಯಾರಿಗಾಗಿ ಮತ್ತು ಏತಕ್ಕಾಗಿ ಎಂಬುದು ಒಂದೇ ಪ್ರಶ್ನೆಯ ಎರಡು ಮುಖಗಳು. ಯಾರಿಗಾಗಿ ಚಳುವಳಿ ಎಂಬುದನ್ನು ಅವಲಂಬಿಸಿ. ಏತಕ್ಕಾಗಿ ಚಳುವಳಿ ಎಂಬುದು ರೂಪಿತವಾಗುತ್ತದೆ. ಅದೇ ರೀತಿ. ಏತಕ್ಕಾಗಿ ಚಳುವಳಿ ಎಂಬುದನ್ನು ಅವಲಂಬಿಸಿ ಯಾರಿಗಾಗಿ

ಚಳುವಳಿ ಎಂಬುದು ತೀರ್ಮಾನವಾಗುತ್ತದೆ. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಶೋಷಣೆ, ದಬ್ಬಾಳಿಕೆ, ಪ್ರಭುತ್ವ ಮುಂತಾದ ಕಾರಣಗಳಿಗಾಗಿ ಪ್ರತಿಭಟನೆ ನಡೆದಿರುತ್ತದೆ. ಆಧುನಿಕ ಭಾರತದ ಇತಿಹಾಸದ ಚರಿತ್ರೆಯಲ್ಲೂ, ಸ್ವಾತಂತ್ರ್ಯ ಚಳುವಳಿಯ ವಿದೇಶಿಯರ ದಬ್ಬಾಳಿಕೆಯ ವಿರುದ್ಧ ನಡೆದರೂ, ಆ ಅವಧಿಯಲ್ಲಿ ದೇಶದಲ್ಲಿದ್ದ ಅಸಮಾನತೆ, ಜಾತಿ ಶೋಷಣೆ ವಿರುದ್ಧ ನಡೆದ ಹಲವಾರು ಚಳುವಳಿಗಳ ಸ್ವರೂಪವೂ ಇದೆ. ದಲಿತ ಚಳುವಳಿಯೊಂದು ಸಾಮಾಜಿಕ, ಆರ್ಥಿಕ, ರಾಜಕೀಯ ಚಳುವಳಿಯೆಂದೇ ಗುರುತಿಸಿದರೂ, ಇದೊಂದು ಸಾಮಾಜಿಕ, ಚಳುವಳಿಯೆಂದೂ ನಿಖರವಾಗಿ ಹೇಳಬಹುದು. ಏಕೆಂದರೆ, ಆರ್ಥಿಕ ಶೋಷಣೆಗಿಂತ, ಸಾಮಾಜಿಕ ಶೋಷಣೆ ಬಹಳ ಅಮಾನವೀಯ ರೂಪದಲ್ಲಿ ದಲಿತರ ಮೇಲೆ ಅವ್ಯಾಹತವಾಗಿ, ಸಾವಿರಾರು ವರ್ಷಗಳಿಂದಲೂ ನಡೆಯುತ್ತಾ ಬಂದಿದ್ದರ ವಿರುದ್ಧವಾಗಿ ನಡೆಸಿದ ಚಳುವಳಿ ಇದಾಗಿದೆ. ಆರಂಭದ ದಲಿತ ಚಳುವಳಿ ಒಂದು ಸಾಮಾಜಿಕ ಚಳುವಳಿ ಎಂದು ನಾವು ಪರಿಗಣಿಸಿದರೆ, ಅದರ ಸ್ವರೂಪವನ್ನು ವಿಶ್ಲೇಷಿಸುವುದು ಬಹಳ ಮುಖ್ಯವೆನಿಸುತ್ತದೆ. ಜೋಸೆಫ್ ಗನ್‌ಫಿಲ್ ಎನ್ನುವವರು Social movements are socially shared demands for a change in some aspects of social order ಎಂದು ಅಭಿಪ್ರಾಯ ಪಡುತ್ತಾರೆ. ಅದೇ ರೀತಿ ಅಮೇರಿಕದ ಖ್ಯಾತ ಸಮಾಜಶಾಸ್ತ್ರಜ್ಞ ಹೆಬರ್ಲೆ ಅವರು Social Movements as a collective attempts to create entirely a new social order ಎಂದು ಹೇಳಿದ್ದಾರೆ. ಓ.ಕೆ. ಮ್ಯಾಮನ್ ಅವರು ದಲಿತ ಚಳುವಳಿಗೆ ಕಾರಣವನ್ನು ಈ ರೀತಿಯಾಗಿ ವಿವರಿಸುತ್ತಾರೆ. The source of deprivation of Dalits are: low ritual status(Socio-cultural depression), appelling poverty(Economic exploition, and powerlessness (political desen frisement). ಸಾಮಾಜಿಕವಾಗಿ, ಆರ್ಥಿಕವಾಗಿ ತುಳಿಯಲ್ಪಟ್ಟ ದಲಿತರುನ್ನು ತಮ್ಮ ಹಕ್ಕುಗಳಿಗಾಗಿ ಹೋರಾಟವನ್ನು ಕೈಗೊಂಡಿರುವುದರ ಹಿಂದೆ ಹೋರಾಟಗಳ ಪರಂಪರೆಯೇ ಇದೆ. ಯಾವುದೇ ಸಂಘಟನೆ, ಚಳುವಳಿ ತಕ್ಷಣವೇ ಹುಟ್ಟಿಕೊಳ್ಳುವಂತದ್ದಲ್ಲ. ವೈಯಕ್ತಿಕ ಮಟ್ಟದಲ್ಲಿ ಅನ್ಯಾಯ, ದೌರ್ಜನ್ಯಗಳಿಗೆ ತಕ್ಷಣ ಪ್ರತಿಕ್ರಿಯೆ ತೋರಿಸುವಂತೆ, ಸಾಮಾಜಿಕ ಮಟ್ಟದಲ್ಲಿ ತೋರಿಸಲಾಗುವುದಿಲ್ಲ.

ಸಾಮೂಹಿಕ ಮಟ್ಟದಲ್ಲಿ ಅಂತಹ ಅನ್ಯಾಯ, ದೌರ್ಜನ್ಯಗಳು ಹರಳುಗಟ್ಟಿ ತಮ್ಮ ಬದುಕುವ ಹಕ್ಕನ್ನೇ ಕಸಿಯಲು ನಡೆಯುತ್ತಿರುವ ಅಪಾಯಕಾರಿ ಅಂಶಗಳು ಎಂಬ ಪ್ರಜ್ಞೆ ಎಲ್ಲರಲ್ಲೂ ಸ್ವಲ್ಪ ಸ್ವಲ್ಪವಾದರೂ ಮೂಡುತ್ತಾ ಬಂದಾಗ ಅದು ಪ್ರತಿಭಟನೆ ಎನಿಸಿಕೊಳ್ಳುತ್ತದೆ. ಇಂತಹ ಪ್ರತಿಭಟನೆ ತೀವ್ರವಾದಾಗ ಅದು ಹೋರಾಟ ಅಥವಾ ಚಳುವಳಿ ಎನಿಸಿಕೊಳ್ಳುತ್ತದೆ.[೧]

ಪ್ರತಿಯೊಂದು ಚಳುವಳಿಗಳು ಕೆಲವು ತತ್ವಾದರ್ಶಗಳನ್ನು ಹೊಂದಿರುತ್ತದೆ. ತತ್ವಾದರ್ಶಗಳಿಲ್ಲದೆ ಚಳುವಳಿಗಳು ಹುಟ್ಟಲಾರವು. ಚಳುವಳಿಯ ಉದ್ದೇಶವೇನು, ಈಗಿರುವ ವ್ಯವಸ್ಥೆಯ ಉದ್ದೇಶಗಳೇನು, ದೋಷರಹಿತ ಸಮಾಜವನ್ನು ಸ್ಥಾಪಿಸುವುದು ಹೇಗೆ ಎಂಬುದನ್ನು ತಿಳಿಸಿ, ತತ್ವಾದರ್ಶಗಳು ಜನರಿಗೆ ಮಾರ್ಗದರ್ಶನ ಮಾಡುತ್ತದೆ. ಎಲ್ಲಾ ಜನರನ್ನು ತತ್ವಾದರ್ಶಗಳಿಂದ ಬಂಧಿಸಿ, ಜನರನ್ನು ಒಗ್ಗೂಡಿಸುವ ಕೆಲಸ ಮಾಡುತ್ತವೆ. ಸಾಮಾಜಿಕ ಚಳುವಳಿಯ ಉದ್ದೇಶವು ಜಾಗೃತಿಯ ಮುಖಾಂತರ ಸಮಾಜವನ್ನು ಸುಧಾರಣೆಯತ್ತ ಒಯ್ಯುವ ಉದ್ದೇಶ ಹೊಂದಿರುತ್ತದೆ. ಹಾಗೆಯೇ ಜಾತಿರಹಿತ,

ಶೋಷಣೆರಹಿತ, ವರ್ಗರಹಿತ ಸಮಾಜ ಕಟ್ಟುವ ಮತ್ತು ಸಾಮಾನ್ಯ ಜನರ ಅದರಲ್ಲೂ ವಿಶೇಷವಾಗಿ ಹಿಂದುಳಿದ ಮತ್ತು ದಲಿತರ ಹಕ್ಕುಗಳನ್ನು ಸಂರಕ್ಷಿಸಿ ಮಾನವೀಯತೆ ಮತ್ತು ಆಧುನೀಕರಣದತ್ತ ಸಮಾಜವನ್ನು ಕೊಂಡೊಯ್ಯುವುದು ಚಳುವಳಿಯ ಉದ್ದೇಶವಾಗಿರುತ್ತದೆ.

"ಚಳುವಳಿಯ ಗುರಿ, ತತ್ವ, ಉದ್ದೇಶಗಳ ಆಧಾರದ ಮೇಲೆ ಅವುಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು. ಪ್ರಸ್ತುತ ಅಸ್ತಿತ್ವದಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮೂಲನೆಗೊಳಿಸಿ ಹೊಸ ವ್ಯವಸ್ಥೆಯನ್ನು ತರುವ ಉದ್ದೇಶ ಹೊಂದಿರುವ ಪ್ರಕಾರದ ಹೋರಾಟವನ್ನು ಕ್ರಾಂತಿಕಾರಿ ಚಳುವಳಿ ಎಂದು ಕರೆದರೆ, ಪ್ರಸ್ತುತ ವ್ಯವಸ್ಥೆಯಲ್ಲಿ ಕೆಲವು ಸುಧಾರಣೆಗಳನ್ನು ತರುವ ಉದ್ದೇಶ ಹೊಂದಿರುವ ಪ್ರಕಾರದ ಹೋರಾಟಗಳನ್ನು ಸುಧಾರಣವಾದಿ ಚಳುವಳಿಗಳೆನ್ನುತ್ತಾರೆ. ೧೭೮೯ರ ಫ್ರಾನ್ಸ್ ಕ್ರಾಂತಿ, ೧೯೧೭ರ ರಷ್ಯಾದ ಕ್ರಾಂತಿ, ಚೀನಾದ ಕಮ್ಯೂನಿಸ್ಟ್ ಕ್ರಾಂತಿ, ಭಾರತದ ಸ್ವಾತಂತ್ರ್ಯದ ಚಳುವಳಿ ಇವೆಲ್ಲವೂ ಕ್ರಾಂತಿಕಾರಕ ಚಳುವಳಿಗೆ ಉದಾಹರಣೆಗಳಾಗಿವೆ, ಮಹಿಳಾ ವಿಮೋಚನಾ ಚಳುವಳಿ, ಅಸ್ಪೃಶ್ಯತಾ ನಿವಾರಣೆ, ವಚನ, ಪರಿಸರ ಸಂರಕ್ಷಣೆ, ಪಾನನಿರೋಧ, ರೈತ, ಕಾರ್ಮಿಕರ ಚಳುವಳಿಗಳೆಲ್ಲಾ ಸುಧಾರಣಾವಾದಿ ಚಳುವಳಿಗೆ ಕೆಲವು ಉದಾಹರಣೆಗಳಾಗಿವೆ.

ಸಾಮಾಜಿಕ ಚಳುವಳಿಯ ಪರಿಕಲ್ಪನೆ ಆಧುನಿಕ ಕಾಲದ ಪರಿಕಲ್ಪನೆಯಾಗಿದ್ದರೂ, ಆಧುನಿಕ ಪೂರ್ವ ಸಮಾಜವೂ ಕೂಡ ಸಾಮಾಜಿಕ ಬದಲಾವಣೆಗೆ ತೊಡಗಿಸಿಕೊಂಡಿದ್ದು ಕಂಡುಬರುತ್ತದೆ. ಸಾಮಾಜಿಕ ಚಳುವಳಿಗಳು ಮಾನವ ಸಮಾಜದ ಅವಿಭಾಜ್ಯ ಅಂಗಗಳಾಗಿವೆ ಹಾಗೂ ಅವು ಮಾನವ ಇತಿಹಾಸದ ಜೊತೆ ಜೊತೆಯೇ ಸಾಗಿ ಬಂದಿವೆ. ಕ್ರಿ.ಶ. ೧೮ನೇ ಶತಮಾನದ ನಂತರ ನಡೆದ ಸಾಮಾಜಿಕ ಚಳುವಳಿಗಳು ಸಾಮಾಜಿಕ ವ್ಯವಸ್ಥೆ ಹಾಗೂ ಜೀವನದ ಮೇಲೆ ಅಪಾರ ಬದಲಾವಣೆ ಉಂಟುಮಾಡಿವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚಳುವಳಿಗಳು ನಡೆಯುವುದು ಸಹಜ. ಪ್ರಜಾಪ್ರಭುತ್ವ ಜೀವಂತವಾಗಿರಲು ಯಶಸ್ವಿಯಾಗಲು ಚಳುವಳಿಗಳು ಅನಿವಾರ್ಯ. ಪ್ರಜಾಪ್ರಭುತ್ವದಲ್ಲಿ ರಾಜ್ಯದ ಪ್ರಭುತ್ವ ನಿರಂಕುಶದ ಕಡೆಗೆ ಸಾಗಿದಾಗ ಮಾನವ ಹಕ್ಕುಗಳನ್ನು ಸಂರಕ್ಷಿಸಲು ಮತ್ತು ಸಮಾಜದ ಪರಿವರ್ತನೆಗಾಗಿ ಹುಟ್ಟಿಕೊಳ್ಳುವುದೇ ಚಳುವಳಿ."[೨] ಹೀಗಾಗಿ ಚಳುವಳಿ ಸಮಾಜದ ಒಟ್ಟು ಬದುಕಿನ ಪರಿವರ್ತನೆಗೆ ಸಂಬಂಧಿಸಿದ್ದಾಗಿರುತ್ತದೆ. ಚಳುವಳಿಯು ಸಾಮುದಾಯಿಕ ರಾಜ್ಯದ ಸಂಘಟನಾತ್ಮಕ ಕ್ರಿಯೆಯಾಗಿದೆ. ಇವು ಕೆಲವೊಮ್ಮೆ ಹೋರಾಟ, ದಂಗೆ, ಕ್ರಾಂತಿ, ಆಂದೋಲನ ಚಳುವಳಿಯ ಅರ್ಥ ರೂಪವನ್ನು ಪಡೆದಿವೆ. ಈ ಎಲ್ಲಾ ಪದಗಳಿಗೆ ಅವುಗಳ ಹಿಂದಿನ ದೃಷ್ಟಿಕೋನದಿಂದ ತನ್ನದೇ ಆದ ಅರ್ಥವಿದೆ. ಮಾರ್ಕ್ಸಿಸ್ಟ್ ಧೋರಣೆಯ ಹಿನ್ನೆಲೆಯಲ್ಲಿ ಇದು ಕ್ರಾಂತಿ ಹೋರಾಟದ ಪದ ರೂಪ ಪಡೆದರೆ ಆಂದೋಲನ, ಚಳುವಳಿ ಪದಗಳನ್ನು ಸಮಾಜವಾದಿ ಚಿಂತಕರು ಬಳಸುತ್ತಾರೆ.

"ಸಾಮಾಜಿಕ ಚಳುವಳಿಗಳ ಅಧ್ಯಯನಕ್ಕೆ ನಾಂದಿ ಹಾಡಿದ ಚಿಂತಕರೆಂದರೆ ಹರ್ಬರ್ಟ್ ಬ್ಲೂಮರ್, ರುಡೋಲ್ಫ್-ಹರ್ಬರ್ಲೆ ಮೊದಲಾದವರು. ಇವರು ಚಳುವಳಿಗಳನ್ನು ಅನೇಕ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ. ಹರ್ಬರ್ಟ್ ಬ್ಲೂಮರ್ ಪ್ರಕಾರ ಹೊಸ ಜೀವನಕ್ರಮವನ್ನು

ರೂಢಿಸುವುದಕ್ಕಾಗಿ ಮಾಡುವ ಸಾಮುದಾಯಿಕ ಪ್ರಯತ್ನವೇ ಚಳುವಳಿಯಾಗಿದೆ."[೩] "ಕಿಲ್ಲಿಯನ್‌ರ ಪ್ರಕಾರ, ಒಂದು ಜನಸಮೂಹವು ತಾನಿರುವ ಸಮಾಜದಲ್ಲಿ ಪರಿವರ್ತನೆಯನ್ನು ತರುವುದು ಮಾತ್ರವಲ್ಲ, ಅಂತಹ ಪರಿವರ್ತನೆಯನ್ನು ತಡೆಯಲು ಬಯಸುವುದು ಹಾಗೆಯೇ ಪರಿವರ್ತನೆಯನ್ನು ಬಯಸುವ ಅಥವಾ ತಡೆಯಲು ನಡೆಸುವ ನಿರಂತರ ಚಟುವಟಿಕೆಗಳು ಕೂಡ ಚಳುವಳಿ ಎನಿಸುವುದು."[೪] "ಕ್ರೇನ್ ಬ್ರೆಂಟನ್ ಪ್ರಕಾರ, ಪ್ರತಿಯೊಂದು ಚಳುವಳಿ ಕೆಲವು ತತ್ವಾದರ್ಶಗಳನ್ನು ಪ್ರೇರೇಪಿಸುತ್ತವೆ. ಇಂತಹ ತತ್ವಾದರ್ಶಗಳಿಲ್ಲದೇ ಸಾಮಾಜಿಕ ಚಳುವಳಿಗಳು ಹುಟ್ಟಲಾರವು. ತತ್ವಾದರ್ಶಗಳಿಲ್ಲದಿದ್ದರೆ ಚಳುವಳಿಗಳೇ ಇಲ್ಲ."[೫] ಎಂ.ಎಸ್.ಎ. ರಾವ್ ಪ್ರಕಾರ, "ಸಾಮಾಜಿಕ ಚಳುವಳಿಗೆ ಮೂಲಭೂತ ಕಾರಣವೇನೆಂದರೆ ಜನರಲ್ಲಿ ತಮ್ಮ ಪರಿಸ್ಥಿತಿಯ ಬಗ್ಗೆ ಹುಟ್ಟುವ ಅಸಂತೋಷ. ತಮಗೆ ನ್ಯಾಯವಾಗಿ ಸಿಗಬೇಕಾದದ್ದು ಸಿಗುತ್ತಿಲ್ಲವೆಂದೂ ತಮಗೆ ವಂಚನೆ ಮಾಡಲಾಗುತ್ತಿದೆಯೆಂದೂ ಜನರು ತಿಳಿದಿರುತ್ತಾರೆ".[೬] ಭಾರತದ ಚಳುವಳಿಗಳ ಬಗ್ಗೆ ಹಲವು ಮೌಲಿಕ ಅಧ್ಯಯನ ನಡೆಸಿರುವ ಟಿ.ಕೆ. ಓಮನ್, ಪ್ರಕಾರ "ಪರಿಧಿಯಲ್ಲಿರುವ ಮನುಷ್ಯನು ಕೇಂದ್ರದೆಡೆಗೆ ಚಲಿಸಲು ವ್ಯವಸ್ಥಿತವಾಗಿ ರೂಪಿಸಿಕೊಳ್ಳುವ ಸಾಮೂಹಿಕ ಕ್ರಿಯೆಯನ್ನು ಚಳುವಳಿ"[೭] ಎಂದು ಕರೆಯುತ್ತಾರೆ.

ಕರ್ನಾಟಕದಲ್ಲಿ ನಡೆದ ಸಾಮಾಜಿಕ ಚಳುವಳಿಗೆ ತನ್ನದೇ ಆದ ವೈಶಿಷ್ಟತೆ ಇದೆ. ಏಕೆಂದರೆ ಇಲ್ಲಿ ಕಾಣಿಸಿಕೊಂಡಂತಹ, ನಡೆದಂತಹ ವಿಶಿಷ್ಟವೆನಿಸುವ ಸದೃಶ ಚಳುವಳಿಗಳು ಬೇರೆಲ್ಲೂ ಕಾಣಿಸಿಕೊಂಡಂತಿಲ್ಲ. ಉದಾಹರಣೆಗೆ ೧೨ನೇ ಶತಮಾನದ ವಚನಕಾರರ ಚಳುವಳಿ, ಸೂಫಿ, ದಾಸ ತತ್ವಪದಕಾರರ ಪರಂಪರೆಗಳು ಇದಕ್ಕೆ ಉತ್ತಮ ನಿದರ್ಶನ. ನಂತರ ಬ್ರಿಟಿಷರ ವಿರುದ್ಧದ ಸ್ವಾತಂತ್ರ್ಯ ಚಳುವಳಿ, ಹೈದರಾಬಾದ್ ನಿಜಾಮರ ವಿರುದ್ಧ ವಿಮೋಚನಾ ಹೋರಾಟ ಹಾಗೂ ಕರ್ನಾಟಕ ಏಕೀಕರಣ ಚಳುವಳಿ ಪ್ರಮುಖವೆನಿಸಿವೆ. ಹಾಗೆಯೇ ಸ್ವಾತಂತ್ರ್ಯದ ನಂತರ ನಡೆದ ಮತ್ತು ನಡೆಯುತ್ತಿರುವ ಹಿಂದುಳಿದ, ರೈತ, ದಲಿತ, ಕಾರ್ಮಿಕ, ಮಹಿಳಾ ಚಳುವಳಿಗಳು ತನ್ನದೇ ಆದ ಪ್ರಭಾವವನ್ನು ಬೀರಿವೆ.

### ೧.೧. ಅಧ್ಯಯನದ ಉದ್ದೇಶ

ಯಾದಗಿರಿ ಜಿಲ್ಲೆಯು ಇಂದು ಕರ್ನಾಟಕ ರಾಜ್ಯದಲ್ಲಿ ಅತಿ ಹಿಂದುಳಿದ ಜಿಲ್ಲೆಯಾಗಿದೆ. ಈ ಜಿಲ್ಲೆಯಲ್ಲಿ ಇಂತಹ ಪರಿಸ್ಥಿತಿ ನಿರ್ಮಾಣವಾಗಲು ಕಾರಣವಾಗುವ ಅಂಶಗಳನ್ನು ಹುಡುಕುವ ಮತ್ತು ಅಧ್ಯಯನ ಮಾಡಿ ದಾಖಲಿಸುವ ಉದ್ದೇಶವನ್ನು ಹೊಂದಲಾಗಿದೆ. ಹೈದರಾಬಾದ್ ನಿಜಾಮರ ಆಳ್ವಿಕೆಯಿಂದ ಬಿಡುಗಡೆ ಹೊಂದಲು ಈ ಭಾಗದಲ್ಲಿ ಆರಂಭಿಸಿದ ಚಳುವಳಿಯು ನಂತರ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲೂ ವಿವಿಧ ಕಾರಣಗಳಿಂದಾಗಿ ನಿರಂತರವಾಗಿ ಮುಂದುವರಿದಿದೆ. ಹೀಗಾಗಿ ಇಂತಹ ಪ್ರದೇಶದಲ್ಲಿ ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದ ಸಮಕಾಲೀನ ಸಂದರ್ಭದವರೆಗೆ ಚಳುವಳಿಗಳು ಹುಟ್ಟಲು ಕಾರಣ ಮತ್ತು ಯಾವ ಸಂದರ್ಭದಲ್ಲಿ ಈ ಚಳುವಳಿಗಳು ಕ್ರಿಯಾಶೀಲವಾಗಿದ್ದವು? ಯಾವ ಸಂದರ್ಭದಲ್ಲಿ ಚಲನರಹಿತವಾದವು ಹಾಗೂ ಪ್ರಸ್ತುತ ಸಂದರ್ಭದಲ್ಲಿ ಇವು ಯಾವ ದಿಕ್ಕಿನಲ್ಲಿ ಸಾಗುತ್ತಿವೆ? ಮತ್ತು ಸಾಗಬೇಕಾಗಿದೆ ಎನ್ನುವ ವಿಶ್ಲೇಷಣಾತ್ಮಕ ಅಧ್ಯಯನ ಕೈಗೊಳ್ಳುವ ಉದ್ದೇಶ ಹೊಂದಲಾಗಿದೆ.

ಇದೇ ಸಂದರ್ಭದಲ್ಲಿ ಇಲ್ಲಿ ನಡೆದ ಚಳುವಳಿಯ ಮಿತಿಯನ್ನು ಗುರುತಿಸಲು ಪ್ರಯತ್ನಿಸುತ್ತಾ ಎಷ್ಟರಮಟ್ಟಿಗೆ ಚಳುವಳಿಗಳು ಸಫಲವಾಗಿವೆ ಮತ್ತು ಯಾವ ಕಾರಣಗಳಿಂದ ಚಳುವಳಿಗಳು ವಿಫಲವಾಗಿವೆ, ಇದಕ್ಕೆ ಇತರ ಕಾರಣಗಳು ಏನು ಎನ್ನುವ ಹಾಗೂ ಇಲ್ಲಿನ ಚಳುವಳಿಗಳಿಂದ ಆದ ಪರಿವರ್ತನೆಗಳೇನು ಎನ್ನುವ ಕಾರಣಗಳನ್ನು ಹುಡುಕುವ ಮತ್ತು ಇಂತಹ ಹುಡುಕಾಟವನ್ನು ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಸ್ಥೆಗಳಲ್ಲಿ ಹಾಗೂ ಇತರ ಯಾವ ಸ್ಥಿತಿಗಳಲ್ಲಿ ಹುಡುಕಬೇಕು ಎನ್ನುವ ಚಿಂತನೆಗಳನ್ನು ಇಟ್ಟುಕೊಂಡು ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ. ಏಕೆಂದರೆ ರಾಜಕಾರಣ ಮತ್ತು ಆರ್ಥಿಕತೆ ಎನ್ನುವುದು ನಿರಂತರ ಬದಲಾವಣೆಯನ್ನು ಹೊಂದಿರುವಂತಹದ್ದಾಗಿದೆ ಇಂತಹ ಬದಲಾವಣೆಗಳನ್ನು ಗುರುತಿಸುತ್ತಾ ಏರು–ಇಳಿವುಗಳನ್ನು ತಿಳಿದುಕೊಳ್ಳುತ್ತಾ ಚಳುವಳಿಗಳ ಹುಟ್ಟು, ಬೆಳವಣಿಗೆ, ತೀವ್ರತೆ, ಸಫಲತೆ, ವಿಫಲತೆಗಳನ್ನು ತಿಳಿಯುವ ಉದ್ದೇಶ ಹೊಂದಲಾಗಿದೆ.

ಪ್ರಸ್ತುತ ಸಂಶೋಧನೆಯಲ್ಲಿ ಐತಿಹಾಸಿಕ ಸತ್ಯತೆ ಮತ್ತು ಪಾರದರ್ಶಕತ್ವವನ್ನು ಪಾಲಿಸಲು ಹಾಗೂ ವಸ್ತುನಿಷ್ಠ ಅಧ್ಯಯನವನ್ನು ಮಾಡುವ ಉದ್ದೇಶದಿಂದ, ಸಾಮಾಜಿಕ ಚಳುವಳಿಗಳ ಕುರಿತು ಕೆಲವು ಮೂಲಭೂತ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಹಿಡಿಯುವ ಪ್ರಯತ್ನವನ್ನು ಮಾಡಲಾಗಿದೆ. ಇದರಲ್ಲಿ ಸಾಮಾಜಿಕ ಚಳುವಳಿ ಎಂದರೇನು? ಚಳುವಳಿಗಾರರು ಯಾರು? ಈ ಚಳುವಳಿಗಳ ಸ್ವರೂಪ ಏನು? ಚಳುವಳಿಯನ್ನು ಸಮಾಜದ ಯಾವ ವರ್ಗ ಪ್ರತಿನಿಧಿಸುತ್ತದೆ? ಎನ್ನುವ ವಿಷಯಗಳನ್ನು ಅಧ್ಯಯನಕ್ಕೆ ಒಳಪಡಿಸುವುದಾಗಿದೆ. ಹಾಗೆಯೇ ಸರ್ಕಾರದಿಂದ ಜಾರಿಯಾದ ಯೋಜನೆಗಳು ಸಮಾಜದ ಯಾವ ವರ್ಗಗಳಿಗೆ ತಲುಪುತ್ತಿವೆ? ಯಾವ ವರ್ಗಗಳು ಇದರ ಸಂಪೂರ್ಣ ಲಾಭ ಪಡೆಯುತ್ತಿವೆ? ಯಾವ ವರ್ಗಗಳು ಈ ಸೌಲಭ್ಯಗಳಿಂದ ಸಂಪೂರ್ಣವಾಗಿ ವಂಚಿತವಾಗುತ್ತಿವೆ? ಇದರಲ್ಲಿ ರಾಜಕೀಯ ಪಕ್ಷಗಳ, ಆಳುವ ಸರ್ಕಾರಗಳ, ಬಂಡವಾಳಶಾಹಿಗಳ ಪಾತ್ರವೇನು ಎನ್ನುವ ಸಂಕೀರ್ಣ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಇವೆಲ್ಲವುಗಳನ್ನು ಒಂದು ಸೈದ್ಧಾಂತಿಕ ಚೌಕಟ್ಟಿಗೆ ಒಳಪಡಿಸಿ ವಿವರಿಸುವ ಉದ್ದೇಶ ಹೊಂದಲಾಗಿದೆ.

ಇದುವರೆಗೆ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗೆ ಸಂಬಂಧಪಟ್ಟಂತೆ ಕೃತಿಗಳು, ಲೇಖನಗಳು, ಸಂಶೋಧನಾ ನಿಬಂಧಗಳು ಹಾಗೂ ಪ್ರಬಂಧಗಳು ಪ್ರಕಟಗೊಂಡಿರುವುದು ಬಹಳ ವಿರಳ. ಪ್ರಸ್ತುತ ಅಧ್ಯಯನದ ದೃಷ್ಟಿಕೋನ, ಮಾಹಿತಿ ಸಂಗ್ರಹಣೆ ಮತ್ತು ವಿಶ್ಲೇಷಣೆ ಭಿನ್ನವಾಗಿದೆ. ಹೇಗೆಂದರೆ, ಇದುವರೆಗೆ ಬಂದಿರುವ ಕೃತಿಗಳು, ನಡೆದಿರುವ ಅಧ್ಯಯನಗಳು ಹೆಚ್ಚಾಗಿ ಮಾಹಿತಿಪ್ರಧಾನವಾದವುಗಳಾಗಿವೆ. ನಿರ್ದಿಷ್ಟವಾಗಿ ಇಲ್ಲಿನ ಸಾಮಾಜಿಕ, ಆರ್ಥಿಕ ವಿಚಾರಗಳಿಗೆ ಸಂಬಂಧಪಟ್ಟ ವಿಶ್ಲೇಷಣಾತ್ಮಕ ಕೃತಿಗಳು ಹಾಗೂ ಅಧ್ಯಯನಗಳು ಬಂದಿರುವುದು ಬಹಳ ಕಡಿಮೆ. ಹಾಗೆಯೇ ಸರ್ಕಾರಕ್ಕೆ ವರದಿ ಸಲ್ಲಿಸಲು ಬೇಕಾದಂತಹ ಮಾಹಿತಿಗಳನ್ನೊಳಗೊಂಡ ದಾಖಲೆಗಳು ಬಹಳಷ್ಟು ಇವೆ. ಆದರೆ ಇಂತಹ ಮಾಹಿತಿಗಳ ಬಗ್ಗೆ ವಿಶ್ಲೇಷಣೆ ಮಾಡುವ ಕೆಲಸ ಆಗಿಲ್ಲ. ಹೀಗಾಗಿ ಇಂತಹವುದರ ಬಗ್ಗೆ ತಳಸ್ಪರ್ಶಿ ಅಧ್ಯಯನ ಆಗಬೇಕಾಗಿದೆ. ಹೀಗಾದಾಗ ಮಾತ್ರ ವಾಸ್ತವ ಅಂಶಗಳನ್ನು ಹೊರತರಲು ಸಾಧ್ಯವಾಗುತ್ತದೆ ಎನ್ನುವುದನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಹಾಗೆಯೇ ಈ ರೀತಿಯ ಅಧ್ಯಯನ ಕೈಗೊಳ್ಳುವಾಗ ಯಾದಗಿರಿ

ಜಿಲ್ಲೆಯ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಭೌಗೋಳಿಕತೆಯ [illegible]ದಲು ಅರ್ಥ ಮಾಡಿಕೊಳ್ಳಬೇಕು ಹಾಗೂ ಇವುಗಳ ಮೂಲಕ ಅಲ್ಲಿನ ಜನರ ಬದುಕನ್ನು [illegible] ಮಾಡಿಕೊಳ್ಳುವ ಪ್ರಯತ್ನ ಮಾಡಬೇಕಾಗುತ್ತದೆ. ಇಂತಹ ಪ್ರಯತ್ನವನ್ನು ಪ್ರಸ್ತುತ ಅಧ್ಯ[illegible] ಮಾಡಲಾಗಿದೆ.

ಅಂದರೆ ಈ ಸಂಶೋಧನೆಯಲ್ಲಿ ತುಲನಾತ್ಮಕ ಅಧ್ಯಯನ ಕೈಗೊಂ[illegible]ೀ ಯಾದಗಿರಿ ಜಿಲ್ಲೆಯ ಪ್ರದೇಶವನ್ನು ಸಮಗ್ರವಾಗಿ ಅಧ್ಯಯನ ಮಾಡುವ ಜೊತೆಗ[illegible]ಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳನ್ನು ಬಿಡಿಬಿಡಿಯಾಗಿ ಅಧ್ಯಯನ ಮಾಡಲು ಪ್ರಯ[illegible]ದೆ. ಅದರಲ್ಲೂ ರೈತ, ದಲಿತ, ಹಿಂದುಳಿದ, ಕಾರ್ಮಿಕ ಮತ್ತು ಮಹಿಳಾ ಚಳುವಳಿಯನ್ನು [illegible]ನ ಮಾಡುವ ಸಮಯದಲ್ಲಿ ಕೆಳಸ್ತರದ, ನಿರ್ಲಕ್ಷಿತರ ಹಾಗೂ ಸಮಾಜದ ಮುಖ್ಯ[illegible] ಬಾರದವರ ಸಮಸ್ಯೆಗಳನ್ನು ಅಧ್ಯಯನ ಮಾಡುವುದರೊಂದಿಗೆ ಪ್ರಸ್ತುತ ಇವರ [illegible]ಗಳು ಹಾಗೂ ಇವರು ಎದುರಿಸುತ್ತಿರುವ ಮತ್ತು ಎದುರಿಸಬೇಕಾದ ಸವಾಲುಗಳನ್ನು ವಿಶ್ಲೇ[illegible] ಉದ್ದೇಶವನ್ನು ಹೊಂದಿದೆ.

ಅಧ್ಯಯನದ ಸಂದರ್ಭದಲ್ಲಿ ನಿರ್ದಿಷ್ಟವಾಗಿ ಯಾದಗಿರಿ ಜಿಲ್ಲೆಯ ರೈ[illegible]ತ, ಹಿಂದುಳಿದ, ಕಾರ್ಮಿಕ, ಮಹಿಳೆಯರ, ಸ್ಥಿತಿಗತಿಗಳನ್ನು, ಸಮಸ್ಯೆಗಳನ್ನು ಗಮನದಲ್ಲಿಟ್ಟುಕೆ[illegible]ರ್ಚಿಸಲಾಗಿದೆ. ಇಲ್ಲಿನ ರಾಜಕೀಯ ಸ್ಥಿತ್ಯಂತರಗಳಿಂದ ಅವರ ಜೀವನದ ಮೇಲಾದ [illegible] ಬದಲಾವಣೆ ಶೋಷಣೆ ಹಾಗೂ ಇವುಗಳನ್ನು ಅವರು ಎದುರಿಸಿದ ರೀತಿ, ಕೈಗ[illegible]ೋರಾಟಗಳು ಹಾಗೂ ಪ್ರಸ್ತುತ ಸಂದರ್ಭದಲ್ಲಿ ಇವರು ಎದುರಿಸುತ್ತಿರುವ ಸಮಸ್ಯೆಗಳು, [illegible]ಲುಗಳು ಅವರ ಸ್ಥಿತಿಗತಿಗಳು ಹಾಗೂ ಯಾವ ದಿಕ್ಕಿನಲ್ಲಿ ಈ ಹೋರಾಟಗ[illegible]ಕು, ಯಾವ ಸುಧಾರಣೆಗಳಾಗಬೇಕು ಎನ್ನುವ ಅಂಶಗಳನ್ನು ಗುರುತಿಸುವ ಉದ್ದೇ[illegible]ದಿದೆ.

ಅಧ್ಯಯನದ ಮೊದಲನೆಯ ಹಂತದಲ್ಲಿ, ಸಂಶೋಧನೆಗೆ ಅವಶ[illegible]ಮಾಹಿತಿಯನ್ನು ಕಲೆ ಹಾಕುವ, ಆಕರಗಳ ನಿರ್ಮಾಣದ ಕಾರ್ಯವನ್ನು ಕೈಗೊಳ್ಳಲಾಗಿದೆ. [illegible]ಯ ಹಂತದಲ್ಲಿ ಕಲೆ ಹಾಕಿದ ಮಾಹಿತಿಗಳನ್ನು ವಿಶ್ಲೇಷಣೆ ಮಾಡುವ ಕಾರ್ಯ ಕೈಗೊ[illegible] ಮೂರನೆಯ ಹಂತದಲ್ಲಿ ಕಲೆಹಾಕಿದ ಮಾಹಿತಿಗಳನ್ನು ಹಲವಾರು ದೃಷ್ಟಿಕೋನಗಳಿಂ[illegible]ಣೆ ಮಾಡುವ ಹಾಗೂ ಮೌಲ್ಯಮಾಪನ ಮಾಡುವ ಪದ್ಧತಿಯನ್ನು ಅಳವಡಿಸಿಕೊಳ್ಳ[illegible]

ಪ್ರಸ್ತುತ ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯವು [illegible] ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ವೈಚಾರಿಕತೆಗಳ ದೃಷ್ಟಿಯಿಂದ ತನ್ನದೇ [illegible]ಮುಖ್ಯತೆಯನ್ನು ಹೊಂದಿದೆ. ಹೀಗಾಗಿ ಪ್ರಸ್ತುತ ಸಂಶೋಧನಾ ಪ್ರಬಂಧವು ವಿಶಾಲತೆ[illegible]ಕ್ಷ್ಮತೆಯೆಡೆಗೆ ನಡೆದಿದೆ. ಅಧ್ಯಯನದಲ್ಲಿ ಇತ್ತೀಚೆಗೆ ವಿದ್ವಾಂಸರು, ಚರಿತ್ರಾಕಾರರು, ಕೆಳ[illegible]ನಸಾಮಾನ್ಯರ, ನಿರ್ಲಕ್ಷಿತರ, ಶೋಷಿತರ ಬದುಕು ಮತ್ತು ಹೋರಾಟಗಳೇನು ಎಂಬುದ[illegible] ಹರಿಸಿದ್ದಾರೆ. ಇದನ್ನೇ ಸಬಾಲ್ಟ್ರನ್ ಅಧ್ಯಯನ ಎಂದು, 'ಸಬಾಲ್ಟ್ರನ್ ಪಂಥ' [illegible]ರೆಯಲಾಗಿದೆ. ಇಂತಹ ಪಂಥವನ್ನು ಆಧಾರವಾಗಿಟ್ಟುಕೊಂಡು ಸಮಾಜದಲ್ಲಿನ [illegible] ಶೋಷಿತರ, ಕೆಳವರ್ಗದವರ ಜೀವನ ಮತ್ತು ಸಮಸ್ಯೆಗಳನ್ನು ಮುಂದಿಟ್ಟುಕೊಂಡು [illegible]ನೆ ಮಾಡುವ

ಉದ್ದೇಶ ಅಧ್ಯಯನದ್ದಾಗಿದೆ. ಈ ಹಿನ್ನೆಲೆಯಲ್ಲಿ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಮುಖ್ಯ ಹೆಜ್ಜೆ ಗುರುತುಗಳನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕಾಗಿ ಅನೇಕ ಕೃತಿಗಳನ್ನು, ಅಪ್ರಕಟಿತ ದಾಖಲೆಗಳನ್ನು, ಮೌಖಿಕ ಸಂದರ್ಶನಗಳನ್ನು, ಹೋರಾಟಗಾರರ ಹೇಳಿಕೆಗಳನ್ನು, ಅಭಿಪ್ರಾಯಗಳನ್ನು, ವಿವಿಧ ಸಂಘಟನೆಗಳ ಸಂಚಿಕೆಗಳನ್ನು, ಸರ್ಕಾರದ ವರದಿಗಳನ್ನು ಹೀಗೆ ವಿವಿಧ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ನಿಜಾಮರ ಆಳ್ವಿಕೆಯಿಂದಾಗಿ ಭಾಷೆ ಹಾಗೂ ಸಂಸ್ಕೃತಿಯಲ್ಲಿ ಇವರ ಆಳ್ವಿಕೆಯ ಪ್ರಭಾವ ಎದ್ದು ಕಾಣುತ್ತದೆ. ಯಾದಗಿರಿ ಜಿಲ್ಲೆಯಲ್ಲಿ ಇನ್ನೂ ಕೂಡ ಊಳಿಗಮಾನ್ಯ ವ್ಯವಸ್ಥೆ ಜೀವಂತವಾಗಿದ್ದು, ಶೋಷಣೆ ಹಾಗೂ ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿಲ್ಲದ ಸಂಘಟನೆಗಳು ತಲೆಯೆತ್ತಲು ಅವಕಾಶವಾಗಿದೆ. ಸ್ವಾತಂತ್ರ್ಯೋತ್ತರ ಕಾಲದಲ್ಲಿಯೂ ಈ ಪ್ರದೇಶವು ಹಿಂದುಳಿದಿರುವಿಕೆಯ ಹಣೆಪಟ್ಟಿಯನ್ನು ಕಟ್ಟಿಕೊಂಡಿರುವುದೇಕೆ, ಸಾಮಾಜಿಕವಾಗಿ ಅಸಮಾನತೆ, ಬಡತನ, ನಿರುದ್ಯೋಗ ತಾಂಡವವಾಡುತ್ತಿರಲು ಕಾರಣಗಳೇನು, ಪ್ರಜಾ ಆಳ್ವಿಕೆ ಆರಂಭವಾಗಿ ೬೮ ವರ್ಷಗಳು ಕಳೆದರೂ ಸಾಕ್ಷರತೆಯ ಪ್ರಮಾಣ ಗಣನೀಯವಾಗಿ ಇಳಿಮುಖವಾಗಲು ಹಾಗೂ ಶೈಕ್ಷಣಿಕವಾಗಿ ತೀರಾ ಹಿಂದುಳಿಯಲು ಕಾರಣಗಳೇನು, ಇಲ್ಲಿ ಚಳುವಳಿಗಳು ವಿಫಲವಾಗಲು ಹಾಗೂ ತಮ್ಮ ತೀವ್ರತೆಯನ್ನು ಕಳೆದುಕೊಳ್ಳಲು ಕಾರಣಗಳು ಹಾಗೂ ಈ ಜಿಲ್ಲೆಯಲ್ಲಿ ಅಭಿವೃದ್ಧಿ ಎನ್ನುವುದು ಏಕೆ ಇನ್ನೂ ಸಾಧ್ಯವಾಗಿಲ್ಲ ಎನ್ನುವ ಹತ್ತಾರು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಉದ್ದೇಶ ಹೊಂದಲಾಗಿದೆ.

ಹಾಗೆಯೇ ೧೯೪೮ರಿಂದ ಸಮಕಾಲೀನವರೆಗೆ ಯಾದಗಿರಿ ಜಿಲ್ಲೆಯಲ್ಲಿ ನಡೆದ ಮತ್ತು ನಡೆಯುತ್ತಿರುವ ಕಾರ್ಮಿಕ, ರೈತ, ದಲಿತ, ಮಹಿಳಾ ಮುಂತಾದ ಚಳುವಳಿಗಳ ಕೂಲಂಕಷ ಅಧ್ಯಯನ ಮಾಡುವುದರ ಜೊತೆಗೆ ಇಲ್ಲಿ ಚಳುವಳಿಗಳನ್ನು ನಡೆಸುತ್ತಿರುವ ವಿವಿಧ ಸಾಮಾಜಿಕ ಸಂಘಟನೆಗಳ, ಸಂಘ-ಸಂಸ್ಥೆಗಳ, ಮುಖಂಡರ, ಸಾಹಿತಿಗಳ, ವಿದ್ಯಾರ್ಥಿಗಳ, ರಾಜಕೀಯ ಮುಖಂಡರ ವಿಚಾರಗಳನ್ನು ಚರ್ಚಿಸುತ್ತಾ ಸತ್ಯವನ್ನು ವಾಸ್ತವವನ್ನು ಹೊರತರುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಸಂಶೋಧನೆಯಲ್ಲಿ ಯಾದಗಿರಿ ಜಿಲ್ಲೆಯು ಅನುಭವಿಸುತ್ತಿರುವ ಅಸಮಾನತೆಯ, ಹಿಂದುಳಿದಿರುವಿಕೆಯ, ಶೋಷಣೆಯ ವಾಸ್ತವಿಕತೆಯನ್ನು ಅಭಿವ್ಯಕ್ತಿಸುವ ಉದ್ದೇಶ ಹೊಂದಲಾಗಿದೆ. ಬದಲಾಗಿ ಯಾದಗಿರಿ ಜಿಲ್ಲೆಗೆ ಸಂವಿಧಾನಬದ್ಧವಾಗಿ ಸಿಗಬೇಕಾಗಿದ್ದ ಹಾಗೂ ಸಿಗಬೇಕಾಗಿರುವ ಸ್ಥಾನಮಾನ, ಸಾಮಾಜಿಕ, ಸಾಂಸ್ಕೃತಿಕ ಗೌರವಗಳನ್ನು ಎತ್ತಿ ತೋರಿಸುವ ಪ್ರಯತ್ನ ಮಾಡಲಾಗಿದೆ.

ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ವಿಷಯವು ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ವೈಚಾರಿಕತೆಗಳ ದೃಷ್ಟಿಯಿಂದ ಅತೀವ ಮಹತ್ವವನ್ನು ಪಡೆದಿದೆ. ಅಧ್ಯಯನದಲ್ಲಿ ವಿಭಿನ್ನ ಮುಖಗಳಿಂದ ಅಂದರೆ ೧೨ನೇ ಶತಮಾನದಲ್ಲಿ ಪ್ರಾರಂಭವಾದ ವಚನ ಸಾಹಿತ್ಯ, ಸೂಫಿ ಪಂಥ, ನಂತರ ದಾಸ ಪರಂಪರೆಗಳು ಬೀರಿದ ಪ್ರಭಾವ ಹಾಗೂ ಸಾಮಾಜಿಕ ಚಳುವಳಿಗಳ ಹುಟ್ಟು-ಬೆಳವಣಿಗೆ ಮತ್ತು ಪರಿಣಾಮಗಳ ಹಿನ್ನೆಲೆಯನ್ನು ಚರ್ಚಿಸಿ ವಿಶ್ಲೇಷಿಸಲಾಗಿದೆ.

ಅದೇ ರೀತಿಯಾಗಿ ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದ ಸಮಕಾಲೀನ ಕಾಲಘಟ್ಟದವರೆಗಿನ ರೈ ದಲಿತ, ಹಿಂದುಳಿದ, ಕಾರ್ಮಿಕ ಮತ್ತು ಮಹಿಳಾ ಚಳುವಳಿಗಳ ಹುಟ್ಟು ಬೆಳವಣಿಗೆ, ಇವುಗ ಗುರಿ, ಉದ್ದೇಶ, ಮಹತ್ವ ಹಾಗೂ ಪ್ರಸ್ತುತ ಸಮಾಜದ ಜನರ ಮೇಲೆ ಬೀರಿದ ಪ್ರಭಾ ಕುರಿತು ಇಲ್ಲಿ ಚರ್ಚಿಸಲಾಗಿದೆ. ಇದರ ಜೊತೆಗೆ ಯಾದಗಿರಿ ಜಿಲ್ಲೆಯಲ್ಲಿ ಪ್ರಭುತ್ವ ಮ ಸಮಾಜದ ನಡುವಿನ ಸಂಬಂಧವನ್ನು ಅಧ್ಯಯನ ಮಾಡುತ್ತಾ, ಸಾಮಾಜಿಕ ಸಮಾನತೆಗಾ ಆರ್ಥಿಕ ಪ್ರಬಲತೆಗಾಗಿ, ಸಮಾನ ಸ್ಥಾನಮಾನಗಳಿಗಾಗಿ ಆರಂಭವಾದ ಚಳುವಳಿಗಳು ಯಾವುವು ಸ್ವಾತಂತ್ರ್ಯದ ನಂತರ ಹುಟ್ಟಿಕೊಂಡ ಸಂಘಟನೆಗಳು ಯಾವುವು? ಸಂಘಟನೆಗಳ ಗುರಿ ಏನಾಗಿದ ಇವುಗಳ ಹೋರಾಟದ ಯಶಸ್ಸು ಮತ್ತು ವಿಫಲತೆಯ ಅಂಶಗಳು ಯಾವುವು? ಸಫಲ ಮ ವಿಫಲತೆಗೆ ಕಾರಣವೇನು ಎನ್ನುವ ಅಂಶಗಳ ಆಧಾರದ ಮೇಲೆ ಅಧ್ಯಯನ ಕೈಗೊಳ್ಳಲಾಗಿ

## ೧.೨. ಅಧ್ಯಯನದ ಸ್ವರೂಪ

ಯಾದಗಿರಿ ಜಿಲ್ಲೆಯು ಅತ್ಯಂತ ಹಿಂದುಳಿದ ಜಿಲ್ಲೆಯಾಗಿರುವುದರಿಂದ ಈ ಹಿಂದುಳಿದಿರುವಿಕೆ ಮೂಲ ಕಾರಣಗಳನ್ನು ಹುಡುಕಿ ವಿಶ್ಲೇಷಿಸಬೇಕಾಗುತ್ತದೆ. ೧೯೪೮ರಿಂದ ಸಮಕಾಲೀನವರ ನಡೆದ ಚಳುವಳಿಗಳಲ್ಲಿ ರೈತ, ದಲಿತ, ಹಿಂದುಳಿದ, ಕಾರ್ಮಿಕ ಹಾಗೂ ಮಹಿಳಾ ಚಳುವಳಿಗ ಪಾತ್ರ ಮತ್ತು ಚಳುವಳಿಗಳ ಸಫಲತೆ ಮತ್ತು ವಿಫಲತೆಯ ಅಂಶಗಳ ಮಾಹಿತಿಯ ಸಂಗ್ರಹಿಸಿ ವಿಶ್ಲೇಷಿಸಿ ಇದನ್ನು ಸರಿಯಾದ ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿದೆ. ಹಿನ್ನೆಲೆಯಲ್ಲಿ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳನ್ನು ಹಾಗೂ ಸಾಮಾಜಿಕ ಪರಿಸ್ಥಿ ಹೇಗಿತ್ತು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕಿದೆ. ಅಂತಹ ಪ್ರಯತ್ನವೇ ಈ ಅಧ್ಯಯನ ಸ್ವರೂಪವಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳ ಅಧ್ಯಯನದ ಸಂದರ್ಭದಲ್ಲಿ ಜಿಲ್ಲೆಯ ಜೊತೆಗೆ ಮುಂದುವರಿದ ಜಿಲ್ಲೆಗಳ ಮೈಸೂರು ಪ್ರಾಂತ್ಯದ ಜಿಲ್ಲೆಗಳೊಂದಿಗೆ ತುಲ ಮಾಡಿ ಆ ಪ್ರಾಂತ್ಯಗಳ ಹಿನ್ನೆಲೆ, ಸ್ಥಿತಿಗತಿಗಳು, ಬೆಳವಣಿಗೆ ಅಭಿವೃದ್ಧಿಯ ಕಾರಣಗಳೊಂದ ಯಾದಗಿರಿ ಜಿಲ್ಲೆಯನ್ನು ಹೋಲಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಇಲ್ಲಿ ಚರ್ಚೆಗೆ, ವಿಮರ್ಶೆ ಒಳಪಡಿಸಲೇಬೇಕಾದ ವಿಷಯವೆಂದರೆ ಅತ್ಯಂತ ಹಿಂದುಳಿದ ಜಿಲ್ಲೆಯಾದ ಯಾದಗಿರಿಯ ಅತ್ಯಂತ ತೀವ್ರವಾದ ಪರಿಣಾಮಕಾರಿಯಾದ ಚಳುವಳಿಗಳು ನಡೆಯಬೇಕಿತ್ತು. ಆದರೆ ಇ ಅಂತಹ ಹೋರಾಟಗಳು ನಡೆದಿರುವುದೇ ಬಹು ವಿರಳ ಅಥವಾ ನಡೆದಿದ್ದರೂ ಅ ವಿಫಲವಾಗಿದ್ದೇ ಹೆಚ್ಚು. ಆದರೆ ಮೈಸೂರು ಪ್ರಾಂತ್ಯದ ಜಿಲ್ಲೆಗಳಲ್ಲಿ ಈ ಸಾಮಾಜಿಕ ಚಳುವಳಿಗ ಪರಿಣಾಮಕಾರಿಯಾಗಿ ನಡೆದದ್ದು ಕಂಡುಬರುತ್ತದೆ.

ಯಾದಗಿರಿ ಜಿಲ್ಲೆಯಲ್ಲಿ ಅಭಿವೃದ್ಧಿ ಮಂದಗತಿಯಲ್ಲಿ ಸಾಗಲು ಮತ್ತೊಂದು ಪ್ರ ಕಾರಣವೆಂದರೆ ಇದು ಬರಗಾಲ ಪೀಡಿತಪ್ರದೇಶವಾಗಿದ್ದು, ಕೃಷಿಯೇ ಜನರ ಆದಾಯ ಮೂಲವಾಗಿದೆ. ಇಲ್ಲಿ ಯಾವುದೇ ಉದ್ದಿಮೆಗಳ ಬೆಳವಣಿಗೆಗೆ ಬೇಕಾಗುವ ಬಂಡವಾ ಉದ್ಯಮಿ ಸಾಹಸಿತನ ಹಾಗೂ ಮಾರುಕಟ್ಟೆಯ ಕೊರತೆಯ ಜೊತೆಗೆ. ಮೂಲಸೌಕರ್ಯಗಳ

ವಿದ್ಯುಚ್ಛಕ್ತಿ, ಸಾರಿಗೆ ಸಂಪರ್ಕ ಮುಂತಾದ ಸಮಸ್ಯೆಗಳಿವೆ. ಬೆಳೆಯುತ್ತಿರುವ ಜನಸಂಖ್ಯೆ, ಸಾಂಪ್ರದಾಯಿಕ ಸಮಾಜ, ಬಡತನ, ನಿರುದ್ಯೋಗ, ಅರೆ-ಉದ್ಯೋಗ, ಹಾಗೂ ಕಡಿಮೆ ಉತ್ಪಾದನಾ ಶಕ್ತಿ, ಕಡಿಮೆ ಕೂಲಿ ದರ ಹೀಗೆ ಅನೇಕ ಸಮಸ್ಯೆಗಳಿವೆ. ಇಲ್ಲಿ ಮಾನವ ಸಂಪನ್ಮೂಲದ ಕೊರತೆ ಇದೆ. ಸಾಕ್ಷರತಾ ಪ್ರಮಾಣ ಇಡೀ ರಾಜ್ಯದಲ್ಲಿಯೇ ಕೊನೆಯ ಸ್ಥಾನದಲ್ಲಿದೆ. ಶಿಕ್ಷಣದ ಗುಣಮಟ್ಟ ಕೆಳಮಟ್ಟದಲ್ಲಿದೆ. ಮಾನವಾಭಿವೃದ್ಧಿಯಲ್ಲಿ ಇಲ್ಲಿನ ತಾಲ್ಲೂಕುಗಳು ಕೆಳಮಟ್ಟದ ಸ್ಥಾನಗಳಲ್ಲಿವೆ. ಜನರಿಗೆ ಆರೋಗ್ಯ, ಕುಡಿಯುವ ನೀರು, ಶೌಚಾಲಯ, ವಸತಿ ಮುಂತಾದ ನಾಗರಿಕ ಮೂಲಸೌಕರ್ಯಗಳ ಕೊರತೆಯಿದೆ. ಹೀಗಾಗಿ ಯಾದಗಿರಿ ಜಿಲ್ಲೆಯ ಶಾಹಪುರ, ಸುರಪುರ, ಯಾದಗಿರಿ, ಹುಣಸಗಿ, ವಡಗೇರ, ಗುರುಮಠಕಲ್ ತಾಲ್ಲೂಕುಗಳು ಅತ್ಯಂತ ಹಿಂದುಳಿದ ತಾಲ್ಲೂಕುಗಳಾಗಿವೆ.

ಇಂತಹ ಪ್ರದೇಶದಲ್ಲಿ ಸ್ವಾತಂತ್ರ್ಯ ನಂತರ ಆರಂಭಗೊಂಡ ವಿವಿಧ ಸಾಮಾಜಿಕ ಚಳುವಳಿಗಳು, ಅವುಗಳ ಉದ್ದೇಶ, ಅವುಗಳ ಸಫಲತೆ-ವಿಫಲತೆ ಹಾಗೂ ಪ್ರಸ್ತುತ ಚಳುವಳಿಗಳ ಸ್ಥಿತಿಗತಿಗಳನ್ನು ನೋಡಿದಾಗ ಇಲ್ಲಿ ಅಭಿವೃದ್ಧಿಗಾಗಿ ಸಮಗ್ರ ಬದಲಾವಣೆಗಾಗಿ ಜನರು ಉಗ್ರಸ್ವರೂಪದ ಚಳುವಳಿಗಳನ್ನು ಇದುವರೆಗೂ ಹಮ್ಮಿಕೊಂಡಿಲ್ಲವೆಂದೆನಿಸುತ್ತದೆ. ಆದರೆ ಕಾರ್ಮಿಕ, ರೈತ, ದಲಿತ, ಹಿಂದುಳಿದ ಮತ್ತು ಮಹಿಳಾ ಸಂಘಟನೆಗಳು ಕೆಲವು ಹೋರಾಟಗಳನ್ನು ಚಳುವಳಿಗಳನ್ನು ನಡೆಸುತ್ತಾ ಬಂದಿರುವುದನ್ನು ಗುರುತಿಸಬಹುದು.

ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ವಿಷಯವು ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ವೈಚಾರಿಕತೆಗಳ ದೃಷ್ಟಿಯಿಂದ ತನ್ನದೇ ಆದ ವಿಶೇಷತೆಯನ್ನು, ಮಹತ್ವವನ್ನು ಪಡೆದಿದೆ. ಕರ್ನಾಟಕದ ೩೦ನೇ ಜಿಲ್ಲೆಯಾಗಿರುವ ಯಾದಗಿರಿ ಪ್ರದೇಶವು ಪ್ರಸ್ತುತ ಇಲ್ಲಿರುವ ಹಲವಾರು ಸಮಸ್ಯೆಗಳಿಂದಾಗಿ ಅತ್ಯಂತ ಹೆಚ್ಚು ಚರ್ಚೆಗೆ, ಗಂಭೀರವಾದ ಚಿಂತನೆಗೆ ಒಳಗಾಗಿರುವ ಜಿಲ್ಲೆಯಾಗಿದೆ. ಹಾಗೆಯೇ ಪ್ರಾದೇಶಿಕ ಅಸಮಾನತೆಯಿಂದಾಗಿ, ನಿರ್ಲಕ್ಷಕ್ಕೆ ಒಳಗಾಗಿರುವುದರಿಂದಾಗಿ ಅತ್ಯಂತ ಹಿಂದುಳಿದ ಜಿಲ್ಲೆ. ಹೀಗಾಗಿ ಹಲವಾರು ಚಿಂತನೆಗಳಿಗೆ, ವಿಮರ್ಶೆಗಳಿಗೆ ದಾರಿ ಮಾಡಿಕೊಟ್ಟಿದೆ. ಸಾಮಾಜಿಕ ಅಸಮಾನತೆಯನ್ನು ವಿರೋಧಿಸಿ ರೈತ, ದಲಿತ, ಹಿಂದುಳಿದ ಕಾರ್ಮಿಕ, ಮಹಿಳಾ ಚಳುವಳಿಗಳು ನಡೆಯುತ್ತಿವೆ. ಹೀಗಾಗಿ ಸಂಶೋಧನೆಯ ಸಮಗ್ರ ಸಾರವನ್ನು ಎಂಟು ಅಧ್ಯಾಯಗಳಲ್ಲಿ ಕ್ರಮಬದ್ಧವಾಗಿ ಮತ್ತು ಗುಣಾತ್ಮಕತೆಯಿಂದ ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ, 'ಪ್ರಸ್ತಾವನೆ', ಸಂಶೋಧನೆಯ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಇಲ್ಲಿಯವರೆಗೆ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಕುರಿತು ಆಗಿರುವ ಸಂಶೋಧನೆಗಳ ಸಮಗ್ರ ಮಾಹಿತಿಯನ್ನು ಕ್ರೋಡೀಕರಿಸಿ ವೈಜ್ಞಾನಿಕ ವಿಮರ್ಶೆಗೆ ಒಳಪಡಿಸಲಾಗಿದೆ. ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಮೇಲೆ ಇದುವರೆಗೆ ಆಗಿರುವ ಅಧ್ಯಯನಗಳು ಯಾವುವು? ಇಲ್ಲಿಯವರೆಗೆ ಆಗಿರುವ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನ ಹೇಗೆ ಭಿನ್ನವಾಗಿದೆ? ಯಾವ ದೃಷ್ಟಿಕೋನ

ಇಟ್ಟುಕೊಳ್ಳಲಾಗಿದೆ ಎನ್ನುವುದನ್ನು ಸ್ಪಷ್ಟಪಡಿಸಲಾಗಿದೆ. ಹಾಗೆಯೇ ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಅಸಮಾನತೆಯನ್ನು ವಿರೋಧಿಸಿ ಆರಂಭವಾದ ಚಳುವಳಿಗಳು ಯಾವುವು? ಇವು ಎಷ್ಟರಮಟ್ಟಿಗೆ ಸಫಲತೆ ಮತ್ತು ವಿಫಲತೆಯನ್ನು ಕಂಡವು? ಸಫಲತೆ ವಿಫಲತೆಗೆ ಕಾರಣವೇನು ಹಾಗೂ ಪ್ರಸ್ತುತ ಚಳುವಳಿಗಳು ಯಾವ ದಿಕ್ಕಿನಲ್ಲಿ ಸಾಗಿವೆ ಎನ್ನುವುದರ ವಿಶ್ಲೇಷಣೆ ಕೈಗೊಳ್ಳಲಾಗಿದೆ ಮತ್ತು ಸಂಶೋಧನೆಗೆ ಬಳಸಿಕೊಂಡಿರುವ ವಿವಿಧ ಮೂಲಾಧಾರಗಳ ವಿವರ ಕೊಡಲಾಗಿದೆ. ಅಧ್ಯಾಯದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳ ಕುರಿತು ಸಮಗ್ರ ಮಾಹಿತಿಯನ್ನು ಕ್ರೋಢೀಕರಿಸಿ ವಿಮರ್ಶೆಗೆ ಒಳಪಡಿಸಿ, ಚಳುವಳಿಗಳ ಗತಿಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಎರಡನೇ ಅಧ್ಯಾಯದಲ್ಲಿ 'ಯಾದಗಿರಿ ಜಿಲ್ಲೆಯ ಸ್ಥಿತಿಗತಿ ಹಾಗೂ ಸಮಸ್ಯೆಗಳು' ಎನ್ನುವ ಶೀರ್ಷಿಕೆಯಡಿ ಅಧ್ಯಯನ ಕೈಗೊಳ್ಳಲಾಗಿದೆ. ಯಾದಗಿರಿ ಜಿಲ್ಲೆಯ ಭೌಗೋಳಿಕತೆಯನ್ನು ವಿವರಿಸುತ್ತಾ ಯಾದಗಿರಿ ಜಿಲ್ಲೆಯು ರೂಪುಗೊಂಡಿದ್ದು ಯಾವಾಗ, ಯಾದಗಿರಿ ಜಿಲ್ಲೆಯು ಒಳಗೊಂಡಿರುವ ಪ್ರದೇಶಗಳ ವಿವರ ಹಾಗೂ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಯಾವ ಯಾವ ಪ್ರದೇಶಗಳು ನಿಜಾಮರ ಪ್ರಾಂತ್ಯದಿಂದ ಕರ್ನಾಟಕಕ್ಕೆ ಸೇರಿದವು ಎನ್ನುವ ವಿಷಯವನ್ನು ವಿವರಿಸಲಾಗಿದೆ. ಈಗ ಯಾದಗಿರಿ ಜಿಲ್ಲೆಯ ವ್ಯಾಪ್ತಿಗೆ ಬರುವ ಶಾಹಪುರ, ಸುರಪುರ, ಯಾದಗಿರಿ, ಹುಣಸಗಿ, ವಡಗೇರ, ಗುರುಮಠಕಲ್ ತಾಲ್ಲೂಕಗಳ ವಿಸ್ತೀರ್ಣ, ಜನಸಂಖ್ಯೆ, ವಾಯುಗುಣ, ಸಾಕ್ಷರತೆ, ತಲಾ ವರಮಾನಗಳ ಬಗ್ಗೆ ವಿವರಿಸಲಾಗಿದೆ.

ಯಾದಗಿರಿ ಜಿಲ್ಲೆಯ ರಾಜಕೀಯ ಸ್ಥಿತಿಗತಿಗಳನ್ನು ಕುರಿತು ಚರ್ಚಿಸುತ್ತಾ, ದಕ್ಷಿಣ ಭಾರತದಲ್ಲಿ 'ಅಸಾಫಿಯಾ' ವಂಶದ ಸ್ಥಾಪನೆ, ನಿಜಾಮರ ಆಳ್ವಿಕೆ ಹಾಗೂ ಅವರ ಆಳ್ವಿಕೆಯಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಆದ ಜನಪರ ಕಾರ್ಯಗಳು ಹಾಗೂ ರಜಾಕಾರರ ಸಂಘಟನೆ, ನಿಜಾಮರ ರಾಜಶಾಹಿಯಿಂದ ಭಾರತದ ಒಕ್ಕೂಟದ ಪ್ರಜಾಶಾಹಿಗೆ ಸೇರಲು ನಡೆದ ವಿಮೋಚನಾ ಹೋರಾಟ, ವಿಮೋಚನೆಯ ನಂತರ ಜಿಲ್ಲೆಯ ಸ್ಥಿತಿಗತಿಗಳು ಹೀಗೆ ಸಮಗ್ರವಾಗಿ ಯಾದಗಿರಿ ಜಿಲ್ಲೆಯ ರಾಜಕೀಯ ಸ್ಥಿತಿಗತಿಗಳನ್ನು ವಿವರಿಸಲಾಗಿದೆ.

ಹಾಗೆಯೇ ಇಲ್ಲಿನ ಕೃಷಿ, ನೀರಾವರಿ ಯೋಜನೆಗಳು, ಬೆಳೆಗಳು, ಮಳೆಯ ಪ್ರಮಾಣ, ಬಡತನ, ನಿರುದ್ಯೋಗ ಹಾಗೂ ವರಮಾನ, ಆದಾಯದ ಮೂಲಗಳ ಬಗ್ಗೆ ವಿವರ ನೀಡಲಾಗಿದೆ. ಸಾಮಾಜಿಕವಾಗಿ ಯಾದಗಿರಿ ಜಿಲ್ಲೆಯು ಹೇಗೆ ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಕೇಂದ್ರವಾಗಿದ್ದರ ಬಗ್ಗೆ ಹಾಗೂ ಇಲ್ಲಿ ಬೆಳವಣಿಗೆಯಾದ ಉರ್ದು, ತೆಲುಗು, ದಖ್ಖನಿ ಭಾಷೆಗಳು, ವಿವಿಧ ಜಾತಿ, ಪಂಥ ಹೀಗೆ ವಿಭಿನ್ನ ಸಂಸ್ಕೃತಿಯಿಂದ ಕರ್ನಾಟಕದಲ್ಲಿಯೇ ತನ್ನ ಸ್ಥಾನವನ್ನು ಹೇಗೆ ವಿಭಿನ್ನವಾಗಿ ಗುರುತಿಸಿಕೊಂಡಿದೆ ಎನ್ನುವುದನ್ನು ವಿವರಿಸಲಾಗಿದೆ. ಅಲ್ಲದೆ ಧಾರ್ಮಿಕವಾಗಿ ಯಾದಗಿರಿ ಜಿಲ್ಲೆಯು ಹೇಗೆ ಅನೇಕ ಧರ್ಮಗಳ ನೆಲೆಯಾಗಿದೆ, ಸಮಾನತೆ ಮತ್ತು ನಿಸ್ವಾರ್ಥತೆಯ ತತ್ವಗಳನ್ನು ಆಧರಿಸಿ ಇಲ್ಲಿನ ಧರ್ಮಗಳು ಹೇಗೆ ನೆಲೆ ನಿಂತಿವೆ ಮತ್ತು ಸಾಮಾಜಿಕ ಸಾಮರಸ್ಯ ಮೂಡಿಸುವಲ್ಲಿ ವೈಚಾರಿಕಾ ಕ್ರಾಂತಿಯಲ್ಲಿ.

ದಾಸೋಹ ಕ್ಷೇತ್ರಗಳಲ್ಲಿ ಇಲ್ಲಿನ ಮಠಗಳು, ಮಸೀದಿಗಳು, ಹೇಗೆ ಮಾದರಿ ಕೇಂದ್ರಗಳಾಗಿವೆ ಎನ್ನುವ ಅಧ್ಯಯನ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ 'ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಚಾರಿತ್ರಿಕ ನೋಟ' ಎನ್ನುವ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಆರಂಭದಲ್ಲಿ ವಚನ ಪರಂಪರೆಯ ಬಗ್ಗೆ ವಿವರಿಸುತ್ತಾ ಬಸವಣ್ಣ ಹಾಗೂ ಇತರ ಶರಣರಿಂದ ಪ್ರಾರಂಭವಾದ ವಚನ ಚಳುವಳಿಯು ಯಾದಗಿರಿ ಜಿಲ್ಲೆಯ ಜನಜೀವನದ ಮೇಲೆ ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ? ಹಾಗೂ ಸ್ತ್ರೀಪರ ದಲಿತರಪರ ಎನ್ನುವ ಬಸವಣ್ಣನ ವಿಚಾರಗಳು ಇಂದಿನ ಸ್ತ್ರೀ ಮತ್ತು ದಲಿತ ಚಳುವಳಿಗೆ ಎಷ್ಟರಮಟ್ಟಿಗೆ ಸಮಂಜಸವಾಗಿದೆ ಎನ್ನುವ ವಿಶ್ಲೇಷಣೆಯನ್ನು ಮಾಡಲಾಗಿದೆ. ಎರಡನೇ ಭಾಗದಲ್ಲಿ ಸೂಫಿ ಪರಂಪರೆ ಬಗ್ಗೆ ಅಧ್ಯಯನ ಮಾಡುತ್ತಾ ಶರಣರ ನಂತರ ಭೂಮಿಕೆಯನ್ನು ಪ್ರವೇಶಿಸಿದ ಸೂಫಿಗಳು ಶರಣರ ಪರಂಪರೆಯನ್ನು ಹೇಗೆ ಮುಂದುವರಿಸಿದರು ಹಾಗೂ ತಮ್ಮದೇ ಆದ ಮಾರ್ಗದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಯನ್ನು ಆರಂಭಿಸಿದರು ಮತ್ತು ಇದರ ಪ್ರಭಾವವೇನು ಎನ್ನುವುದರ ವಿವರಣೆ ನೀಡಲಾಗಿದೆ. ಮೂರನೇ ಭಾಗದಲ್ಲಿ ದಾಸ ಪರಂಪರೆಯ ಬಗ್ಗೆ ಅಧ್ಯಯನ ಮಾಡುತ್ತಾ ದಾಸರು ಹಾಗೂ ಇವರ ಕೀರ್ತನೆಗಳಿಂದಾಗಿ ಯಾದಗಿರಿ ಜಿಲ್ಲೆಯ ಭಾಗದ ಜನರ ಮೇಲೆ ಬೀರಿದ ಪ್ರಭಾವಗಳೇನು ಎನ್ನುವುದನ್ನು ಹಾಗೂ ನಾಲ್ಕನೆಯ ಭಾಗದಲ್ಲಿ ತತ್ವಪದಕಾರರ ಪರಂಪರೆಯನ್ನು ಅಧ್ಯಯನ ಮಾಡುತ್ತಾ, ತತ್ವಪದಕಾರರು ಆಗ ಸಮಾಜದಲ್ಲಿದ್ದ ಬಡತನ, ಶೋಷಣೆ ಅಸಮಾನತೆಯ ವಿರುದ್ಧ ಹಾಗೂ ಆಗಿನ ಜ್ವಲಂತ ಸಮಸ್ಯೆಗಳ ವಿರುದ್ಧ ಧ್ವನಿ ಎತ್ತಿದ ಅಂಶಗಳನ್ನು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಸ್ವಾತಂತ್ರ್ಯೋತ್ತರ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು' ಎನ್ನುವ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಇಲ್ಲಿ ನಡೆದ ರೈತ, ದಲಿತ, ಹಿಂದುಳಿದ, ಕಾರ್ಮಿಕ ಹಾಗೂ ಮಹಿಳಾ ಚಳುವಳಿಗಳು ಹಾಗೂ ಸಮಕಾಲೀನ ಸಂದರ್ಭದಲ್ಲಿ ಇವರ ಸಮಸ್ಯೆಗಳು ಮತ್ತು ಸ್ಥಿತಿಗಳ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ.

ಇದೇ ಅಧ್ಯಾಯದ ಮೊದಲನೇ ಭಾಗದಲ್ಲಿ ಸ್ವಾತಂತ್ರ್ಯೋತ್ತರ ರೈತ ಚಳುವಳಿಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಮೊದಲು ರೈತ ಎಂದರೆ ಯಾರು ಎಂಬುದನ್ನು ಚರ್ಚಿಸುತ್ತಾ, ರೈತಸಂಘ ರೈತ ಚಳುವಳಿಯ ಪ್ರಜ್ಞೆ, ಸಂಘಟನೆ, ಜಾಗೃತಿ ಮತ್ತು ಹೋರಾಟಗಳ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಹಾಗೆಯೇ ಯಾದಗಿರಿ ಜಿಲ್ಲೆಯಲ್ಲಿ ರೈತ ಚಳುವಳಿಗಳು ಆರಂಭವಾಗಲು ಕಾರಣವೇನು? ಹೋರಾಟ ಕೈಗೊಂಡವರಾರು? ಪ್ರಮುಖ ಹೋರಾಟಗಳಾವುವು? ಇವರ ಹೋರಾಟದ ಗತಿ ಯಾವ ರೀತಿ ಇತ್ತು, ಹೋರಾಟಗಳಿಂದ ಪ್ರತಿಫಲ ಪಡೆದ ವರ್ಗ ಯಾವುದು, ಹೋರಾಟಗಳು ಎಲ್ಲಿ ಸೋತಿವೆ ಮತ್ತು ಪ್ರಸ್ತುತ ಇಲ್ಲಿನ ರೈತರು ಎದುರಿಸುತ್ತಿರುವ ಸಮಸ್ಯೆಗಳೇನು? ಅವರ ಸ್ಥಿತಿಗತಿಗಳೇನು ಎನ್ನುವ ಅಂಶಗಳನ್ನು ಇಲ್ಲಿ ದಾಖಲಿಸುತ್ತಾ ವಿಶ್ಲೇಷಣೆ ಕೈಗೊಳ್ಳಲಾಗಿದೆ.

ಇದೇ ಅಧ್ಯಾಯದ ಎರಡನೇ ಭಾಗದಲ್ಲಿ, ಸ್ವಾತಂತ್ರ್ಯೋತ್ತರ ದಲಿತ ಚಳುವಳಿಯ ಬಗ್ಗೆ ಅಧ್ಯಯನ ಮಾಡುತ್ತಾ ದಲಿತ ಎಂದರೆ ಯಾರು? ದಲಿತತ್ವ ಎಂದರೇನು? ಸಮಾಜದಲ್ಲಿ ದಲಿತರ ಸ್ಥಾನಮಾನಗಳೇನು ಎಂಬುದನ್ನು ಆರಂಭದಲ್ಲಿ ವಿವರಿಸಲಾಗಿದೆ. ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ದಲಿತರ ಉದ್ಧಾರಕ್ಕಾಗಿ ಬೆಳಕಾಗಿ, ದಲಿತ ಹೋರಾಟಕ್ಕೆ ಜೀವ ತಂದುಕೊಟ್ಟವರು ಯಾರು? ಹಾಗೂ ಯಾದಗಿರಿ ಜಿಲ್ಲೆಯ ಮೇಲೆ ಡಾ. ಬಿ.ಆರ್. ಅಂಬೇಡ್ಕರ್ ಅವರ ಪ್ರಭಾವ ಮತ್ತು ಹೈದರಾಬಾದ್ ಕರ್ನಾಟಕದ ಭಾಗದವರೇ ಆದ ಬಿ. ಶ್ಯಾಮಸುಂದರ್ ಅವರಿಂದ ಭೀಮಸೇನೆಯ ಸ್ಥಾಪನೆ, ನಂತರ ದಲಿತ ಸಂಘರ್ಷ ಸಮಿತಿಯ ಸ್ಥಾಪನೆ ಹಾಗೂ ಇತರ ಸಂಘಟನೆಗಳ ನೇತೃತ್ವದಲ್ಲಿ ದಲಿತರ ಮೇಲೆ ನಡೆದ, ನಡೆಯುತ್ತಿದ್ದ ಹಲ್ಲೆಗಳು, ಶೋಷಣೆಗಳನ್ನು ವಿರೋಧಿಸಿ ನಡೆದ ಪ್ರತಿಭಟನೆ ಮತ್ತು ಹೋರಾಟಗಳನ್ನು ಚರ್ಚಿಸಲಾಗಿದೆ. ಹಾಗೆಯೇ ವಿಶೇಷವಾಗಿ ದಲಿತರ ಭೂಹೋರಾಟಗಳು, ಜಾತಿವಾದಿಗಳ ವಿರುದ್ಧ, ಮಹಿಳೆಯರ ದೌರ್ಜನ್ಯದ ವಿರುದ್ಧ, ಬೆತ್ತಲಸೇವೆ ವಿರುದ್ಧ ನಡೆದ ಹೋರಾಟಗಳು, ಅವುಗಳ ಸಫಲತೆ ವಿಫಲತೆಗಳನ್ನು ವಿಶ್ಲೇಷಣೆಗೆ ಒಳಪಡಿಸುತ್ತಾ ದಾಖಲಿಸಲಾಗಿದೆ. ಹಾಗೆಯೇ ಪ್ರಸ್ತುತ ಇಲ್ಲಿನ ದಲಿತರ ಸಮಸ್ಯೆಗಳಾದ ಅಸ್ಪೃಶ್ಯತೆ, ದೌರ್ಜನ್ಯ, ದಲಿತರಲ್ಲಿ ಎಡಗೈ-ಬಲಗೈ ವಿವಾದ, ದಲಿತ ಸಂಘಟನೆಗಳ ಒಡಕು ಹಾಗೂ ದಲಿತರ ಮುಂದಿರುವ ಸವಾಲುಗಳು ಹಾಗೂ ಪ್ರಸ್ತುತ ದಲಿತ ಚಳುವಳಿಗಳು ಸಾಗಬೇಕಾಗಿರುವ ದಿಕ್ಕು-ದೆಸೆಗಳ ಬಗ್ಗೆ ಚರ್ಚಿಸಲಾಗಿದೆ.

ಈ ಅಧ್ಯಾಯದ ಮೂರನೇ ಭಾಗದಲ್ಲಿ, ಸ್ವಾತಂತ್ರ್ಯೋತ್ತರ ಹಿಂದುಳಿದ ವರ್ಗಗಳ ಚಳುವಳಿಗಳ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ. ಹಿಂದುಳಿದ ವರ್ಗಗಳ ಚಳುವಳಿಯ ವಿಭಿನ್ನತೆ, ಇದರ ಪ್ರಾಮುಖ್ಯತೆ ಬಗ್ಗೆ ವಿವರಿಸಲಾಗಿದೆ. ಇಲ್ಲಿ ವಿವಿಧ ಉಪಜಾತಿಗಳಿಗೆ ಸೇರಿದ ಮೂಲ ನೆಲೆಯಿಲ್ಲದ ಅಸಂಘಟಿತರಾಗಿರುವ ಮೂಲ ಸೌಲಭ್ಯಗಳಿಂದ ವಂಚಿತರಾಗಿರುವ ಜನಾಂಗಗಳು ಹೆಚ್ಚಾಗಿದ್ದರೂ ಹಿಂದುಳಿದ ವರ್ಗಗಳ ಹೋರಾಟಗಳು ತೀವ್ರ ಸ್ವರೂಪ ಪಡೆದುಕೊಳ್ಳದಿರಲು ತನ್ನದೇ ಆದ ಕಾರಣಗಳಿರುವುದನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಹಾಗೆಯೇ ಒಂದು ಕಡೆ ಜಾತಿ ಸಂಘರ್ಷ, ಅನಕ್ಷರತೆ, ಬಡತನ, ಸಾಮಾಜಿಕ ಅಸಮಾನತೆ ಕಾಡುತ್ತಿದ್ದರೆ, ಇನ್ನೊಂದೆಡೆ ಸರ್ಕಾರ ಮತ್ತು ಇಲ್ಲಿನ ಜನಪ್ರತಿನಿಧಿಗಳ ಇಚ್ಛಾಶಕ್ತಿಯ ಕೊರತೆಯಿಂದ ಹಿಂದುಳಿದ ವರ್ಗಗಳು ಸಂಘಟಿತರಾಗಿ ಸರ್ಕಾರದ ಮೇಲೆ ಮತ್ತು ಆಯೋಗಗಳ ಮೇಲೆ ಒತ್ತಡ ಹೇರುವಲ್ಲಿ ವಿಫಲವಾಗುತ್ತಿವೆ ಎನ್ನುವುದನ್ನು ಹಾಗೂ ಹೋರಾಟಗಳು ಒಂದು ಸ್ಪಷ್ಟ ರೂಪದಲ್ಲಿ ನಿರಂತರವಾಗಿ ನಡೆಯುತ್ತಿಲ್ಲ ಎನ್ನುವುದನ್ನು ಗುರುತಿಸುತ್ತಾ ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಲಾಗಿದೆ.

ಇದೇ ಅಧ್ಯಾಯದ ನಾಲ್ಕನೇ ಭಾಗದಲ್ಲಿ, ಸ್ವಾತಂತ್ರ್ಯೋತ್ತರ ಕಾರ್ಮಿಕ ಚಳುವಳಿಗಳ ಬಗ್ಗೆ ಅಧ್ಯಯನ ಮಾಡುತ್ತಾ, ಕಾರ್ಖಾನೆಗಳಲ್ಲಿ ಕಡಿಮೆ ವೇತನ, ಮಾಲೀಕರ ಶೋಷಣೆ, ನಿರ್ಲಕ್ಷ್ಯ, ವಸತಿಸಮಸ್ಯೆ ಮುಂತಾದವುಗಳನ್ನು ವಿರೋಧಿಸಿ ಆರಂಭಿಸಿದ ಪ್ರತಿಭಟನೆಗಳಿಂದ ಹಿಡಿದು ಕಾರ್ಮಿಕರ ಹಿತರಕ್ಷಣೆಗಾಗಿ ಸ್ಥಾಪಿಸಲ್ಪಟ್ಟ ಕಾರ್ಮಿಕ ಸಂಘಟನೆಗಳು, ಕಮ್ಯೂನಿಸ್ಟ್ ಸಿದ್ಧಾಂತವುಳ್ಳ ಪಕ್ಷಗಳ ನೇತೃತ್ವದಲ್ಲಿ ನಡೆದ ಹೋರಾಟಗಳು, ಅವುಗಳ ಸಫಲತೆ ಮತ್ತು ವಿಫಲತೆಗಳನ್ನು ಅವಲೋಕಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹಾಗೆಯೇ ಪ್ರಸ್ತುತ ಕಾರ್ಮಿಕರ

ಸಮಸ್ಯೆಗಳು, ಸ್ಥಿತಿಗತಿಗಳು ಸರ್ಕಾರದ ಧೋರಣೆ ಮತ್ತು ಕಾರ್ಮಿಕರ ಹೋರಾಟಗಳು ಯಾವ ದಿಕ್ಕಿನಲ್ಲಿ ಸಾಗಿವೆ ಎನ್ನುವುದನ್ನು ಚರ್ಚಿಸಲಾಗಿದೆ.

ಇದೇ ಅಧ್ಯಾಯದ ಐದನೇ ಭಾಗದಲ್ಲಿ, ಸ್ವಾತಂತ್ರ್ಯೋತ್ತರ ಮಹಿಳಾ ಚಳುವಳಿಗಳ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ. ಕರ್ನಾಟಕದಲ್ಲಿ ನಡೆದ ಮತ್ತು ನಡೆಯುತ್ತಿರುವ ಮಹಿಳಾ ಚಳುವಳಿಗಳಿಗಿಂತ ಇಲ್ಲಿನ ಚಳುವಳಿಗಳು ವಿಭಿನ್ನವಾಗಿರುವುದನ್ನು ಗುರುತಿಸಲಾಗಿದೆ. ಮಹಿಳೆಯರ ಮೇಲೆ ಅನೇಕ ಕಟ್ಟುಪಾಡುಗಳಿದ್ದಾಗ, ಬಂಡಾಯ ಸಾಹಿತ್ಯದಿಂದಾಗಿ, ಮಹಿಳೆಯರ ಮೇಲೆ ಉಂಟಾದ ಪ್ರಭಾವ ಹಾಗೂ ಈ ದಿಸೆಯಲ್ಲಿ ಹುಟ್ಟಿಕೊಂಡ ಮಹಿಳಾ ಸಂಘಟನೆಗಳು, ಅವುಗಳ ಬೇಡಿಕೆಗಳು, ಪ್ರಮುಖ ಹೋರಾಟಗಳು, ಹೋರಾಟಗಳ ಸಫಲತೆ ಮತ್ತು ವಿಫಲತೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಪ್ರಸ್ತುತ ಇಲ್ಲಿನ ಮಹಿಳೆಯರು ಎದುರಿಸುವ ಸಮಸ್ಯೆಗಳು, ಸ್ಥಿತಿಗತಿಗಳು ಹಾಗೂ ಮಹಿಳಾ ಹೋರಾಟಗಳು ತಮ್ಮದೇ ಆದ ನೆಲೆಯನ್ನು ಕಂಡುಕೊಳ್ಳುವಲ್ಲಿ ಅಷ್ಟೊಂದು ಯಶಸ್ವಿಯಾಗದೆ ಇರುವುದಕ್ಕೆ ಕಾರಣಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ, 'ಸಾಮಾಜಿಕ ಚಳುವಳಿಗಳಲ್ಲಿ ಧರ್ಮ ಮತ್ತು ಸರ್ಕಾರಗಳ ಪಾತ್ರ' ಎನ್ನುವ ಶೀರ್ಷಿಕೆಯಡಿ ಅಧ್ಯಯನ ಕೈಗೊಳ್ಳಲಾಗಿದೆ. ಅನೇಕ ಧರ್ಮಗಳ ನೆಲೆವೀಡಾಗಿರುವ ಈ ಜಿಲ್ಲೆಯಲ್ಲಿ ಮಠಗಳು, ಮಸೀದಿಗಳು, ಚರ್ಚ್‌ಗಳು ಎಲ್ಲಾ ವರ್ಗದ ಜನರಿಗೆ ಆಶ್ರಯ ನೀಡುತ್ತಾ ಮತೀಯ ಸಾಮರಸ್ಯ ಕಾಪಾಡುತ್ತಾ, ಸರಕಾರಗಳು ಮಾಡಲಾರದಂತಹ ಅಥವಾ ಸರಕಾರಕ್ಕೆ ಮಾಡಲು ಸುಲಭ ಸಾಧ್ಯವಾಗದಂತಹ ಎಷ್ಟೋ ಸಾಮಾಜಿಕ ಕಾರ್ಯಗಳನ್ನು ಇವು ಕೈಗೊಂಡಿರುವುದನ್ನು ಹಾಗೂ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಿಂದಿನಿಂದಲೂ ತಮ್ಮನ್ನು ತೊಡಗಿಸಿಕೊಂಡು ಇಂದಿಗೂ ಸಮಾಜದ ಏಳಿಗೆಯಲ್ಲಿ, ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಇದೇ ಅಧ್ಯಾಯದ ಎರಡನೇ ಭಾಗದಲ್ಲಿ 'ಸಾಮಾಜಿಕ ಚಳುವಳಿಗಳು ಮತ್ತು ಸರ್ಕಾರ' ಎನ್ನುವುದರಲ್ಲಿ ಪ್ರಾದೇಶಿಕ ಅಸಮಾನತೆಯ ನಿವಾರಣೆಗಾಗಿ, ಅಭಿವೃದ್ಧಿಗಾಗಿ ಜನರ ಪ್ರತಿಭಟನೆಗಳಿಗೆ ಸ್ಪಂದಿಸಿ ಸರ್ಕಾರಗಳು ಕೈಗೊಂಡಿರುವ ಯೋಜನೆಗಳು ಹಾಗೂ ಪ್ರೊ. ಡಿ.ಎಂ. ನಂಜುಂಡಪ್ಪ ನೇತೃತ್ವದಲ್ಲಿ ಪ್ರಾದೇಶಿಕ ಅಸಮತೋಲನ ನಿವಾರಣಾ ಸಮಿತಿಯ ನೇಮಕ ಹಾಗೂ ಸಮಿತಿ ಮಾಡಿರುವ ಶಿಫಾರಸ್ಸುಗಳು ಹಾಗೂ ಇದರಿಂದಾಗಿ ಬದಲಾವಣೆಗಳು ಮತ್ತು ಸುಧಾರಣೆಗಳು ಹಾಗೂ ಇನ್ನೂ ಉಳಿದಿರುವ ಸಮಸ್ಯೆಗಳ ಕುರಿತು ಚರ್ಚಿಸಲಾಗಿದೆ.

ಹಾಗೆಯೇ ಹೈದರಾಬಾದ್ ಕರ್ನಾಟಕ ಭಾಗದ ಜನರ ಹಲವಾರು ದಶಕಗಳ ಬೇಡಿಕೆಯಾಗಿರುವ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿ ಕುರಿತು ವಿವರವಾಗಿ ಚರ್ಚಿಸುತ್ತಾ, ಸಂವಿಧಾನದ ೩೭೧ನೇ ಕಲಂ ಎಂದರೇನು? ಇದರ ಅನುಬಂಧಗಳು ಹಾಗೂ ಇದುವರೆಗೆ ಈ ಕಲಂನ ಪ್ರಯೋಜನ ಪಡೆದ ಪ್ರದೇಶಗಳಾವುವು ಮತ್ತು ಸ್ವಾತಂತ್ರ್ಯದ ನಂತರ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಿಗೆ ಈ ಕಲಂ ಅನ್ವಯವಾಗಲು ಸರಕಾರ ಇಷ್ಟೊಂದು ಕಾಲಾವಕಾಶ ಏಕೆ

ತೆಗೆದುಕೊಂಡಿತು ಎನ್ನುವ ವಿಚಾರಗಳನ್ನು ವಿಶ್ಲೇಷಣೆಗಳಿಗೆ ಒಳಪಡಿಸಲಾಗಿದೆ. ಇತ್ತೀಚೆಗೆ ೩೭೧ನೇ ಕಲಂ ಜಾರಿ ಕುರಿತು ಇಲ್ಲಿನ ತೀವ್ರ ಹೋರಾಟಗಳಿಗೆ ಸ್ಪಂದಿಸಿ, ಹೈದರಾಬಾದ್ ಕರ್ನಾಟಕದ ಆರು ಜಿಲ್ಲೆಗಳಿಗೆ(ಬೀದರ್, ಗುಲಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ) ವಿಶೇಷ ಸ್ಥಾನಮಾನ ಕಲ್ಪಿಸುವುದಕ್ಕಾಗಿ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿ ತರಲು ಕೇಂದ್ರ ಸರ್ಕಾರವು ಒಪ್ಪಿಗೆ ನೀಡಿರುವ ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕೊನೆಗೆ ೩೭೧ಜೆ ಕಲಂ ಜಾರಿಗೆ ಬಂದುದರ ಬಗ್ಗೆ, ಜೊತೆಗೆ ೩೭೧ನೇ ಕಲಂ ಜಾರಿಯಿಂದಾಗಿ ಫಲಾನುಭವಿ ವರ್ಗಗಳಾವುವು, ಕೆಳವರ್ಗದವರ ನಿರ್ಲಕ್ಷಿತರ ಬಡವರ ಬದುಕಿನಲ್ಲಿ ಇದು ಎಷ್ಟರಮಟ್ಟಿಗೆ ಬದಲಾವಣೆ ತರಬಲ್ಲದು ಎಂಬುದರ ಕುರಿತು ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ, 'ತುರ್ತು ಪರಿಸ್ಥಿತಿಯ ಸಂದರ್ಭ ಮತ್ತು ನಂತರದ ದಿನಗಳಲ್ಲಿ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು' ಎಂಬ ಶೀರ್ಷಿಕೆಯಡಿ ಅಧ್ಯಯನ ಕೈಗೊಳ್ಳಲಾಗಿದೆ. ಯಾದಗಿರಿ ಜಿಲ್ಲೆಯಲ್ಲಿ ತುರ್ತು ಪರಿಸ್ಥಿತಿಯ ಬಗ್ಗೆ ಚರ್ಚಿಸುತ್ತಾ, ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಗೇಣಿ ಕಾಯ್ದೆ ಬಗ್ಗೆ ಚರ್ಚಿಸುತ್ತಾ ಗೇಣಿ ಕಾಯ್ದೆ ಎಂದರೇನು? ಆ ಸಂದರ್ಭದಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಜಾರಿಗೆ ಬಂದ ಗೇಣಿ ಕಾಯ್ದೆ ವಿರುದ್ಧ ಜನರ ಆಕ್ರೋಶ, ಹೋರಾಟ ಮತ್ತು ಸಾಲ ಮೇಳ, ಕಡ್ಡಾಯ ಶಿಕ್ಷಣ, ರಾಷ್ಟ್ರೀಕೃತ ಬ್ಯಾಂಕು ಇವುಗಳಿಂದ ಈ ಜಿಲ್ಲೆಯಲ್ಲಿ ಯಾರಿಗೆ ಲಾಭವಾಯಿತು ಮತ್ತು ಯಾರಿಗೆ ನಷ್ಟವಾಯಿತು ಎಂಬುದರ ಬಗ್ಗೆ ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ '೨೦೦೯ರ ನಂತರ ಯಾದಗಿರಿ ಜಿಲ್ಲೆಯ ಸಾಧಕ ಬಾಧಕಗಳ ಅಧ್ಯಯನ' ಎಂಬ ಶೀರ್ಷಿಕೆಯಡಿ ಅಧ್ಯಯನ ಕೈಗೊಳ್ಳಲಾಗಿದೆ. ಯಾದಗಿರಿ ಮೊದಲು ಕಲಬುರಗಿ ಜಿಲ್ಲೆಯ ತಾಲೂಕುಗಳಲ್ಲಿ ಒಂದಾಗಿತ್ತು. ೨೦೦೯ ಡಿಸೆಂಬರ್ ೩೦ರಂದು ಯಾದಗಿರಿ ತಾಲೂಕನ್ನು ಜಿಲ್ಲೆಯನ್ನಾಗಿ ಘೋಷಣೆ ಮಾಡಲಾಯಿತು. ಅಂದಿನಿಂದ ಇಂದಿನವರೆಗೆ ಯಾದಗಿರಿ ಜಿಲ್ಲೆಯಲ್ಲಿ ಆಗಿರುವ ಸಾಧಕ ಬಾಧಕಗಳ ಬಗ್ಗೆ ಚರ್ಚಿಸುತ್ತಾ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಯಾದಗಿರಿ ಜಿಲ್ಲೆಯು ಹಿಂದುಳಿಯಲು ಕಾರಣಗಳೇನು ಮತ್ತು ಈ ಜಿಲ್ಲೆಯ ಸುಧಾರಣೆಗಳು ಮಂದಗತಿಯಲ್ಲಿ ಸಾಗುತ್ತಿರಲು ಕಾರಣಗಳೇನು ಎನ್ನುವುದರ ಬಗ್ಗೆ ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಲಾಗಿದೆ.

ಎಂಟನೇ ಅಧ್ಯಾಯದಲ್ಲಿ 'ಉಪಸಂಹಾರ' ಎಂಬ ಶೀರ್ಷಿಕೆಯಡಿ ಅಧ್ಯಯನ ಕೈಗೊಳ್ಳಲಾಗಿದೆ. ಒಟ್ಟಾರೆಯಾಗಿ ಸಂಶೋಧನಾ ಫಲಿತಾಂಶಗಳನ್ನು ಕಂಡುಕೊಂಡ ಸಮಗ್ರ ಮಾಹಿತಿಯನ್ನು ನೀಡಲಾಗಿದೆ. ಇಡೀ ಸಂಶೋಧನಾ ಅವಧಿಯಲ್ಲಿ ಕಂಡುಕೊಂಡ ಫಲಿತಗಳು, ಅಧ್ಯಯನಕ್ಕೆ ಹೊರಟಾಗ ಎದುರಾದ ಸಮಸ್ಯೆಗಳು, ಕ್ಷೇತ್ರಕಾರ್ಯದಲ್ಲಿ ತೊಡಗಿಸಿಕೊಂಡಾಗ ವಿವಿಧ ಕ್ಷೇತ್ರದಲ್ಲಿ ಎದುರಾದ ರಾಜಕೀಯ, ಸಾಮಾಜಿಕ ಹಾಗೂ ಜಾತಿ ಸಮಸ್ಯೆಗಳು ಹಾಗೂ ಅವುಗಳನ್ನು ಎದುರಿಸಿದ ಬಗ್ಗೆ ಮತ್ತು ಸಂಶೋಧನೆಯಲ್ಲಿ ಕಂಡುಕೊಂಡ ವಾಸ್ತವಗಳ ಬಗ್ಗೆ ತಿಳಿಸಲಾಗಿದೆ.

ಹಾಗೆಯೇ ವ್ಯಕ್ತಿಗಳ ಸಂದರ್ಶನ ಹಾಗೂ ದಾಖಲೆಗಳ ಮಾಹಿತಿಗಳಿಂದ ದೊರೆತ ಹೊಸ ವಿಚಾರಗಳು, ದ್ವಂದ್ವಗಳು ಹಾಗೂ ಇಲ್ಲಿಯವರೆಗೆ ದಾಖಲಾಗದಂತಹ ಹೋರಾಟಗಳು, ಘಟನೆಗಳು ಹಾಗೂ ವಿಶೇಷವಾಗಿ ತಳವರ್ಗಗಳ ಬಗ್ಗೆ ಮಾಹಿತಿಗಳನ್ನು ಮತ್ತು ಅವುಗಳ ಮೌಲ್ಯಗಳನ್ನು ಮತ್ತು ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ವಸ್ತುನಿಷ್ಠವಾಗಿ ದಾಖಲಿಸಲಾಗಿದೆ. ಜೊತೆಗೆ ಪ್ರಸ್ತುತ ಸಂಶೋಧನೆಯಲ್ಲಿ ಕಂಡುಕೊಂಡ ಹೊಸ ಫಲಿತಾಂಶಗಳನ್ನು ದಾಖಲಿಸುವುದರೊಂದಿಗೆ ಮುಂದೆ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಬಗ್ಗೆ ಸಂಶೋಧನೆಯನ್ನು ಯಾವ ದಿಕ್ಕಿನಲ್ಲಿ, ನಿಟ್ಟಿನಲ್ಲಿ ಮಾಡಬಹುದು ಎಂಬುದನ್ನು ಚರ್ಚಿಸಲಾಗಿದೆ.

**೧.೩. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

'ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಚಳುವಳಿಗಳು'(೧೯೪೮ರಿಂದ ಸಮಕಾಲೀನವರೆಗೆ) ಎಂಬ ಸಂಶೋಧನಾ ಅಧ್ಯಯನಕ್ಕೆ ಹಲವಾರು ಮೂಲಾಧಾರಗಳನ್ನು ಬಳಸಿಕೊಳ್ಳಲಾಗಿದೆ. ಇತಿಹಾಸದ ಸಂಶೋಧನೆಯು ಮೂಲಾಧಾರಗಳನ್ನು ಆಧರಿಸಿದ ಜ್ಞಾನವಾಗಿರುವುದರಿಂದ ಲಭ್ಯ ಮಾಹಿತಿಗಳನ್ನು ಆಧರಿಸಿ ಬರೆಯಲಾಗಿದೆ. ಮೂಲಾಧಾರಗಳೇ ಸಂಶೋಧನೆಯ ಬೆನ್ನೆಲುಬಾಗಿರುವುದ ರಿಂದ ಗುಣಾತ್ಮಕವಾದ ಮೂಲಾಧಾರಗಳನ್ನು ಪತ್ತೆ ಹಚ್ಚುವ ಪ್ರಯತ್ನಗಳನ್ನು ಇಲ್ಲಿ ಮಾಡಲಾಗಿದೆ. ವಿಷಯಕ್ಕನುಗುಣವಾಗಿ ಪ್ರಕಟಿತ ಕೃತಿಗಳು, ಗ್ರಂಥಗಳು, ಸಂಶೋಧನಾ ನಿಬಂಧಗಳು, ಕಂದಾಯ ಇಲಾಖೆಯ ದಾಖಲೆಗಳು, ಪತ್ರಾಗಾರದ ದಾಖಲಾತಿಗಳು, ಸಂಘ ಸಂಸ್ಥೆಗಳ ಮಾಹಿತಿಗಳು, ಸ್ಮರಣ ಸಂಚಿಕೆಗಳು, ಲೇಖನಗಳು, ಸಂದರ್ಶನಗಳು, ರಾಷ್ಟ್ರೀಯ ಮತ್ತು ಪ್ರಾದೇಶಿಕ ವೃತ್ತಪತ್ರಿಕೆಗಳು, ವಿವಿಧ ಸಮಿತಿಯ ವರದಿಗಳು, ಅಭಿವೃದ್ಧಿ ವಿಭಾಗಗಳ ವರದಿಗಳು, ಹೇಳಿಕೆಗಳು ಹೀಗೆ ಹಲವಾರು ಮಾಹಿತಿಗಳ ಆಧಾರದ ಮೇಲೆ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಹೀಗೆ ವಿವಿಧ ಮೂಲಾಧಾರಗಳನ್ನು ಆಧರಿಸಿ, ಕ್ರಮಬದ್ಧವಾದ ಮತ್ತು ಗುಣಾತ್ಮಕ ವಿಷಯ ವಿಶ್ಲೇಷಣೆಯನ್ನು ಮಾಡಲಾಗಿದೆ.

ಇದುವರೆಗೆ ನೇರವಾಗಿ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಬಗ್ಗೆ ಅಧ್ಯಯನಗಳು ಆಗಿರುವುದಿಲ್ಲ. ಹೈದರಾಬಾದ್ ಕರ್ನಾಟಕ ಮತ್ತು ಸಾಮಾಜಿಕ ಚಳುವಳಿಗಳ ಬಗ್ಗೆ ಅನೇಕ ಅಧ್ಯಯನಗಳು ನಡೆಯುತ್ತಾ ಬಂದಿವೆ. ನಡೆದಿರುವ ಮುಖ್ಯ ಅಧ್ಯಯನಗಳಲ್ಲಿ, ನಾಗೇಶ ಚಡಗ ಅವರ 'ಹೈದರಾಬಾದ್-ಕರ್ನಾಟಕ', ಎಂ.ಬಿ. ಪಾಟೀಲ ಸಂಪಾದಕತ್ವದ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್-ಗುಲಬರ್ಗಾ ಜಿಲ್ಲೆ', ಅಮರೇಶ ನುಗಡೋಣಿ ಅವರ 'ಹೈದರಾಬಾದು ಕರ್ನಾಟಕ ಹಾಡು ಪಾಡು, ಬಸವರಾಜ ಟಿ. ಕುಮ್ನೂರ ಅವರ ಡಾ. ನಂಜುಡಪ್ಪನವರ ವರದಿ ಮತ್ತು ಅನುಷ್ಠಾನ, ವೈಜನಾಥ ಪಾಟೀಲರ 'ಹೈದ್ರಾಬಾದ್ ಕರ್ನಾಟಕ-ಅಸಮಾನತೆಯ ಒಂದು ನೋಟ' ಹಾಗೂ 'ಹೈದರಾಬಾದ್ ಕರ್ನಾಟಕ ಪರ ಹೋರಾಟ ಏಕೆ'. 'ಕೆ. ವೆಂಕಟೇಶ್ ಮತ್ತು ಜಿ. ಸರೋಜಾ ಸಂಪಾದಕತ್ವದ 'ಹೈದ್ರಾಬಾದ್ ಕರ್ನಾಟಕ-ವರ್ತಮಾನದ ತಲ್ಲಣಗಳು'. 'ಜಿ.ಸಿ. ಮಹಾಬಲೇಶ್ವರಪ್ಪ ಅವರ 'ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು'. ಎಚ್.ಎಸ್.ಪಾಟೀಲ ಮತ್ತು ಅಲ್ಲಮಪ್ರಭು ಬೆಟ್ಟದೂರು ಸಂಪಾದಕತ್ವದ 'ವಿಮೋಚನೆ', ಎಂ.ಉಷಾ ಅವರ 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು'. ಜಾಗೀರ್‌ದಾರ್ ಆರ್.ಜೆ.

ಲಿಂಗಸೂಗೂರು ವಿಠಲರಾವ್ 'ಹೈದರಾಬಾದ್ ಕರ್ನಾಟಕ', ಲಕ್ಷ್ಮಣ ದಸ್ತಿ ಅವರ 'ನಮ್ಮ ಇತಿಹಾಸ ಕೈಫಿಯತ್', ಜಗನ್ನಾಥ ಸಿಂಧೆ ಅವರ 'ದಲಿತ ಚಿಂತಕ ಬಿ.ಶ್ಯಾಮಸುಂದರ', ಹೆಚ್.ಟಿ.ಪೋತೆ ಮತ್ತು ಜಗನ್ನಾಥ ಸಿಂಧೆ ಅವರ 'ಬಿ. ಶ್ಯಾಮಸುಂದರ', ನಾಗೇಶ್ ಎಚ್.ವಿ. ಅವರ 'ಸಾಮಾಜಿಕ ಚಳುವಳಿಗಳು', ವೀರಸಂಗಯ್ಯ ಜೆ.ಎಂ. 'ರೈತರ ಆತ್ಮಹತ್ಯೆ ತಡೆ ಹೇಗೆ', ಲಕ್ಷ್ಮಣ್ ತೆಲಗಾವಿ ಅವರ 'ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು', ವಿಜಯ್ ಪೂಣಚ್ಚರ ತಂಬಂಡ 'ರೈತ ಚಳುವಳಿಗಳು', ರಹಮತ್ ತರೀಕೆರೆ ಅವರ 'ಕರ್ನಾಟಕದಲ್ಲಿ ಸೂಫಿಗಳು', ನಾಗಭೂಷಣ ಡಿ.ಎಸ್. ಅವರ 'ರೈತ ಭಾರತ ಅವಸಾನದ ಅಂಚಿನಲ್ಲಿ', ಮುಜಾಫರ್ ಅಸ್ಸಾದಿ ಅವರ 'ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿಗಳು', ನಾಗರಾಜ ಟಿ. ಅವರ 'ಸಾಮಾಜಿಕ ಚಳುವಳಿಗಳು', ಬಸವರಾಜ ಸಬರದ ಅವರ 'ವಚನಕಾರರು ಮತ್ತು ದಲಿತ ಸಂವೇದನೆ', ಗಾಯಿತ್ರಿ ಎನ್. ಅವರ ಮಹಿಳಾ ಚಳುವಳಿಯ ಮಜಲುಗಳು', ಚಂದ್ರಶೇಖರ ಟಿ.ಆರ್. ಅವರ 'ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತಾಧಿಕಾರಿ ಸಮಿತಿ ವರದಿ, ಮೀನಾಕ್ಷಿ ಬಾಳಿ ಅವರ 'ಚಿವುಟದಿರಿ ಚಿಗುರು'(ಹೆಣ್ಣು ಭ್ರೂಣ ಹತ್ಯೆ ಕುರಿತು ಲೇಖನಗಳು), ಡಾ.ಎನ್. ಚಿನ್ನಸ್ವಾಮಿ ಸೋಸಲೆ ಅವರ 'ಸಮಕಾಲೀನ ಕರ್ನಾಟಕ: ಚರಿತ್ರೆಯ ವಿವಿಧ ಆಯಾಮಗಳು' ಹಾಗೂ 'ಕರ್ನಾಟಕದ ಸಮಗ್ರ ದಲಿತ ಚರಿತ್ರೆ' ಎನ್ನುವ ಕೃತಿಗಳು, ಡಾ.ಆರ್. ಗೋಪಾಲ್ ಸಂಪಾದಕತ್ವದ 'ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಮುಂತಾದವುಗಳಿವೆ.

ಹೈದರಾಬಾದ್ ಕರ್ನಾಟಕ ಮತ್ತು ಸಾಮಾಜಿಕ ಚಳುವಳಿಗೆ ಸಂಬಂಧಪಟ್ಟಂತೆ ಪಿ.ಎಚ್.ಡಿ. ಪ್ರಬಂಧ ಮತ್ತು ಎಂ.ಫಿಲ್. ನಿಬಂಧಗಳಾದ, ಸಂತೋಷ ಕುಮಾರ ಹೆಚ್.ಬಿ. ಅವರ 'ಹೈದರಾಬಾದ್ ಕರ್ನಾಟಕದಲ್ಲಿ ಸಾಮಾಜಿಕ ಚಳವಳಿಗಳು' (ಸಮಕಾಲೀನ ಹಿನ್ನೆಲೆಯ ಅಧ್ಯಯನ), ರಾಜ ಎಂ. ಅವರ 'ಫ್ರೀಡಮ್ ಫೈಟರ್ಸ್ ಆಫ್ ಗುಲಬರ್ಗಾ ಡಿಸ್ಟ್ರಿಕ್ಟ್', ಮಂಜುಳಾ ಬಿ. ಚಿಂಚೋಳಿ ಅವರ 'ಡಿಪ್ರೆಸ್ಡ್ ಕ್ಲಾಸಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ', ಸಂಘಸೇನಾವರ್ಧನ್ ಅವರ 'ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ' (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಹಾಗೂ ಶರಣ ಬಸವೇಶ್ವರ ವೀರಭದ್ರಪ್ಪ ಡಾಣಿ ಅವರ ಪ್ರತಿಭಟನಾ ಸಿದ್ಧಾಂತಗಳ ನೆಲೆಯಲ್ಲಿ ಬುದ್ಧ, ಬಸವ, ಅಂಬೇಡ್ಕರ್, ದೇಶಮನ್ಯ ಜಗಾತಿ ಬಿ. ಅವರ 'ಎ ಸ್ಟಡಿ ಆಫ್ ಫಿಮೇಲ್ ಅಗ್ರಿಕಲ್ಚರಲ್ ಲೇಬರ್ಸ್ ಇನ್ ಗುಲಬರ್ಗಾ ಡಿಸ್ಟ್ರಿಕ್ಟ್', ಮಹೇಶ್ ಕುಮಾರ್ ಎಸ್. ಸುಂಕನೂರು ಅವರ 'ಗುಲಬರ್ಗಾ ಎಂ.ಎಸ್.ಕೆ. ಮಿಲ್: ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನ', ವಿಜಯಲಕ್ಷ್ಮೀ ಅವರ 'ಹಟ್ಟಿ ಚಿನ್ನದ ಗಣಿ: ಚಾರಿತ್ರಿಕ ಹಾಗೂ ಸಮಾಜೋ-ಆರ್ಥಿಕ ಅಧ್ಯಯನ', ಶಶಿಕಾಂತ ಅಮಲಪ್ಪ ಬಿಲ್ಲವ ಅವರ 'ರಾಯಚೂರು ಪ್ರದೇಶದ ಸಾಮಾಜಿಕ ಚಳುವಳಿಗಳು', ಶ್ರೀದೇವಿ ಎಸ್. ಹರವಾಲ ಅವರ 'ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಇನ್ ಗುಲಬರ್ಗಾ ಡಿಸ್ಟ್ರಿಕ್ಟ್' ಇನ್ನು ಮುಂತಾದವುಗಳಿವೆ.

ಮೇಲಿನ ಎಲ್ಲಾ ಕೃತಿಗಳು, ಲೇಖನಗಳು, ನಿಬಂಧಗಳು, ಪ್ರಬಂಧಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ಕಂಡುಬರುವುದೇನೆಂದರೆ, ಯಾದಗಿರಿ ಜಿಲ್ಲೆಯ ಸಾಮಾಜಿಕ, ರಾಜಕೀಯ,

ಆರ್ಥಿಕತೆಯ ಮೇಲೆ ಸಮಗ್ರವಾಗಿ ಅಧ್ಯಯನಗಳು ನಡೆದಿಲ್ಲದಿರುವುದು ಕಂಡುಬರುತ್ತದೆ. ಇವುಗಳಲ್ಲಿ ಹೈದರಾಬಾದ್ ಕರ್ನಾಟಕ ಭಾಗದ ಒಂದೊಂದು ವಿಚಾರಗಳನ್ನು ಇಟ್ಟುಕೊಂಡು ಮೇಲ್ನೋಟಕ್ಕೆ ಕಾಣುವ ಅಂಶಗಳನ್ನು ಇಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಇನ್ನಿತರ ಕೆಲವು ಕೃತಿಗಳು ಹೈದರಾಬಾದ್ ಕರ್ನಾಟಕ ಚಿತ್ರಣ ನೀಡುವ ರೀತಿಯಲ್ಲಿ ಪ್ರಕಟಗೊಂಡಿವೆ. ಆದರೆ ಇಲ್ಲಿನ ಸ್ಥಿತಿಗತಿಗಳು, ರಾಜಕೀಯ ಸ್ಥಿತ್ಯಂತರಗಳು ಇದರಿಂದಾಗಿ ಬದಲಾವಣೆಗಳು ಮತ್ತು ಅಸಮಾನತೆ, ಹೋರಾಟಗಳು, ಸಫಲತೆ, ವಿಫಲತೆಗಳ ಬಗ್ಗೆ ಬೆಳಕು ಚೆಲ್ಲುವ ಅಧ್ಯಯನಗಳು ಹೆಚ್ಚಾಗಿ ಆಗಿಲ್ಲ. ಅದರಲ್ಲೂ ಹೈದರಾಬಾದ್ ಕರ್ನಾಟಕ ಭಾಗವು ಪ್ರಸ್ತುತ ಇಷ್ಟೆಲ್ಲಾ ಚರ್ಚೆಗೆ ಒಳಪಟ್ಟಿರುವ ಸಂದರ್ಭದಲ್ಲಿ, ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಗೆ ಹೋರಾಟ ನಡೆಸುತ್ತಿರುವ ಸಂದರ್ಭದಲ್ಲಿ ಇದರ ಕುರಿತು ಅಧ್ಯಯನಗಳು ಹೊರಬರುತ್ತಿಲ್ಲ. ಹೀಗಾಗಿ ಇಂತಹ ದೃಷ್ಟಿಕೋನ ಇಟ್ಟುಕೊಂಡು ವಿಭಿನ್ನವಾದ ಸಾಮಾಜಿಕ ಚಳುವಳಿಯನ್ನು, ಪ್ರಧಾನವಾಗಿಟ್ಟುಕೊಂಡು ಅಧ್ಯಯನ ಮಾಡುವುದು ಅವಶ್ಯಕವಾಗಿದೆ.

## ೧.೪. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು(೧೯೪೮ರಿಂದ ಸಮಕಾಲೀನವರೆಗೆ) ಸೀಮಿತವಾಗಿದೆ. ಅದರಲ್ಲೂ ಸ್ವಾತಂತ್ರ್ಯೋತ್ತರ ಸಾಮಾಜಿಕ ಚಳುವಳಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದರೂ ಅಧ್ಯಯನವನ್ನು ಮಾಡುವ ಸಂದರ್ಭದಲ್ಲಿ ಕಳೆದ ನಾಲ್ಕು, ಐದು ದಶಕಗಳಲ್ಲಿ ಆಗಿ ಹೋದ ವಿದ್ಯಮಾನಗಳ ವಿಶ್ಲೇಷಣೆ ನಡೆಸಿದರೆ ಮಾತ್ರ ಸಾಮಾಜಿಕ ಚಳುವಳಿಯ ವ್ಯಾಪ್ತಿಯನ್ನು ಅರ್ಥೈಸಿಕೊಳ್ಳಲು ಸಾಧ್ಯ. ಸಾಮಾಜಿಕ ಚಳುವಳಿಯು ಒಂದು ವರ್ಗಕ್ಕೆ ಸೀಮಿತವಾಗಿರದೆ, ಜಾತಿ–ವರ್ಗ, ಮೇಲು–ಕೀಳು, ಬಡವ–ಶ್ರೀಮಂತ, ಮತ–ಧರ್ಮ ಹಾಗೂ ಪ್ರದೇಶದ ಭೌಗೋಳಿಕತೆ, ವಸ್ತುಸ್ಥಿತಿ, ರಾಜಕೀಯ, ಆಡಳಿತ ಮುಂತಾದ ಅಂಶಗಳೆಲ್ಲಾ ಸಾಮಾಜಿಕ ಚಳುವಳಿಯಲ್ಲಿ ಸೇರಿಕೊಂಡಿವೆ. ಈ ಕಾರಣಕ್ಕಾಗಿಯೇ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಯ ವ್ಯಾಪ್ತಿಯನ್ನು ವಿಸ್ತರಿಸಿ ವಿಶಾಲಾರ್ಥದಲ್ಲಿ ನಿರ್ವಚಿಸುವುದು ಅನಿವಾರ್ಯವಾಗಿದೆ. ಅದೇ ರೀತಿ ಸಂಪ್ರದಾಯ ಮತ್ತು ಆಧುನಿಕತೆಗಳ ಪರಸ್ಪರ ಸಂಘರ್ಷ ಮತ್ತು ಒಡಂಬಡಿಕೆಗಳಿಗೂ ಸಾಮಾಜಿಕ ಚಳುವಳಿಗಳು ವೇದಿಕೆಗಳಾಗಿರುವುದು ಸಮಾಜವ್ಯವಸ್ಥೆ ಇನ್ನಷ್ಟು ಸಂಕೀರ್ಣಗೊಳ್ಳುವುದಕ್ಕೆ ಕಾರಣವಾಗಿದೆ. ಇಂತಹ ಅಂಶಗಳ ವಾಸ್ತವ ಅಧ್ಯಯನ ನಡೆಸುವುದೂ ಅವಶ್ಯಕವಾಗಿದೆ.

ಹೀಗಾಗಿ ಯಾದಗಿರಿ ಜಿಲ್ಲೆಯ ಭೌಗೋಳಿಕ ವ್ಯಾಪ್ತಿಯನ್ನು ಗಮನದಲ್ಲಿಟ್ಟುಕೊಂಡು ಭೌಗೋಳಿಕ ಪರಿಸರದ ಸಾಂಸ್ಕೃತಿಕ ಚರಿತ್ರೆಯನ್ನು ಅವಲೋಕಿಸುತ್ತಾ, ಹೈದರಾಬಾದ್ ನಿಜಾಮರ ಆಳ್ವಿಕೆ, ಏಕೀಕರಣೋತ್ತರ ಕರ್ನಾಟಕದಿಂದ ಇಂದಿನವರೆಗಿನ ಅಂಶಗಳನ್ನು ಚರ್ಚೆಗೆ ಒಳಪಡಿಸಿ ತುಲನಾತ್ಮಕ ಅಧ್ಯಯನ ಕೈಗೊಳ್ಳಲಾಗಿದೆ. ಹಾಗೆಯೇ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಹಿನ್ನೆಲೆಯನ್ನು ತಿಳಿದುಕೊಳ್ಳುವ ಉದ್ದೇಶದಿಂದ ೧೨ನೇ ಶತಮಾನದ ವಚನ ಚಳುವಳಿ, ಸೂಫಿ ಚಳುವಳಿ, ದಾಸ ಪರಂಪರೆ, ವಸಾಹತು ಆಳ್ವಿಕೆ, ನಿಜಾಮರ ಆಳ್ವಿಕೆ ಹಾಗೂ ಪ್ರಜಾ

ಪ್ರಭುತ್ವದವರೆಗಿನ ಕಾಲಾವಧಿಯಲ್ಲಿನ ಪ್ರಭುತ್ವ, ಆಡಳಿತ, ಧರ್ಮ, ಭಾಷೆ, ಸಾಹಿತ್ಯ ಮತ್ತು ಸಮಾಜಗಳ ನಡುವಿನ ಸಂಬಂಧವನ್ನು ಚರ್ಚಿಸಲಾಗಿದೆ. ಸಾಮಾಜಿಕ ಚಳುವಳಿಯನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಚಳುವಳಿಗಳ ಅರ್ಥ, ಸ್ವರೂಪವನ್ನು ಚರ್ಚಿಸುತ್ತಾ ಯಾದಗಿರಿ ಜಿಲ್ಲೆಯಲ್ಲಿನ ರೈತ, ದಲಿತ, ಹಿಂದುಳಿದ, ಕಾರ್ಮಿಕ, ಮಹಿಳಾ ಚಳುವಳಿಗಳು ಹಾಗೂ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಗಾಗಿ ನಡೆದ ಹೋರಾಟಗಳನ್ನೊಳಗೊಂಡಂತೆ ಪ್ರಸ್ತುತ ಹೋರಾಟಗಳವರೆಗಿನ ಅಂಶಗಳನ್ನು ಪರಿಗಣಿಸಲಾಗಿದೆ. ಒಟ್ಟಾರೆ ಪ್ರಬಂಧದ ಅಧ್ಯಯನದ ವ್ಯಾಪ್ತಿಯು ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದ ಅಂದರೆ ೧೯೪೮ರಿಂದ ಇಂದಿನ ಕಾಲಘಟ್ಟವು ಅಧ್ಯಯನ ವ್ಯಾಪ್ತಿಗೆ ಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಚಿನ್ನಸ್ವಾಮಿ ಸೋಸಲೆ. ಎನ್ (ಮುನ್ನುಡಿ), (ಸಂ) ವಿ. ಮುನಿವೆಂಕಟಪ್ಪ., ದಲಿತ ಚಳುವಳಿ ಚರಿತ್ರೆ –ಸಂಪುಟ–೨, ಪುಟ XXI-XXII.

೨. ಹರೀಶ್‌ಕೆ.ಪುರಿ, ಪರಮಜಿತ್ ಎಸ್. ಜಡ್ಜ್, ಸೋಷಿಯಲ್ ಅಂಡ್ ಪೊಲಿಟಿಕಲ್ ಮೂವ್‌ಮೆಂಟ್, ಪುಟ ೯.

೩. ಹರ್ಬರ್ಟ್ಸ್ ಬ್ಲೂಮರ್, ಸೋಷಿಯಲ್ ಮೂವ್‌ಮೆಂಟ್ಸ್ ಪ್ರಿನ್ಸಿಪಲ್ಸ್ ಆಫ್ ಸೋಷಿಯಾಲಜಿ, ಪುಟ ೧೭.

೪. ಲೀವಿಸ್ ಕಿಲ್ಲಿಯನ್, ಸೋಷಿಯಲ್ ಮೂವ್‌ಮೆಂಟ್ ಹ್ಯಾಂಡ್ ಬುಕ್ ಆಫ್ ಮಾಡರನ್ ಸೋಷಿಯಾಲಾಜಿ, ಪುಟ ೪೨೯.

೫. ವಾಂಡರ್ ಝೆಂಡನ್ ಜಿ. ಡಬ್ಲ್ಯು, ಸೋಷಿಯಾಲಜಿ, ಪುಟ ೨೪೪, ೨೪೮.

೬. ರಾವ್ ಎಂ.ಎಸ್.ಎ.(ಸಂ), ಸೋಷಿಯಲ್ ಮೂವ್‌ಮೆಂಟ್ಸ್, ಇನ್ ಇಂಡಿಯಾ, ಪುಟ ೩೮, ೪೦.

೭. ಓಮನ್ ಟಿ.ಕೆ., ಪ್ರೊಟೆಸ್ಟ್ ಆಂಡ್ ಚೇಂಜ್, ಪುಟ ೬೯.

ಅಧ್ಯಾಯ : ಎರಡು

# ಯಾದಗಿರಿ ಜಿಲ್ಲೆಯ ಸ್ಥಿತಿಗತಿ ಹಾಗೂ ಸಮಸ್ಯೆಗಳು

೨.೧. ಯಾದಗಿರಿ ಜಿಲ್ಲೆಯ ಭೌಗೋಳಿಕತೆ

೨.೨. ಯಾದಗಿರಿ ಜಿಲ್ಲೆಯ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಿಗಳು

೨.೩. ಯಾದಗಿರಿ ಜಿಲ್ಲೆಯ ಶೈಕ್ಷಣಿಕ ಸ್ಥಿತಿಗತಿಗಳು

ಅಧ್ಯಾಯ : ಎರಡು

# ಯಾದಗಿರಿ ಜಿಲ್ಲೆಯ ಸ್ಥಿತಿಗತಿ ಹಾಗೂ ಸಮಸ್ಯೆಗಳು

"ಕರ್ನಾಟಕ ರಾಜ್ಯದ ೩೦ನೇ ಜಿಲ್ಲೆಯಾಗಿರುವ ಯಾದಗಿರಿ ಜಿಲ್ಲೆಯು ಈ ಮೊದಲು ಗುಲ್ಬರ್ಗಾ ಜಿಲ್ಲೆಯಲ್ಲಿನ ಒಂದು ಭಾಗವಾಗಿತ್ತು. ಕರ್ನಾಟಕ ಸರಕಾರ ಯಾದಗಿರಿಯನ್ನು ಡಿಸೆಂಬರ್ ೩೦, ೨೦೦೯ರಂದು ಹೊಸ ಜಿಲ್ಲೆಯನ್ನಾಗಿ ಘೋಷಣೆ ಮಾಡಿತು."[೧] ಈ ಜಿಲ್ಲೆಯು ಆರು ತಾಲೂಕುಗಳನ್ನು ಒಳಗೊಂಡಿದ್ದು. ಅವು ಕ್ರಮವಾಗಿ ಯಾದಗಿರಿ, ಶಾಹಾಪುರ, ಸುರಪುರ, ಗುರುಮಠಕಲ್, ವಡಗೇರ ಹಾಗೂ ಹುಣಸಗಿ ತಾಲೂಕಗಳೆಂದು ಘೋಷಿಸಲಾಗಿದೆ. ಯಾದಗಿರಿ ಜಿಲ್ಲೆಯು ಪ್ರಸ್ತುತ "ಆರು ತಾಲೂಕಗಳು, ೧೯ ಹೋಬಳಿಗಳು, ೫೧೯ ಗ್ರಾಮಗಳನ್ನು ಒಳಗೊಂಡಿದೆ. ಭೌಗೋಳಿಕವಾಗಿ ಯಾದಗಿರಿ ಜಿಲ್ಲೆಯು ಒಟ್ಟು ೫೨೩೪.೫ ಚ.ಕಿ.ಮೀ ಇದ್ದು, ಯಾದಗಿರಿಯನ್ನು ಈ ಹಿಂದೆ ಸ್ಥಳೀಯ ಜನರು 'ಯಾದವಗಿರಿ' ಎಂದು ಕರೆಯುತ್ತಿದ್ದರು. ಯಾದವರು ದಕ್ಷಿಣ ಭಾರತದಲ್ಲಿ ಮೊದಲು ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿ, ಯಾದಗಿರಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು ಎಂದು ಪ್ರಾಚೀನ ಕಾಲದ ಶಾಸನಗಳಲ್ಲಿ 'ಏತಗಿರ' ಎಂದು ಉಲ್ಲೇಖಿಸಲಾಗಿದೆ."[೨] ಇನ್ನೊಂದು ಅರ್ಥದಲ್ಲಿ ಹೇಳುವುದಾದರೆ ಯಾದಗಿರಿಯನ್ನು ಯತಿಗಳ ಗಿರಿ ಎಂದು ಕೂಡ ಕರೆಯುತ್ತಿದ್ದರು. ಏಕೆಂದರೆ ಈ ಒಂದು ಪ್ರದೇಶದಲ್ಲಿ ಹೆಚ್ಚಾಗಿ ಬೌದ್ಧ ಧರ್ಮದ ಯತಿಗಳು ವಾಸವಾಗಿದ್ದರಿಂದ ಯತಿಗಳ ಊರು ಅಥವಾ ಯತಿಗಳ ಗಿರಿ ಎಂದು ಕರೆಯುತ್ತಿದ್ದರು. ಮುಂದೆ ಇದೇ ಯಾದಗಿರಿ ಎಂಬ ಹೆಸರಿನಿಂದ ಕರೆಯಲ್ಪಟ್ಟಿತು. ಇಲ್ಲಿನ ಜನರ ರೀತಿ, ನೀತಿ, ಸಾಮಾಜಿಕ, ರಾಜಕೀಯ, ಧರ್ಮ, ಜೀವನ ಮೌಲ್ಯಗಳ ಸಮಗ್ರ ಅಧ್ಯಯನದಿಂದಲೇ ಇಲ್ಲಿನ ಇತಿಹಾಸವನ್ನು ತಿಳಿಯಬಹುದು. ಯಾದಗಿರಿ ಜಿಲ್ಲೆಯು ಸರ್ವಧರ್ಮ ಸಮನ್ವಯಕ್ಕೆ ಅವಕಾಶ ಮಾಡಿಕೊಡುವುದರ ಮೂಲಕ ಕರ್ನಾಟಕದ ಸಂಸ್ಕೃತಿಗೆ ತನ್ನದೇ ಆದ ಕೊಡುಗೆಗಳನ್ನು ನೀಡುತ್ತಾ ತನ್ನ ಹಿರಿಮೆಯನ್ನು ಕಾಪಾಡಿಕೊಂಡು ಬಂದಿದೆ.

ಯಾದಗಿರಿ ಜಿಲ್ಲೆಯಾದ್ಯಂತ ಕಂಡುಬರುವ ಗ್ರಾಮಗಳು ನದಿಗಳ ಬಳಿ, ನದಿ ಕಣಿವೆಗಳಲ್ಲಿ, ಇಲ್ಲವೇ ಜಲ ಮೂಲಗಳಲ್ಲಿ ಇವೆ. ನದಿ ಮೂಲಗಳು ಇಲ್ಲದಿದ್ದಾಗ ಬಾವಿಗಳು ಇರುತ್ತವೆ. ಪ್ರತಿಯೊಂದು ಗ್ರಾಮದಲ್ಲಿ ಮೆಟ್ಟಿಲು ಬಾವಿಗಳು ಇಲ್ಲವೆ ಸೇದುವ ಬಾವಿಗಳು ಇವೆ. ಬೇಸಿಗೆಯಲ್ಲಿ ಅನೇಕ ಗ್ರಾಮಗಳಲ್ಲಿ ಜಲ ಅಭಾವ ಕಂಡುಬರುತ್ತದೆ. ನಗರಗಳಲ್ಲಿನ ಮನೆಗಳಿಗೂ, ಗ್ರಾಮೀಣ

ಪ್ರದೇಶದಲ್ಲಿನ ಮನೆಗಳಿಗೂ ವಿನ್ಯಾಸದಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ ಎರಡೂ ಪ್ರದೇಶಗಳ ಮನೆಗಳಲ್ಲಿ ಒಂದೇ ಹೋಲಿಕೆಯನ್ನು ಕಾಣಬಹುದು. ಕಟ್ಟಡ ನಿರ್ಮಾಣದಲ್ಲಿ ಕಲ್ಲು, ಮರ ಮತ್ತು ಗಾರೆಯನ್ನು ಉಪಯೋಗಿಸಲಾಗುತ್ತದೆ. ಪ್ರತಿಯೊಂದು ಗ್ರಾಮವೂ ಕೋಟೆ ಕೊತ್ತಲುಗಳಿಂದ ಸಂರಕ್ಷಿಸಲ್ಪಟ್ಟಿರುತ್ತದೆ. ಊರಿನ ಸುತ್ತಲೂ ಕಲ್ಲಿನ ಗೋಡೆಗಳ ಮತ್ತು ಕಾವಲು ಗೋಪುರಗಳ ಕುರುಹುಗಳು ಈಗಲೂ ಕಂಡುಬರುತ್ತವೆ. ಜನರ ಉಡುಪು ವೈಶಿಷ್ಟ್ಯತೆಯಿಂದ ಕೂಡಿದ್ದು, ಗಂಡಸರು ತಲೆಗೆ ಮುಂಡಾಸು ಕಟ್ಟುತ್ತಾರೆ. ಬಿಳಿಯ ಧೋತಿಯನ್ನು ಕಚ್ಚೆ ಹಾಕಿ ಕಟ್ಟುತ್ತಾರೆ. ಹಿಂದೂ-ಮುಸ್ಲಿಂ ಹೆಂಗಸರು ಸೀರೆ ಧರಿಸುವುದರ ಜೊತೆಗೆ ಆಭರಣಗಳನ್ನು ಬಳಸುತ್ತಾರೆ.

## ೨.೧. ಯಾದಗಿರಿ ಜಿಲ್ಲೆಯ ಭೌಗೋಳಿಕತೆ

ಯಾದಗಿರಿ ಜಿಲ್ಲೆಯು "ಒಟ್ಟು ೫೨೩೪.೫ ಚ.ಕಿ.ಮೀ. ಪ್ರದೇಶವನ್ನು ಹೊಂದಿದೆ, ಶಹಾಪುರ ತಾಲ್ಲೂಕು ೧೬೮೭.೧ ಚ.ಕಿ.ಮೀ, ಸುರಪುರ ತಾಲ್ಲೂಕು ೧೮೩೮.೨ ಚ.ಕಿ.ಮೀ ಮತ್ತು ಯಾದಗಿರಿ ತಾಲ್ಲೂಕು ೧೭೦೯.೨ ಚ.ಕಿ.ಮೀ ವಿಸ್ತಾರವಾದ ಭೂಪ್ರದೇಶವನ್ನು ಹೊಂದಿರುತ್ತದೆ. ಇದು ರಾಜ್ಯದ ಎರಡನೇ ಚಿಕ್ಕ ಜಿಲ್ಲೆಯಾಗಿದೆ. ರಾಜ್ಯದ ಒಟ್ಟು ವಿಸ್ತೀರ್ಣದಲ್ಲಿ ೮.೪೬% ಪ್ರತಿಶತ ಪ್ರದೇಶವನ್ನು ಒಳಗೊಂಡಿದೆ. ಜಿಲ್ಲೆಯು ಒಂದು ಕಂದಾಯ ಉಪವಿಭಾಗದಿಂದ ಕೂಡಿರುತ್ತದೆ ಹಾಗೂ ಜಿಲ್ಲೆಯು ೬ ತಾಲ್ಲೂಕು ಮತ್ತು ೩ ಶೈಕ್ಷಣಿಕ ವಲಯಗಳಿಂದ ಕೂಡಿ, ಅವು ಒಂದು ನಗರಸಭೆಯನ್ನು, ೩ ಪುರಸಭೆಗಳನ್ನು, ೧ ಪಟ್ಟಣ ಪಂಚಾಯಿತಿ, ೩ ತಾಲೂಕು ಪಂಚಾಯಿತಿಯನ್ನು, ೧೧೭ ಗ್ರಾಮ ಪಂಚಾಯಿತಿ, ೫೧೯ ಹಳ್ಳಿಗಳು ಮತ್ತು ೪ ವಿಧಾನಸಭಾ ಮತಕ್ಷೇತ್ರಗಳನ್ನು ಒಳಗೊಂಡಿದೆ. ಇಲ್ಲಿ ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲೆಯ ಯಾದಗಿರಿ, ಶಹಾಪೂರ ಮತ್ತು ಸುರಪುರ ವಿಧಾನಸಭಾ ಮತಕ್ಷೇತ್ರಗಳಿವೆ ರಾಯಚೂರು ಲೋಕಸಭಾ ವ್ಯಾಪ್ತಿ ಮತ್ತು ಗುರುಮಠಕಲ್ ವಿಧಾನಸಭಾ ಮತಕ್ಷೇತ್ರವು ಗುಲ್ಬರ್ಗಾ ಲೋಕಸಭಾ ವ್ಯಾಪ್ತಿಯನ್ನು ಒಳಗೊಂಡಿದೆ. ಇಲ್ಲಿನ ಒಟ್ಟು ಜನಸಂಖ್ಯೆ ೨೦೧೧-೧೨ರ ಪ್ರಕಾರ ೧೧೭೯೮೫. ೫೯೧೧೦೪ ಗಂಡಸರು, ೫೮೧೮೮೧ ಹೆಂಗಸರು. ತಾಲೂಕುವಾರು ಜನಸಂಖ್ಯೆಯಲ್ಲಿ ಯಾದಗಿರಿ ೩೯೮೪೦೦. ಶಹಾಪುರ ೩೬೨೬೬೬ ಕನಿಷ್ಠ ಜನಸಂಖ್ಯೆ ಹೊಂದಿದ್ದರೆ, ಸುರಪುರ ೪೧೯೯೯ ಗರಿಷ್ಠ ಜನಸಂಖ್ಯೆ ಹೊಂದಿದೆ, ಒಟ್ಟು ಕುಟುಂಬಗಳು ೨೦೧೧-೧೨ರ ಪ್ರಕಾರ ೨೦೦೪೨೪, ಅದರಲ್ಲಿ ನಗರವಾಸಿ ಕುಟುಂಬಗಳು ೩೮೭೫೯, ಗ್ರಾಮೀಣವಾಸಿ ಕುಟುಂಬಗಳು ೧೬೧೬೬೫."[೩]

### ಸುರಪುರ

ಇಂದಿನ ಯಾದಗಿರಿ ಜಿಲ್ಲೆಯಲ್ಲಿರುವ ಸುರಪುರವು, ಕೃಷ್ಣೆಯ ನೀರಿನಿಂದ ಸಂಪದ್ಭರಿತವಾಗಿದೆ. ಇದು ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದ್ದು, ಸುರಪುರ ಕೇವಲ ಕೃಷ್ಣೆ-ಭೀಮೆಯರ ಸ್ಥಳವಾಗದೇ ವಿಶಾಲವಾದ ಪ್ರದೇಶವನ್ನು ಒಳಗೊಂಡಿತ್ತು. ಅಂದರೆ ರಾಯಚೂರು. ಬಿಜಾಪುರ. ಗುಲ್ಬರ್ಗಾ ಜಿಲ್ಲೆಗಳ ಬಹುಭಾಗವು ಒಳಪಟ್ಟಿದ್ದು, ಈ ಭಾಗವನ್ನು ಸಗರನಾಡು ಎಂದು. ಇದನ್ನು ಗೋಸಾಲ ವಂಶದ ರಾಜರು ಸುರಪುರವನ್ನು ಕೇಂದ್ರವಾಗಿಟ್ಟುಕೊಂಡು "೧೬೫೬ರಿಂದ ೧೮೫೮ರವರೆಗಿನ ೨೦೨ ವರ್ಷ ಸ್ವಾತಂತ್ರ್ಯ ರಾಜನಾಗಿ ಸುರಪುರ ಸಂಸ್ಥಾನದ ೧೩ ಜನ

ರಾಜರು ಪ್ರಜಾನುರಾಗಿಗಳಾಗಿದ್ದರಲ್ಲದೆ ಇತಿಹಾಸದ ಪುಟಗಳಲ್ಲಿ ತಮ್ಮ ಅಪ್ರತಿಮ ಶೌರ್ಯ ಸಾಹಸದಿಂದ ರಾಷ್ಟ್ರೀಯ ಗಮನ ಸೆಳೆದರೆ, ಇಂದೂ ಕೂಡ ಏಷಿಯಾದ ಅತಿ ದೊಡ್ಡ ನೀರಾವರಿ ಯೋಜನೆ ಕೃಷ್ಣ ಮೇಲ್ದಂಡೆ ಯೋಜನೆಯ ಕೇಂದ್ರ ಕಛೇರಿಯು ಭೀಮರಾಯನ ಗುಡಿಯಲ್ಲಿದ್ದು ಗುಲ್ಬರ್ಗಾ, ರಾಯಚೂರು, ಬಿಜಾಪೂರ, ಬಾಗಲಕೋಟೆ ಜಿಲ್ಲೆಗಳು ಇದರ ಅಧಿಕಾರಕ್ಕೆ ಒಳಪಟ್ಟಿವೆ. ಇಲ್ಲಿನ ಪ್ರಸಿದ್ಧ ಬಲ-ಭೀಮನ ದೇವಸ್ಥಾನವನ್ನು ಸುರಪುರ ಸಂಸ್ಥಾನದ ಅರಸು ರಾಜ ಪಾಮನಾಯಕ ಕಟ್ಟಿಸಿದ್ದು ಅದೇ ಭೀಮರಾಯನ ಗುಡಿಯಾಗಿದ್ದು ಸಗರನಾಡಿನ ಭಕ್ತರ ಶ್ರದ್ಧಾ ಕೇಂದ್ರವಾಗಿದೆ.

**ಶಹಾಪುರ**

ಯಾದಗಿರಿಯಿಂದ ಪಶ್ಚಿಮಕ್ಕೆ ೩೦ ಕಿ.ಮೀ. ದೂರದಲ್ಲಿರುವ ತಾಲೂಕು ಕೇಂದ್ರವಾಗಿದೆ. ಪೌರಾಣಿಕವಾಗಿ ಸಗರ ಚಕ್ರವರ್ತಿ ಆಳಿದ ಸಗರ ನಾಡಿನ ಕೇಂದ್ರವಾಗಿದ್ದ ಸಗರ ಇದೆಂದೂ, ಸಮೀಪವಿರುವ ಬೆಟ್ಟವೇ ಸಗರಾದ್ರಿ ಎಂದು ಐತಿಹ್ಯವಿದೆ. ಸಗರ ಚಕ್ರವರ್ತಿ ನಿರ್ಮಿತ ಕೋಟೆ ಶಹಾಪುರದ ಕೋಟೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಶಹಾಪುರದ ಬೆಟ್ಟದ ಮೇಲಿರುವ ಈ ಸಗರದ ಕೋಟೆ ಬಹುಶಃ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ರಚನೆಯಾಗಿದ್ದು ನಂತರ ಆದಿಲ್ ಷಾಹಿ ಅರಸರ ಆಳ್ವಿಕೆಯಲ್ಲಿ ಮತ್ತಷ್ಟು ಬಲಿಷ್ಠಗೊಂಡಿತು. ಮೊಗಲರ ದಾಳಿಗೂ ಇದು ಸಿಲುಕಿ ನಲುಗಿದಂತೆ ಕಾಣುತ್ತದೆ. ಸುರಪುರದ ನಾಯಕರ ಕಾಲದಲ್ಲಿ ಇದಕ್ಕೆ ಎರಡು ಸುತ್ತನ್ನು ಸೇರಿಸಿ ದ್ವಾರಗಳನ್ನು ನಿರ್ಮಿಸಲಾಯಿತು. ಹೀಗೆ ಸುಮಾರು ೮೦೦ ವರ್ಷಗಳ ಅವಧಿಯಲ್ಲಿ ವಿಸ್ತಾರ ಗೊಂಡಿರುವ ಇದು ನೆಲಮಟ್ಟದಿಂದ ಸುಮಾರು ೬೦೦ ಅಡಿ ಎತ್ತರದಲ್ಲಿ ನಿರ್ಮಾಣಗೊಂಡಿರುವ ಎಂಟು ಸುತ್ತಿನ ಗಿರಿದುರ್ಗವಾಗಿದ್ದು ಜಿಲ್ಲೆಯ ಅತ್ಯಂತ ಉದ್ದನೆಯ ಕೋಟೆಯಾಗಿದೆ. ಕೃಷ್ಣದೇವರಾಯನು ಆದಿಲ್ ಷಾಹಿಗಳನ್ನು ಸೋಲಿಸಿ ಈ ಕೋಟೆಯನ್ನು ಸ್ವಲ್ಪ ಕಾಲ ವಶಪಡಿಸಿ ಕೊಂಡಿದ್ದಂತೆ ತೋರುತ್ತದೆ. ಅಳಿಯ ರಾಮರಾಯನಿಗೆ ಸಗರ ಸಂಕ್ರಮಣರಾಯ ಎಂಬ ಬಿರುದಿದ್ದ ಅಂಶ ಗಮನಾರ್ಹವಾಗಿದೆ.

ಪ್ರಾಚೀನ ಶಾಸನಗಳಲ್ಲಿ ಸಗರ-೩೦೦, ಸಗರ-೫೦೦ ಎಂದು ದಾಖಲಾಗಿರುವ ಆಡಳಿತ ಘಟಕದ ಕೇಂದ್ರವಾದ ಸಗರ ಇದೇ ಆಗಿರಬೇಕೆಂದು ತೋರುತ್ತದೆ. ಮುಂದೆ ಮುಸ್ಲಿಮರ ಆಳ್ವಿಕೆಯಲ್ಲಿ ಇದೇ ನಸರತಾಬಾದ್ ಆಗಿದ್ದು ಅನಂತರದಲ್ಲಿ ಇಂದಿನ ಶಹಾಪುರ ಆಗಿರುವಂತೆ ತೋರುತ್ತದೆ. ಅಲ್ಲಿಂದ ಇಲ್ಲಿಯವರೆಗೆ ಏಳು ಪರ್ಷಿಯನ್ ಶಾಸನಗಳು ವರದಿಯಾಗಿವೆ. ಸುಮಾರು ೧೫೫೫ರಿಂದ ೧೮೫೭ರ ಕಾಲಾವಧಿಗೆ ಸೇರಿದ ಈ ಶಾಸನಗಳಿಂದ ಶಹಾಪುರ ಹಿಂದಿನ ಇತಿಹಾಸವನ್ನು ಗುರುತಿಸಬಹುದಾಗಿದೆ."[೪೪] ಶಹಾಪುರದ ಕೋಟೆಯ ದ್ವಾರಗಳ ಮೇಲೆ ಇರುವ ಇಬ್ರಾಹಿಂ ಆದಿಲ್ ಷಾನ ಕಾಲಕ್ಕೆ ಸೇರಿದ ನಾಲ್ಕು ಶಾಸನಗಳಿಂದ ಇದಕ್ಕೆ ಹಿಂದೆ ನಸರತಾಬಾದ್ ಎಂಬ ಹೆಸರಿದ್ದ ಅಂಶ ಗೊತ್ತಾಗುತ್ತದೆ. ಜೊತೆಗೆ ಆ ದ್ವಾರಗಳು ನಿರ್ಮಾಣಗೊಂಡ ಬಗೆಗೂ ವಿವರಗಳು ಲಭಿಸುತ್ತವೆ. ಇನ್ನುಳಿದ ಮೂರು ಶಾಸನಗಳು ೧೭೯೯-೧೮೫೭ರ ಕಾಲಾವಧಿಗೆ ಸೇರಿದ್ದು, ಮಸೀದಿ ಹಾಗೂ ಅಷೂರ್‌ಖಾನಗಳ ನಿರ್ಮಾಣಕ್ಕೆ ಸಂಬಂಧಿಸಿದಂತಹ ದಾಖಲೆ ಗಳಾಗಿವೆ.

“ಮಂದಾಕಿನಿ ಮಹಾತ್ಮೆಯಲ್ಲಿ ದಾಖಲಾಗಿರುವಂತೆ ಶಹಾಪುರದ ದಕ್ಷಿಣಕ್ಕೆ ಇರುವ ಪರ್ವತವೇ ಸಗರಾದ್ರಿಯಾಗಿದ್ದು, ಬೆಟ್ಟದ ಮೇಲೆ ಹಲವಾರು ಪವಿತ್ರ ತಾಣಗಳಿವೆ. ಅವುಗಳಲ್ಲಿ ಚರಬಸವೇಶ್ವರರ ಗದ್ದುಗೆ, ಮೌನೇಶ್ವರ ಅನುಷ್ಠಾನ, ಪಾಂಡವರ ಕಲ್ಲು, ಭೀಮನಗವಿ, ಗವಿ ರಂಗನಾಥ, ಸಿದ್ಧಲಿಂಗೇಶ್ವರ, ಗೊಗ್ಗಮ್ಮಾಂಬೆ, ತುಳಜಾಭವಾನಿ, ಅಮರ ಕಲ್ಯಾಣ, ತ್ರಯಂಬ ಲಿಂಗೇಶ್ವರ, ಗವಿಬಸಪ್ಪ, ನಾಗಬಸಪ್ಪ, ಆಂಜನೇಯ, ನಿರಹಂಕಾರ, ದಿಗ್ಗಿ ಸಂಗಮನಾಥ ಹಾಗೂ ಚಂದಾಸಾಹೇಬ, ತಾವರಕೆರೆ, ಮಂದಾಕಿನಿ ತೀರ್ಥ, ನೀಲಮ್ಮನ ಬಾವಿ ಮುಂತಾದ ತೀರ್ಥಗಳಿವೆ. ಚರಬಸವೇಶ್ವರ ದೇವಾಲಯವು ಸುಂದರ ವಿನ್ಯಾಸಗಳಿಂದ ಕೂಡಿದ್ದು ಬಸವೇಶ್ವರರ ಜಾತ್ರೆಯು ಚೈತ್ರ ಶುದ್ಧ ಪಂಚಮಿಯಂದು ಜರುಗುತ್ತದೆ. ಈ ಬೆಟ್ಟದ ಬುಡದಲ್ಲಿ ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸೇರಿದ ೧೮ ಕೈಗಳನ್ನುಳ್ಳ ಚಾಮುಂಡಿಯ ಉಗ್ರಮೂರ್ತಿಯೊಂದು ಪತ್ತೆಯಾಗಿದೆ. ಇಲ್ಲಿ ವಿಶ್ವಕರ್ಮ ಸಮಾಜದ ಏಕದಂಡಿ ಮಠವಿದ್ದು, ಅಲ್ಲಿ ಕೃಷ್ಣದೇವರಾಯನ ಕಾಲದ ತಾಮ್ರಶಾಸನವೂ ಇದೆ.

ಶಹಾಪುರದಿಂದ ಭೀಮರಾಯನಗುಡಿಗೆ ಹೋಗುವ ಹಾದಿಯಲ್ಲಿ ಎಡಕ್ಕೆ ಮಲಗಿರುವ ಸಗರಾದ್ರಿ ಪರ್ವತಶ್ರೇಣಿಯಲ್ಲಿ ಮುಗಿಲತ್ತ ಮುಖ ಮಾಡಿ ಅಂಗಾತ ಮಲಗಿರುವ ನಿಸರ್ಗ ನಿರ್ಮಿತ ಬುದ್ಧನ ರೂಪು-ರೇಷೆ ಪ್ರವಾಸಿಗರನ್ನು ಮಂತ್ರಮುಗ್ಧಗೊಳಿಸುತ್ತದೆ. ಅಗಲವಾದ ಹಣೆ, ಚೂಪಾದ ಮೂಗು, ವಿಶಾಲವಾದ ಎದೆಯು ಎದ್ದು ಕಾಣುವಂತೆ ಇರುವ ಈ ಬುದ್ಧನ ನಿಸರ್ಗ ರಚನೆ ನಿಜಕ್ಕೂ ವಿಸ್ಮಯವನ್ನುಂಟು ಮಾಡುತ್ತದೆ.”[೫] ಕೃಷ್ಣಾ ಮೇಲ್ದಂಡೆ ಯೋಜನೆಯ ಪ್ರಧಾನ ಕಛೇರಿ ಶಹಾಪುರದಿಂದ ೫ ಕಿ.ಮೀ. ದೂರದಲ್ಲಿರುವ ಭೀಮರಾಯನ ಗುಡಿಯಲ್ಲಿವೆ. ಬೌದ್ಧ ನೆಲೆಯಾಗಿರುವ ಚಾರಿತ್ರಿಕ ಮಹತ್ವದ, ಶಿರವಾಳ, ಸನ್ನತಿ, ಗೋಗಿ ಮುಂತಾದ ಸ್ಥಳಗಳು ಶಹಾಪುರದಿಂದ ಅನತಿ ದೂರದಲ್ಲಿದ್ದು, ಪ್ರವಾಸಕ್ಕೆ ಉತ್ತಮ ರಸ್ತೆಯ ಸೌಕರ್ಯವಿದೆ.

ಶರಣ ಸಂತರ ನಾಡು ಸೂಫಿ ಸಂತರ ಬೀಡು, ಸಿದ್ಧಿ ಪುರುಷರೆಂದು ಖ್ಯಾತಿ ಪಡೆದ ಸಿದ್ಧರ ಗೂಡು ಸ್ವಾತಂತ್ರ್ಯ ಹೋರಾಟಗಾರರ ನೆಲೆವೀಡು ಆಗಿರುವ ಈ ಯಾದಗಿರಿ ಜಿಲ್ಲೆಯು ಐತಿಹಾಸಿಕವಾಗಿ ಶಿಲಾಯುಗ ಕಾಲದಿಂದಲೂ ತನ್ನದೇ ಆದ ಇತಿಹಾಸ ಹೊಂದಿದೆ. ಯಾದಗಿರಿ ಜಿಲ್ಲೆಯ ಐತಿಹಾಸಿಕ ಹಳ್ಳಿಗಳಾದ ಗಾಜರಕೋಟ, ಯರಗೋಳ, ಚಂದ್ರಕಿ, ಕೋಟಗೆರ, ಯಡ್ಡಳ್ಳಿ, ಮೈಲಾಪುರ, ಮದ್ವಾರ, ಅರಿಕೇರಾ(ಕೆ), ಕೋಲೂರು, ಸಂಗ್ವಾರ, ರಾಚನಹಳ್ಳಿ, ಬಳಿಚಕ್ರ ಇತ್ಯಾದಿ. ಇವು ತಮ್ಮದೇ ಆದ ಐತಿಹಾಸಿಕ ಚಿತ್ರಣವನ್ನು ಒಳಗೊಂಡಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಗಾಜರಕೋಟ**

ಯಾದಗಿರಿ ಜಿಲ್ಲೆಯಿಂದ ೩೫ ಕಿ.ಮೀ. ದೂರದಲ್ಲಿದೆ. ಗಾಜರಕೋಟ ತನ್ನದೇ ಆದ ಸಾಂಸ್ಕೃತಿಕ ಐತಿಹ್ಯ ಹೊಂದಿದ ಗ್ರಾಮವಾಗಿದೆ. ಆಂಧ್ರ ಕರ್ನಾಟಕದ ಗಡಿ ಗ್ರಾಮವಾಗಿದ್ದು, ಗಾಜುಲಕೋಟ, ಗಾಜುಲಕೋಟ್ರಕಿ, ಕೋಟ್ರಕಿ, ಗಾಜರಕೋಟ ಎಂಬ ಹೆಸರುಗಳು ಇಂದಿಗೂ ಚಾಲ್ತಿಯಲ್ಲಿವೆ. ಇಲ್ಲಿ ಬಳೆಗಳನ್ನು ತಯಾರಿಸುವ ಕಾರ್ಖಾನೆಗಳು ಇದ್ದ ಕಾರಣ ತೆಲುಗು

ಭಾಷಿಕರು ಬಹುಜನರು ಇರುವುದರಿಂದ ಈ ಊರನ್ನು ಗಾಜುಲಕೋಟ ಎಂದು ಕರೆದಿದ್ದಾರೆ. ಗಾಜುಲು ಎಂದರೆ ತೆಲುಗಿನಲ್ಲಿ ಬಳೆಗಳು, ಕೋಟ ಎಂದರೆ ಕೋಟೆ ಇವೆರಡು ಸೇರಿ ಗಾಜುಲಕೋಟ ಎಂದಾಗಿದೆ. ಕಾಲಕ್ರಮೇಣ ಮಾರ್ಪಟ್ಟು ಊರಿನ ಹೆಸರು ಗಾಜರಕೋಟ ಎಂದು ಈಗ ಕರೆಯಲಾಗುತ್ತಿದೆ. ಆಂಧ್ರ ಕರ್ನಾಟಕದ ಗಡಿಭಾಗವಾಗಿದ್ದರೂ ಇಲ್ಲಿ ಕನ್ನಡದ ಕಂಪಿದೆ ಹಾಗೂ ಕನ್ನಡದ ಶರಣ-ಶಿವಯೋಗಿಗಳ ಪಾವನಭೂಮಿ ಗಾಜರಕೋಟವಾಗಿದೆ.

"ದಾಸೋಹಮೂರ್ತಿಗಳಾದ ಶಿವಶರಣ ಚನ್ನಪ್ಪಯ್ಯನವರು, ಗವಿಸಿದ್ಧಲಿಂಗೇಶ್ವರರು, ರಾಚಪ್ಪಯ್ಯನವರು-ಕಡ್ಲಪ್ಪ ಶರಣರು, ಕಲೆಗುಂಡದ ರುದ್ರಮುನಿ ಶಿವಾಚಾರ್ಯರು, ಅರವತ್ತು ಮೂರು ಪುರಾತನರಲ್ಲಿ ಒಬ್ಬರಾದ ಕಲಿಗಣನಾಥರು, ತಿಂತಿಣಿಯ ಮೌನೇಶ್ವರರ ತಾಯಿ ಶೇಷಮಾಂಬೆ ಇವರೆಲ್ಲರೂ ನೆಲಸಿದ ಪುಣ್ಯಸ್ಥಳ ಗಾಜರಕೋಟ. ಇದು ಕಲ್ಯಾಣ ಚಾಲುಕ್ಯರ ಪ್ರಮುಖ ಸ್ಥಳವಾಗಿತ್ತು. ಇಲ್ಲಿರುವ ರಾಚಪ್ಪಯ್ಯ, ಕಡ್ಲಪ್ಪಯ್ಯ, ಚನ್ನಪ್ಪಯ್ಯ, ಮಲ್ಲಿಕಾರ್ಜುನ ದೇವಾಲಯಗಳು ಮತ್ತು ಸೂಫಿ ಸಂತ ಕತಲಸಾಹೇಬನ ದರ್ಗಾ ಅತ್ಯಂತ ಪ್ರಮುಖವಾದವುಗಳು. ಮಲ್ಲಿಕಾರ್ಜುನ ದೇವಾಲಯದ ಒಳಗೋಡೆಯ ಮೇಲೆ ಹನ್ನೆರಡನೆಯ ಶತಮಾನದ ಶರಣರ ಚಿತ್ರಗಳು ಕಂಡುಬರುತ್ತವೆ. ಕಲ್ಯಾಣವು ೧೨ನೇ ಶತಮಾನದ ಶರಣರ ಭಕ್ತಿಯ ಕೇಂದ್ರವಾದರೆ ಈ ಯಾದಗಿರಿ ಜಿಲ್ಲೆಯ ಗಾಜರಕೋಟ ಕಲ್ಯಾಣ ಶರಣರ ಉಪಕೇಂದ್ರವಾಗಿದೆ. ಅಲ್ಲದೆ 'ಮರಿಕಲ್ಯಾಣ' ಎಂದು ಪ್ರಸಿದ್ಧಿಯಾಗಿದೆ ಎಂಬುದಕ್ಕೆ ಮಲ್ಲಿಕಾರ್ಜುನ ದೇವಾಲಯವು ಇಂದಿಗೂ ಸಾಕ್ಷಿಯಾಗಿದೆ."[೬]

**ಚಂಡ್ರಿಕಿ**

"ಯಾದಗಿರಿಯಿಂದ ಪೂರ್ವ ದಿಕ್ಕಿಗೆ ೪೫ ಕಿ.ಮೀ. ದೂರದಲ್ಲಿರುವ ಈ ಊರು ಹಲವು ಐತಿಹಾಸಿಕ ಸ್ಮಾರಕಗಳನ್ನು ಹೊಂದಿದೆ. ಇಲ್ಲಿರುವ ವಿಶಾಲವಾದ ಮಣ್ಣಿನ ಕೋಟೆ, ರಾಜ ಪರಿವಾರದವರ ನೀರಿನ ಬಾವಿ ಇತ್ಯಾದಿ ಸ್ಮಾರಕಗಳನ್ನು ಒಳಗೊಂಡಿದೆ. ಈ ಪ್ರದೇಶವು ಕಾಕಲವಾರ ದೊರೆಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಗುರುತಿಸಲಾಗಿದೆ."[೭] ಈ ಕಾಕಲವಾರ ದೊರೆಗಳ ಬಗ್ಗೆ ವಿಪುಲವಾದ ಆಧಾರಗಳು ದೊರೆಯದಿರುವುದು ದುರದೃಷ್ಟಕರ ಸಂಗತಿಯಾಗಿದೆ.

**ಬಳಿಚಕ್ರ**

ಬಳಿಚಕ್ರವು ಪೂರ್ವಾಭಿಮುಖವಾಗಿ ಯಾದಗಿರಿಗೆ ೨೫ ಕಿ.ಮೀ. ದೂರದಲ್ಲಿದೆ. ಈ ಪ್ರದೇಶ ಬಲಿಚಕ್ರವರ್ತಿಯ ರಾಜಧಾನಿಯಾಗಿತ್ತು. ಎಂದು ಹೇಳುತ್ತಾರೆ. ಆದರೂ ಈ ಬಗ್ಗೆ ಸಾಕಷ್ಟು ಪುರಾವೆಗಳು ದೊರೆತಿಲ್ಲ. ಇಲ್ಲಿರುವ ಗುಹಾಲಯದಲ್ಲಿ ರೇಖಾಚಿತ್ರ ಹಾಗೂ ಶಿಲಾಶ್ರಯ ಚಿತ್ರಗಳಿವೆ. ಶ್ರೇಷ್ಠ ತತ್ವಪದಕಾರರಾದ ಶ್ರೀ ಕೂಡಲೂರ ಬಸವಲಿಂಗ ಶರಣರಿಗೆ ಆಶೀರ್ವಾದ ಮಾಡಿದ ಸಿದ್ಧಿಪುರುಷ 'ಸಿದ್ಧರು' ಇದೇ ಗುಹೆಯಲ್ಲಿ ನೆಲೆಸಿದ್ದರು. ಇಂತಹ ಮಹತ್ವದ ಐತಿಹಾಸಿಕ ಚಿತ್ರಣ ಒಳಗೊಂಡ ಬಳಿಚಕ್ರದಲ್ಲಿ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ.

**ಅರಕೇರಾ(ಕೆ)**

ಯಾದಗಿರಿ ಜಿಲ್ಲೆಯ ಅರಕೇರಾ(ಕೆ) ಗ್ರಾಮದಲ್ಲಿ ಯಾದಗಿರಿ ಹೈದರಾಬಾದ್ ರಸ್ತೆ ಹೊಂದಿಕೊಂಡಂತೆ ಯಾದಗಿರಿಗೆ ೧೮ ಕಿ.ಮೀ. ದೂರದಲ್ಲಿದೆ. ರಸ್ತೆಯ ಎಡಗಡೆಗೆ ಸಾಲು

ಗುಹೆಯ ಕಲ್ಲಿಗೆ ಹೊಂದಿಕೊಂಡು ನಿಂತಿರುವ ಮೂರ್ತಿ ಇದೆ. ಈ ಮೂರ್ತಿಗೆ ಇಲ್ಲಿನ ಸ್ಥಳೀಯರು ಬೆಟ್ಟದ ಈರಣ್ಣ ಎಂದು ಕರೆಯುತ್ತಾರೆ. ಈ ಗುಹೆಯಲ್ಲಿರುವ ಶಿಲ್ಪ ಯಾವ ಕಾಲದ್ದು ಎಂದು ತಿಳಿದುಬಂದಿರುವುದಿಲ್ಲ. ಇಲ್ಲಿ ಯಾವುದೇ ಶಾಸನಗಳು ಕೂಡ ಕಂಡುಬಂದಿಲ್ಲ. ಇದರ ಬಗ್ಗೆ ಹೆಚ್ಚಿನ ಸಂಶೋಧನೆ ಮಾಡುವುದು ಅವಶ್ಯವಿದೆ.

## ೨.೨. ಯಾದಗಿರಿ ಜಿಲ್ಲೆಯ ಸಾಮಾಜಿಕ, ಆರ್ಥಿಕ, ಧಾರ್ಮಿಕ ಸ್ಥಿತಿಗತಿಗಳು

ಯಾದಗಿರಿ ಜಿಲ್ಲೆಯು ಕೃಷಿಪ್ರಧಾನ ಜಿಲ್ಲೆಯಾಗಿದೆ. ಜಿಲ್ಲೆಯಲ್ಲಿ ಪೂರ್ವ ಪರಿವರ್ತನೆ ಮತ್ತು ಈಶಾನ್ಯ ಶುಷ್ಕ ವಲಯ ಎಂದು ಎರಡು ನೆಲೆಯಲ್ಲಿ ಹವಮಾನ ವಲಯಗಳನ್ನಾಗಿ ವಿಂಗಡಿಸಲಾಗಿದೆ. ಈ ವಲಯಗಳು ಮಳೆ ಆಧಾರಿತ ಒಣಭೂಮಿ ಕೃಷಿಪ್ರದೇಶದ ಪ್ರಾಬಲ್ಯವನ್ನು ಸೂಚಿಸುತ್ತದೆ. "ಜಿಲ್ಲೆಯ ಸಾಮಾನ್ಯ ಮಳೆ ಪ್ರಮಾಣ ೬೩೬ ಮೀ.ಮೀ. ಇರುತ್ತದೆ. ಜಿಲ್ಲೆಯ ಹವಾಗುಣವು ಸಾಮಾನ್ಯವಾಗಿ ಶುಷ್ಕ ಆರೋಗ್ಯಕರವಾಗಿದ್ದು, ಜಿಲ್ಲೆಯ ನಿವ್ವಳ ಬಿತ್ತನೆಯ ಪ್ರದೇಶ ೩೨೫೪.೧ ಚದರ ಕಿಲೋಮೀಟರ್ ಇದ್ದು, ಇದು ಒಟ್ಟು ಕೃಷಿ ಭೂಮಿ ಪ್ರದೇಶದ ಶೇಕಡ ೭೨.೧ ಆಗಿದೆ. ಜಿಲ್ಲೆಯಲ್ಲಿ ತೊಗರಿ, ಬಿಳಿಜೋಳ, ಸೂರ್ಯಕಾಂತಿ, ಕಡಲೇಕಾಯಿ, ಹೆಸರು, ಉದ್ದು, ಭತ್ತ, ಕಬ್ಬು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಉತ್ಪಾದಕತೆ ವಿಚಾರದಲ್ಲಿ ಪ್ರಮುಖ ಬೆಳೆಗಳ ಇಳುವರಿ ರಾಜ್ಯದ ಸರಾಸರಿಗಿಂತ ಕಡಿಮೆ ಆಗಿದೆ. ಮಳೆ ಮತ್ತು ಸ್ಥಳೀಯ ಕೀಟ ದಾಳಿ ಬದಲಾವಣೆಯು ಬೆಳೆಗಳ(ತೊಗರಿ) ಉತ್ಪಾದನೆಯ ಮೇಲೆ ಪ್ರಭಾವ ಬೀರಿದೆ. ರಸಗೊಬ್ಬರ ಮತ್ತು ಸಸ್ಯ ಸಂರಕ್ಷಣಾಕ್ರಮಗಳಿಂದಾಗಿ ಜೋಳ ಉತ್ಪಾದನೆ ಮತ್ತು ಉತ್ಪಾದಕತೆ ಉತ್ತಮವಾಗಿದೆ. ತೈಲ ಬೀಜಗಳು ಪ್ರದೇಶದ ಫಲವತ್ತತೆ ಹಾಗೂ ಉತ್ಪಾದನೆಯನ್ನು ಕಡಿಮೆ ಮಾಡಿವೆ.

### ಸಾಮಾಜಿಕ ಸ್ಥಿತಿಗತಿಗಳು

ಯಾದಗಿರಿ ಜಿಲ್ಲೆಯು ಪ್ರಾಚಿನ ಕಾಲದಿಂದಲೂ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಕೇಂದ್ರವಾಗಿದೆ. ಇದು ಅನೇಕ ರಾಜಮನೆತನಗಳನ್ನು ಮತ್ತು ರಾಜಕೀಯ ಏರಿಳಿತಗಳನ್ನು ಕಂಡಿದೆ. ಇಲ್ಲಿ ಕನ್ನಡ, ಉರ್ದು, ತೆಲುಗು, ಮರಾಠಿ, ಹಿಂದಿ ಮುಂತಾದ ಭಾಷೆಗಳನ್ನಾಡುವ ಜನರಿದ್ದಾರೆ. ಹಿಂದೂಗಳು, ಮುಸ್ಲಿಮರು, ಜೈನರು, ಬೌದ್ಧರು, ಬ್ರಾಹ್ಮಣರು ಹೀಗೆ ವಿವಿಧ ಧಾರ್ಮಿಕ ಪಂಥದ ಜನರಿದ್ದಾರೆ. ಇವರೆಲ್ಲರೂ ಸಮಾಜದ ಪ್ರತಿಯೊಂದು ಕಾರ್ಯಗಳಲ್ಲೂ ಅನ್ಯೋನ್ಯವಾಗಿ ಬೆರೆತು ಬಾಳುತ್ತಾ ಬಂದಿದ್ದಾರೆ. ಯಾದಗಿರಿ ಜಿಲ್ಲೆಯಲ್ಲಿ ಆಡಳಿತ ನಡೆಸಿದ ಅನೇಕ ರಾಜಮನೆತನಗಳ ಹಾಗೂ ನವಾಬರ ಕಾಲದಿಂದಲೂ ನಡೆದುಬಂದ ಸಾಮಾಜಿಕ ಸಾಮರಸ್ಯವನ್ನು ಇಂದಿಗೂ ಸಹ ಇಲ್ಲಿನ ಜನರಲ್ಲಿ ಗುರುತಿಸಬಹುದಾಗಿದೆ. ವಿವಿಧ ಭಾಷೆ, ಜಾತಿ, ಧಾರ್ಮಿಕ ಪಂಥ, ವಿಭಿನ್ನ ಸಂಸ್ಕೃತಿಯಿಂದ ಕೂಡಿದ ಈ ಪ್ರದೇಶವು ಕರ್ನಾಟಕದಲ್ಲಿ ತನ್ನ ಸಾಮಾಜಿಕ ಸ್ಥಾನವನ್ನು ವಿಶಿಷ್ಟ ನೆಲೆಯಲ್ಲಿ ಗುರುತಿಸಿಕೊಂಡಿದೆ."[೯] ಹಾಗೆಯೇ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ದೃಷ್ಟಿಯಿಂದ ಯಾದಗಿರಿ ಜಿಲ್ಲೆಯು ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದು, ಇವರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಜೀವನವನ್ನು, ಅಲ್ಲಿನ ಜನರ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಇಲ್ಲಿನ ರಾಜಕೀಯ ಸ್ಥಿತ್ಯಂತರಗಳು, ಧಾರ್ಮಿಕ, ವೈವಾಹಿಕ,

ಅಲ್ಲಿನ ಜನರ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಇಲ್ಲಿನ ರಾಜಕೀಯ ಸ್ಥಿತ್ಯಂತರಗಳು, ಧಾರ್ಮಿಕ, ವೈವಾಹಿಕ, ಕೌಟುಂಬಿಕ ಜೀವನವನ್ನು ಅವಲೋಕಿಸಬೇಕಾಗುತ್ತದೆ.

ಪಂಡಿತ್ ತಾರಾನಾಥ, ಸ್ವಾಮಿ ರಮಾನಂದ ತೀರ್ಥ, ರಾಮಚಂದ್ರ ವೀರಪ್ಪ, ರಾಮು ಮೋಚಿ, ಪಂಡಿತ್ ಸಿದ್ದರಾಯ, ಚನ್ನಬಸವ ಪಟ್ಟದೇವರು, ಭೀಮಣ್ಣ ಖಂಡ್ರೆ ಮೊದಲಾದವರು ಸಾಮಾಜಿಕ ಅನಿಷ್ಟಗಳನ್ನು ತೊಡೆದುಹಾಕುವಲ್ಲಿ ಶ್ರಮಿಸಿದ್ದಾರೆ. ಒಟ್ಟಿನಲ್ಲಿ ತೆಲುಗು, ಮರಾಠಿ ಭಾಷೆಗಳಲ್ಲಿನ ಪ್ರಗತಿಪರ ವೈಚಾರಿಕತೆಯನ್ನು ಕನ್ನಡೀಕರಿಸುತ್ತಿದ್ದ ಅಂದಿನ ಸೃಜನಶೀಲರ ಪ್ರಯತ್ನಗಳು ಪ್ರಭಾವಕಾರಿಯಾಗಿದ್ದ ಸಹಕಾರ, ಸಹಬಾಳ್ವೆಯಿಂದಿರುವ ಯಶಸ್ಸನ್ನು ಎತ್ತಿಹಿಡಿದಿದ್ದಾರೆ. ಜೊತೆಗೆ ಹೈದರಾಬಾದ್ ಸಂಸ್ಥಾನ ಮತ್ತು ಯಾದಗಿರಿ ಜಿಲ್ಲೆಯ ಜ್ಞಾನ ಪುನರುಜ್ಜೀವನ ಕಾಲಘಟ್ಟದಲ್ಲಿ ಮದ್ರಾಸಿನ ಜಸ್ಟೀಸ್ ಪಾರ್ಟಿಯ ಹಿಂದುಳಿದ ವರ್ಗಗಳ ಹೋರಾಟ, ಪಡಗಲ್ಯೆ ಅಥವಾ ತೆಂಕಲ್ಯೆ (ಬ್ರಾಹ್ಮಣ–ಬ್ರಾಹ್ಮಣೇತರ) ಸಂಘರ್ಷಗಳು, ಮೈಸೂರು ಸಂಸ್ಥಾನದಲ್ಲಿನ ಪ್ರಜಾಮಿತ್ರ ಮಂಡಲಿ ಹೋರಾಟಗಳು ಈ ಜಿಲ್ಲೆಯ ಮೇಲೆ ಇಲ್ಲಿನ ಸಾಮಾಜಿಕ ವಿಚಾರಗಳ ಮೇಲೆ ಪ್ರಭಾವ ಬೀರಿದವು.

ಯಾದಗಿರಿ ಜಿಲ್ಲೆಯ ಭಾಗದ ಸಾಮಾಜಿಕ ಜನಜೀವನದ ಬಹುಮುಖ್ಯವಾದ ಲಕ್ಷಣವೆಂದರೆ ಅವಿಭಕ್ತ ಕುಟುಂಬ ಪದ್ಧತಿ. "ಇಲ್ಲಿನ ಜನಸಮುದಾಯದಲ್ಲಿ ತೀರಾ ಇತ್ತೀಚಿನವರೆಗೂ ಅವಿಭಕ್ತ ಕುಟುಂಬವೇ ಪ್ರಧಾನವಾಗಿತ್ತು. ಇಂದಿಗೂ ಕೆಲವು ಮನೆತನಗಳು ಇಂತಹ ಪದ್ಧತಿಯನ್ನು ಒಪ್ಪಿಕೊಂಡು, ಕುಟುಂಬದ ಯಜಮಾನನಿಗೆ ಸೂಕ್ತ ಗೌರವ ನೀಡುತ್ತಾ ಸಾಮರಸ್ಯದಿಂದ ಬಾಳುತ್ತಿವೆ. ಹಲವಾರು ತಲೆಮಾರುಗಳಿಂದ ಸಾಂಸ್ಕೃತಿಕವಾಗಿ ಬಂದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಅವಿಭಕ್ತ ಕುಟುಂಬಗಳು ಮಹತ್ವದ ಪಾತ್ರ ವಹಿಸಿವೆ."[೯] ಆದರೆ ಇತ್ತೀಚೆಗೆ ಸಮಾಜದಲ್ಲಿ ನಗರೀಕರಣದಿಂದ ಔದ್ಯೋಗೀಕರಣದಿಂದ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದ ಬದಲಾವಣೆ ಉಂಟಾಗುತ್ತಿದೆ. ಇಂದು ಅವಿಭಕ್ತ ಕುಟುಂಬಗಳ ಸಂಖ್ಯೆ ಕಡಿಮೆಯಾಗಿ ವಿಭಕ್ತ ಕುಟುಂಬಗಳ ಸಂಖ್ಯೆ ಹೆಚ್ಚಾಗುತ್ತಿವೆ.

ಯಾದಗಿರಿ ಜಿಲ್ಲೆಯ ಸಾಮಾಜಿಕ ಜೀವನದ ಬಗ್ಗೆ ಅಧ್ಯಯನದಲ್ಲಿ ತಿಳಿದು ಬರುವಂತೆ ಈ ಭಾಗದಲ್ಲಿ ಸುಮಾರು ೨೯ ಜಾತಿಗಳಿವೆಯೆಂದು ಸಾಹಿತ್ಯಿಕ ಮೂಲಗಳು, ಶಾಸನಗಳು ಇನ್ನಿತರ ದಾಖಲೆಗಳಿಂದ ತಿಳಿದುಬರುತ್ತದೆ. ಇಲ್ಲಿ ಕಂಡುಬರುವ ಮುಖ್ಯ ಜಾತಿಸಮೂಹಗಳೆಂದರೆ ಬ್ರಾಹ್ಮಣ, ಲಿಂಗಾಯತ, ಮರಾಠ, ರಜಪೂತ, ಬೇಡ, ಪಾಂಚಾಳ, ಮಡಿವಾಳ, ಕಬ್ಬಲಿಗ, ದೇವಾಂಗ, ರೆಡ್ಡಿ, ಕುರುಬ, ವಡ್ಡರ, ಮಾದಿಗ, ಹೊಲೆಯ(ಛಲವಾದಿ), ಗೌಳಿ ಮುಂತಾದವುಗಳಾಗಿವೆ.

ವೀರಶೈವ ಲಿಂಗಾಯತರು ಇಲ್ಲಿ ಮತ್ತೊಂದು ಮಹತ್ವದ ಜನಸಮೂಹವಾಗಿದೆ. ಇವರು ಸಾಮಾನ್ಯವಾಗಿ ಎಲ್ಲಾ ಕಡೆ ನೆಲೆಸಿದ್ದಾರೆ. ಈ ಜನರು "ವೀರಶೈವ ಧರ್ಮದ ಆಚಾರ–ವಿಚಾರ ಗಳಿಗೆ ಅನುಗುಣವಾಗಿ ಎಲ್ಲಾ ವಿಧಿ, ವಿಧಾನಗಳನ್ನು ತಮ್ಮ ನಿತ್ಯಜೀವನದಲ್ಲಿ ಆಚರಿಸುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಕೂಡ ಇಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಪರಿಶಿಷ್ಟ ಪಂಗಡದ ಜನಸಂಖ್ಯೆಯು ಇಲ್ಲಿನ ಒಟ್ಟು ಜನಸಂಖ್ಯೆಯ ಶೇ.೩೦ರಷ್ಟಿದೆ."[೧೦] ಅದರಲ್ಲೂ ಯಾದಗಿರಿ, ಸುರಪುರ, ಶಹಾಪುರಗಳಲ್ಲಿ ಇವರು ಹೆಚ್ಚಾಗಿ ನೆಲೆಸಿದ್ದಾರೆ. ಮುಸ್ಲಿಮರು ಬಹಮನಿ

ಸುಲ್ತಾನರ ಕಾಲದಿಂದ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಉನ್ನತ ಹುದ್ದೆ ಯಲ್ಲಿದ್ದು, ಇಂದಿಗೂ ತನ್ನದೇ ಆದ ಪ್ರಭಾವ ಹೊಂದಿದ ಜನಾಂಗವಾಗಿದೆ.

**ಮಹಿಳೆಯರ ಸ್ಥಾನಮಾನ**

ಯಾದಗಿರಿ ಜಿಲ್ಲೆಯಲ್ಲಿ, ಮಹಿಳೆಯ ಸ್ಥಾನಮಾನ ಸಾಮಾನ್ಯವಾಗಿ ಕೆಳಮಟ್ಟದಲ್ಲಿರುವುದು ಕಂಡು ಬರುತ್ತದೆ. ಇದಕ್ಕೆ ಸಾಮಾಜಿಕ ಹಿನ್ನೆಲೆಯು ಪ್ರಮುಖ ಕಾರಣವಾಗಿದೆ. "ಮನೆಯಲ್ಲಿ ಲಿಂಗ–ತಾರತಮ್ಯ ಅಧಿಕವಾಗಿ ಕಂಡುಬರುತ್ತದೆ. ಹೆಣ್ಣಿನ ಶಿಕ್ಷಣದ ಬಗ್ಗೆ ಹೆಚ್ಚಿನ ಕಾಳಜಿ ಇಲ್ಲ ಹಾಗೂ ವಿಶೇಷ ಸೌಲಭ್ಯಗಳು ಇಲ್ಲದಿರುವುದು ಇದಕ್ಕೆ ಕಾರಣವಾಗಿದೆ. ಗಂಡುಮಗುವಿನ ಆಸೆ ಪ್ರಬಲವಾಗಿರುವುದರ ಜೊತೆಗೆ ಧಾರ್ಮಿಕ ಮೌಢ್ಯಗಳು ಕಾರಣವಾಗಿವೆ. ವರದಕ್ಷಿಣೆ ಸಾವುಗಳು ಇಲ್ಲಿ ಅಧಿಕವಾಗಿ ಕಂಡುಬರುತ್ತದೆ. ೧೯೯೯ರ ಮಾನವ ಅಭಿವೃದ್ಧಿ ವರದಿಯ ಪ್ರಕಾರ ಸಾವಿನ ಪ್ರಮಾಣದ ಸರಾಸರಿ ರಾಜ್ಯದಲ್ಲಿ ೧೦೦೦ಕ್ಕೆ ೭೪ ಇದೆ. ಆದರೆ ಯಾದಗಿರಿ ಜಿಲ್ಲೆಯಲ್ಲಿ ಇದರ ಪ್ರಮಾಣ ೨೪೮ ಇದೆ. ಬಡಕುಟುಂಬಗಳಲ್ಲಿ ಕುಟುಂಬದ ಭಾರ ಮಹಿಳೆಯರ ಮೇಲೆ ಅಧಿಕ ವಾಗಿದೆ. ಆದರೆ ಮಹಿಳೆಯರು ದುಡಿಮೆಯಲ್ಲಿ ತಾರತಮ್ಯಕ್ಕೆ ಒಳಗಾಗಿದ್ದಾರೆ. ಅವರಿಗೆ ಕಡಿಮೆ ಕೂಲಿ ಕೊಟ್ಟು ಹೆಚ್ಚು ದುಡಿಸಿಕೊಳ್ಳುವುದು ಸಾಮಾನ್ಯವಾಗಿದೆ."[೧೧] ಆದರೆ ಇತ್ತೀಚೆಗೆ ಸರ್ಕಾರ ಜಾರಿಗೊಳಿಸಿರುವ ಕೆಲವು ಯೋಜನೆಗಳಿಂದಾಗಿ ಮಹಿಳೆಯರಲ್ಲಿ ಆತ್ಮವಿಶ್ವಾಸ ಬೆಳೆಯುತ್ತಿದೆ. ಸ್ವ–ಸಹಾಯ ಗುಂಪಿನ ಸದಸ್ಯರಾದ ಮಹಿಳೆ ಹೊಸ ಅನುಭವಗಳನ್ನು, ಜೀವನವನ್ನು ಪಡೆಯುತ್ತಿದ್ದಾಳೆ.

**ಆರ್ಥಿಕ ಸ್ಥಿತಿಗತಿಗಳು**

ಯಾವುದೇ ಪ್ರದೇಶದ ಆರ್ಥಿಕತೆಯು ಆ ಪ್ರದೇಶದ ಭೌಗೋಳಿಕ ಹಾಗೂ ಔದ್ಯೋಗಿಕ ಸ್ಥಿತಿಗತಿಗಳೊಂದಿಗೆ ನೇರ ಸಂಬಂಧ ಹೊಂದಿರುತ್ತದೆ. ಅದೇ ರೀತಿ ಯಾದಗಿರಿ ಜಿಲ್ಲೆಯ ಆರ್ಥಿಕ ಸ್ಥಿತಿಗತಿಗಳು ಅಲ್ಲಿನ ಭೌಗೋಳಿಕ ಪರಿಸ್ಥಿತಿಯ ಮೇಲೆ ರೂಪುಗೊಂಡಿದೆ. ಸಾಧಾರಣವಾಗಿ ಯಾದಗಿರಿ ಎಂದಾಕ್ಷಣ ಎಲ್ಲರಿಗೂ ನೆನಪಾಗುವುದು ಬಿಸಿಲು, ಬರಗಾಲ, ಬಡತನ, ನಿರುದ್ಯೋಗ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವ ಗ್ರಾಮಗಳು, ನಗರಗಳು, ಅಸಮರ್ಪಕ ಸಾರಿಗೆ ವ್ಯವಸ್ಥೆ, ಕುಡಿಯುವ ನೀರಿನ ಅಭಾವ ಹೀಗೆ ಅನೇಕ ಅಂಶಗಳ ಜೊತೆಗೆ ಕರ್ನಾಟಕ ದಲ್ಲಿಯೇ ಅತ್ಯಂತ ಹಿಂದುಳಿದ ಜಿಲ್ಲೆ ಎಂಬ ಅಂಶಗಳೇ ಪ್ರಭಾವವಾಗಿ ಅಧ್ಯಯನಕಾರರಿಗೆ ಕಂಡುಬರುತ್ತವೆ. ಇಲ್ಲಿನ ಇಂತಹ ಸ್ಥಿತಿಗತಿಗಳಿಗೆ ಅನೇಕ ಕಾರಣಗಳಿವೆ. ವಸಾಹತುಶಾಹಿ ಆಡಳಿತದ ಅನುಕೂಲ ಪಡೆಯದ ಪ್ರದೇಶವಾಗಿದ್ದರಿಂದ ಅನೇಕ ಸೌಲಭ್ಯಗಳಿಂದ ವಂಚಿತವಾಯಿತು. ನಿಜಾಮರ ಆಳ್ವಿಕೆಯ ಕಾಲದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಯಿತು. ಸ್ವಾತಂತ್ರ್ಯದ ನಂತರವೂ ಆಳಿದ ಸರ್ಕಾರಗಳ ಜನಪ್ರತಿನಿಧಿಗಳ ನಿರ್ಲಕ್ಷ್ಯ ಧೋರಣೆ ಮುಂತಾದ ಕಾರಣಗಳಿಂದ ಇದು ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದ ಜಿಲ್ಲೆ ಎಂದು ಕರೆಸಿಕೊಳ್ಳುವಂತಾಯಿತು. ಹೀಗೆ ಒಟ್ಟು ಪ್ರದೇಶ ಅಭಿವೃದ್ಧಿಯಲ್ಲಿ ಹಿಂದುಳಿದಿದ್ದರಿಂದಾಗಿ ಅದು ಈ ಭಾಗದ ಆರ್ಥಿಕ ಪ್ರಗತಿಯ ಮೇಲೂ ದುಷ್ಪರಿಣಾಮ ಬೀರಿದೆ.

ಯಾದಗಿರಿ ಜಿಲ್ಲೆಯ ಜನರ ಪ್ರಮುಖ ಉದ್ಯೋಗ ಕೃಷಿಯಾಗಿದೆ. ಶೇ. ೭೦ರಿಂದ ೭೫ರಷ್ಟು ಜನರು ವ್ಯವಸಾಯವನ್ನೇ ತಮ್ಮ ಮೂಲ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ಇಲ್ಲಿನ ಕಪ್ಪು ಮಣ್ಣು ಮತ್ತು ವಾಯುಗುಣವು ಹತ್ತಿ, ತೊಗರಿ, ಎಣ್ಣೆಕಾಳು ಬೆಳೆಗಳಿಗೆ ಅನುಕೂಲವಾಗಿದೆ.

ಕೃಷ್ಣಾ, ಭೀಮಾ, ಕಾಗಿಣಾ, ಅನೇಕ ದೊಡ್ಡ ಮತ್ತು ಉಪನದಿಗಳು, ಹಳ್ಳಗಳು, ಕೆರೆಗಳು ಇಲ್ಲಿವೆ. ಆದರೆ ನೀರಾವರಿ ಪ್ರದೇಶ ಮಾತ್ರ ಕಡಿಮೆಯಿದೆ. ಇದಕ್ಕೆ ಕಾರಣ ಅನೇಕ ದಶಕಗಳಿಂದ ಮುಗಿಯದ ನೀರಾವರಿ ಯೋಜನೆಗಳು ಹಾಗೂ ಮಳೆಗಾಲದ ನಂತರ ಅವುಗಳ ನೀರು ಬಹಳ ಬೇಗ ಖಾಲಿಯಾಗಿ ಜಲಾಶಯಗಳು ಬತ್ತಿ ಹೋಗುವ ಸಂಭವವೇ ಹೆಚ್ಚು. ಹೀಗಾಗಿ ಮಳೆಯಾಧಾರಿತ ಕೃಷಿಯ ಮೇಲೆ ಹೆಚ್ಚು ಜನ ಅವಲಂಬಿತರಾಗಿದ್ದಾರೆ.

ಇಲ್ಲಿನ ಕಪ್ಪುಮಣ್ಣು ವಿವಿಧ ಬೆಳೆಗಳನ್ನು ಬೆಳೆಯಲು ಅನುಕೂಲವಾಗಿದೆ. ಯಾದಗಿರಿ, ಶಹಾಪುರ ತಾಲ್ಲೂಕುಗಳಲ್ಲಿ ಕಪ್ಪು ಮಣ್ಣು ಹೆಚ್ಚಿದ್ದು ತೊಗರಿ, ಜೋಳ, ಹತ್ತಿ, ಎಣ್ಣೆ ಬೀಜಗಳು, ನೆಲಗಡಲೆಗಳನ್ನು ಪ್ರಮುಖವಾಗಿ ಬೆಳೆದರೆ, ಸುರಪುರ, ಶಹಾಪುರ ತಾಲ್ಲೂಕುಗಳಲ್ಲಿ ಭತ್ತ, ಕಬ್ಬು ಹಾಗೂ ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಾರೆ. ಇದರ ಜೊತೆಗೆ ಹತ್ತಿ, ಜೋಳ, ಮೆಕ್ಕೆಜೋಳ, ನೆಲಗಡಲೆ, ಹೊಗೆಸೊಪ್ಪು, ಸಜ್ಜೆ, ದ್ವಿದಳ ಧಾನ್ಯಗಳನ್ನು ಬೆಳೆಯಲಾಗುತ್ತದೆ.

ಯಾದಗಿರಿ ಜಿಲ್ಲೆಯು ಕೃಷಿ ಪ್ರಗತಿ ಕುರಿತಂತೆ ಇತ್ತೀಚೆಗೆ ಹಲವಾರು ಗಂಭೀರ ಸಮಸ್ಯೆಗಳನ್ನು ಎದುರಿಸುತ್ತಿದೆ. ಯಾದಗಿರಿ ಒಳಗೊಂಡಂತೆ ಇತರೆ ತಾಲ್ಲೂಕುಗಳಲ್ಲಿ ಮಳೆಯ ಪ್ರಮಾಣ ಕಡಿಮೆಯಾಗುತ್ತಿದೆ. ಯಾದಗಿರಿ ಜಿಲ್ಲೆಯ "ವಾರ್ಷಿಕ ಸರಾಸರಿ ಮಳೆ ೭೧೨.೬ ಮಿ.ಮೀ. ಇದೆ. ಆದರೆ ಇದು ಸಹ ಸರಿಯಾದ ಪ್ರಮಾಣದಲ್ಲಿ ಹಾಗೂ ಸಕಾಲದಲ್ಲಿ ಬರುತ್ತಿಲ್ಲ. ಜೊತೆಗೆ ಆಗಾಗ ಉಂಟಾಗುವ ಅತಿವೃಷ್ಟಿ, ಅನಾವೃಷ್ಟಿಯ ವೈಪರೀತ್ಯಗಳಿಂದ ಕೃಷಿಯಲ್ಲಿ ಉತ್ಪಾದನೆ ಕಡಿಮೆಯಾಗಿದೆ. ಇಲ್ಲಿನ ಕೃಷ್ಣ ಮೇಲ್ದಂಡೆ ಯೋಜನೆ, ಭೀಮ, ಸಿಂಗಟಾಲೂರು ಏತ ನೀರಾವರಿ ಯೋಜನೆ, ಚಂದ್ರಪಳ್ಳಿ ನೀರಾವರಿ ಯೋಜನೆ, ಹತ್ತಿಕುಣಿ, ಸೌದಾಗರ್ ಆಣೆಕಟ್ಟು, ಬೆಣ್ಣೆತೊರೆ, ಅಮರ್ಜಾ ಯೋಜನೆಗಳು ಹಲವಾರು ವರ್ಷಗಳಿಂದ ನಿಧಾನಗತಿಯಲ್ಲಿ ಸಾಗಿವೆ."[೨] ಇಂತಹ ಅನೇಕ ಸಮಸ್ಯೆಗಳು ಇಲ್ಲಿನ ಆರ್ಥಿಕ ಬೆಳವಣಿಗೆಯ ಹಿನ್ನಡೆಗೆ ಪರೋಕ್ಷ ಕಾರಣಗಳೆನ್ನಬಹುದು.

ಯಾದಗಿರಿ ಜಿಲ್ಲೆಯ ಭೂಮಾಲೀಕತ್ವವು ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರ ಹಿಡಿತದಲ್ಲಿದ್ದು, ಭೂ ಒಡೆತನವು ಅಸಮಾನತೆಯಿಂದ ಹಂಚಿಕೆಯಾಗಿದ್ದು, ಅದು ಕೆಲವೇ ಜನರ ಕೈಯಲ್ಲಿ ಕೇಂದ್ರೀಕೃತವಾಗಿದೆ. ಇದರಿಂದಾಗಿ ಭೂಮಾಲೀಕರ ಕೆಳಗೆ ಕೆಲಸ ನಿರ್ವಹಿಸುವ ಸಾಮಾನ್ಯ ರೈತರು ಅಥವಾ ಕೃಷಿಕಾರ್ಮಿಕರಲ್ಲಿ ಹೆಚ್ಚು ಶ್ರಮಪಟ್ಟರೂ ಭೂಮಾಲೀಕರೊಂದಿಗೆ ಬೆರೆಯಲು ಸಾಧ್ಯವಾಗುತ್ತಿಲ್ಲ. ಪರಿಣಾಮವಾಗಿ ಕೃಷಿ ಉತ್ಪನ್ನ ಕುಂಟಿತವಾಗುವುದು ಕಂಡುಬರುತ್ತದೆ. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಹಾಗೂ ಕೃಷಿ ಅಲ್ಲದೇ ಇತರ ಆದಾಯ ಮೂಲಗಳನ್ನು ಹೊಂದಿರುವ ಭೂಮಾಲೀಕರು ಕೃಷಿಯಲ್ಲಿ ಬಂದಷ್ಟು ಬರಲಿ ಎನ್ನುವ ಧೋರಣೆ ಹೊಂದಿದ್ದು, ಕೃಷಿ ಭೂಮಿಯನ್ನು ಕೃಷಿಯೇತರ ಚಟುವಟಿಕೆಗಳಿಗೆ ತೊಡಗಿಸುವ ಮನೋಭಾವನೆಯನ್ನು ಹೊಂದಿದ್ದಾರೆ.

ಯಾದಗಿರಿ ಜಿಲ್ಲೆಯಲ್ಲಿ ಕೈಗಾರಿಕೆಗಳು ಯಥೇಚ್ಛವಾಗಿ ಬೆಳವಣಿಗೆಯನ್ನು ಕಂಡಿಲ್ಲ. ಇತ್ತೀಚೆಗೆ ಹೆಚ್ಚಾಗಿ ಕೈಗಾರೀಕರಣಗೊಂಡಿರುವ ಯಾದಗಿರಿ ತಾಲ್ಲೂಕು ಹೊರತುಪಡಿಸಿದರೆ ಕೈಗಾರಿಕೆಯಲ್ಲಿ ಇತರೆ ತಾಲ್ಲೂಕುಗಳು ಹಿಂದುಳಿದಿವೆ. ಗುಲಬರ್ಗಾ(ಅವಿಭಜಿತ ಯಾದಗಿರಿ) ಜಿಲ್ಲೆಯಲ್ಲಿ ಹಿಂದಿ

ನಿಂದಲೂ ಹತ್ತಿ ಬಟ್ಟೆ, ಸಿಮೆಂಟ್ ಮತ್ತು ಕಲ್ಲು ಪಾಲಿಶ್ ಮಾಡುವ ಕಾರ್ಖಾನೆಗಳಿವೆ. ಗುಲಬರ್ಗಾ ಜಿಲ್ಲೆಯ ಸುತ್ತಮುತ್ತ ಉತ್ತಮ ಗುಣಮಟ್ಟದ ಹತ್ತಿ ಬೆಳೆಯುತ್ತಿದ್ದುದರಿಂದ ೧೮೮೪ರಲ್ಲಿ ಗುಲಬರ್ಗಾದಲ್ಲಿ ಎಂ.ಎಸ್.ಕೆ. ಮಿಲ್ ಸ್ಥಾಪನೆಯಾಗಿತ್ತು. ಇಲ್ಲಿ ತಯಾರಾದ ಹತ್ತಿ ಬಟ್ಟೆಯನ್ನು ವಿದೇಶಗಳಿಗೂ ರಫ್ತು ಮಾಡಲಾಗುತ್ತಿತ್ತು. ಆದರೆ ಈಗ ನಷ್ಟದ ಕಾರಣದಿಂದಾಗಿ ಆ ಮಿಲ್ಲನ್ನು ಮುಚ್ಚಲಾಗಿದೆ. ಇನ್ನು ಇಲ್ಲಿನ ಎಸಿಸಿ, ವಾಸವದತ್ತಾ, ರಾಜಶ್ರೀ ಸಿಮೆಂಟ್ ಕಾರ್ಖಾನೆಗಳು ಇಡೀ ಭಾರತಕ್ಕೆ ಸಿಮೆಂಟನ್ನು ಪೂರೈಸುತ್ತಿವೆ. ಹಾಗೆಯೇ ಇಲ್ಲಿ ಹೆಚ್ಚಾಗಿ ಸುಣ್ಣದ ಕಲ್ಲು, ಮರಳು, ಚಿನ್ನ, ಕೆಂಪು ಕಾವಿಮಣ್ಣು, ತಾಮ್ರ, ಜಿಪ್ಸಮ್, ಸುಣ್ಣದ ಶಿಲೆ ಮುಂತಾದ ಖನಿಜ ನಿಕ್ಷೇಪಗಳು ಗುಲಬರ್ಗಾ ಜಿಲ್ಲೆಯ ಸುತ್ತಮುತ್ತ ಇವೆ. ಆದರೆ ಬಂಡವಾಳದ ಅಭಾವ, ಮೂಲ ಸೌಕರ್ಯಗಳ ಅಲಭ್ಯತೆಗೆ, ಅನಕ್ಷರತೆಗೆ, ಬಡತನದಿಂದ ಅಭಿವೃದ್ಧಿ ಕುಂಠಿತವಾಗುತ್ತಿದೆ. ಹೀಗಾಗಿ ಇಂದು ಯಾದಗಿರಿ ಜಿಲ್ಲೆಯಲ್ಲಿ ಹಲವಾರು ಉದ್ದಿಮೆಗಳು ಇಂದು ಬೆಳೆಯುತ್ತಿರುವ ಮಾರುಕಟ್ಟೆಯ ಸ್ಪರ್ಧೆಯನ್ನು ಎದುರಿಸಲಾಗದೆ ನಷ್ಟದಿಂದ ಮುಚ್ಚಿ ಹೋಗುತ್ತಿವೆ.

ಇಲ್ಲಿನ ಅನೇಕ ಉದ್ದಿಮೆಗಳ ಆರ್ಥಿಕ ಚಟುವಟಿಕೆಗಳಿಂದ ಅನೇಕ ಕೂಲಿ ಜನರಿಗೆ ಜೀವನ ದೊರೆತರೂ ಬಂಡವಾಳಗಾರರು, ಮಾಲೀಕರು ಉದ್ಧಾರವಾಗುತ್ತಿದ್ದಾರೆಯೇ ಹೊರತು ಸಾಮಾನ್ಯ ಜನರ ಆರ್ಥಿಕ ಸ್ಥಿತಿ, ಜೀವನಮಟ್ಟ ಸುಧಾರಿಸಲು ಸಾಧ್ಯವಾಗುತ್ತಿಲ್ಲ. ಇಲ್ಲಿರುವ ಅನೇಕ ನೈಸರ್ಗಿಕ ಸಂಪನ್ಮೂಲಗಳನ್ನು ಹಾಗೂ ಅವಕಾಶಗಳನ್ನು ಹೊರ ರಾಜ್ಯದ ಉದ್ಯಮಿಗಳು ಬಳಸಿಕೊಂಡು ಅವರು ಸಂಪದ್ಭರಿತರಾಗುತ್ತಿರುವುದಲ್ಲದೇ ಇಲ್ಲಿನ ಜನರನ್ನು ಶೋಷಣೆಗೆ ಈಡು ಮಾಡುತ್ತಿದ್ದಾರೆ. ಇಲ್ಲಿರುವ ಬೃಹತ್ ಕೈಗಾರಿಕೆಗಳು ಹೊರ ರಾಜ್ಯದವರ ಒಡೆತನದಲ್ಲಿವೆ. ಹೀಗೆ ಇಲ್ಲಿನ ಸಂಪನ್ಮೂಲಗಳು ಬೇರೆಯವರ ಪಾಲಾಗಿ ಹೋಗುತ್ತಿದೆ. ಇತ್ತೀಚೆಗೆ ಸಣ್ಣಪುಟ್ಟ ಉದ್ಯಮಗಳಿಗೆ ಸರಕಾರ ನೀಡುವ ಪ್ರೋತ್ಸಾಹ, ಸಾಲ ಸೌಲಭ್ಯ, ಸಬ್ಸಿಡಿಗಳಿಂದಾಗಿ ಇಲ್ಲಿ ಕೋಳಿ ಸಾಕಾಣಿಕೆ, ಕುರಿ ಸಾಕಾಣಿಕೆ, ಹಾಲು ಉತ್ಪಾದನೆ, ಬೀಜಗಳ ಉತ್ಪಾದನೆ ಮುಂತಾದ ಉದ್ದಿಮೆಗಳು ನಿಧಾನವಾಗಿ ಅಭಿವೃದ್ಧಿಯಾಗುತ್ತಿವೆ.

ಆದರೆ ಯಾದಗಿರಿ ಜಿಲ್ಲೆಯ ಆರ್ಥಿಕ ಸ್ಥಿತಿಗತಿಯನ್ನು ಬೇರೆ ಜಿಲ್ಲೆಗಳಿಗೆ ಹೋಲಿಸಿದರೆ ಯಾದಗಿರಿ ಜಿಲ್ಲೆ ಅತ್ಯಂತ ಕೆಳಮಟ್ಟದಲ್ಲಿದೆ. ಅಲ್ಲದೆ ಅನೇಕ ಆರ್ಥಿಕ ಸಮಸ್ಯೆಗಳನ್ನು, ಸಾಮಾಜಿಕವಾಗಿ ಅಸಮಾನತೆಯನ್ನು ಎದುರಿಸುತ್ತಿದೆ. ಪ್ರಾದೇಶಿಕ ಅಸಮಾನತೆಯನ್ನು ಅನೇಕ ಅಧ್ಯಾಯಗಳು ದೃಢಪಡಿಸಿವೆ. ಕರ್ನಾಟಕ ಸರ್ಕಾರದ ಯೋಜನೆ ಇಲಾಖೆಯು ಪ್ರಕಟಿಸಿರುವ ಕರ್ನಾಟಕದ ಮಾನವ ಅಭಿವೃದ್ಧಿ ಕುರಿತು ೧೯೯೯ ಮತ್ತು ೨೦೦೫ರ ವರದಿಗಳು ಇಂದು ನಮ್ಮ ಮುಂದೆ ಇದನ್ನೇ ಸಾಕ್ಷಿಭೂತವಾಗಿ ಸಾರಿವೆ. ಹಾಗೆಯೇ ಪ್ರಾದೇಶಿಕ ಅಸಮಾನತೆ ಕುರಿತಂತೆ ಅಧ್ಯಯನ ನಡೆಸಲು ಸರಕಾರವು ೨೦೦೦ರಲ್ಲಿ ನೇಮಿಸಿದ್ದ ಉನ್ನತಾಧಿಕಾರಿ ಸಮಿತಿಯು ಈ ಪ್ರದೇಶದಲ್ಲಿರುವ ಅಸಮಾನತೆಯನ್ನು ದೃಢಪಡಿಸಿದೆ.

ಡಾ. ಡಿ.ಎಂ. ನಂಜುಡಪ್ಪನವರ ವರದಿಯಲ್ಲಿ ತೋರಿಸಿದಂತೆ ಇಲ್ಲಿನ ೩೪ ತಾಲ್ಲೂಕುಗಳ ಪೈಕಿ ೨೮ ತಾಲ್ಲೂಕುಗಳು ತೀರಾ ಹಿಂದುಳಿದಿವೆ. ಹೀಗಾಗಿ ಇಲ್ಲಿ ಇಂದಿಗೂ ಅನಕ್ಷರತೆ, ನಿರುದ್ಯೋಗ, ಬಡತನ ತಾಂಡವವಾಡುತ್ತಿದ್ದು, ತಲಾ ವರಮಾನ ಅತ್ಯಂತ ಕಡಿಮೆಯಿದೆ ಎಂಬ ವರದಿಯನ್ನು ನೀಡಿದ್ದಾರೆ. ಉದಾಹರಣೆಗೆ,

**ವಿಭಾಗದ ಒಟ್ಟು ಕೆಲಸಗಳಲ್ಲಿ ಕೃಷಿ ಕಾರ್ಮಿಕರು**

| ಕ್ರ.ಸಂ. | ವಿಭಾಗ | ಒಟ್ಟು ಕೆಲಸಗಾರರಲ್ಲಿ ಕೃಷಿ ಕಾರ್ಮಿಕರ ಪ್ರಮಾಣ |
|---|---|---|
| ೧. | ಗುಲಬರ್ಗಾ(ಅವಿಭಜಿತ ಯಾದಗಿರಿ ಜಿಲ್ಲೆ) | ೪೦.೬ |
| ೨. | ಬೆಳಗಾಂ | ೩೩.೦ |
| ೩. | ಬೆಂಗಳೂರು | ೧೯.೮ |
| ೪. | ಮೈಸೂರು | ೧೮.೭ |

(ಬಸವರಾಜ ಟಿ.ಕುಮ್ನೂರ, ಡಾ. ನಂಜುಡಪ್ಪನವರ ವರದಿ ಮತ್ತು ಅನುಷ್ಠಾನ, ಪು. ೨೧)

**ಬಡತನ ರೇಖೆಗಿಂತ ಕೆಳಗಿರುವ ತಾಲೂಕುಗಳು**

| ಕ್ರ.ಸಂ. | ವಿಭಾಗ | ಒಟ್ಟು ತಾಲೂಕು | ಬಡತನ ತಾಲ್ಲೂಕುಗಳ ಸಂಖ್ಯೆ |
|---|---|---|---|
| ೧. | ಗುಲಬರ್ಗಾ(ಅವಿಭಜಿತ ಯಾದಗಿರಿ ಜಿಲ್ಲೆ) | ೩೪ | ೨೮ |
| ೨. | ಬೆಳಗಾಂ | ೪೯ | ೨೦ |
| ೩. | ಬೆಂಗಳೂರು | ೫೧ | ೨೧ |
| ೪. | ಮೈಸೂರು | ೪೪ | ೧೯ |

(ಬಸವರಾಜ ಟಿ.ಪುಮ್ನೂರ, ಡಾ. ನಂಜುಡಪ್ಪನವರ ವರದಿ ಮತ್ತು ಅನುಷ್ಠಾನ, ಪು. ೮)

**ತಲಾ ವರಮಾನ**

| ಕ್ರ.ಸಂ. | ಜಿಲ್ಲೆಗಳು | ತಲಾ ವರಮಾನ (ರೂ.ಗಳಲ್ಲಿ) |
|---|---|---|
| ೧. | ಬೀದರ್ | ೯,೯೦೨ |
| ೨. | ಗುಲಬರ್ಗಾ(ಅವಿಭಜಿತ ಯಾದಗಿರಿ ಜಿಲ್ಲೆ) | ೧೨,೨೪೯ |
| ೩. | ರಾಯಚೂರು | ೧೦,೪೦೩ |
| ೪. | ಕೊಪ್ಪಳ | ೧೨,೫೪೮ |
| ೫. | ಬಳ್ಳಾರಿ | ೧೫,೭೬೦ |
| ೬. | ಬೆಂಗಳೂರು | ೨೭,೮೪೪ |
| ೭. | ದಕ್ಷಿಣ ಕನ್ನಡ | ೩೪,೨೯೬ |
| ೮. | ರಾಯಚೂರು | ೧೬,೬೫೪ |

(ಬಸವರಾಜ ಟಿ.ಕುಮ್ನೂರ, ಡಾ. ನಂಜುಡಪ್ಪನವರ ವರದಿ ಮತ್ತು ಅನುಷ್ಠಾನ, ಪು. ೭ ಮತ್ತು ೮)[೩]

ಆದರೂ, ಇತ್ತೀಚೆಗೆ ಸರಕಾರ ಕೈಗೊಂಡಿರುವ ವಿಶಿಷ್ಟ ಕಾರ್ಯಕ್ರಮಗಳು, ವಿಶೇಷ ಯೋಜನೆಗಳಿಂದ, ಅನುಷ್ಠಾನಗೊಂಡಿರುವ ಸಾರಿಗೆ ಸಂಪರ್ಕ, ನೀರಾವರಿ, ವಿದ್ಯುಚ್ಛಕ್ತಿ, ಬ್ಯಾಂಕುಗಳು, ಶಿಕ್ಷಣ, ಆರೋಗ್ಯ ಮುಂತಾದ ಸೌಕರ್ಯಗಳು ಜನರಿಗೆ ಲಭ್ಯವಾಗುತ್ತಿವೆ. ಅದರಲ್ಲೂ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಪ್ರತಿವರ್ಷ ದೊರಕುವ ವಿಶೇಷ ಅನುದಾನವನ್ನು ಬಳಸಿಕೊಂಡು ಹೊಸ ಹೊಸ ಯೋಜನೆಗಳನ್ನು ರೂಪಿಸುವುದರ ಮೂಲಕ ಈ ಜಿಲ್ಲೆಯ ಅಭಿವೃದ್ಧಿಯಲ್ಲಿ ತೊಡಗಿದೆ.

**ಧಾರ್ಮಿಕ ಸ್ಥಿತಿಗತಿಗಳು**

ಯಾದಗಿರಿ ಜಿಲ್ಲೆಯಲ್ಲಿ ಹೆಚ್ಚಾಗಿ ಶೈವ ಬ್ರಾಹ್ಮಣರಿದ್ದಾರೆ. ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿದ ಇವರು ಭೂಮಿಯ ಮೇಲೆ ತಮ್ಮ ನಿಯಂತ್ರಣವನ್ನು ಸಾಧಿಸಿದ್ದಾರೆ. ಈ ಜಿಲ್ಲೆಯ ಹೆಚ್ಚಿನ ಜಾಗೀರ್‌ದಾರರು, ಜಮೀನ್ದಾರರು ಮತ್ತು ದೇಶಮುಖ್‌ಗಳು ಈ ಸಮುದಾಯಕ್ಕೆ ಸೇರಿದವರೇ ಆಗಿದ್ದಾರೆ. ಈ ಜಿಲ್ಲೆಯಲ್ಲಿ "ವೀರಶೈವರ ಸಂಖ್ಯೆ ಹೆಚ್ಚಾಗಿದೆ. ಅವರ ಮುಖ್ಯ ಉದ್ಯೋಗ ವ್ಯವಸಾಯ ಮತ್ತು ವ್ಯಾಪಾರ. ಸಮಾಜದಲ್ಲಿ ಬ್ರಾಹ್ಮಣರಷ್ಟೇ ಸರಿ ಸಮಾನವಾದ ಸ್ಥಾನಮಾನಗಳನ್ನು ಹೊಂದಿದಂತಹವರು ನಿಜಾಮರ ಆಡಳಿತದಲ್ಲಿ ಆಡಳಿತಗಾರರಾಗಿ ಸೈನ್ಯಾಧಿಕಾರಿಗಳಾಗಿ ಮುಖ್ಯ ಹುದ್ದೆಗಳಲ್ಲಿದ್ದವರು ವೀರಶೈವರು. ಈ ಸಮುದಾಯದಲ್ಲಿ ಕೂಡ ಅನೇಕ ಜಮೀನ್ದಾರರು, ಜಾಗೀರ್‌ದಾರರು, ದೇಶಮುಖ್‌ರು, ಪಟೇಲರು ಮತ್ತು ಮಾಲಿಪಾಟೀಲರು ಆಗಿ ಹೋಗಿದ್ದಾರೆ. ಈ ಜಿಲ್ಲೆಯಲ್ಲಿ ಬಹುಸಂಖ್ಯಾತ ವರ್ಗದವರೆಂದರೆ ಹಿಂದುಳಿದವರು. ಹಿಂದುಳಿದ ವರ್ಗಗಳಲ್ಲಿ ಪ್ರಮುಖರೆಂದರೆ ಕಬ್ಬಲಿಗರು, ಕುರುಬರು, ಗೊಲ್ಲರು. ಈ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದಲಿತರಿದ್ದಾರೆ. ಅವರ ಕುಲ ಕಸುಬೆಂದರೆ ಜಮೀನ್ದಾರರ ಶ್ರೀಮಂತರ ಮನೆಗಳಲ್ಲಿ ಮತ್ತು ಹೊಲಗಳಲ್ಲಿ ದುಡಿಯುವುದು. ಈ ಜಿಲ್ಲೆಯಲ್ಲಿ ಬಂಜಾರ ಜನಾಂಗದವರು ನೆಲೆಸಿದ್ದಾರೆ. ಅವರು ನೆಲೆಸಿರುವ ಪ್ರದೇಶಕ್ಕೆ ತಾಂಡಾಗಳೆಂದು ಕರೆಯುತ್ತಾರೆ. ಇವರು ದನ, ಕುರಿ, ಆಡುಗಳನ್ನು ಹೊಂದಿದವರಾಗಿದ್ದಾರೆ. ಯಾದಗಿರಿ ಜಿಲ್ಲೆಯಲ್ಲಿ ಮುಸ್ಲಿಮರ ಸಂಖ್ಯೆ ಹೆಚ್ಚು. ಗ್ರಾಮೀಣ ಪ್ರದೇಶದಲ್ಲಿ ವ್ಯವಸಾಯ ಪಟ್ಟಣ ಪ್ರದೇಶದಲ್ಲಿ ವ್ಯಾಪಾರ ಮಾಡುವವರಾಗಿದ್ದಾರೆ. ಹೆಚ್ಚಿನ ಜನ ಬಡವರಾಗಿದ್ದಾರೆ. ಬಹಮನಿ ಮತ್ತು ನಿಜಾಮರ ಆಳ್ವಿಕೆಯ ಅಂತ್ಯದ ನಂತರ ಇವರ ಆರ್ಥಿಕ ಸ್ಥಿತಿಗತಿ ಚಿಂತಾಜನಕವಾಗಿದೆ. ಈ ಜಿಲ್ಲೆಯಲ್ಲಿ ಕ್ರಿಶ್ಚಿಯನ್ ಜನಾಂಗದವರು ನೆಲೆಸಿದ್ದಾರೆ. ಇಲ್ಲಿ ಪ್ರೊಟೆಸ್ಟೆಂಟ್‌ರ ಸಂಖ್ಯೆ ಅಧಿಕ. ಅನೇಕ ಚರ್ಚುಗಳು ಇಲ್ಲಿವೆ. ಇತ್ತೀಚೆಗೆ ಕ್ಯಾಥೊಲಿಕ್ ಮಿಷನರಿಗಳೂ ಕೂಡ ಕಾಲೂರಿವೆ."[೧೪] ಈ ಸಮುದಾಯದವರು ಹೆಚ್ಚು ಶೈಕ್ಷಣಿಕ ಚಟುವಟಿಕೆಗಳಲ್ಲಿ ಮತ್ತು ಸೇವಾ ಮನೋಭಾವದ ವೃತ್ತಿಗಳಲ್ಲಿ ತೊಡಗಿರುತ್ತಾರೆ.

ಯಾದಗಿರಿ ಜಿಲ್ಲೆ ಅನೇಕ ಧರ್ಮಗಳ ನೆಲೆವೀಡಾಗಿದೆ. ಬಹುತೇಕ ಜನರ ಬಾಳನ್ನು ರೂಪಿಸುವಲ್ಲಿ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳನ್ನು ಸಂಘಟಿಸುವಲ್ಲಿ, ಸಾಂಸ್ಕೃತಿಕ ಶ್ರೀಮಂತಿಕೆ ಯನ್ನು ಹೆಚ್ಚಿಸುವಲ್ಲಿ ಪ್ರತಿಯೊಂದು ಧರ್ಮವೂ ತನ್ನದೇ ಆದ ಪಾತ್ರವನ್ನು ವಹಿಸಿವೆ. ಇಲ್ಲಿ ವಾಸಿಸುವವರಲ್ಲಿ ಬಹುಪಾಲು ಜನರು ಕಬ್ಬಲಿಗರು, ಬ್ರಾಹ್ಮಣರು, ನಾಯಕರು, ವಡ್ಡರು, ಉಪ್ಪಾರರು, ಗಾಣಿಗರು, ಮರಾಠರು, ರಜಪೂತರು, ರೆಡ್ಡಿಗಳು, ಕುರುಬರು, ಹೊಲೆಯರು,

ಮಾದಿಗರು ಮುಂತಾದ ಜಾತಿಗೆ ಸೇರಿದವರಾಗಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಸಹ ಹೆಚ್ಚಾಗಿದ್ದಾರೆ. ಹೆಚ್ಚಾಗಿ "೧೨ನೇ ಶತಮಾನದಲ್ಲಿ ಶರಣರು ಮಾಡಿದ ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಯಿಂದಾಗಿ, ಆಯಾ ರಂಗದಲ್ಲಿ ಬದಲಾವಣೆಗಳಾದವು. ಅವರ ಪ್ರಭಾವ ತದನಂತರದ ಜನಜೀವನದ ಮೇಲೆ ಸಾಕಷ್ಟಾಗಿದೆ. ಇತರ ಧರ್ಮದವರಾದ ಮುಸ್ಲಿಮರು, ಕ್ರೈಸ್ತರು, ಪಾರಸಿಗಳು, ಯಹೂದಿಗಳು ಸಾಕಷ್ಟು ಸಂಖ್ಯೆಯಲ್ಲಿದ್ದು, ಧಾರ್ಮಿಕ ಕ್ಷೇತ್ರಕ್ಕೆ ಅಪಾರ ಕೊಡುಗೆ ಸಲ್ಲಿಸಿದ್ದಾರೆ. ಮುಸ್ಲಿಮರು ಗುಲಬರ್ಗಾ, ಯಾದಗಿರಿ, ಶಹಾಪುರ, ಸುರಪುರಗಳಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ. ಕ್ರಿಶ್ಚಿಯನ್ನರು ಹೆಚ್ಚಾಗಿ ಯಾದಗಿರಿ ನಗರದಲ್ಲಿ ನೆಲೆಸಿದ್ದಾರೆ.

ಯಾದಗಿರಿ ಜಿಲ್ಲೆಯಲ್ಲಿ ಹಿಂದೂಗಳ, ಮುಸ್ಲಿಮರ ಹಬ್ಬಗಳು ಆಚರಣೆಯಲ್ಲಿವೆ. ಜೊತೆಗೆ ಸಂಪ್ರದಾಯಗಳು ಮತ್ತು ಮೂಢನಂಬಿಕೆ ಆಧಾರಿತ, ಅರಳಿಮರ ಹಾಗೂ ಬನ್ನಿಮರಕ್ಕೆ ಪೂಜೆ ಸಲ್ಲಿಸುವ, ನಾಗಪೂಜೆ, ಗ್ರಾಮದೇವತೆಗಳ ಹರಕೆ ಹೊತ್ತು ಆರಾಧಿಸುವ ಸಾಂಪ್ರದಾಯಿಕ ಆಚರಣೆಗಳು ಬಹಳ ಪ್ರಾಚೀನ ಕಾಲದಿಂದಲೂ ಇಲ್ಲಿ ರೂಢಿಯಲ್ಲಿವೆ. ಅನೇಕ ಭಿನ್ನ ಮತಧರ್ಮಗಳ ಅನುಯಾಯಿಗಳು ಜಿಲ್ಲೆಯಲ್ಲಿದ್ದರೂ ಕೂಡಾ ಈ ಭಾಗವು ಮತಸಹಿಷ್ಣುತೆಗೆ ಹೆಸರಾಗಿದೆ. ಇಲ್ಲಿ ಸರ್ವಧರ್ಮ ಸಮನ್ವಯ ಕ್ಷೇತ್ರಗಳು ಇವೆ. ಯಾದಗಿರಿ ಜಿಲ್ಲೆಯಲ್ಲಿರುವ ತಿಂತಿಣಿ ಮೋನಪ್ಪಯ್ಯ, ಕೊಡೇಕಲ್ ಬಸವಣ್ಣ ದೇವಾಲಯಗಳು, ಹಿಂದೂ–ಮುಸ್ಲಿಂರ ಐಕ್ಯತೆಯ ತಾಣಗಳಾಗಿವೆ. ಪ್ರತಿವರ್ಷವೂ ಇಲ್ಲಿ ನಡೆಯವ ಜಾತ್ರೆ ಮತ್ತು 'ಉರುಸ್'–ಹಬ್ಬಗಳು ಹಿಂದೂ, ಮುಸ್ಲಿಂ ಹಾಗೂ ಎಲ್ಲಾ ಜನಾಂಗದ ಸಮನ್ವಯತೆಗೆ ಸಾಕ್ಷಿಯಾಗಿವೆ."[೧೫] ಈ ಎರಡು ಧಾರ್ಮಿಕ ಕೇಂದ್ರಗಳು ಧರ್ಮ ಸೌಹಾರ್ದತೆಗೆ ಮಾದರಿ ಕೇಂದ್ರಗಳಾಗಿವೆ.

### ೨.೩ ಯಾದಗಿರಿ ಜಿಲ್ಲೆಯ ಶೈಕ್ಷಣಿಕ ಸ್ಥಿತಿಗತಿ

ಯಾದಗಿರಿ ಜಿಲ್ಲೆಯ ಶೈಕ್ಷಣಿಕ ಇತಿಹಾಸವನ್ನು ತಿಳಿಸುವ ಅತ್ಯಂತ ಪ್ರಾಚೀನ ಸ್ಥಳವೆಂದರೆ ಅವಿಭಜಿತ ಯಾದಗಿರಿ ಜಿಲ್ಲೆಯ ಇಂದಿನ ಚಿತ್ತಾಪುರ ತಾಲ್ಲೂಕಿನ 'ನಾಗಾವಿ'. ಕ್ರಿ.ಶ. ೮–೯ನೇ ಶತಮಾನದ ಪೂರ್ವಾರ್ಧದಲ್ಲಿ ನಾಗಾವಿ ವಿಶ್ವವಿದ್ಯಾಲಯವು ಉನ್ನತಮಟ್ಟದ ಶಿಕ್ಷಣ ಸಂಸ್ಥೆಯಾಗಿತ್ತು. ಇದು ವಿಶ್ವಮಟ್ಟದ ಜ್ಞಾನ ಪ್ರಸಾರದ ಕೇಂದ್ರವಾಗಿತ್ತು. ನಂತರ ಮಧ್ಯಯುಗದಲ್ಲಿ ಮಹಮ್ಮದೀಯ ಅರಸರ ಆಳ್ವಿಕೆಯಲ್ಲಿ ಇಲ್ಲಿ ಇಸ್ಲಾಂ ಮಾದರಿಯ ಶಿಕ್ಷಣವ್ಯವಸ್ಥೆ ಜಾರಿಯಾಯಿತು. ಹಿಂದೂಗಳು ತಮ್ಮ ತಮ್ಮ ನಿವಾಸಗಳಲ್ಲೋ ಅಥವಾ ಮಠ ಮಾನ್ಯಗಳಲ್ಲೋ ಜ್ಞಾನಾರ್ಜನೆ ಮಾಡಿಕೊಳ್ಳುತ್ತಿದ್ದರು. ಮಹಿಳಾ ಶಿಕ್ಷಣ ಆ ಕಾಲದಲ್ಲಿ ತೀರಾ ಅಪರೂಪವಾಗಿತ್ತು. 'ಪರ್ದಾ' ಪದ್ಧತಿ ಜಾರಿಯಲ್ಲಿದ್ದು ಕೇವಲ ರಾಜಮನೆತನದ ಹಾಗೂ ಅವರ ಬಂಧುಗಳಾದ ಸ್ತ್ರೀಯರಿಗೆ ಮಾತ್ರ ಶಿಕ್ಷಣ ಅವರವರ ನಿವಾಸಗಳಲ್ಲಿ ದೊರೆಯುತ್ತಿತ್ತು.

ಶೈಕ್ಷಣಿಕ ಪ್ರಗತಿಗಳಲ್ಲಿ ಒಂದಾದ ೧೮೫೪ರ ಚಾರ್ಲ್ಸ್‌ವುಡ್ ವರದಿಯ ಅಂಶಗಳು ಹೈದರಾಬಾದ್ ರಾಜ್ಯದಲ್ಲೂ ಜಾರಿಯಾದ ಪರಿಣಾಮವಾಗಿ ೧೮೫೯ರಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿ ಸ್ವತಂತ್ರವಾದ 'ಶಿಕ್ಷಣ ಇಲಾಖೆ' ಪ್ರಾರಂಭವಾಯಿತು. ಇದರ ಅಡಿಯಲ್ಲಿ ಪ್ರತಿ ತಾಲ್ಲೂಕಿಗೆ ಎರಡರಂತೆ ಜಿಲ್ಲಾ ಕೇಂದ್ರದಲ್ಲಿ ಒಂದರಂತೆ ಉರ್ದು ಮಾಧ್ಯಮದ ಶಾಲೆಗಳು

ಸ್ಥಾಪನೆಗೊಂಡವು. ೧೮೭೫ರಲ್ಲಿ ಗುಲಬರ್ಗಾದಲ್ಲಿ 'ಆಂಗ್ಲ-ದೇಸೀಯ' ಮಾಧ್ಯಮದ ಶಾಲೆಯೊಂದು ತೆರೆಯಲ್ಪಟ್ಟಿತು. ಈ ಶಾಲೆಯಲ್ಲಿ ಉರ್ದು ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿದ್ದು ಆಂಗ್ಲ ಭಾಷೆಯನ್ನು ಒಂದು ವಿಷಯವನ್ನಾಗಿ ಬೋಧಿಸಲಾಗುತ್ತಿತ್ತು.

ಜಿಲ್ಲೆಯಲ್ಲಿ ಮೊಟ್ಟಮೊದಲ ಪ್ರೌಢಶಾಲೆ ೧೮೮೫-೮೬ರಲ್ಲಿ ಗುಲಬರ್ಗಾದಲ್ಲೂ ಹಾಗೂ ೧೮೯೧ರಲ್ಲಿ ಯಾದಗಿರಿಯಲ್ಲಿ ಆರಂಭವಾದವು. ೧೮೯೦ರಿಂದ ಉನ್ನತ ಪ್ರಾಥಮಿಕ ಹಂತದ ಶಿಕ್ಷಣದ ನಂತರ ವಿಶೇಷ 'ಮುಲ್ಕೀ' ಪರೀಕ್ಷೆ ನಡೆಸುವ ವ್ಯವಸ್ಥೆ ಪ್ರಾರಂಭವಾಯಿತು. ೧೯೦೪ರಲ್ಲಿ ತಾಂತ್ರಿಕ ಮತ್ತು ಇಂಜಿನಿಯರಿಂಗ್ ಸ್ವರೂಪದ ಸಂಸ್ಥೆಗಳು ಪ್ರಾರಂಭವಾಗುವುದರ ಮೂಲಕ ಪ್ರಪ್ರಥಮವಾಗಿ ಇಲ್ಲಿನ ಜನತೆಗೆ ವೃತ್ತಿಪರ ಶಿಕ್ಷಣ ದೊರೆಯಿತು. ೧೯೦೧ರಲ್ಲಿ ನಿಜಾಮರ ರಾಜ್ಯದಲ್ಲಿ ಮೆಟ್ರಿಕ್ಯುಲೇಷನ್ ಬೋರ್ಡ್ ಅಸ್ತಿತ್ವಕ್ಕೆ ಬಂದಿತು. ಈ ಭಾಗದ ಶಿಕ್ಷಣ ಕ್ಷೇತ್ರದಲ್ಲಿ ಮತ್ತೊಂದು ಪ್ರಮುಖ ಹೆಜ್ಜೆ ಎಂದರೆ ೧೯೧೮ರಲ್ಲಿ ಹೈದರಾಬಾದಿನಲ್ಲಿ 'ಉಸ್ಮಾನಿಯ ವಿಶ್ವವಿದ್ಯಾಲಯ' ಸ್ಥಾಪನೆಗೊಂಡಿತು. ಹೈದರಾಬಾದಿನ ನಿಜಾಮರ ಆಡಳಿತ ಭಾಷೆ ಉರ್ದು ಆಗಿದ್ದರಿಂದ ಶಿಕ್ಷಣವನ್ನು ಉರ್ದು ಭಾಷೆಯಲ್ಲೇ ನೀಡಲಾಗುತ್ತಿತ್ತು.

"೨೦ನೇ ಶತಮಾನದ ಪ್ರಾರಂಭದಲ್ಲಿ ಇಲ್ಲಿ ವ್ಯವಸ್ಥಿತವಾಗಿ ಖಾಸಗಿ ಶಿಕ್ಷಣವೂ ಕೂಡ ಜಾರಿಗೊಂಡಿತು. ಇಲ್ಲಿನ ಅಭಿವೃದ್ಧಿ ಬಗ್ಗೆ ಕಾಳಜಿ ಹೊಂದಿದ್ದ ಅನೇಕ ಜನನಾಯಕರ ಶ್ರಮ ಹಾಗೂ ಮುಂದಾಲೋಚನೆಯಿಂದ ಹಲವಾರು ವಿದ್ಯಾಸಂಸ್ಥೆಗಳು ತೆರೆಯಲ್ಪಟ್ಟವು. ಅವುಗಳಲ್ಲಿ ಮುಖ್ಯವೆಂದರೆ 'ನೂತನ ವಿದ್ಯಾಲಯ ಸಂಸ್ಥೆ' ಮತ್ತು 'ಶರಣಬಸವೇಶ್ವರ ವಿದ್ಯಾವರ್ಧಕ ಸಂಸ್ಥೆ'. ೧೯೦೭ರಲ್ಲಿ ನೂತನ ವಿದ್ಯಾಲಯ ಸಂಸ್ಥೆ ಸ್ಥಾಪನೆಗೊಂಡು ಅದೇ ವರ್ಷ ಮರಾಠಿ ಮಾಧ್ಯಮದಲ್ಲಿ ಪ್ರಾಥಮಿಕ ಶಾಲೆಯೊಂದನ್ನು ಪ್ರಾರಂಭಿಸಿತು. ಹೀಗಾಗಿ ಖಾಸಗಿಯಾಗಿ ದೇಶೀಯ ಮಾಧ್ಯಮದಲ್ಲಿ ಪ್ರಪ್ರಥಮವಾಗಿ ಶಾಲೆಯನ್ನು ತೆರೆದ ಶ್ರೇಯಸ್ಸು ಈ ಸಂಸ್ಥೆಗೆ ಸಲ್ಲುತ್ತದೆ. ಹಾಗೆಯೇ ೧೯೧೮ರಲ್ಲಿ ಶರಣಬಸವೇಶ್ವರ ಸಂಸ್ಥಾನದ ೭ನೇ ಪೀಠಾಧಿಪತಿಯಾದ ಪೂಜ್ಯ 'ದೊಡ್ಡಪ್ಪ ಅಪ್ಪ'ನವರು ಜಿಲ್ಲಾ ಕೇಂದ್ರದಲ್ಲಿ ಸಾರ್ವಜನಿಕ ವಾಚನಾಲಯ ಒಂದನ್ನು ತೆರೆದರು. ಹಾಗೂ ಇಲ್ಲಿನ ಜನತೆಯಲ್ಲಿ ಶೈಕ್ಷಣಿಕ ಹಾಗೂ ರಾಜಕೀಯ ಪ್ರಜ್ಞೆ ಮೂಡಿಸುವ ಉದ್ದೇಶಕ್ಕಾಗಿ ಶರಣಬಸವೇಶ್ವರ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ, ಶೈಕ್ಷಣಿಕ ಬೆಳವಣಿಗೆಗೆ ದಾರಿ ಮಾಡಿದರು.

**೧೯೬೧ರವರೆಗೆ ಕರ್ನಾಟಕದ ವಿವಿಧ ಪ್ರಾಂತಗಳ ಸಾಕ್ಷರತೆ**

| | | |
|---|---|---|
| ೧. | ಕೊಡಗು ಕರ್ನಾಟಕ | ೨೭.೨ |
| ೨. | ಮದ್ರಾಸ್ ಕರ್ನಾಟಕ | ೨೩.೩ |
| ೩. | ಮುಂಬೈ ಕರ್ನಾಟಕ | ೨೨.೩ |
| ೪. | ಮೈಸೂರು ಕರ್ನಾಟಕ | ೨೦.೬ |
| ೫. | ಹೈದ್ರಾಬಾದ್ ರ್ಕಾಟಕ | ೮.೫ |

(ಮೂಲ: ವೈಜನಾಥ ಪಾಟೀಲ, ಹೈದ್ರಾಬಾದ್ ಕರ್ನಾಟಕ ಅಸಮಾನತೆಯ ನೋಟ, ಪು. ೧೬)[೫೬]

"೧೯೬೧ರ ಜನಗಣತಿಯ ಸಮಯದಲ್ಲಿ ರಾಜ್ಯದ ಇತರೆಡೆ ಮಹಿಳಾ ಸಾಕ್ಷರತೆ ಶೇ. ೧೮ರಿಂದ ೧೯ರಷ್ಟು ಇದ್ದ ಸಮಯದಲ್ಲೇ ಯಾದಗಿರಿ ಜಿಲ್ಲಾ ಪ್ರದೇಶದಲ್ಲಿ ಕೇವಲ ೧೦ರಷ್ಟು ಮಹಿಳೆಯರು ಸಾಕ್ಷರರಾಗಿದ್ದರು. ರಾಜ್ಯಗಳ ಪುನರ್‌ವಿಂಗಡಣೆಯ ನಂತರ ಯಾದಗಿರಿ ಜಿಲ್ಲೆಯಲ್ಲಿ ಕನ್ನಡ ಭಾಷೆಯಲ್ಲಿ ಅನೇಕ ಶಾಲಾ-ಕಾಲೇಜುಗಳು ಸ್ಥಾಪಿತವಾದವು. ಗುಲಬರ್ಗಾದಲ್ಲಿ ನೂತನ ವಿದ್ಯಾಲಯ, ಶರಣ ಬಸವೇಶ್ವರ ಸಂಸ್ಥೆ, ಹೆಚ್.ಕೆ.ಇ. ಸಂಸ್ಥೆ, ಪೀಪಲ್ಸ್ ಶಿಕ್ಷಣ ಸಂಸ್ಥೆ, ರೋಟರಿ ಕ್ಲಬ್, ವಿಜಯ ವಿದ್ಯಾಲಯ ೧೯೮೧ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯ ಸ್ಥಾಪನೆ ಹಾಗೂ ಯಾದಗಿರಿಯಲ್ಲಿ ಚಂದ್ರಶೇಖರ ಎಜ್ಯುಕೇಶನ್ ಸೊಸೈಟಿ"[೧೭] ಸ್ಥಾಪನೆಯಾದವು.

ಯಾದಗಿರಿ ಜಿಲ್ಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಶಿಕ್ಷಣ ಸಂಸ್ಥೆಗಳಿದ್ದರೂ ಶಿಕ್ಷಣ ಕ್ಷೇತ್ರದಲ್ಲಿ ಇಡೀ ರಾಜ್ಯದಲ್ಲಿಯೇ ಅತ್ಯಂತ ಹಿಂದುಳಿದಿದೆ. ಇದಕ್ಕೆ ಕಾರಣ ಶಿಕ್ಷಕರ ಕೊರತೆ, ಕಟ್ಟಡಗಳ ಕೊರತೆ, ಸಾರಿಗೆ ಸಂಪರ್ಕ ಕೊರತೆ, ವಿದ್ಯುಚ್ಛಕ್ತಿಯ ಕೊರತೆ ಮತ್ತು ಸರಕಾರದ ಸವಲತ್ತುಗಳು ವಿದ್ಯಾರ್ಥಿಗಳಿಗೆ ಸರಿಯಾದ ರೀತಿಯಲ್ಲಿ ಸರಿಯಾದ ಪ್ರಮಾಣದಲ್ಲಿ ತಲುಪದೇ ಇರುವುದು. ಈ ಜಿಲ್ಲೆಯು ಶಿಕ್ಷಣಕ್ಷೇತ್ರದಲ್ಲಿ ಮುಂದುವರಿಯಬೇಕಾದರೆ ಈ ಕ್ಷೇತ್ರಕ್ಕೆ ಸರಕಾರದಿಂದ ಸಿಗಬಹುದಾದ ಸವಲತ್ತುಗಳು ಕಾಲ ಕಾಲಕ್ಕೆ ಸರಿಯಾಗಿ ತಲುಪಿದರೆ ಮಾತ್ರ ಸಾಧ್ಯವಾಗುತ್ತಿವೆ.

**ಕೊನೆ ಟಿಪ್ಪಣಿಗಳು**

೧. ಚೆಣ್ಣರ ಜಿಲ್ಲಾ ದರ್ಶನ-ಯಾದಗಿರಿ ಜಿಲ್ಲೆ, ಕರ್ನಾಟಕ ಸರ್ಕಾರ, ೨೦೧೧-೧೨, ಪುಟ ೧೩.

೨. ಪಾಟೀಲ ಬಸನಗೌಡ ಎಸ್.ಹುಣಸಗಿ. ಯಾದಗಿರಿ ಸಿರಿ, ಪುಟ ೧೦

೩. ಯಾದಗಿರಿ ಜಿಲ್ಲೆಯ ಅಂಕಿ-ಅಂಶಗಳ ನೋಟ, ೨೦೧೧-೨೦೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಯಾದಗಿರಿ.

೪. ಪಾಟೀಲ್ ಎಂ.ಬಿ.(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಗುಲಬರ್ಗಾ ಜಿಲ್ಲೆ, ೧೯೭೭, ಪುಟ ೨.

೫. ಅದೇ ಪುಸ್ತಕ, ಪುಟ ೨.

೬. ಗೋಪಾಲ ಆರ್., ಸಂ. ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ ೧೯೩.

೭. ಅದೇ ಪುಸ್ತಕ, ಪುಟ ೧೯೩.

೮. ಮುನ್ಷಿ ಕೆ.ಎಂ., ದಿ ಎಂಡ್ ಆಫ್ ಆ್ಯನ್ ಎರ, ಪುಟ ೨೩೯.

೯. ಷೇಕ್ ಆಲಿ. ಬಿ(ಸಂ), ಕರ್ನಾಟಕ ಚರಿತ್ರೆ ಮಾಲೆ ೬, ಪುಟ ೧೭೯.

೧೦. ವೆಂಕಟೇಶ್ ಕೆ. ಸರೋಜಾ ಬಿ(ಸಂ), ಹೈದರಾಬಾದ್ ಕರ್ನಾಟಕ ವರ್ತಮಾನ ತಲ್ಲಣಗಳು. ಪುಟ ೨೮.

೧೧. ಬಸವರಾಜ ಟಿ. ಕುಮ್ನುರ, ಡಾ. ನಂಜುಡಪ್ಪನವರ ವರದಿ ಮತ್ತು ಅನುಷ್ಠಾನ. ಪುಟ ೮.

೧೨. ವೈಜ್ಯನಾಥ ಪಾಟೀಲ, ಹೈದರಾಬಾದ್ ಕರ್ನಾಟಕ ಅಸಮಾನತೆಯ ನೋಟ. ಪುಟ ೧೬.

೧೩. ಸಂತೋಷ ಕುಮಾರ ಹೆಚ್.ಬಿ. ಹೈದರಾಬಾದ್ ಕರ್ನಾಟಕದಲ್ಲಿ ಸಾಮಾಜಿಕ ಚಳುವಳಿಗಳು (ಸಮಕಾಲೀನ ಹಿನ್ನೆಲೆಯ ಅಧ್ಯಯನ).

೧೪. ಸೆನ್ಸಸ್ ಆಫ್ ಇಂಡಿಯಾ, ೧೯೭೧, ಸೀರೀಸ್ ೧೪, ಪಾರ್ಟ್ ಟ ಟ ಎ, ಜನರಲ್ ಪಾಪುಲೇಶನ್ ಟೇಬಲ್ಸ್, ಮೈಸೂರು.

೧೫. ಸೆನ್ಸಸ್ ಆಫ್ ಇಂಡಿಯಾ, ೧೯೭೧, ಸೀರೀಸ್ ೧೪, ಜನರಲ್ ಪಾಪುಲೇಶನ್ ಟೇಬಲ್ಸ್, ಮೈಸೂರು.

೧೬. ಸೆನ್ಸಸ್ ಆಫ್ ಇಂಡಿಯಾ, ೨೦೧೧, ಆಫೀಸ್ ಆಫ್ ದ ರಿಜಿಸ್ಟ್ರಾರ್ ಜನರಲ್ ಆಂಡ್ ಸೆನ್ಸಸ್ ಕಮೀಶನರ್, ಇಂಡಿಯಾ.

೧೭. ಸೆನ್ಸಸ್ ಆಫ್ ಇಂಡಿಯಾ, ೧೯೯೧, ೨೦೦೧, ೨೦೧೧, ಸೆನ್ಸಸ್ ಆಫೀಸ್ ಆಫ್ ದ ರಿಜಿಸ್ಟ್ರಾರ್ ಜನರಲ್ ಆಂಡ್ ಸೆನ್ಸಸ್ ಕಮೀಶನರ್, ಇಂಡಿಯಾ.

## ಅಧ್ಯಾಯ : ಮೂರು

# ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಚಾರಿತ್ರಿಕ ನೋಟ

೩.೧. ವಚನ ಪರಂಪರೆ
೩.೨. ಸೂಫಿ ಪರಂಪರೆ
೩.೩. ದಾಸ ಪರಂಪರೆ
೩.೪. ತತ್ವಪದಕಾರರ ಪರಂಪರೆ

## ಅಧ್ಯಾಯ : ಮೂರು

# ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳ ಚಾರಿತ್ರಿಕ ನೋಟ

ಮಾನವ ನಾಗರಿಕನಾದಂತೆ ಅವನ ಸಾಮಾಜಿಕ ವ್ಯವಸ್ಥೆ ಕೂಡ ವಿಶಾಲವಾಗುತ್ತಾ ಸಾಗುತ್ತದೆ. ಇಂತಹ ಪ್ರಕ್ರಿಯೆಯಲ್ಲಿ ಸಮಾಜದಲ್ಲಿ ಬದಲಾವಣೆಯಾಗುವುದು ಮತ್ತು ಲೋಪ ದೋಷಗಳು ಉದ್ಭವವಾಗುವುದು ಸಹಜ. ಲೋಪದೋಷಗಳು ನಿವಾರಣೆ ಆದಾಗ ಮಾತ್ರ ಉತ್ತಮ ಸಮಾಜ ನಿರ್ಮಾಣವಾಗಲು ಸಾಧ್ಯ. ಕೆಲವೊಮ್ಮೆ ಸಾಮಾಜಿಕ ಕಟ್ಟುಪಾಡುಗಳು ಹಾಗೂ ಧಾರ್ಮಿಕ ನಂಬಿಕೆಗಳು ಜಟಿಲವಾದಾಗ ಸಮಾಜದ ಪ್ರಗತಿ ಕುಂಠಿತವಾಗುತ್ತದೆ. ಇತಿಹಾಸದ ಪುಟಗಳನ್ನು ತಿರುವಿ ಹಾಕಿದರೆ, ಸಮಾಜದ ಆಯಾ ಕಾಲಘಟ್ಟದಲ್ಲಿ ಕಂಡು ಬರುವ ಸಾಮಾಜಿಕ ಪಿಡುಗುಗಳನ್ನು ನಿವಾರಿಸಲು ಹಾಗೂ ಜನರಲ್ಲಿ ಜಾಗೃತಿ ಮೂಡಿಸಲು, ಹಲವಾರು ದಾರ್ಶನಿಕರು, ಧರ್ಮಬೋಧಕರು ಮತ್ತು ಸಮಾಜಸುಧಾರಕರು ಅವತರಿಸಿ ನಾಡಿನ ಸಾಮಾಜಿಕ ವ್ಯವಸ್ಥೆಯನ್ನು ಸರಿಪಡಿಸುವ ಹಾಗೂ ಸರಿದಾರಿಯಲ್ಲಿ ತರುವ ಪ್ರಯತ್ನವನ್ನು ಮಾಡಿರುವುದು ಕಂಡು ಬರುತ್ತದೆ. ಇಂತಹುದೇ ಮಹತ್ಕಾರ್ಯವನ್ನು ೧೨ನೇ ಶತಮಾನದ ಶಿವಶರಣರು ಸಮಾಜವನ್ನು ಸುಧಾರಿಸುವಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದರು. ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಅತ್ಯಂತ ಅವಶ್ಯಕವಾಗಿ ಅಧ್ಯಯನ ಮಾಡಬೇಕಾದ ಮತ್ತು ವಿಶ್ಲೇಷಣೆಗೆ ಒಳಪಡಿಸಬೇಕಾದ ವಿಷಯವೆಂದರೆ ಇಲ್ಲಿ ನಡೆದಂತಹ ಚಾರಿತ್ರಿಕ ಚಳುವಳಿಗಳು ಮತ್ತು ಅವುಗಳು ಬೀರಿದ ಪ್ರಭಾವಗಳು.

"ಕರ್ನಾಟಕದಲ್ಲಿ ಅದರಲ್ಲೂ ವಿಶೇಷವಾಗಿ ಯಾದಗಿರಿ ಜಿಲ್ಲೆಯ ಸುತ್ತಮುತ್ತಲಿನ ಭಾಗದಲ್ಲಿ ನಡೆದ ವಚನ ಚಳುವಳಿ, ಸೂಫಿ ಚಳುವಳಿಗಳು ತಮ್ಮದೇ ಆದ ಪ್ರಾಮುಖ್ಯತೆ ಮತ್ತು ವೈಶಿಷ್ಟ್ಯತೆಯನ್ನು ಹೊಂದಿದ್ದು, ಚಾರಿತ್ರಿಕ ದಾಖಲೆಗೆ ಅರ್ಹವೆನಿಸಿವೆ. ಇವು ಇಲ್ಲಿನ ಧರ್ಮ ಮತ್ತು ಸಮಾಜದ ಮೇಲೆ ತಮ್ಮದೇ ಆದ ಪ್ರಭಾವ ಬೀರಿವೆ ಮತ್ತು ಬೀರುತ್ತಲೇ ಇವೆ. ಕ್ರಿ.ಶ. ೧೨ನೇ ಶತಮಾನದಲ್ಲಿ ದೇಶದ ಯಾವುದೇ ಮೂಲೆಯಲ್ಲೂ ಕಂಡುಬರದಂತಹ ವಿಶಿಷ್ಟವಾದ ಚಳುವಳಿಯೇ ವಚನ ಚಳುವಳಿ ಎಂದು ಗುರುತಿಸಲ್ಪಟ್ಟಿದೆ. ೧೨ನೇ ಶತಮಾನದಲ್ಲಿಯೇ ಯಜಮಾನಿಕಾ ಸಂಸ್ಕೃತಿಯನ್ನು, ಮೌಢ್ಯತೆಯನ್ನು, ವರ್ಣವಿಭಜನೆಯನ್ನು ಧಿಕ್ಕರಿಸಿ ಸಮಾನತೆಯ ತತ್ವವನ್ನು ಜಾರಿಗೆ ತರಲು ಪ್ರಯತ್ನಪಟ್ಟಂತಹ ಚಳುವಳಿ ಇದಾಗಿದೆ. ಬಸವಣ್ಣ ಹಾಗೂ

ಇನ್ನಿತರರು ಚಳುವಳಿಗಳ ಮೂಲಕ ಮಂಡಿಸಿದ ವಿಚಾರಗಳು ಇಡೀ ಮಾನವ ಕುಲಕ್ಕೆ ಅನ್ವಯವಾಗುವಂತಿದ್ದು ಇಂದಿಗೂ ಪ್ರಸ್ತುತವಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಇನ್ನೊಂದು ಪ್ರಮುಖ ಚಳುವಳಿಯೆಂದರೆ ಸೂಫಿ ಚಳುವಳಿ. ನಿರಂಕುಶತೆಯನ್ನು ಮತ್ತು ಧಾರ್ಮಿಕ ಒತ್ತಡಗಳನ್ನು ಧಿಕ್ಕರಿಸಿ ಸರಳ ತತ್ವಗಳೊಂದಿಗೆ ಪ್ರಚಾರಕ್ಕಿಳಿದ ಪಂಥವೇ ಸೂಫಿ ಪಂಥ. ಯಾದಗಿರಿ ಜಿಲ್ಲೆಯ ಸಮಾಜದಲ್ಲಿ ಇಂದಿಗೂ ಸೂಫಿಗಳ ಪ್ರಭಾವ ಮತ್ತು ಸೂಫಿ ಸಂಪ್ರದಾಯವನ್ನು ಬಿಂಬಿಸುವ ಸಮೂಹಗಳು ಕಂಡುಬರುತ್ತವೆ. ಧಾರ್ಮಿಕ ಹಾಗೂ ಸಾಮಾಜಿಕ ಸಾಮರಸ್ಯ ತರಲು ಪ್ರಯತ್ನ ಪಟ್ಟಂತವರೇ ಸೂಫಿ ಸಂತರು."[೧] ಯಾದಗಿರಿ ಜಿಲ್ಲೆಯ ಭಾಗದ ಸಮಾಜದ ಸುಧಾರಣೆಯಲ್ಲಿ ಸೂಫಿಗಳ ಪಾತ್ರ ಅತ್ಯಂತ ಸ್ಮರಣೀಯ ಮತ್ತು ಅನುಕರಣೀಯವಾಗಿದೆ. ಈ ನಿಟ್ಟಿನಲ್ಲಿ ವಚನ ಚಳುವಳಿ, ಸೂಫಿ ಹಾಗೂ ತತ್ವ ಪದಕಾರರ ಪರಂಪರೆಯನ್ನು ಅಧ್ಯಯನ ಮಾಡುವುದು ಅವಶ್ಯಕವಾಗಿದೆ.

### ೩.೧. ವಚನ ಪರಂಪರೆ

ಕಲ್ಯಾಣದಲ್ಲಿ ಕ್ರಾಂತಿಯ ಹರಿಕಾರರೆನಿಸಿದ ಬಸವಣ್ಣನವರು ವಚನಗಳನ್ನೇ ಪ್ರಮುಖ ಅಸ್ತ್ರವನ್ನಾಗಿ ಬಳಸಿಕೊಳ್ಳುವುದರ ಮೂಲಕ ಹಲವಾರು ಸಾಮಾಜಿಕ-ಧಾರ್ಮಿಕ ಸುಧಾರಣೆಗಳಿಗೆ ನಾಂದಿ ಹಾಡಿದರು. ಇನ್ನೊಂದು ವಿಶೇಷವೆಂದರೆ ಬಸವಣ್ಣನವರ ಪೂರ್ವದಲ್ಲಿ ಸಾಮಾಜಿಕ ಪಿಡುಗುಗಳಾದ ಮೇಲು ಕೀಳೆಂಬ ಭಾವನೆಯನ್ನು ತೊಡೆದುಹಾಕಲು ಶ್ರಮಿಸಿದ ಶರಣರಿದ್ದಾರೆ. ಅವರೂ ಕೂಡ ವಚನಗಳನ್ನೇ ಬರೆಯುವುದರ ಮೂಲಕ ಬಸವಣ್ಣನವರಿಗಿಂತ ಪೂರ್ವದಲ್ಲೇ ಸಾಮಾಜಿಕ ಚಳುವಳಿಗೆ ಕಿಚ್ಚು ಹಚ್ಚಿದರು. ಜೇಡರ ದಾಸಿಮಯ್ಯ, ಕೋಂಡಗುಳಿ ಕೇಶಿರಾಜ, ತೆಲುಗು ಬೊಮ್ಮಯ್ಯ, ಅಣಂಪುರ ಗುಡ್ಡೆವ್ವೆ, ಮಾರುಡಿಗೆ ನಾವಿತಂದೆ, ಪರಿಯಳಿಗೆ ವೈಜಕವ್ವೆ, ಶಂಕರದಾಸಿಮಯ್ಯ, ಡೋಹರ ಕಕ್ಕಯ್ಯ, ಮಾದರ ಚನ್ನಯ್ಯ, ಬಾವೂರ ಬೊಮಯ್ಯ, ಕೆಂಬಾವಿ ಭೋಗಣ್ಣರೆಂಬ ಶಿವಶರಣರಿದ್ದರು. ಕೆಂಬಾವಿ ಭೋಗಣ್ಣನು ಜೇಡರ ದಾಸಿಮಯ್ಯನ ಸಮಕಾಲೀನ ವಚನಕಾರ. ಭೋಗಣ್ಣ, ಪ್ರಸಾದಿ ಭೋಗಣ್ಣ, ಕೆಂಬಾವಿ ಭೋಗಣ್ಣರೆಂಬ ಮೂವರು ಭೋಗಣ್ಣರಿದ್ದರು.[೨] ಇವರಲ್ಲಿ ಕೆಂಬಾವಿ ಭೋಗಣ್ಣನೆ ವಚನಕಾರನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಕೆಳಗಿನ ಕೆಲವು ಶಾಸನಗಳು ಶಿವಶರಣ ಕೆಂಬಾವಿ ಭೋಗಣ್ಣನನ್ನು ಕುರಿತು ಹೆಚ್ಚಿನ ಮಾಹಿತಿಯನ್ನು ನೀಡುತ್ತವೆ. ಅವು ತಾಳಿಕೋಟೆ, ಬಮ್ಮಕೂರು, ಹಿರಿಯೂರ, ಮರಡಿಪುರ, ತೊಟ್ಟಹಳ್ಳಿ ಶಾಸನಗಳು. ಇವು ಭೋಗಣ್ಣನ ವ್ಯಕ್ತಿತ್ವ, ಸಾಮಾಜಿಕ ಸುದಾರಣೆಗಳನ್ನು ತಿಳಿಸುತ್ತವೆ.

"ಕೆಂಬಾವಿ ಭೋಗಣ್ಣ ಯಾದಗಿರಿ ಜಿಲ್ಲೆಯ ಕೆಂಬಾವಿಯಲ್ಲಿ ಶೈವ ಬ್ರಾಹ್ಮಣರ ಮನೆಯಲ್ಲಿ ಜನ್ಮ ತಾಳಿದನು. ಆದರೆ, ತಂದೆ ತಾಯಿ, ಭೋಗಣ್ಣನ ಬಾಲ್ಯ, ಯೌವನದ ಬಗ್ಗೆ ಯಾವುದೇ ಮಾಹಿತಿಗಳು ನಮಗೆ ದೊರಕುವುದಿಲ್ಲ. ಬಿ.ಆರ್. ಹಿರೇಮಠ ಅವರು ಸಂಪಾದಿಸಿರುವ ಭೋಗಣ್ಣನ ೨೨ ವಚನಗಳು ಕೆಂಬಾವಿ ಭೋಗಣ್ಣನ ವಚನಗಳೆಂದು ತಿಳಿದುಬರುತ್ತವೆ. ಅದರಲ್ಲಿ ಹೆಚ್ಚು ಬೆಡಗಿನ ವಚನಗಳಿರುವುದು ಕಂಡುಬರುತ್ತವೆ. ಇದರಿಂದ ಕೆಂಬಾವಿ ಭೋಗಣ್ಣನ ಕಾಲವನ್ನು ಕ್ರಿ.ಶ. ೧೧೧೦ ಎಂದು ಎಂ.ಎಂ. ಕಲ್ಬುರ್ಗಿಯವರು ತಿಳಿಸಿದ್ದಾರೆ. ಕೆಂಬಾವಿ ಭೋಗಣ್ಣ ಶೈವ

ಬ್ರಾಹ್ಮಣ ಮನೆಯಲ್ಲಿ ಜನ್ಮ ಪಡೆದರೂ, ಮಡಿವಂತಿಕೆಗೆ ಕಟ್ಟುಬೀಳಲಿಲ್ಲ. ಅವರದು ವಿಶಾಲವಾದ ಮನಸ್ಸು ಮತ್ತು ಮಾನವರೆಲ್ಲರು ಸಮಾನರು ಎಂಬ ಭಾವನೆಯಿತ್ತು. ಅಂದಿನ ಸಮಾಜದಲ್ಲಿ ಅಂತ್ಯಜರಾಗಿ ನಿಕೃಷ್ಟ ಜೀವನ ಸಾಗಿಸುತ್ತಿದ್ದ ಹೊಲೆಯ ಮಾದಿಗರನ್ನು ಸಮಾಜದ ಮುಖ್ಯ ವಾಹಿನಿಗೆ ತರಲು ಯತ್ನಿಸಿದರು. ಈ ರೀತಿಯ ಸಾಮಾಜಿಕ ಕಾರ್ಯವನ್ನು ಬಸವಣ್ಣನಿಗಿಂತ ಮೊದಲೇ ಕೆಂಬಾವಿ ಭೋಗಣ್ಣ ಮಾಡಿದರು. ಭೋಗಣ್ಣ ಶಿವಶರಣನಾಗಿ, ಜಗತ್ತಿನಲ್ಲಿಯೇ ದೈವಶಕ್ತಿಯ ಮಹಿಮೆಯಿದೆ ಎಂಬುದನ್ನು ಜನರಲ್ಲಿ ಮೂಡಿಸಲು ಅನೇಕ ಪವಾಡಗಳನ್ನು ಮಾಡಿದರು. ಕೆಂಬಾವಿ ಭೋಗಣ್ಣ ಜಾತಿವ್ಯವಸ್ಥೆಯ ವಿರುದ್ಧ ಹೋರಾಡಿದ ಪ್ರಪ್ರಥಮ ಶರಣನಾಗಿದ್ದಾನೆ. ಜಾತೀಯತೆಯನ್ನು ಹೊಗಲಾಡಿಸಲು ರಾಜತ್ವವನ್ನು ತೊರೆದ ಘಟನೆಯನ್ನು ನಾವು ಕಾಣುತ್ತೇವೆ."[೩]

"ಕೆಂಬಾವಿ ಭೋಗಣ್ಣನ ಈ ಸಾಮಾಜಿಕ ಚಳುವಳಿಯಿಂದ ವ್ಯಕ್ತವಾಗುವ ಅಂಶವೇನೆಂದರೆ, ಶಿವಭಕ್ತಿಗೆ ಮೇಲು–ಕೀಳು, ಉಚ್ಚ–ನೀಚಗಳೆಂಬ ಜಾತಿಭೇದಗಳು ಇಲ್ಲದೇ ಇರುವುದು. ಯಾವ ಕುಲದವನಾಗಿದ್ದರೂ ಶಿವನ ಅನುಗ್ರಹಕ್ಕೆ ಪಾತ್ರನಾದರೆ, ಅವನೇ ನಿಜವಾದ ಕುಲೀನನಾಗಿರುವುದು. ಭೋಗಣ್ಣ ವೀರಗಣವನ್ನು ಪ್ರಧಾನವಾಗಿ ಉಳ್ಳ ಶಿವಭಕ್ತನಾಗಿದ್ದನು. ಶಿವಭಕ್ತಿಯೇ ಉಚ್ಚವಾದದ್ದು ಎಂದು ಭಾವಿಸಿದ್ದನು. ಶಿವ ದ್ರೋಹಿಗಳನ್ನು ಎದುರಿಸಲು ಹಿಂದೆ ಮುಂದೆ ನೋಡದ ದೃಢ ನಿಲುವು ಇವನದಾಗಿತ್ತು. ಭೋಗಣ್ಣನಂತಹ ಶರಣರು ಪರಸಮಯಿಗಳನ್ನು ನಿಗ್ರಹಿಸಿ ಶಿವಪಾರಮ್ಯವನ್ನು ಸಾಧಿಸಿದ ಸ್ಥಳಗಳ ಮೂಲಕ ವೀರಶೈವ ಸಾಹಿತ್ಯದಲ್ಲಿ ಉಲ್ಲೇಖದಾಗಿದ್ದಾನೆ. ಒಟ್ಟಿನಲ್ಲಿ ಬಸವಪೂರ್ವದ ಕಾಲದಲ್ಲಿ ಶರಣರು ಬ್ರಾಹ್ಮಣ ಮತವನ್ನು ತಿರಸ್ಕರಿಸಿ ವೀರಮಹೇಶ್ವರ ನಿಷ್ಠೆಯನ್ನು ಸ್ಥಾಪಿಸಿ, ಅತಿ ಕೀಳಾಗಿ ಕಾಣುತ್ತಿದ್ದ ಶೂದ್ರರನ್ನು ಮೇಲಕ್ಕೆ ತಂದು, ಶಿವನು ಯಾವಾಗಲೂ ಉಳ್ಳವರ ಕಡೆ ಇರುವುದಿಲ್ಲ, ಇಲ್ಲದವರ ಕಡೆ ಇರುತ್ತಾನೆ."[೪] ಎಂಬ ಮಾತನ್ನು ಇಲ್ಲಿ ಕೆಂಬಾವಿ ಭೋಗಣ್ಣ ವ್ಯಕ್ತಪಡಿಸಿದ್ದಾನೆ.

ಯಾದಗಿರಿ ಜಿಲ್ಲಾ ಕೇಂದ್ರದಿಂದ ಪಶ್ಚಿಮಕ್ಕೆ ಸುಮಾರು ೨೮ ಕಿ.ಮೀ. ದೂರ ಕ್ರಮಿಸಿದರೆ ಸಿಗುವ ಗ್ರಾಮವೇ ಏಲ್ಹೇರಿ. "೧೨ನೇ ಶತಮಾನದ ಪ್ರಮುಖ ಧಾರ್ಮಿಕ ಕ್ಷೇತ್ರ ಇದಾಗಿದೆ. ಆದರೆ, ಈ ಧಾರ್ಮಿಕ ಕ್ಷೇತ್ರದ ಬಗ್ಗೆ ಇತಿಹಾಸದ ಪುಟಗಳಲ್ಲಿ ಮಂಜು ಕವಿದು, ಮಸುಕು ಮಸುಕಾಗಿದೆ. ಒಂದೇ ಗ್ರಾಮದಲ್ಲಿ ಇಬ್ಬರು ವಚನಕಾರರು ಬಾಳಿದ ಪುಣ್ಯಭೂಮಿ ಏಲ್ಹೇರಿ. ೧೨ನೇ ಶತಮಾನದ ಕ್ರಾಂತಿಕಾರಿ ಶರಣರಲ್ಲಿ ಏಲ್ಹೇರಿ ಕೇತಯ್ಯ ರೆಮ್ಮವ್ವೆ(ಅಕ್ಕಮ್ಮ)ಯೂ ಇದ್ದಾಳೆ. ಕೇತಯ್ಯನ ಆರಾಧ್ಯ ದೈವ ಕೇತೇಶ್ವರ(ಏಲೇಶ್ವರ) ದೇವಸ್ಥಾನ ಬಿಟ್ಟು, ಕೇತಯ್ಯನ ವೈಯಕ್ತಿಕ ಜೀವನದ ಬಗ್ಗೆ ಏನೂ ಗೊತ್ತಿಲ್ಲ. ೭೪ ವಚನಗಳನ್ನು ಬರೆದ ಕೇತಯ್ಯ ೧೫೪ ವಚನಗಳನ್ನು ಬರೆದ ಅಕ್ಕಮ್ಮ ವಚನ ಸಾಹಿತ್ಯಕ್ಕೆ ಅಮೋಘ ಕೊಡುಗೆ ನೀಡಿದ್ದಾರೆ. ವಿರಾಗಿಣಿ ಅಕ್ಕ ಮಹಾದೇವಿಯ ನಂತರ ಹೆಚ್ಚು ವಚನಗಳು ದೊರಕಿದ್ದು ಏಲ್ಹೇರಿ ಅಕ್ಕಮ್ಮಳದ್ದು."[೫]

"ಕೇತಯ್ಯನು ದೊಡ್ಡ ಜಮಿನ್ದಾರನಾಗಿದ್ದಾನೆಂದು ತಿಳಿದುಬರುತ್ತದೆ. ಈತನಿಗೆ ಸಾಬಿದೇವಿ ಎಂಬ ಹೆಂಡತಿ. ಶಿವಲಿಂಗಯ್ಯ ಮತ್ತು ಶಿವಲಿಂಗಮ್ಮ ಎಂಬ ಮಕ್ಕಳಿದ್ದರು. ತನ್ನ ಹೆಂಡತಿ.

ಮಕ್ಕಳು, ಮನೆಯಲ್ಲಿದ್ದ ಹಸು, ಕರು, ಯಾರನ್ನೂ ಬಿಡದೆ ಲಿಂಗಷ್ಠೆನುಮತಿಗಳನ್ನಾಗಿ ಮಾಡಿದ್ದನು. ಲಿಂಗನಿಷ್ಠೆ ತಪ್ಪಿದವರನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ ಮತ್ತು ಮಾತನಾಡುತ್ತಿರಲಿಲ್ಲ. ಅವರ ಜೊತೆ ಯಾವುದೇ ವ್ಯವಹಾರವನ್ನೂ ಇಟ್ಟುಕೊಳ್ಳುತ್ತಿರಲಿಲ್ಲ. ತನ್ನ ಮನೆಯಲ್ಲಿದ್ದ ದನಕರುಗಳು ಕೂಡ ಲಿಂಗಕ್ಕೆ ಹಣೆ ಇಟ್ಟು ನಮಸ್ಕರಿಸಿದ ನಂತರವೇ ಹುಲ್ಲು ಮೇಯತಕ್ಕದ್ದು ಎಂಬ ಕಠಿಣ ನಿಯಮಗಳನ್ನು ವಿಧಿಸಿದ್ದನು. ಇದು ಅನ್ಯರಿಗೆ ಅಹಂಕಾರ ಎಂದೆನಿಸಿದರೂ ಕೇತಯ್ಯನಲ್ಲಿ ಎಳ್ಳಷ್ಟೂ ಅಹಂಕಾರವಿರಲಿಲ್ಲ. ನಿರಹಂಕಾರಿ ಕೇತಯ್ಯನು ಶಿವಶರಣರನ್ನು ಕಂಡರೆ ಗೌರವಿಸಿ, ಆದರಿಸುತ್ತಿದ್ದನು. ಕೇತಯ್ಯ ಜಮೀನ್ದಾರನಾಗಿದ್ದರಿಂದ ಧಾನ್ಯಸಂಗ್ರಹಣೆಗೆ ಪ್ರತ್ಯೇಕ ಗೃಹ(ಗೋದಾಮು) ವನ್ನು ನಿರ್ಮಿಸಿದ್ದನು. ಇಲ್ಲಿನ ಧಾನ್ಯವನ್ನು ಸುಟ್ಟುಬಿಟ್ಟರೆ ಅಹಂಕಾರಿ ಕೇತಯ್ಯ ವಿಧಿ ಇಲ್ಲದೆ ತಮ್ಮ ಬಳಿಯೇ ಸಹಾಯ ಕೇಳಿ ಬರಬೇಕು ಎಂಬ ಹವಣಿಕೆ ಕೆಲವರದಾಗಿತ್ತು. ಕುಟಿಲಿಗಳು ಧಾನ್ಯ ಸಂಗ್ರಹಕ್ಕೆ ಬೆಂಕಿ ಹಚ್ಚುವರು. ಇದರಿಂದ ಧಾನ್ಯವೆಲ್ಲ ಸುಟ್ಟು ಬೂದಿಯಾಯಿತು. ಇದನ್ನು ಕಂಡು ಎಳ್ಳಷ್ಟೂ ವಿಚಲಿತನಾಗದ ಕೇತಯ್ಯನು 'ನೀನೊಲಿದರೆ ಕೊರಡು ಕೊನರುವುದಯ್ಯ' ಎಂಬ ಬಸವಣ್ಣನ ವಚನದಂತೆ ಅದೇ ಸುಟ್ಟ ಬೂದಿಯನ್ನೇ ಬಿತ್ತಿ ಫಲವತ್ತಾದ ಫಸಲು ಪಡೆದುದನ್ನು ಕಂಡು ಕೋಪಗೊಂಡರು."[೬]

ಬಸವಣ್ಣನವರು ಮಾಡಿದ ಅಂತರ್ಜಾತಿ ವಿವಾಹವು ಕಲ್ಯಾಣ ಕ್ರಾಂತಿಗೆ ನಾಂದಿ ಹಾಡಿತು. ಅದೇ ರೀತಿ ಕೇತಯ್ಯನು ಕೂಡ ಅಪರೂಪವೆಂದು ಹೇಳಬಹುದಾದ ವಿವಾಹಕ್ಕೆ ಕಾರಣನಾದನು. ವ್ರತಾಚರಣೆ, ಶೀಲ ಸಂಬಂಧ ನಡವಳಿಕೆ, ಅನುಸರಿಸುವರೊಡನೆ ನೆಂಟಸ್ತಿಕೆ ಬೆಳೆಸಬೇಕೆಂಬ ಬಯಕೆ ಆತನದು. ಆದರೆ ತಮ್ಮ ಶೀಲ-ವ್ರತ-ಆಚರಣೆಗಳಿಗೆ ಸಮಶೀಲರು ಯಾರೂ ದೊರೆಯ ದಿದ್ದಾಗ, ಸ್ವಂತ ಮಕ್ಕಳಾದ ಶಿವಲಿಂಗಯ್ಯ-ಶಿವಲಿಂಗಮ್ಮ(ಅಣ್ಣ-ತಂಗಿ)ರ ವಿವಾಹ ಮಾಡಿಸುವನು. ಬಾಹ್ಯಲೋಕದಲ್ಲಿ ಇವರೀರ್ವರು ಅಣ್ಣತಂಗಿಯರಾದರೂ ಅಂತರಂಗದಲ್ಲಿ ಶಿವಭಕ್ತರಾಗಿದ್ದಾರೆ. ಅಲ್ಲಿ ಸಂಬಂಧಗಳಿಗೆ ಬೆಲೆ ಇಲ್ಲ ಎಂದು ಕೇತಯ್ಯ ಅಂದುಕೊಂಡಿರಬೇಕು. ಆದರೆ ಇಂತಹ ನಿಯಮಬಾಹಿರ, ಅನುಚಿತ ವಿವಾಹವನ್ನು ಅನೀತಿಯೆಂದು, ಈ ವಿವಾಹ ಊರ್ಜಿತವಲ್ಲವೆಂದು ಗ್ರಾಮಸ್ಥರು ನಿರ್ಧರಿಸುವರು. ಇದರಿಂದ ಗ್ರಾಮಕ್ಕೆ ಪ್ರಾಕೃತಿಕ ವಿಕೋಪಗಳು ಎದುರಾಗುವ ಸಾಧ್ಯತೆಯಿದೆ ಎಂದ ಕೇತಯ್ಯನನ್ನು ಗ್ರಾಮದಿಂದ ಬಹಿಷ್ಕರಿಸಿ ಹೊರಗಟ್ಟಿದರು. ಗ್ರಾಮದಲ್ಲಿ, ಅಣ್ಣ ತಂಗಿಯರ ಮದುವೆ ಮಾಡಿ ಊರಿಂದ ಬಹಿಷ್ಕೃತನಾದ ಕೇತಯ್ಯನ ಆರಾಧ್ಯ ದೇಗುಲವನ್ನು ಧ್ವಂಸ ಮಾಡಿದ್ದಾರೆಂದು ತಿಳಿದುಬರುತ್ತದೆ. ಅದಕ್ಕೆ ಸಾಕ್ಷಿಯೆಂಬತೆ ಅಲ್ಲಿನ ದೇಗುಲದ ಒಂದೊಂದು ಶಿಲೆಗಳು, ಕಂಬಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ.

"ಇಂತಹ ಅಪರೂಪದ ವ್ಯಕ್ತಿತ್ವ ಹೊಂದಿದ ಕ್ರಾಂತಿಕಾರಿ ಕೇತಯ್ಯನು 'ಏಲೇಶ್ವರ ಲಿಂಗ' ಅಂಕಿತದಿಂದ ಬರೆದ ೭೪ ವಚನಗಳು ದೊರಕಿವೆ. ಈತನ ಬಹುತೇಕ ಎಲ್ಲ ವಚನಗಳು ಶೀಲ-ವ್ರತ-ಆಚರಣೆಗಳಿಗೆ ಸಂಬಂಧಿಸಿವೆ. ಶೀಲಗಳು ಭಕ್ತನಿಗೆ ವಿಧಿಸಿರುವ ಸಂಹಿತೆಯೂ ಆಗಿದೆ. ೭೪ ಶೀಲಗಳನ್ನು ರೂಢಿಸಿಕೊಂಡಿರುವವರು ಕೊಂಡಗುಳಿ ಕೇಶರಾಜ, ಪಾಲ್ಕುರಿಕೆ ಸೋಮನಾಥ, ಏಲೇಶ್ವರ ಕೇತಯ್ಯ ಮುಂತಾದವರಿದ್ದಾರೆ. ಅವರ ಒಂದು ವಚನ ಈ ಕೆಳಗಿನಂತಿದೆ."[೭]

'ಹೊನ್ನು ಮಣ್ಣಿಗಾಗಿ ವ್ರತವೆಂಬ ನೇಮವ ಮಾಡಿಕೊಳ್ಳಬಹುದೆ?
ಕೂಲಿಗೆ ಬಳಿನೀರ ಕುಡಿದರೆ ಆದಾರ ಮುಟ್ಟುವುದ?
ವಾಸಿಗೆ ಮೂಗನರಿದುಕೊಂಡಡೆ ನಾಚಿಕೆ ಯಾರಿಗೆಂಬುದನರಿದ?'.

ಈತನು ಬಸವಣ್ಣನ ಸಮಕಾಲೀನನೋ ಅಥವಾ ಸ್ವಲ್ಪ ತದನಂತರದವನೋ ಆಗಿರಬೇಕು. ಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಆಯ್ದಕ್ಕಿ ಮಾರಯ್ಯನಂತಹ ಶರಣರ ಹೆಸರನ್ನು ವಚನಗಳಲ್ಲಿ ಪ್ರಸ್ತಾಪಿಸಿದ್ದಾನೆ. ಅವು ಈಗಿವೆ.

"ಬಸವೇಶ್ವರಂಗೆ ಸರ್ವಗುಣಶೀಲ.
ಚೆನ್ನಬಸವಣ್ಣಂಗೆ ದಿವ್ಯಜ್ಞಾನ ಗುಣ ಶೀಲ.
ಪ್ರಭುದೇವರಿಗೆ ಬಸವಣ್ಣ ಚೆನ್ನಬಸವಣ್ಣ ಉಭಯ ಗುಣಶೀಲ.
ಮಡಿವಾಳಯ್ಯಂಗೆ ವೀರಗುಣಶೀಲ.
ಅಜಗಣ್ಣನಿಗೆ ಐಕ್ಯ ಗುಣ ಶೀಲ.
ಸಿದ್ಧರಾಮಯ್ಯಂಗೆ ಯೋಗಗುಣ ಶೀಲ.
ನಿಜಗುಣಂಗೆ ಆತ್ಮ ಗುಣ ಶೀಲ.
ಚಂದಯ್ಯಂಗೆ ವೈರಾಗ್ಯ ಗುಣಶೀಲ.
ಘಟ್ಟಿವಾಳಂಗೆ ತ್ರಿವಿಧಗುಣಶೀಲ, ಮೋಳಿಗೆಯ್ಯಂಗೆ ಭೇದಗುಣ ಶೀಲ.
ಅಕ್ಕಳಿಗೆ ನಿರ್ವಾಣಗುಣ ಶೀಲ.
ಮಿಕ್ಕಾದ ಪ್ರಮಥರಿಗೆಲ್ಲಕ್ಕೂ ಸ್ವತಂತ್ರ ಗುಣ ಶೀಲ.
ಎನಗೆ ಏಲೇಶ್ವರಲಿಂಗವು ಕೊಟ್ಟುದೊಂದೆ ವಿಶ್ವಾಸ ಗುಣಶೀಲ"[೮]

**ರೆಮ್ಮವ್ವೆ:** (ಅಕ್ಕಮ್ಮ) ಕೂಡ ಏಲ್ಲೇರಿಯವಳೇ ಆಗಿರಬೇಕೆಂದು ಬಹುವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅಕ್ಕಮ್ಮ ತನ್ನ ವಚನದಲ್ಲಿ 'ಏಲೇಶ್ವರ' ಎಂದು ಬಳಸಿರುವಳು. ಹೀಗಾಗಿ ಏಲ್ಲೇರಿ ಗ್ರಾಮದ ರೆಮ್ಮವ್ವೆಯೇ ಅಕ್ಕಮ್ಮಳೆಂದು ಹೇಳಬಹುದಾಗಿದೆ. ಈಕೆ 'ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ' ಅಂಕಿತದಿಂದ ವಚನಗಳನ್ನು ಬರೆದಿದ್ದಾಳೆ. ಕನ್ನಡಿ ಕಾಯಕದ ರೆಮ್ಮವ್ವೆ, ಕದಿರೆ ರೆಮ್ಮವ್ವೆ, ಕೃಷಿ ಕಾಯಕದ ರೆಮ್ಮವ್ವೆ ಇವರೆಲ್ಲ ಅಕ್ಕಮ್ಮನಿಗಿಂತ ಬಿನ್ನರು. ಅಕ್ಕಮ್ಮನ ವಚನಗಳಲ್ಲಿ ಹೆಚ್ಚಾಗಿ ಮಹೇಶ್ವರ ಸ್ಥಳದ ನಿಷ್ಠೆಯನ್ನು ಪ್ರಕಟಿಸುತ್ತದೆ ಎಂದು ಆರ್.ಸಿ. ಹಿರೇಮಠ ಅವರ ಅಭಿಮತ.

ಈಕೆಯ ಬದುಕಿನ ವಿವರಗಳು ಈವರೆಗೆ ಲಭ್ಯವಿರುವುದಿಲ್ಲ. ಆದರೆ ವಚನಗಳ ಅಧ್ಯಯನದಿಂದ ಈಕೆಯ ವ್ಯಕ್ತಿತ್ವ ಜೀವನ ಅರಿಯಬಹುದಾಗಿದೆ. ಕೇತಯ್ಯನಂತೆ ಇವಳೂ ಕೂಡ ವ್ರತ, ಆಚಾರ, ನಿಷ್ಠೆ, ಭಕ್ತಿಗೆ ಸಂಬಂಧಿಸಿದಂತೆ ಬರೆದಿದ್ದಾಳೆ. ಸಮಾಜದಲ್ಲಿ ಆಳವಾಗಿ ಬೇರೂರಿದ್ದ ಮೌಢ್ಯತೆಯನ್ನು, ಅರ್ಥಹೀನ ಸಂಪ್ರದಾಯಗಳನ್ನು ಅಕ್ಕಮ್ಮ ತನ್ನ ವಚನಗಳಲ್ಲಿ ಟೀಕಿಸಿದ್ದಾಳೆ. ಬಾಹ್ಯದಲ್ಲಿ ಮಾಡುವ ಆಚರಣೆಗಳು ವ್ರತ ಎನಿಸಿಕೊಳ್ಳುವುದಿಲ್ಲ. ವ್ರತ ಅಂತರಂಗ ದಲ್ಲಿರಬೇಕು, ಬಹಿರಂಗದಲ್ಲಿ ಆಚಾರವಿರಬೇಕೆಂದು ಹೇಳುತ್ತಾಳೆ. ವ್ರತಾಚರಣೆ ಇಚ್ಛಾಪೂರ್ವಕ

ವಾಗಿರಬೇಕೇ ವಿನಾ ಒತ್ತಾಯಪೂರ್ವಕವಾಗಿ ಆಗುವಂಥದಲ್ಲ. ಒಲವಿಲ್ಲದ ಭಕ್ತಿಯ ಆಚರಣೆ, ಛಲವಿಲ್ಲದ ನಿಷ್ಠೆ ವ್ಯರ್ಥ ಎನ್ನುತ್ತಾಳೆ.

"ದುಷ್ಟರಿಗಂಜಿ ಕಟ್ಟಿಕೊಳ್ಳಬಹುದೆ ಕಡ್ಡಾಯದ ವ್ರತವ?
ಆ ವ್ರತದ ವಿಚಾರವೆಂತೆಂದಡೆ
ಅಲಗಿನ ತುಪ್ಪದ ಸವಿಗೆ ಲಲ್ಲೆಯಿಂದ ನಕ್ಕಿದಡೆ,
ಅಲಗಿನ ಧಾರೆ ನಾಲಗೆಯ ತಾಗಿ, ಆ ಜೀವ ಹಲುಬುವ ತೆರದಂತೆ.
ಒಲವರವಿಲ್ಲದ ಭಕ್ತಿ, ಛಲವಿಲ್ಲದ ನಿಷ್ಠೆ.
ಎಲವದ ಮರನ ಕಾಯ್ದ ವಿಹಂಗನಂತೆ.
ಇಂತೀ ಸಲೆ ನೆಲೆಯನರಿಯದವನ ವ್ರತಾಚಾರ
ಕೊಲೆ ಹೊಲೆ ಸೂತಕಕ್ಕೆ ಒಡಲಾಯಿತ್ತು.
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಹೊರಗಾದ ನೇಮ."[೯೯]

"ಅಕ್ಕಮ್ಮಳ ಪ್ರಕಾರ ೬೪ ಶೀಲ, ೫೬ ನೇಮ, ೩೨ ಕೃತಿಗಳಿವೆ.
ಅರವತ್ತು ನಾಲ್ಕು ಶೀಲ, ಐವತ್ತಾರು ನೇಮ, ಮೂವತ್ತೆರಡು ಕೃತಿ,
ಇಂತಿವು ಕಟ್ಟಳೆಗೊಳಗಾದವು.
ಮಿಕ್ಕಾದ ಪ್ರಮಥರೆಲ್ಲರು ಸ್ವತಂತ್ರಶೀಲರು.
ಅಣುವಿಂಗಣು, ಘನಕ್ಕೆ ಘನ, ಮಹತ್ತಿಗೆ ಮಹತ್ತಪ್ಪ ಘನಶೀಲರುಂಟು.
ಆರಾರ ಅನುವಿನಲ್ಲಿ ಅನುವ ಅನುಕರಿಸಿ,
ಆರಾರ ಭಾವದಲ್ಲಿ ಬಂಧಿತನಾಗಿ ಸಿಕ್ಕಿದೆಯಲ್ಲಾ, ಆಚಾರವೆ ಪ್ರಾಣವಾದ ರಾಮೇಶ್ವರ
ಲಿಂಗವೆ?"[೧೦೦]

ಒಟ್ಟಿನಲ್ಲಿ, ಯಾದಗಿರಿ ಜಿಲ್ಲೆಯ ಸಮಕಾಲೀನ ಸಾಮಾಜಿಕ ಚಳುವಳಿಗಳಿಗೆ ಹಿನ್ನೆಲೆಯಾಗಿ ಬಸವ ಪೂರ್ವ ಕಾಲದಲ್ಲಿ ಜನರು ಮತ್ತು ಶರಣರು ಸಂಘಟಿತರಾಗಿ ಊಳಿಗಮಾನ್ಯರ ಮತ್ತು ಪುರೋಹಿತರ ವಿರುದ್ಧ ಪ್ರತಿರೋಧ ವ್ಯಕ್ತಪಡಿಸಿದರು. "ಇವರಲ್ಲಿ ಕೆಂಬಾವಿ ಭೋಗಣ್ಣ, ಏಲ್ಹೇರಿ ಕೇತಯ್ಯ ಮತ್ತು ಏಲ್ಹೇರಿ ಅಕ್ಕಮ್ಮ ಅವರು ಮುಖ್ಯ ಪಾತ್ರವಹಿಸಿದ್ದಾರೆ."[೧೦೧] ೧೨ನೇ ಶತಮಾನದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಸಮಾನತೆ ಹಾಗೂ ಸಾಮರಸ್ಯಕ್ಕಾಗಿ ಬಸವಣ್ಣ ಕಲ್ಯಾಣದಲ್ಲಿ ನಡೆಸಿದ ಕ್ರಾಂತಿಯು ಕರ್ನಾಟಕದ ಇತಿಹಾಸದಲ್ಲಿ ಹಾಗೂ ಮಾನವ ಇತಿಹಾಸದಲ್ಲಿ ಒಂದು ಮಹತ್ವದ ಮೈಲಿಗಲ್ಲು. ಏಕೆಂದರೆ ೮೦೦ ವರ್ಷಗಳ ಹಿಂದೆಯೇ ಸ್ವಾತಂತ್ರ್ಯ, ಸಮಾನತೆ, ವಿಶ್ವ ಬಾಂಧವ್ಯದಂತಹ ಆದರ್ಶಗಳನ್ನು ಬಸವಣ್ಣನ ತತ್ವಗಳು ಒಳಗೊಂಡಿದ್ದವು. "ಸ್ವರ್ಗ ನರಕಗಳನ್ನು ಅಲ್ಲಗಳೆದು, ಬಹುದೈವತ್ವ ಹಾಗೂ ಮೂರ್ತಿಪೂಜೆಯನ್ನು ತಿರಸ್ಕರಿಸಿ, ಆಚಾರ ವಿಚಾರಗಳಿಗೆ ಪ್ರಾಧಾನ್ಯತೆ ನೀಡಿ ಕಾಯಕವೇ ಕೈಲಾಸವೆಂದು ಸಾರಿ ಲಿಂಗಭೇದ, ವರ್ಗಭೇದ, ಜಾತಿಭೇದಗಳನ್ನು ತಿರಸ್ಕರಿಸಿದ ಬಸವಣ್ಣ ಧಾರ್ಮಿಕ ಸಾಮಾಜಿಕ ಸಮಾನತೆಯ ಮೇಲೆ ಹೊಸ ಸಮಾಜವನ್ನು ಕಟ್ಟಬಯಸಿದ್ದನು. ಜಡವಾಗಿದ್ದ ಸಮಾಜವನ್ನು ಜಾಗೃತಗೊಳಿಸಿ, ನಾನಾ ಚಟುವಟಿಕೆಗಳಿಗೆ ಒಳಪಡಿಸಿ ಹೊಸ ದೃಷ್ಟಿಕೋನದಿಂದ ಹೊಸ ವಿಚಾರಗಳಿಂದ ಜೀವನದ ಸ್ವರೂಪವನ್ನೇ

ರೂಪಾಂತರಿಸಿದ ಹಂತ ಇದಾಗಿದೆ. ವಚನ ಚಳುವಳಿಯ ಪ್ರಭಾವದಿಂದಾಗಿ ಹೊಸ ತತ್ವಗಳು ಹಾಗೂ ಚಿಂತನೆಯ ಮೂಲಕ ಬದುಕಿನ ಸ್ವರೂಪ ಇಲ್ಲಿ ಹೊಸ ರೂಪ ಪಡೆಯಿತು. ಹೀಗಾಗಿಯೇ ಹನ್ನೆರಡನೆಯ ಶತಮಾನದ ಶರಣರ ಚಳುವಳಿಯಲ್ಲಿ ದಲಿತ ಚಳುವಳಿಯ ಬೇರುಗಳನ್ನು ಬಂಡಾಯದವರು ಗುರುತಿಸಿದರೆ, ಭಾಷೆ ಈ ಹಂತದಲ್ಲಿ ಹೊಸ ಆಯಾಮ ಪಡೆದುದನ್ನು ಸಾಹಿತ್ಯದ ವಿದ್ಯಾರ್ಥಿಗಳು ಗಮನಿಸುತ್ತಾರೆ. ಹಾಗೆಯೇ ಸಮಾಜಶಾಸ್ತ್ರಜ್ಞರು ಧರ್ಮ ಹಾಗೂ ಆರ್ಥಿಕತೆಯ ನಡುವೆ ಇರುವ ಸಂಬಂಧದ ಎಳೆಗಳನ್ನು ಜೋಡಿಸುವ ಯತ್ನ ಮಾಡುತ್ತಾರೆ. ಇನ್ನು ಕೆಲವರು ಇದನ್ನು ಶ್ರಮಿಕರ ಹೋರಾಟವೆಂದೂ ಅಭಿಪ್ರಾಯ ಪಡುತ್ತಾರೆ. ಕಾಯಕಜೀವಿಗಳ ಹೋರಾಟದಲ್ಲಿ 'ಕಾಯಕವೇ ಕೈಲಾಸ' ಎಂದು ಘೋಷಿಸ ಲಾಯಿತು."[೧೨] ಹೀಗೆ ೧೨ನೇ ಶತಮಾನ ಕನ್ನಡಿಗರ ಬದುಕಿನಲ್ಲಿ ಬಹುರೂಪಿ ಪ್ರಭಾವ ಬೀರಿದೆ.

"ಕ್ರಿ.ಶ. ೧೨ನೇ ಶತಮಾನದಲ್ಲಿ ಬಸವಣ್ಣ ಆರಂಭಿಸಿದ ವಚನ ಚಳುವಳಿಯ ಮತ್ತೊಂದು ವಿಶೇಷವೆಂದರೆ ಹಿಂದೆಂದೂ ನಡೆಯದಿದ್ದ ಸಮಾಜದ ಎಲ್ಲ ಸ್ತರಗಳ ಜನರನ್ನು ಒಳಗೊಂಡ ಚಳುವಳಿಯಾಗಿದೆ. ವಚನ ಚಳುವಳಿಯಲ್ಲಿ ಸಂಶೋಧಕರು ಗುರುತಿಸಬೇಕಾದ ವಿಶೇಷ ಅಂಶವೆಂದರೆ ಅದು ಕೇವಲ ಮೇಲ್ವರ್ಗದವರ ವಚನಗಳನ್ನು ಮಾತ್ರ ಒಳಗೊಂಡಿಲ್ಲ. ಅಲ್ಲಿ ಹಲವು ದಲಿತ ವಚನಕಾರರ ಅಂತರಾಳದ ಭಾವನೆಗಳು ಕಂಡುಬರುತ್ತವೆ. ಏಕೆಂದರೆ ದಲಿತರಿಗೆ ದನಿ ಕೊಟ್ಟ ಸಂದರ್ಭ ಇದಾಗಿದೆ. ದಲಿತರು, ಶೋಷಿತರು, ಕೆಳವರ್ಗದವರು ಮೊದಲ ಬಾರಿಗೆ ಸಾಹಿತ್ಯದ ಮುಖಾಂತರ ಮಾತನಾಡಿದ್ದು ಇದೇ ಸಂದರ್ಭದಲ್ಲಿ. ಕನ್ನಡ ಸಾಹಿತ್ಯವು ಪಂಡಿತರ ಕಪಿಮುಷ್ಟಿ ಯಿಂದ ಪಾರಾಗಿ ಅರಮನೆಯಿಂದ ಹೊರಬಂದು ಸಹಜವಾಗಿ ಉಸಿರಾಡಿದ್ದು, ಹಾಗೂ ನೆಲದ ಮಾತಿನಲ್ಲಿ ನಳನಳಿಸಿದ್ದು ವಚನಕಾರರಲ್ಲಿ. ಜಾತಿ ಮತಪಂಥಗಳನ್ನು ಬಿಟ್ಟು, ದೇಶ-ಭಾಷೆ ವಯಸ್ಸುಗಳ ಅಂತರವನ್ನು ಮರೆತು, ಮೇಲುಕೀಳೆಂಬ ತಾರತಮ್ಯವನ್ನಳಿದು, ಸಾಮಾನ್ಯ ಜನತೆ ಮೊದಲ ಬಾರಿಗೆ ತಮ್ಮನ್ನು ಸಾಹಿತ್ಯದಲ್ಲಿ ತೊಡಗಿಸಿಕೊಂಡು ಸಾರ್ವಕಾಲಿಕ ಮೌಲ್ಯದ ಸಾಹಿತ್ಯವನ್ನು ಕೊಟ್ಟದ್ದು ಗಮನಿಸಬೇಕಾದ ಸಂಗತಿಯಾಗಿದೆ."[೧೩] ಹೀಗಾಗಿ ವಚನ ಚಳುವಳಿಯನ್ನು ನಮ್ಮ ದೇಶದ ಮೊಟ್ಟ ಮೊದಲ ಜನತಾ ಚಳುವಳಿ ಎಂದು ಕರೆಯುತ್ತಾರೆ.

೧೨ನೇ ಶತಮಾನದ ಸಮಾಜ ವ್ಯವಸ್ಥೆಯು ಶತಮಾನಗಳಿಂದ ಒಪ್ಪಿಕೊಂಡು ಬಂದಿದ್ದ ಮೌಲ್ಯಗಳನ್ನು ಪ್ರಶ್ನಿಸುವುದರ ಮೂಲಕ ವಚನಕಾರರ ಸಮಾಜ ಸುಧಾರಣಾ ಚಳುವಳಿ ಪ್ರಾರಂಭ ವಾಗುತ್ತದೆ. ಹಾಗೆಯೇ ಅವರು ತಮ್ಮ ಸಮಕಾಲೀನ ವ್ಯವಸ್ಥೆಯ ಹಿಂದಿರುವುದನ್ನು ಅಧ್ಯಯನ ಮಾಡುವುದರೊಂದಿಗೆ, ಚರ್ಚಾ ಗೋಷ್ಠಿಗಳ ಮೂಲಕ ಹೊಸ ವಿಚಾರವನ್ನು ಅವರು ಹುಟ್ಟು ಹಾಕಿದ್ದಾರೆ.

ಉದಾಹರಣೆಗೆ,

"ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ.
ಕೂಡಲಸಂಗಮದೇವಾ ಎನಗಿದೇ ದಿಬ್ಯ"[೧೪]

– ಬಸವಣ್ಣ

“ಕೆಂಡಕೆಟ್ಟು ಕೆಂಡವಾಗಬಲ್ಲುದಲ್ಲದೆ ಬೂದಿಯಾಗಿ ಬೂದಿ ಹೊತ್ತಬಲ್ಲುದೆ
ಸೂತಕ–ಸೂತಕಕ್ಕೊಳಗಪ್ಪುದಲ್ಲದೆ, ಭಸ್ಮ ಮೇಲೆ ಕೆಂಡವೊಳಗಡಗುವುದಲ್ಲದೆ
ಕಾಷ್ಠ ಮೇಲೆ ಕೆಂಡವೊಳಗಡಗಿದುದುಂಟೆ
ಅರಿದ ಅರಿವು ಮರವಿಂಗಪ್ಪುದೆ.”[೧೫]

– ಮಾದಾರ ಧೂಳಯ್ಯ

“ಕಿರಿಯರಾದರೇನು ಹಿರಿಯರಾದರೇನು,
ಅರಿವಿಗೆ ಹಿರಿದು ಕಿರಿದುಂಟೆ.”[೧೬]

– ಅಲ್ಲಮಪ್ರಭು

“ಬಸವಣ್ಣನಿಂದ ಸ್ಥಾಪಿಸಲ್ಪಟ್ಟ ‘ಅನುಭವ ಮಂಟಪ’ವು ನಾಲ್ಕು ಗೋಡೆಗಳ ಸಾಮಾನ್ಯ ಕಟ್ಟಡ ಮಾತ್ರವಾಗಿರಲಿಲ್ಲ. ಕೇವಲ ಕಲ್ಲು ಕಂಬಗಳಿಂದ ಇರುವ ಆಲಯವಲ್ಲ, ಅನುಭವಮಂಟಪ ಸ್ಥಾವರವಲ್ಲ, ಅದು ಜನಸಮುದಾಯದ ಚಾಲಕ ಶಕ್ತಿಯಂತಿತ್ತು. ಸಾಮಾನ್ಯ ಜನತೆ ಅನುಭವಗಳನ್ನು ವಚನಗಳ ಮೂಲಕ ಪ್ರಸಾರ ಮಾಡಿದ ಜನಸಮುದಾಯದ ಪ್ರಥಮ ಮಾಧ್ಯಮವಾಗಿತ್ತು. ಶೋಷಿತ ಜನರೆಲ್ಲ ಒಂದೆಡೆ ಕೂಡಿ, ಶತಮಾನಗಳ ಶೋಷಣೆಯ ವಿರುದ್ಧ ಬಂಡೆದ್ದ ಇತಿಹಾಸದ ಮೊದಲ ಪ್ರಯತ್ನವಾಗಿತ್ತು. ಅಲ್ಲಿ ಪ್ರಕಟಗೊಂಡಂಥ ಅನುಭವ ರಾಜನದು ಅಥವಾ ಪಂಡಿತನದಾಗಿರದೆ ಸಾಮಾನ್ಯ ಜನರದ್ದಾಗಿತ್ತು. ಹಾಗೆಯೇ ಅದು ಸುಖದ ಸುಪ್ಪತ್ತಿಗೆಯ ಅನುಭವದ್ದಲ್ಲ. ಬದಲಾಗಿ ಬದುಕಿನ ನೋವಿನ ಪರಿಚಯವಿತ್ತು. ಅನುಭವ, ಆಲೋಚನೆ, ಚರ್ಚೆಗಳಿಗೆ ಮುಕ್ತ ಅವಕಾಶವಿತ್ತು. ಹೀಗೆ ಅನುಭವ ಮಂಟಪ ವಚನಕಾರರ ಪ್ರಯೋಗ ಶಾಲೆಯಾಗಿತ್ತು. ಜಾತಿ, ವರ್ಗ, ವರ್ಣಭೇದ, ಕಾಯಕ ಭೇದವನ್ನು ತೊಡೆದು, ಶರಣ ಶರಣೆಯರೆಲ್ಲ ಒಟ್ಟಿಗೆ ಕಲೆತು ಮಾಡಿದ ವೈಚಾರಿಕ ಮಂಥನದಲ್ಲಿ ಹುಟ್ಟಿದ ನವನೀತವೇ ವಚನ ಸಾಹಿತ್ಯವಾಗಿತ್ತು.”[೧೭]

“೧೨ನೇ ಶತಮಾನದ ಚಳುವಳಿ ಮೇಲುನೋಟಕ್ಕೆ ಧಾರ್ಮಿಕ ಚಳುವಳಿಯಾಗಿ ಕಂಡರೂ ಇದು ಶೂದ್ರರ ಹಾಗೂ ದಲಿತರ ಹೋರಾಟವಾಗಿತ್ತು. ಕೆಳವರ್ಗದವರು ತಮ್ಮ ಉನ್ನತಿಗಾಗಿ ತಾವೇ ಕೈಗೊಂಡ ಆಂದೋಲನವಾಗಿತ್ತು.”[೧೮] ಬಸವಣ್ಣ ಕೇವಲ ಮೇಲ್ಜಾತಿಗಳ ಬದುಕಿನ ಶೈಲಿ ಮಾತ್ರವಲ್ಲ, ಕೆಳವರ್ಗದ ಜನರ ಚಿಂತನಾಶೈಲಿಯ ಸ್ವರೂಪದಲ್ಲೂ ಬದಲಾವಣೆ ತಂದರು. ಪ್ರಶ್ನೆ ಕೇಳುವುದೇ ಗೊತ್ತಿರದ ಅಂದಿನ ಜನಸಮುದಾಯಕ್ಕೆ ಪ್ರಶ್ನೆ ಕೇಳುವ ತಾಕತ್ತನ್ನು ವಚನಕಾರರು ತಂದುಕೊಟ್ಟರು. ಆತ್ಮಸ್ಥೈರ್ಯ ತುಂಬಲು ‘ನಾನು ಬ್ರಾಹ್ಮಣನಲ್ಲ, ಯಾರಾದರೂ ನನ್ನನ್ನು ಬ್ರಾಹ್ಮಣ ಎಂದರೆ ನನ್ನ ಆರಾಧ್ಯ ದೈವ ಕೂಡಲಸಂಗಮ ನಗುವನಯ್ಯ’ ಎಂದು ಹೇಳಿ ಕೆಳಜಾತಿಯ ಜನರಲ್ಲಿ ಆತ್ಮಸ್ಥೈರ್ಯ ತುಂಬಿದ ಕೀರ್ತಿ ಬಸವಣ್ಣನಿಗೆ ಸಲ್ಲುತ್ತದೆ. “ಜನನದಿಂದ ಉತ್ತಮಿಕೆ ಬರುವುದಿಲ್ಲ ಎಂದು ಹೇಳುತ್ತಲೇ ಜನನದಿಂದಲೆ ಜಾತಿ ಹಾಗೂ ಸ್ಥಾನ ನಿರ್ಧಾರವನ್ನು ಶರಣರು ನಿರಾಕರಿಸಿದರು. ತಳವರ್ಗದ ಜನರು ಚಳುವಳಿಗೆ ಗಾಂಭೀರ್ಯವನ್ನು, ಧೀಮಂತಿಕೆಯನ್ನು ತಂದುಕೊಟ್ಟರು. ಅಲ್ಲಮನಿಂದ ಸೂಳೆ ಸಂಕವ್ವೆಯವರೆಗೆ ಕೆಳಜಾತಿಯವರು ಇದ್ದರು. ಇವರು ತಮ್ಮ ಜನನ ಸೂತಕದಿಂದ ಮುಕ್ತರಾಗಿ ಹೊಸ ಜೀವನವನ್ನು ಮಾಡುವ ಆಸೆ ಹೊಂದಿದ್ದರು.

ಬಸವಣ್ಣ 'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದರೆ ಮಾದಾರ ಚೆನ್ನಯ್ಯ 'ಆಚಾರವೇ ಕುಲ, ಅನಾಚಾರವೇ ಹೊಲೆಯ' ಎಂದು ಹೇಳುತ್ತಾರೆ. 'ವಚನ ರಚಿಸಿದ ಪ್ರಥಮ ದಲಿತ ಮಹಿಳೆ ಕಾಳವ್ವೆ ಗೋಮಾಂಸ ತಿನ್ನುವುದು ಕೀಳು ಎನ್ನುವ ಕಲ್ಪನೆಯನ್ನು ಪ್ರಶ್ನಿಸುತ್ತಾಳೆ."[೧೯] ಅಂದರೆ ಸಂಸ್ಕೃತೀಕರಣವಾದ ನಿರಾಕರಣೆ ಇಲ್ಲಿ ಇರುವುದನ್ನು ಕಾಣಬಹುದು.

"ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಎಲ್ಲಾ ಸವಲತ್ತುಗಳಿಂದಲೂ ವಂಚಿತ ರಾಗಿದ್ದ ದಲಿತರ ಬದುಕು ಇದ್ದೂ ಸತ್ತಂತೆಯೇ ಇತ್ತು. ಬಸವಣ್ಣ ತನ್ನ ಸಾಮೂಹಿಕ ಚಳುವಳಿಯಲ್ಲಿ ಸಮಾನತೆ ತರುವುದರ ಮೂಲಕ ದಲಿತರಿಗೆ ಹೊಸ ಬದುಕು ಕಟ್ಟಿ ಕೊಟ್ಟ, ಸ್ಪರ್ಶದ ಸುಖ ಕೊಟ್ಟ, ದುಡಿಮೆಯ ಅವಕಾಶ ಕೊಟ್ಟ. ಅಪ್ಪನು ಮಾದಾರ ಚೆನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ಎಂದು ಹೇಳುವುದರ ಮೂಲಕ ಶೋಷಿತ ವರ್ಗಕ್ಕೆ ಪ್ರಥಮ ಸ್ಥಾನ ಕಲ್ಪಿಸಿಕೊಟ್ಟ. ಶತಮಾನಗಳಿಂದ ಮೂಕರಾಗಿದ್ದ ದಲಿತರಿಗೆ ದನಿ ಕೊಟ್ಟ."[೨೦] ಕೆಳವರ್ಗದವರು ಮಾತನಾಡುವುದೇ ಅಪರಾಧವಾಗಿದ್ದ ಅಂದಿನ ವ್ಯವಸ್ಥೆಯಲ್ಲಿ ದಲಿತರು ದುಡಿವ ವರ್ಗದವರು ಮೊಟ್ಟ ಮೊದಲು ಬಾಯಿ ತೆರೆದು, ದನಿಯೆತ್ತಿ ಮಾತನಾಡಿದ್ದು, ಚರ್ಚಿಸಿದ್ದು, ನಮಗಿಂದು ಬಹಳ ಮುಖ್ಯವಾಗುತ್ತವೆ. ಒಂದು ಸಮಾಜ ವ್ಯವಸ್ಥೆಯನ್ನು ಮತ್ತು ಅದರ ರಕ್ಷಕ ಶಕ್ತಿಗಳನ್ನು ವಿರೋಧಿಸಿ ಕ್ರಾಂತಿಕಾರಕವಾಗಿ ಮಾತನಾಡುವ ಹೆಚ್ಚು ಜನಸಾಮಾನ್ಯರಲ್ಲಿ ಮೂಡಿದ್ದು, ಬಸವಣ್ಣನ ನಿಜವಾದ ಸಾಧನೆಯಾಗುತ್ತದೆ.

ಪುರುಷರು ಮಹಿಳೆಯನ್ನು ಧಾರ್ಮಿಕ ಕ್ಷೇತ್ರದಿಂದ ದೂರವಿಟ್ಟಿದ್ದ ಸಮಯದಲ್ಲಿ, ವಚನಕಾರರು ಧಾರ್ಮಿಕ ಕ್ಷೇತ್ರದಲ್ಲಿ ಮಹಿಳೆಯರಿಗೆ ಪ್ರಧಾನ ಸ್ಥಾನ ಕೊಡುವುದರ ಮೂಲಕ ಅವಳನ್ನು ಸಮಾಜದ ಬಹುಮುಖಿಗೆ ತಂದರು. ಅಕ್ಕಮಹಾದೇವಿ ಒಬ್ಬ ಶಿವಶರಣೆಯಾಗಿದ್ದಳು, ವಿಭೂತಿ ರುದ್ರಾಕ್ಷಿ ಧರಿಸುತ್ತಿದ್ದಳು ಎನ್ನುವುದರ ಜೊತೆಗೆ ಆಕೆ ಅನುಭವ ಮಂಟಪದ ಅನಿವಾರ್ಯ ಅಂಗವಾಗಿದ್ದಳು ಎಂಬುದು ತುಂಬಾ ಮುಖ್ಯವಾಗುತ್ತದೆ. ಅಕ್ಕ ಇರಲಾರದೆ ಅನುಭವ ಮಂಟಪಕ್ಕೆ ಅಸ್ತಿತ್ವವೆಂಬುದಿಲ್ಲ ಎನ್ನುವಂತಾಯಿತು. ಹೀಗೆ ಧಾರ್ಮಿಕ ಕ್ಷೇತ್ರದಿಂದ ದೂರವಾಗಿದ್ದ ಮಹಿಳೆ ಅದೇ ಧಾರ್ಮಿಕ ಕ್ಷೇತ್ರಕ್ಕೆ ಅನಿವಾರ್ಯವಾಗಿರುವುದು ತುಂಬಾ ಮುಖ್ಯವಾಗುತ್ತದೆ. ಅದೇ ರೀತಿ ಗಂಡು ಹೆಣ್ಣೆಂಬ ಭೇದವನ್ನು ತೊಡೆದು ಸಮಾನತೆಯನ್ನು ಒತ್ತಿ ಹೇಳಿದ ಕಾಳವ್ವೆ, ಗೊಗ್ಗವ್ವೆ, ಸೂಳೆ ಸಂಕವ್ವೆ ಮುಂತಾದ ವಚನಕಾರ್ತಿಯರು ಸಾಮಾಜಿಕ ಸಿದ್ಧಾಂತಗಳನ್ನು ಹುಟ್ಟು ಹಾಕಿದ ಹರಿಕಾರರಾಗಿದ್ದಾರೆ. ಮೋಳಿಗೆ ಮಹಾದೇವಮ್ಮ ಮಹಾರಾಣಿಯಾಗಿದ್ದವಳು. "ವಚನ ಸಂಸ್ಕೃತಿಗೆ ಮಾರು ಹೋಗಿ ಗಂಡ ಹೆಂಡತಿಯರಿಬ್ಬರೂ ಪ್ರಭುತ್ವವನ್ನು ತ್ಯಜಿಸಿ ಕಲ್ಯಾಣಕ್ಕೆ ಬಂದವರು. ಕಲ್ಯಾಣದಲ್ಲಿ ಗಂಡನ ಜೊತೆ ಈಕೆ ಕಟ್ಟಿಗೆ ಮಾರುವ ಕಾಯಕದಲ್ಲಿ ತೊಡಗಿದಳು. ವೈರಾಗ್ಯ ಹಾಗೂ ಸನ್ಯಾಸ ಜೀವನ ಪುರುಷರಿಗೆ ಮಾತ್ರ ಮೀಸಲಾಗಿದ್ದ ಕಾಲದಲ್ಲಿ ಅಕ್ಕಮಹಾದೇವಿಯು ಸಂಸಾರ, ಗಂಡ, ಕುಟುಂಬವನ್ನು ತ್ಯಜಿಸಿ ಕೇಶಾಂಬರೆಯಾಗಿ ಸಮಾಜ ಸುಧಾರಣೆಗೆ ಇಳಿದದ್ದು ಚಳುವಳಿಯ ಮಹತ್ವವನ್ನು ತೋರಿಸುತ್ತದೆ."[೨೧]

"ಅಕ್ಕಮಹಾದೇವಿ ಎರಡು ನೆಲೆಯಲ್ಲಿ ಹೋರಾಟ ನಡೆಸಿದಂತೆ ಕಾಣುತ್ತದೆ. ಶಿವಶರಣೆಯಾಗಿ ವಚನ ಸಂಸ್ಕೃತಿಯ ನೆಲೆಯಲ್ಲಿ ಆಕೆಯದು ಸಾಂಪ್ರದಾಯಿಕತೆ ಮೀರುವುದು ಒಂದು ನೆಲೆಯ

ಹೋರಾಟವಾದರೆ, ಆಕೆ ಹೆಣ್ಣಾಗಿ ನಡೆಸಿದ ಹೋರಾಟದ ನೆಲೆ ಬೇರೊಂದು. ಹೆಣ್ಣಾಗಿ ಆಕೆ ಎದುರಿಸಿದ ತಾರತಮ್ಯ, ಲಿಂಗಸಂಬಂಧಿ ಆಕ್ರಮಣ, ಲೈಂಗಿಕವಾದ ದಬ್ಬಾಳಿಕೆಯ ವಿರುದ್ಧ ತನ್ನ ವಚನಗಳಲ್ಲಿ ಧ್ವನಿ ಎತ್ತಿದ್ದಾಳೆ. ಉದಾಹರಣೆಗೆ ಮಹಾದೇವಿಯ ರೂಪಕ್ಕೆ ಮರುಳಾಗಿ, ಆಕೆಯ ಮೇಲೆ ಲೈಂಗಿಕ ಆಕ್ರಮಣ ಮಾಡಿದ ಕಿನ್ನರಿ ಬೊಮ್ಮಯ್ಯ ಕೊನೆಗೆ ಆಕೆಯ ಸಿದ್ಧಿ ಸಾಧನೆಗಳ ಅರಿವಾಗಿ ಮರುಗುತ್ತಾನೆ. 'ಹುಲಿಯ ನೆಕ್ಕಿ ಬದುಕಿದೆನು' ಎಂದು ಉದ್ಗಾರ ತೆಗೆಯುತ್ತಾನೆ."[೨೨] ಅಕ್ಕಮಹಾದೇವಿ ಬಾಳಿ ಬದುಕಿದ್ದು, ಸಮಾಜ ಸುಧಾರಣಾ ಕಾರ್ಯದಲ್ಲಿ ತೊಡಗಿದ್ದು, ೮೦೦ ವರ್ಷಗಳ ಹಿಂದೆಯಾದರೂ, ತಮ್ಮ ವಚನಗಳ ಮೂಲಕ ಇಂದು ಸಹಾ ಆಕೆ ನಮ್ಮೊಡನಿದ್ದಾಳೆ ಮತ್ತು ಸ್ತ್ರೀ ಚಳುವಳಿಗಾರರ ಧ್ವನಿಯಲ್ಲಿ ಆಕೆ ಪ್ರತಿಧ್ವನಿಸುತ್ತಿದ್ದಾಳೆ. ವಚನಗಳ ಮೂಲಕ ನಮ್ಮ ಜೊತೆ ಹಾಗೂ ಸಮಾಜದ ಜೊತೆ ಮಾತನಾಡುತ್ತಿದ್ದಾಳೆ. ಮಹಿಳೆಯರಲ್ಲಿ ಅಜ್ಞಾನ, ಮೌಢ್ಯ, ಕೀಳರಿಮೆ ಮೊದಲಾದುವನ್ನು ಹೋಗಲಾಡಿಸಿ ಸ್ವಾವಲಂಬನೆ ಮತ್ತು ಸಮಾನತೆಯನ್ನು ತಂದುಕೊಟ್ಟಿದ್ದು ಅವರ ಮಹತ್ತರ ಸಾಧನೆಯಾಗಿದೆ. ಅದು ಇಂದಿಗೂ ಪ್ರಸ್ತುತ. ಇಂದು ಕರ್ನಾಟಕದಲ್ಲಿ ಆರಂಭವಾಗಿರುವ ಸ್ತ್ರೀ ಶಕ್ತಿ ಕಾರ್ಯಕ್ರಮಗಳಿಗೆ ಬಸವಣ್ಣನ ಸಮಾನತೆಯ ಮತ್ತು ಕಾಯಕದ ವಿಚಾರಗಳೇ ಸ್ಫೂರ್ತಿದಾಯಕವಾಗಿವೆ ಎನ್ನಬಹುದು.

ಬಸವಣ್ಣ ಸಾಮಾಜಿಕ ಬೆಳವಣಿಗೆಗಾಗಿ ರೂಪಿಸಿದ ಮತ್ತೊಂದು ಕಾರ್ಯಕ್ರಮ ದಾಸೋಹ. ಆ ಮೂಲಕ ಶೈಕ್ಷಣಿಕ ಬೆಳವಣಿಗೆಗೆ ದಾರಿ ಮಾಡಿಕೊಟ್ಟರು. ಮೇಲಾಗಿ ಅಸಹಾಯಕ ವೃದ್ಧರು, ಮಹಿಳೆಯರು ಮತ್ತು ಮಕ್ಕಳು ನೆಮ್ಮದಿಯ ಜೀವನ ನಡೆಸಲು ಸಾಧ್ಯವಾಯಿತು. ಇಂದಿನ ವೃದ್ಧಾಶ್ರಮ ಪರಿಕಲ್ಪನೆಯ ಮೂಲವನ್ನು ಅಲ್ಲಿ ಕಾಣಬಹುದಾಗಿದೆ. ಬಸವಣ್ಣನ ಅನುಭವಮಂಟಪವು ವಚನಕಾರರ ಪ್ರಯೋಗಶಾಲೆಯಾಗಿತ್ತು. ಜಾತಿ, ವರ್ಗ, ವರ್ಣಭೇದ, ಕಾಯಕಭೇದ ತೊಡೆದು ಶರಣರೆಲ್ಲಾ ಒಟ್ಟಾಗಿ ಕಲೆತು ಮಾಡಿದ ವೈಚಾರಿಕ ಮಂಥನದ ಫಲವೇ ವಚನಗಳ ಸಾರವಾಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯೋಚಿಸುವುದಾದಲ್ಲಿ ಬಸವಣ್ಣನ ಕಾಯಕ ಆಧಾರಿತ ಸಾಮಾಜಿಕ ಸುಧಾರಣೆ ಭೂಒಡೆತನದ ವಿರೋಧಿಯಾಗಿದ್ದು ರೈತ ಸ್ವಾವಲಂಬನೆಯ ಪರವಾಗಿದ್ದಿತು. ಸಾಮಾಜಿಕ ದೂಷಣೆಗಳಲ್ಲೊಂದಾದ ಜಾತಿಪದ್ಧತಿಯನ್ನು ತೊಡೆದು ಹಾಕಲು ಪ್ರಾಮಾಣಿಕ ಪ್ರಯತ್ನ ನಡೆಸಿದರು. ಇಂತಹ ಮಹತ್ಕಾರ್ಯವನ್ನು ಇಂದಿನ ಸಂಘ-ಸಂಸ್ಥೆಗಳು, ಮಠ-ಮಾನ್ಯಗಳು, ರಾಜಕೀಯ ಪಕ್ಷಗಳು ಪ್ರಾಮಾಣಿಕವಾಗಿ ಮುಂದುವರಿಸಬೇಕಾದುದು ಪ್ರಸ್ತುತವಾಗಿದೆ.

ಯಾದಗಿರಿ ಜಿಲ್ಲೆಯ ಜನರು, ಸಮಾಜದ ಮೇಲೆ ಹಾಗೂ ಇಲ್ಲಿನ ಸಾಮಾಜಿಕ ಸುಧಾರಣೆಯಲ್ಲಿ ವಚನ ಚಳುವಳಿ ಎಷ್ಟರಮಟ್ಟಿಗೆ ಪ್ರಭಾವ ಬೀರಿದೆ ಎನ್ನುವುದನ್ನು ಹಾಗೂ ಬಸವಣ್ಣನ ತತ್ವಗಳು ಮತ್ತು ಚಿಂತನೆಗಳು ಇಂದು ಎಷ್ಟರಮಟ್ಟಿಗೆ ಅನುಸರಣೆಯಲ್ಲಿವೆ ಎಂದು ವಿಶ್ಲೇಷಿಸಿದರೆ, ಧನಾತ್ಮಕ ಮತ್ತು ಋಣಾತ್ಮಕ ಅಂಶಗಳು ಕಂಡುಬರುತ್ತವೆ. ಬಸವಣ್ಣನ ತತ್ವಗಳನ್ನು ಒಪ್ಪಿಕೊಂಡ ಕೆಲವು ಜನರು, ಸಂಘಟನೆಗಳು ಇಲ್ಲಿನ ಸಮಾಜ ಸುಧಾರಣೆಗೆ ಕಾರ್ಯೋನ್ಮುಖಿ ರಾಗಿದ್ದಾರೆ. ನಿಜಾಮನ ಆಳ್ವಿಕೆ ವಿರುದ್ಧ, ರಜಾಕಾರರ ದಬ್ಬಾಳಿಕೆಯ ವಿರುದ್ಧ ಹೋರಾಟ ಮಾಡಿದ ಪ್ರಮುಖರಲ್ಲಿ ಹೆಚ್ಚಾಗಿ ಬಸವಣ್ಣನ ತತ್ವಗಳನ್ನು ಒಪ್ಪಿಕೊಂಡಿದ್ದ, ಅನುಸರಿಸುತ್ತಿದ್ದ ವೀರಶೈವ ಸಂಗಡಗಳು, ಮಠಗಳು, ಆರ್ಯಸಮಾಜ ಪ್ರತಿಭಟನೆ ನಡೆಸಿದ್ದು ಕಂಡುಬರುತ್ತದೆ.

ವಚನ ಚಳುವಳಿಯ ಪ್ರಭಾವಕ್ಕೆ ಒಳಗಾಗಿದ್ದ ಯಾದಗಿರಿಯ ಜನರು ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಎಲ್ಲ ವರ್ಗದವರಿಗಾಗಿ ಗುರುಕುಲ ಎನ್ನುವ ರಾಷ್ಟ್ರೀಯ ಶಾಲೆಗಳನ್ನು ಸ್ಥಾಪಿಸಿ ರಾಷ್ಟ್ರಭಕ್ತಿಯನ್ನು ಸಾರುತ್ತಾ, ರಾಜಕೀಯ, ಸಾಮಾಜಿಕ ಸುಧಾರಣೆಗೆ ಪ್ರಯತ್ನಿಸಿದರು. ಹೈದರಾಬಾದ್ ವಿಮೋಚನಾ ಚಳುವಳಿಯಲ್ಲಿ ಬಸವಣ್ಣನ ತತ್ವಗಳ ಪರಿಪಾಲಕನಾಗಿದ್ದ ಯಾದಗಿರಿ ತಾಲೂಕಿನ ಕೂಳೂರು ಗ್ರಾಮದ ಮಲ್ಲಪ್ಪ ತಮ್ಮ ಗ್ರಾಮದ ಹಿಂದುಳಿದವರಿಗೆ ದಲಿತರಿಗೆ ದೇವಾಲಯದ ಪ್ರವೇಶ ಕೊಡಿಸಲು ಬಯಸಿ, ಗ್ರಾಮದ ಪ್ರಮುಖರನ್ನು ಎಲ್ಲಾ ಜಾತಿ ಧರ್ಮದ ಹಿರಿಯರನ್ನು ಮನವೊಲಿಸಿ, ಎಲ್ಲಾ ಗ್ರಾಮ ಪ್ರಮುಖರೊಂದಿಗೆ ದಲಿತರಿಗೆ ದೇವಸ್ಥಾನ, ಸಾರ್ವಜನಿಕ ಸ್ಥಳಗಳಲ್ಲಿ ಪ್ರವೇಶ ಮಾಡಿಸಿದ್ದು ಕ್ರಾಂತಿಕಾರಕ ಸಾಧನೆ ಎನ್ನಬಹುದು.

ಬಸವಣ್ಣನ ಚಿಂತನೆಗಳನ್ನು, ಕಾಯಕತತ್ವವನ್ನು, ವಚನ ಚಳುವಳಿಯ ಸಂದೇಶವನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಗುಲಬರ್ಗಾದ ಶ್ರೀ ಶರಣಬಸವೇಶ್ವರ ಸಂಸ್ಥಾನದ ಹಿಂದಿನ ಪೀಠಾಧಿಪತಿಗಳಾಗಿದ್ದ ಮಹಾದಾಸೋಹಿ ದೊಡ್ಡಪ್ಪ ಅಪ್ಪ ಮತ್ತು ಅವರ ಅನುಯಾಯಿಗಳು ಸ್ವಾತಂತ್ರ್ಯ ಸಂಗ್ರಾಮ ಹಾಗೂ ಕರ್ನಾಟಕ ಏಕೀಕರಣದ ಕೇಂದ್ರಬಿಂದುವಾಗಿದ್ದರು. ಅನಾಥರಿಗೆ, ಬಡವರಿಗೆ, ಹೆಣ್ಣು ಮಕ್ಕಳಿಗೆ, ಶಾಲೆಗಳನ್ನು ತೆರೆದು ಅನ್ನ, ಆಶ್ರಯದ ಜೊತೆಗೆ ಜ್ಞಾನ ದಾಸೋಹವನ್ನು ನೀಡಿದರು. ಜೋಳಿಗೆ ಭಿಕ್ಷೆಯಿಂದ ಬಂದ ಹಣ, ಧಾನ್ಯದಿಂದ ವಿದ್ಯಾರ್ಥಿಗಳಿಗೆ ಉಣಬಡಿಸಿದರು. ಈ ಮೂಲಕ ದಲಿತರ, ಮಹಿಳೆಯರ ವಿಮೋಚನಕಾರರಾಗಿ ಗುಲ್ಬರ್ಗಾವನ್ನು ಆಧ್ಯಾತ್ಮಿಕ ಕಲ್ಯಾಣವನ್ನಾಗಿಸಿದರು. ರಜಾಕಾರರ ಹಾವಳಿ ಸಂದರ್ಭದಲ್ಲಿ ಗುಬರ್ಗಾದ ಸುತ್ತಮುತ್ತಲಿನ ಜನರೆಲ್ಲಾ ತಮ್ಮ ಪ್ರಾಣ ರಕ್ಷಣೆಗೆ ಮನೆ, ಆಸ್ತಿ ಬಿಟ್ಟು ಬಂದಾಗ ಸುಮಾರು ಮೂವತ್ತು ನಲವತ್ತು ಸಾವಿರ ನಿರಾಶ್ರಿತರಿಗೆ ಜಾತಿ, ವರ್ಗ ಎಂದು ನೋಡದೆ ಅನ್ನ ಆಶ್ರಯದ ವ್ಯವಸ್ಥೆ ಮಾಡಿದರು. ಅದರಲ್ಲಿನ ಕೆಲ ಹುಡುಗರಿಗೆ ಮಠದಲ್ಲಿ ವಿದ್ಯಾರ್ಜನೆ ಆರಂಭಿಸಲು ಅವಕಾಶ ನೀಡಿದರು ಹಾಗೂ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಶ್ರೀ ಶರಣಬಸವೇಶ್ವರ ಸಂಸ್ಥಾನ ಕೇಂದ್ರ ತಾಣವಾಗಿತ್ತು.

ಬಸವಣ್ಣನ ತತ್ವಗಳ ಪರಿಪಾಲಕರಾಗಿರುವ ಅನೇಕ ಮಠಗಳು, ಸಂಸ್ಥೆಗಳು, ಈ ಜಿಲ್ಲೆಯಲ್ಲಿ ಅನಾಥರಿಗೆ ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ವಿದ್ಯಾ ದಾನ ಮಾಡುತ್ತಾ ಆಸರೆಯಾಗಿವೆ. ಶರಣ ಸಾಹಿತ್ಯ ಶಿವಾನುಭವ, ಮಹಾಮನೆ, ಅನುಭವಮಂಟಪ, ವಚನ ಪೀಠ ಸ್ಥಾಪನೆ, ವಚನಗಳನ್ನು ವಿವಿಧ ಭಾಷೆಗಳಿಗೆ ತರ್ಜುಮೆ, ಸಾಮೂಹಿಕ ವಿವಾಹಗಳು, ಲಿಂಗದೀಕ್ಷೆ, ಜಾತ್ರೆಗಳು, ಹರಿಕಥೆಗಳ ಮೂಲಕ ಎಲ್ಲಾ ವರ್ಗದ ಜಾತಿಯ ನಡುವೆ ಸಾಮರಸ್ಯ ತರಲು ಪ್ರಯತ್ನಿಸುತ್ತಿವೆ. ಇಲ್ಲಿ ಸ್ಥಾಪಿತವಾಗಿರುವ ವೀರಶೈವ ಶಿಕ್ಷಣ ಸಂಸ್ಥೆಗಳು, ಸಂಘಟನೆಗಳು ಶಿಕ್ಷಣದಿಂದ ವಂಚಿತವಾಗಿ ರುವ ನಿರ್ಲಕ್ಷಿತರಿಗೆ, ಕೆಳವರ್ಗದವರಿಗೆ ಶಿಕ್ಷಣದ ಅವಕಾಶ ಮಾಡಿಕೊಟ್ಟಿವೆ. ಸಮಾಜದ ಏಳಿಗೆಗೆ ಸಾಮರಸ್ಯಕ್ಕೆ ತಮ್ಮನ್ನು ತಾವು ತೊಡಗಿಸಿಕೊಂಡಿವೆ.

ಬಸವಣ್ಣನ ತತ್ವ ಸಿದ್ಧಾಂತಗಳನ್ನು ಇಂದಿನ ಸಮಾಜದಲ್ಲಿ ಜನರಾಗಲಿ, ಮಠಗಳಾಗಲಿ ಯಥಾವತ್ತಾಗಿ ಪಾಲಿಸುತ್ತಿರುವುದು ವಿರಳವಾಗಿದ್ದರೂ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ಕೆಲವು ತತ್ವಗಳನ್ನು ಪಾಲಿಸುವಷ್ಟರಮಟ್ಟಿಗೆ ಪ್ರಭಾವವನ್ನು ಕಾಣಬಹುದು. ಈ ನಿಟ್ಟಿನಲ್ಲಿ ವೀರಶೈವ

ವಿರಕ್ತಮಠಗಳಲ್ಲಿ ಸ್ವಲ್ಪ ಬದಲಾವಣೆ ಕಂಡುಬಂದಿದ್ದು, ಜಾತ್ಯಾತೀತವಾಗಿ ಅನ್ನ ಮತ್ತು ಜ್ಞಾನ ದಾಸೋಹದಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ, ಗುರುಮಠಕಲ್ ಶ್ರೀ ಗವಿಮಠ. ಇಲ್ಲಿ ಹಿಂದೂ, ದಲಿತ, ಮುಸ್ಲಿಂ ಹೀಗೆ ಎಲ್ಲಾ ವರ್ಗದ ಬಡ ವಿದ್ಯಾರ್ಥಿಗಳಿಗೆ ಉಚಿತ ಆಶ್ರಯ, ಊಟ, ಶಿಕ್ಷಣ ನೀಡುತ್ತಿದೆ. ಹೀಗೆ ಇನ್ನೂ ಅನೇಕ ಮಠಗಳು, ಸಂಸ್ಥೆಗಳ ಕಾರ್ಯದಲ್ಲಿ ವಚನ ಚಳುವಳಿಯ ಪ್ರಭಾವ ಎದ್ದು ಕಾಣುತ್ತದೆ.

ಆದರೆ ಇಂದು ಯಾದಗಿರಿ ಜಿಲ್ಲೆಯ ವಾಸ್ತವ ಪರಿಸ್ಥಿತಿಯನ್ನು ನೋಡಿದರೆ, ೧೨ನೇ ಶತಮಾನದಲ್ಲಿ ಸಾಮಾಜಿಕ ಧಾರ್ಮಿಕ ಕ್ರಾಂತಿಯಾಗಿದ್ದು, ಬಸವಣ್ಣ ಓಡಾಡಿದ್ದು ಇದೇ ನೆಲ ದಲ್ಲಿಯೇ ಎನ್ನುವ ಅನುಮಾನ ಮೂಡುತ್ತದೆ. ಏಕೆಂದರೆ ಜಾತೀಯತೆಯ ಅವಮಾನ, ಅಸ್ಥಿರತೆಯ ತಾಳಲಾರದೆ ಅತಿ ಹೆಚ್ಚು ದಲಿತರು, ಕ್ರೈಸ್ತ ಮತ್ತು ಬೌದ್ಧ ಧರ್ಮಗಳಿಗೆ ಮತಾಂತರ ವಾಗುತ್ತಿರುವುದು ಕಂಡುಬರುತ್ತದೆ. ಜಾತಿ ಸಂಘರ್ಷಗಳು ಆಗುತ್ತಿರುವುದು, ಮನುಷ್ಯ ಮನುಷ್ಯನನ್ನೇ ಕೀಳಾಗಿ ನೋಡುವ ನಡೆಸಿಕೊಳ್ಳುವ ಪದ್ಧತಿ ಇರುವುದು, ಬಸವಣ್ಣ ಜಾತೀಯತೆ, ಮಡಿವಂತಿಕೆ, ಅಸ್ಪೃಶ್ಯತೆ ವಿರೋಧಿಸಿ ವರ್ಗರಹಿತ ಜಾತಿರಹಿತ ಸಮಾಜದ ಕನಸು ಕಂಡಿದ್ದ. ಆದರೆ ಇಲ್ಲಿ ಇಂದು ಇವುಗಳನ್ನು ತೊಡೆದು ಹಾಕುವುದರ ಬದಲಾಗಿ ಧರ್ಮವೇ ಒಡೆದು ಹೋಗಿ ಅನೇಕ ಪಂಗಡಗಳಾಗಿರುವುದನ್ನು ಕಾಣಬಹುದಾಗಿದೆ. ಲಿಂಗಾಯತರಲ್ಲಿಯೇ ಪಂಚಾಚಾರ್ಯ, ಬಣಜಿಗ, ಸಾದರ, ಶಿವಸಂಪಿಗೆ, ಗಾಣಿಗ ಹೀಗೆ ಅನೇಕ ಪಂಗಡಗಳಾಗಿ ಒಡೆದು ಹೋಗಿವೆ. ಒಂದೊಂದು ಪಂಗಡದವರು ಇನ್ನೊಂದು ಪಂಗಡದೊಡನೆ ವೈವಾಹಿಕ, ಧಾರ್ಮಿಕ, ಸಂಬಂಧಗಳನ್ನು ಬೆಳೆಸಿ ಕೊಳ್ಳದಷ್ಟು ಅಂತರ ಸೃಷ್ಟಿಸಿಕೊಂಡಿದ್ದಾರೆ. ಯಾವ ಸಾಮಾಜಿಕ ಅಸಮಾನತೆಯನ್ನು ಬಸವಣ್ಣ ತೊಡೆದು ಹಾಕಲು ಪ್ರಯತ್ನಿಸಿದನೋ, ಯಾವ ಪಂಗಡಗಳನ್ನು ನಿರ್ಮೂಲನೆ ಮಾಡಲು ಪ್ರಯತ್ನಿಸಿದನೋ ಆ ಪಂಗಡಗಳು ಇಂದು ಗಟ್ಟಿಯಾಗುತ್ತಿರುವುದು ನಿಜಕ್ಕೂ ಶೋಚನೀಯವಾಗಿದೆ.

ಒಟ್ಟಿನಲ್ಲಿ ಬಸವಣ್ಣನ ತತ್ವಗಳು, ಚಿಂತನೆಗಳು, ಸಂದೇಶಗಳು ಎಲ್ಲಾ ಕಾಲಕ್ಕೂ ಪ್ರಸ್ತುತವಾಗಿವೆ. ಅದರಲ್ಲೂ ೨೧ನೇ ಶತಮಾನದಲ್ಲಿ ವೈಜ್ಞಾನಿಕತೆ, ತಾಂತ್ರಿಕತೆಯ ಜಗತ್ತೇ ಒಂದು ಮನೆಯಂತೆ ಆಗುತ್ತಿದೆ. ಆದರೆ ಮನುಷ್ಯನ ಆಲೋಚನೆಗಳಲ್ಲಿ ಮಾತ್ರ ಸ್ವಾರ್ಥ, ದ್ವೇಷ, ಮೇಲು, ಕೀಳು, ಶ್ರೀಮಂತ, ಬಡವ ಎಂಬ ಭಾವನೆಗಳು ಹೆಚ್ಚಾಗಿ ಸಮಾಜದ ಸ್ವಾಸ್ಥವೇ ಹಾಳಾಗುತ್ತಿದೆ. ಇನ್ನಾದರೂ ಬಸವಣ್ಣನ ತತ್ವಗಳನ್ನು ಒಮ್ಮೆ ಪುನರ್ ನೆನಪು ಮಾಡಿಕೊಂಡು, ಅದರಂತೆ ಸ್ವಲ್ಪ ಭಾಗವಾದರೂ ನಡೆಯಲು ಪ್ರಯತ್ನಿಸಿದರೆ ಬಸವಣ್ಣನ ಪ್ರಯತ್ನಕ್ಕೆ ನ್ಯಾಯ ದೊರಕಿಸಿಕೊಡಲು ಸಾಧ್ಯವಾಗುತ್ತದೆ.

### ೩.೨. ಸೂಫಿ ಪರಂಪರೆ

ಸೂಫಿ ಎಂಬುದು ೧೧ನೇ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ ಅನುಭಾವಿ ಪಂಥವಾಗಿದೆ. ಇದು ತನ್ನದೇ ಆದ ತತ್ವಗಳ ಮೂಲಕ ಜನಪ್ರಿಯವಾಗಿ ಬೆಳೆಯಿತು. ಸಮಾಜ ಸುಧಾರಣೆ ಕಾರ್ಯದಲ್ಲಿ ಶರಣರ ನಂತರ ಭೂಮಿಕೆಯನ್ನು ಪ್ರವೇಶಿಸಿದ ಸೂಫಿಗಳು ಶರಣರ ಪರಂಪರೆಯನ್ನು ಮುಂದುವರಿಸುವುದರ ಜೊತೆಗೆ ತಮ್ಮದೇ ಆದ ಹಾದಿಯಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಯನ್ನು ಆರಂಭಿಸಿದರು. ಇಸ್ಲಾಮಿನ ಮೂಲಭೂತವಾದದ ವಿರುದ್ಧ ತಾತ್ವಿಕವಾಗಿ

ಬಂಡೆದ್ದ ಸೂಫಿಗಳು ತಮ್ಮದೇ ಆದ ಪರ್ಯಾಯ ಚಿಂತನೆಗಳನ್ನು ಮಾಡುತ್ತಾ, ಏನೆಲ್ಲಾ ಮಾಡಬಹುದು, ಸಾಧ್ಯವಾಗಿಸಬಹುದು ಎಂಬುದನ್ನು ತೋರಿಸಿಕೊಟ್ಟ ಅವರ ಶೈಲಿ ಸಂಶೋಧಕರಿಗೆ ಕುತೂಹಲವಾಗಿ ಕಾಣುತ್ತದೆ.

"ಸೂಫಿ ಎಂದರೆ ಯೋಗಿ, ಸಿದ್ಧ, ಅನುಭಾವಿ ಎಂದರ್ಥ. 'ಸೂಫಿಸಂ' ಎಂದರೆ ಇಸ್ಲಾಂ ಧರ್ಮದಲ್ಲಿನ ಆಧ್ಯಾತ್ಮಿಕ ತತ್ವೋಪದೇಶಕ್ಕೆ ಇರುವ ಮತ್ತೊಂದು ಹೆಸರು. ಹಿಂದೂಧರ್ಮದ ಭಕ್ತಿ ಮತ್ತು ಆಂದೋಲನಕ್ಕೆ ಸಮಾನವಾದ ಮುಸ್ಲಿಂ ಅನುಭಾವಿ ಸಂತರ ಆಂದೋಲನವೇ ಸೂಫಿ ಚಳುವಳಿಯಾಗಿದೆ. ಸೂಫಿಸಂ ಮೂಲತಃ ಒಂದು ತತ್ವವಾಗಿದೆ. ಅನುಭಾವ ಪಂಥ ವಾಗಿದೆಯೇ ಹೊರತು ಅದು ಸಾಂಪ್ರದಾಯಿಕ ಇಸ್ಲಾಂ ಧರ್ಮವಲ್ಲ, ಸೂಫಿಗಳು ತಮ್ಮನ್ನು ತಾವು ಹಿಂದೂಗಳೂ ಅಲ್ಲ ಮತ್ತು ಮುಸ್ಲಿಮರೂ ಅಲ್ಲ ಎನ್ನುತ್ತಾರೆ. ಸೂಫಿ ಪಂಥವು ಮಧ್ಯ ಏಷಿಯಾದ ಇಸ್ಲಾಮೀ ಜಗತ್ತಿನಲ್ಲಿ ಹುಟ್ಟಿದ ಒಂದು ಪಂಥವಾಗಿದೆ."[೨೩] ಹೀಗಾಗಿ ಸಾಮಾನ್ಯವಾಗಿ ಸೂಫಿ ಪಂಥವನ್ನು ಇಸ್ಲಾಮಿನ ಅನುಭಾವಿ ಶಾಖೆ ಎಂದೇ ವ್ಯಾಖ್ಯಾನಿಸಿಕೊಂಡು ಬರಲಾಗಿದೆ. ಕೆಲವೊಮ್ಮೆ ಇವರನ್ನು ಇಸ್ಲಾಂ ಧರ್ಮ ವಿರೋಧಿಗಳು ಎಂದು ಟೀಕಿಸಲಾಗಿದೆ. ಆಧುನಿಕ ಮೂಲಭೂತವಾದಿಗಳು ಸೂಫಿಗಳ ಅನುಭವ ಕಲ್ಪನೆಯನ್ನು ಇಸ್ಲಾಂನ ವಿರೋಧಿ ಎಂದು ಮುಲಾಜಿಲ್ಲದೆ ಘೋಷಿಸುತ್ತಾರೆ. ಸೂಫಿ ಚರಿತ್ರೆಯಲ್ಲಿಯೂ ಸಹಾ ಇಸ್ಲಾಮನ್ನು ಕಟ್ಟುನಿಟ್ಟಾಗಿ ಪಾಲಿಸುವ ಧರ್ಮಭೀರುಗಳು, ಧರ್ಮಪ್ರಸಾರ ಮಾಡುವ ಮಿಶನರಿಗಳು, ಧರ್ಮರಕ್ಷಣೆಗಾಗಿ ಶಸ್ತ್ರಧಾರಿಗಳಾದ ಸೂಫಿಗಳು ಇರುವುದು ಕಂಡುಬರುತ್ತದೆ. ಆದರೆ ತಸವುಫ್(ಅನುಭಾವಿ) ಅನುಸರಿಸುವ ಸೂಫಿಗಳು ಮಾತ್ರ ಸಾಂಸ್ಥಿಕ ಧರ್ಮ ಹೇಳುವ ಕಂದಾಚಾರಿಗಳಿಗಿಂತ ಭಿನ್ನವಾಗಿ ಬದುಕಿದವರು. ಸಂಪ್ರದಾಯಸ್ಥರು ಎಳೆದ ಗೆರೆಯನ್ನು ದಾಟಿ ಹೋಗಿ ಕಾವ್ಯ, ಸಂಗೀತ, ಚಿತ್ರಕಲೆ, ತತ್ವಶಾಸ್ತ್ರ, ಸೃಜನಶೀಲ ಫಲಗಳನ್ನು ಮಾನವಕುಲಕ್ಕೆ ಕೊಟ್ಟವರಾಗಿದ್ದಾರೆ.

"ಕರ್ನಾಟಕದಲ್ಲಿ ಸೂಫಿ ನೆಲೆಯನ್ನು ನೋಡಿದಾಗ, ಕನ್ನಡ, ಮರಾಠಿ, ಉರ್ದು, ತೆಲುಗು ಭಾಷೆಗಳಿರುವ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಮೂರು ಭಾಷಿಕ ರಾಜ್ಯಗಳ ಒಳಗೆ ಹರಿಯುವ ಕೃಷ್ಣಾ, ತುಂಗಭದ್ರಾ ಮತ್ತು ಭೀಮಾ ನದಿಗಳ ಕರ್ನಾಟಕದ ಪ್ರದೇಶಗಳು ಸೂಫಿಗಳ ನಿಜವಾದ ಭೂಮಿಕೆಯೆನ್ನಬಹದು."[೨೪] "ಸೂಫಿ ಸಂತರ ಚರಿತ್ರೆಯನ್ನು ಕಟ್ಟುವುದೆಂದರೆ ಹುಟ್ಟಿಲ್ಲದ ದೋಣಿಯಲ್ಲಿ ಹರಿವ ನದಿಯಲ್ಲಿ ಪಯಣ ಹೊರಟಂತೆ. ಸೆಳೆವು ಬಂದತ್ತ ಹೋಗುವ ಆಕರ್ಷಣೆಯೂ ಇದೆ. ಬೇಕಾದಡೆ ಹೋಗಲಾಗದ ಸಮಸ್ಯೆಯೂ ಇದೆ. ಏಕೆಂದರೆ ಸೂಫಿಗಳು ಎಲ್ಲೋ ಹುಟ್ಟಿ, ತಮ್ಮ ಜೀವಿತದ ಬಹುಕಾಲವನ್ನು ಇನ್ನೆಲ್ಲೋ ಕಳೆದು ಕರ್ನಾಟಕಕ್ಕೆ ಬಂದು ನೆಲೆಸಿದವರಾಗಿದ್ದಾರೆ. ಉದಾಹರಣೆಗೆ ಗುಲಬರ್ಗಾದ ಖಾಜಾ ಬಂದೇ ನವಾಜರಿದ್ದಂತೆ. ಇನ್ನೂ ಕೆಲವು ಸೂಫಿಗಳು ಕರ್ನಾಟಕದಲ್ಲಿ ಬೆಳೆದು, ಬೇರೆಲ್ಲೋ ಹೋಗಿ ನೆಲೆಸಿದವರಾಗಿದ್ದಾರೆ. ಉದಾಹರಣೆಗೆ ಟಿಪ್ಪು ಔಲಿಯನಂತೆ. ಎಲ್ಲಿಂದಲೋ ಹೊರಟು ಎಲ್ಲಿಗೋ ತಲುಪುವಾಗ ನಡುವೆ ಕರ್ನಾಟಕವನ್ನು ಹಾದು ಹೋದವರಿದ್ದಾರೆ."[೨೫]

"೧೭ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಫ್ರೆಂಚ್ ಪ್ರವಾಸಿಗನಾದ ಬರ್ನಿಯು ತನ್ನ ಟಿಪ್ಪಣಿಗಳಲ್ಲಿ, "ಮಹಾಜ್ಞಾನಿಗಳಾದ ಕೆಲವು ಜೋಗಿಗಳು ಹಾಗೂ ಸೂಫಿಗಳು ಇದ್ದಾರೆಂದು

ಕೇಳಿದ್ದೇನೆ. ಬೇಕೆಂದಾಗ ಅವರು ಸಮಾಧಿ ಸ್ಥಿತಿಯನ್ನು ಪಡೆಯಬಲ್ಲರು. ಸಮಾಧಿ ಸ್ಥಿತಿಯನ್ನು ಪಡೆಯುವುದು ಮತ್ತು ಆ ಸ್ಥಿತಿಯಲ್ಲಿ ಆನಂದಪರವಶರಾಗುವುದು ಜೋಗಿ ಮತ್ತು ಸೂಫಿ ಪಂಥಗಳ ಮಹಾಯೋಗ ರಹಸ್ಯಗಳೆಂದು ಕಾಣುತ್ತದೆ" ಎಂದು ಅಭಿಪ್ರಾಯ ಪಟ್ಟಿದ್ದಾನೆ."[೨೮] ಸೂಫಿ ಪಂಥವು ಇಸ್ಲಾಂ ಧರ್ಮದ ಆಧ್ಯಾತ್ಮಿಕತೆಯ ಇನ್ನೊಂದು ಹೆಸರು. "ಸೂಫಿ ಪಂಥಕ್ಕೆ ಕುರಾನ್ ಮೂಲಾಧಾರವಾದರೂ, ಜೊರಾಸ್ಟ್ರೀಯ, ಕ್ರೈಸ್ತಮತ, ಬೌದ್ಧಧರ್ಮ ಹಾಗೂ ಹಿಂದೂ ಧರ್ಮಗಳ ಹಲವಾರು ಉತ್ತಮ ಅಂಶಗಳನ್ನು ತನ್ನೊಳಗೆ ಒಳಗೊಂಡಿದೆ. ಸೂಫಿಗಳು ಇಸ್ಲಾಂ ಯೇತರ ಅನುಭಾವಿ ಪಂಥಗಳಿಂದ ಚಿಂತನೆ ಹಾಗೂ ಆಚರಣೆಗಳನ್ನು ಪಡೆದುಕೊಳ್ಳುವ ಪರಂಪರೆಯನ್ನು ಹೊಂದಿದ್ದರು."[೨೯]

ಕರ್ನಾಟಕದ ಸೂಫಿಗಳಲ್ಲಿ ಅತ್ಯಂತ ಪ್ರಸಿದ್ಧರಾದವರೆಂದರೆ 'ಖ್ವಾಜಾ ಬಂದೇ ನವಾಜ್‌ರು' ಬಂದೇ ನವಾಜ್ ಎಂದರೆ ದೇವರ ಸೇವಕನೆಂದರ್ಥ. ಇವರ ಮೊದಲ ಹೆಸರು ಅಬ್ದುಲ್ ಫತಾ. ಹೀರತ್ ಇವರ ಮೂಲ ಸ್ಥಾನವಾಗಿದ್ದು ಶ್ರೀಮಂತ ಕುಟುಂಬಕ್ಕೆ ಸೇರಿದವರಾಗಿದ್ದರು. ಕೈರೋದ ಹೆಸರಾಂತ ಅರೇಬಿಕ್ ವಿಶ್ವವಿದ್ಯಾಲಯದಲ್ಲಿ(ಈಜಿಪ್ಟ್) ಉನ್ನತ ವ್ಯಾಸಂಗ ಮುಗಿಸಿ ಅರೇಬಿಕ್, ಪರ್ಶಿಯನ್, ತರ್ಕಶಾಸ್ತ್ರ, ಧರ್ಮಶಾಸ್ತ್ರಗಳನ್ನು ಅಧ್ಯಯನ ಮಾಡಿ ವಿದ್ವತ್ತನ್ನು ಸಂಪಾದಿಸಿದರು. ತುಘಲಕರ ಕಾಲದಲ್ಲಿ ದೆಹಲಿಗೆ ವಲಸೆ ಬಂದು ನೆಲೆಸಿದರು. ಅಲ್ಲಿ ನಿಜಾಮುದ್ದೀನ್ ಚಿಸ್ತಿಯವರ ಶಿಷ್ಯರಾದರು. ನಂತರ ಫಿರೋಜ್ ಬಹಮನ್ ಷಾ ಕಾಲದಲ್ಲಿ ಗುಲಬರ್ಗಾಕ್ಕೆ ಬಂದು ನೆಲೆಸಿದ ಬಂದೇ ನವಾಜರು ಸೂಫಿ ಸಂತರಾಗಿ ಪ್ರಸಿದ್ಧರಾದರು. ಜೊತೆಗೆ ಶ್ರೀಮಂತರು ಮತ್ತು ಬಡವರ ಕಷ್ಟಗಳಿಗೆ, ಸಮಸ್ಯೆಗಳಿಗೆ ಸ್ಪಂದಿಸಿ ಜನಾನುರಾಗಿಯಾಗಿ ದ್ದರಲ್ಲದೇ ಪವಾಡ ಪುರುಷರೆನಿಸಿಕೊಂಡು, ತಮ್ಮ ಹೆಚ್ಚು ಸಮಯವನ್ನು ಅಧ್ಯಯನ ಹಾಗೂ ಬರವಣಿಗೆಗಳಲ್ಲಿ ಕಳೆಯುತ್ತಿದ್ದರು. ಇವರಿಂದ ದಖನಿ ಉರ್ದು ಸಾಹಿತ್ಯ ಆರಂಭಗೊಂಡು ಬೆಳವಣಿಗೆ ಆಯಿತು. ಇವರು ಬರೆದ ಸುಮಾರು ೧೦೫ ಕೃತಿಗಳು ದಖನಿ ಉರ್ದು ಸಾಹಿತ್ಯಕ್ಕೆ ಆಧಾರ ಸ್ತಂಭಗಳಾಗಿವೆ. ಇವುಗಳ ಜೊತೆಗೆ ಖವಾಲಿಗಳು, ಗಜಲ್‌ಗಳು ಮತ್ತು ಶಾಯಿರಿಗಳನ್ನು ರಚಿಸಿದ್ದಾರೆ. ಹಿಂದೂ, ಮುಸ್ಲಿಂ ಧಾರ್ಮಿಕ ಮತ್ತು ಆಧ್ಯಾತ್ಮಿಕ ಗ್ರಂಥಗಳನ್ನು, ಪಾರ್ಸಿ ಮತ್ತು ದಖನಿ ಉರ್ದು ಭಾಷೆಗಳಲ್ಲಿ ರಚಿಸಿದರು. ಈ ಕೃತಿಗಳಲ್ಲಿ ಉಪನಿಷತ್ತುಗಳ ಅನೇಕ ಶ್ಲೋಕಗಳನ್ನು ಅನುವಾದ ಮಾಡಿ ವ್ಯಾಖ್ಯಾನಿಸಿದ್ದಾರೆ. ಅದರಲ್ಲೂ ಹಿಂದೂ ಮುಸ್ಲಿಮರಲ್ಲಿ ಭ್ರಾತೃತ್ವ ಉಂಟುಮಾಡುವಲ್ಲಿ ಮಹತ್ತರ ಪಾತ್ರ ವಹಿಸಿದ್ದರು.

ಅಲ್ಲದೆ ತಮ್ಮ ಸೂಫಿ ಕೃತಿಗಳಲ್ಲಿ ಹಿಂದೂ ಆಧ್ಯಾತ್ಮದ ಭಾವನೆಗಳನ್ನು ಅಳವಡಿಸಿ ಕೊಂಡಿದ್ದಾರೆ. 'ಅಲಕ್ ನಿರಂಜನ್' ಅಂದರೆ ದೇವರು ಅಗೋಚರನು, ಅವ್ಯಕ್ತನು ಎಂಬ ತತ್ವವನ್ನು ಪ್ರತಿಪಾದಿಸಿದ್ದಾರೆ. ಹಟಯೋಗವನ್ನು ಕುರಿತು ರಚಿಸಿದ 'ಅಮೃತಕಂಡ' ಎಂಬ ಸಂಸ್ಕೃತ ಗ್ರಂಥವನ್ನು ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗೆ ಅನುವಾದಿಸಿದರು. ಇದು ಸೂಫಿ ಸಂತರಲ್ಲಿ ಅತ್ಯಂತ ಜನಪ್ರಿಯವಾಯಿತು. ಬಂದೇ ನವಾಜರ ಸ್ಪರ್ಶದಿಂದಲೇ ರೋಗಗಳು ವಾಸಿಯಾಗುತ್ತವೆ ಎನ್ನುವ ನಂಬಿಕೆ ಜನರಲ್ಲಿ ಮೂಡಿತ್ತು. ಇವರ ಪ್ರಭಾವದಿಂದ ಅನೇಕ ಮುಸ್ಲಿಮರು ಸಸ್ಯಾಹಾರಿಗಳಾಗಿ ಬದಲಾದರು. ಇವರ ಕಾಲದಲ್ಲಿ ಹಿಂದೂ ಮತ್ತು ಮುಸ್ಲಿಂರ ನಡುವೆ ಎಂದೂ ಕಾಣದ

ಸಾಮರಸ್ಯ ಮೂಡಿತ್ತು. ಸಾಮರಸ್ಯ ಎಷ್ಟರಮಟ್ಟಿಗೆ ಮುಂದುವರಿದುಕೊಂಡು ಬಂದಿದೆಯೆಂದರೆ, ಇಂದಿಗೂ ಗುಲಬರ್ಗಾದಲ್ಲಿ ನಡೆಯುವ ಶರಣಬಸವೇಶ್ವರ ರಥೋತ್ಸವ ಮತ್ತು ಖ್ವಾಜಾ ಬಂದೇ ನವಾಜರ 'ಉರುಸ್'ಗಳಲ್ಲಿ ಹಿಂದೂ ಮುಸ್ಲಿಮರು ಉತ್ಸಾಹದಿಂದ ಭಾಗವಹಿಸಿರುವುದನ್ನು ಕಾಣುತ್ತಿದ್ದೇವೆ. ಇಂತಹ ಸಾಮರಸ್ಯ ಗುಲ್ಬರ್ಗಾ ಹಾಗೂ ಯಾದಗಿರಿ ಪ್ರದೇಶಗಳನ್ನು ಹೊರತುಪಡಿಸಿ ಇತರ ಭಾಗಗಳಲ್ಲಿ ಕಾಣಬರುವುದು ವಿರಳವಾಗಿದೆ.

ಕಾಯಿಲೆಗಳಿಗೆ ತಾಯತ, ದೆವ್ವಗಳ ಉಚ್ಚಾಟನೆ, ಬಂಜೆತನ ನಿವಾರಣೆ, ಹುಚ್ಚು ಬಿಡಿಸುವುದು, ಕಳೆದು ಹೋದ ದನಕರುಗಳನ್ನು ಪತ್ತೆ ಹಚ್ಚುವುದು, ಕಾಯಿಲೆಗಳಿಗೆ ಚಿಕಿತ್ಸೆ ಹೀಗೆ ಮುಂತಾದ ಪವಾಡಗಳ ಮೂಲಕ ದೀನ ದಲಿತರ ಉದ್ಧಾರಕ್ಕಾಗಿ ಸೂಫಿಗಳು ಹೆಸರಾಗಿದ್ದರು. ಉದಾಹರಣೆಗೆ ಗುಲ್ಬರ್ಗಾದ ಶರಣ ಬಸವೇಶ್ವರ ಮಠದ ಉತ್ಸವಗಳು ಸೂಫಿ ಸಂತರ ಮೂಲಕ ಉದ್ಘಾಟಿತ ವಾಗುತ್ತಿದ್ದವು. ಅದೇ ರೀತಿ ಬಂದೇ ನವಾಜ್ ದರ್ಗಾದ 'ಉರುಸ್' ಎಂಬ ಉತ್ಸವಗಳನ್ನು ವೀರಶೈವ ಅಂದರೆ ಶರಣ ಬಸವೇಶ್ವರ ಪೀಠಾಧಿಪತಿಗಳಿಂದ ಉದ್ಘಾಟಿಸುವ ಪರಂಪರೆ ಬೆಳೆದುಬಂದಿದೆ. ಅನೇಕ ವೀರಶೈವ ಮಠಗಳಲ್ಲಿ ದೈನಂದಿನ ಭಜನೆ, ಉತ್ಸವ ಮೊದಲಾದ ಕಾರ್ಯಗಳಲ್ಲಿ ಸೂಫಿಗಳು ಹಾಗೂ ಸೂಫಿ ಪಂಥದ ಭಕ್ತರು ಪಾಲ್ಗೊಳ್ಳುತ್ತಾರೆ. ಹಾಗೆಯೇ ದರ್ಗಾಗಳ ಉತ್ಸವಗಳಲ್ಲಿ ಹಿಂದುಗಳು ಭಾಗವಹಿಸುತ್ತಾರೆ. ಯಾದಗಿರಿಯ ಕೊಡೇಕಲ್ ಬಸವೇಶ್ವರರ ಮಠ, ತಿಂತಿಣಿ ಮೌನೇಶ್ವರ, ಗಾಜರಕೋಟದ ಕತಲಸಾಹೇಬ, ಮೋಟನಹಳ್ಳಿ ಹಸನ ಸಾಹೇಬ ಮುಂತಾದ ಕಡೆಗಳಲ್ಲಿ ಇಂದಿಗೂ ವೀರಶೈವ ಮತ್ತು ಸೂಫಿ ಸಂತರ ಒಡನಾಟ ಬಹಳ ಸಾಮರಸ್ಯ ದಿಂದ ಕೂಡಿದೆ. ಇದರಿಂದ ಈ ಭಾಗದಲ್ಲಿ ಇಂದಿಗೂ ಹಿಂದೂ ಮುಸ್ಲಿಮರ ಸೌಹಾರ್ದತೆ ಉಳಿದ ಕಡೆಗಳಿಗಿಂತಲೂ ಗಾಢವಾಗಿದೆ.



ಯಾದಗಿರಿ ಜಿಲ್ಲೆಯ ಜನಸಮೂಹದ ಮೇಲೆ ಸೂಫಿಗಳ ಪ್ರಭಾವವನ್ನು ನೋಡಿದಾಗ ಈ ಭಾಗದ ಕನ್ನಡಿಗರ ಸಾಂಸ್ಕೃತಿಕ ಅವ್ಯವಸ್ಥೆಯನ್ನು ಕಪಟರಾಳ ಕೃಷ್ಣರಾವ್ ಅವರು ತಮ್ಮ ಕೃತಿಯಲ್ಲಿ, "ದೇವರ ಮಾರ್ಗವನ್ನು ತೋರಿಸುವ ಗುರುವು ಸ್ವತಃ ತಾನೇ ದೇವರಾಗಿ ಜನರ ಮನಸ್ಸಿನಲ್ಲಿ ಪ್ರತಿಷ್ಠಿತನಾದನು. ಮುಸಲ್ಮಾನ ಫಕೀರರು ಗುರುಗಳಾದರು. ವೇದ ಕುರಾನ್ ಒಂದೇ ಯಾಯಿತು, ಫಕೀರರ ಗೋರಿಗಳೆ ದೇವಸ್ಥಾನಗಳಾದವು. ಕನ್ನಡಿಗರಿಗೆ ಗೋರಿಗಳು ಕುಲದೇವತೆ ಗಳಾದವು. ಹೀಗೆ ಜಾತಿ ಸಂಸ್ಥೆಯಂಥ ಭದ್ರವಾದ ಕೋಟೆಯು ಸಮಾಜವನ್ನು ಸಂರಕ್ಷಿಸದಿದ್ದರೆ ಕನ್ನಡಿಗರು ಏನಾಗಿ ಉಳಿಯುತ್ತಿದ್ದರೋ ಏನೋ."[೨೮]

**ಸೂಫಿ ಪ್ರಭಾವದ ಸಂತರು ಹಾಗೂ ಮಠಗಳು**



೧. ಅಲ್ಲಮಪ್ರಭು(ಸುಲ್ತಾನ ಪಾಶಾ)

೨. ಅಲ್ಲಮಪ್ರಭು

೩. ಈರಪ್ಪಯ್ಯ

೪. ಕೊಡೇಕಲ್ಲ ಬಸವಣ್ಣ

೫. ರಾಮದಾಸ್ ಬಡೇಸಾಬ

೬. ಸಿದ್ಧಪ್ಪ ಕುಸನೂರು

ಸೂಫಿ ಸಂತರ ಪ್ರಭಾವದಿಂದ ಹಿಂದೂ ಮುಸ್ಲಿಮರ ನಡುವೆ ಧಾರ್ಮಿಕ ಸಾಮರಸ್ಯ ಬೆಳೆದ ರೀತಿಯಲ್ಲಿ ಹಿಂದೂ ಸಂತರು ಮತ್ತು ಸೂಫಿ ಸಂತರ ನಡುವೆ ಧಾರ್ಮಿಕ ಗೆಳೆತನವು ಬೆಳೆಯಿತು. ಇದು ಎಷ್ಟರಮಟ್ಟಿಗೆ ಧರ್ಮ, ಆಚರಣೆಗಳಲ್ಲಿ ಬೆರೆತು ಹೋಯಿತೆಂದರೆ ಸೂಫಿ ಸಂತರ ಉರುಸ್‌ಗಳಲ್ಲಿ 'ದೋಸ್ತಾರದೀನ್' ಎಂಬ ಘೋಷವನ್ನು ಮಾಡಲಾಗುತ್ತದೆ. 'ದೋಸ್ತಾರ ದೀನ್' ಎಂದರೆ ಧಾರ್ಮಿಕ ಗೆಳೆತನ. ದೋಸ್ತಾರ ಸಾಮಾನ್ಯವಾಗಿ ಗುರುವಿನ ಹೆಸರಿನಲ್ಲಿರುತ್ತದೆ. ಉದಾಹರಣೆಗೆ ಸಾಮಾನ್ಯವಾಗಿ ಮೊಹರಂ ಹಬ್ಬದ ಸಂದರ್ಭದಲ್ಲಿ ಗಾಜರಕೋಟದ ಕತಲಸಾಹೇಬ ಘೋಷಣೆಯನ್ನು, ಖಾಸಿಂ ಸಾಹೇಬ ಘೋಷಣೆಯನ್ನು, ಹಸೇನ ಹುಸೇನ ಸಾಹೇಬ ಘೋಷಣೆ ಯನ್ನು ಹಾಗೂ ಸಾವಳಗಿ ಶಿವಲಿಂಗನ ಜಾತ್ರೆಯಲ್ಲಿ ಬಂದೇ ನವಾಜರ ಬಗ್ಗೆ ಘೋಷಣೆಯನ್ನು, ಶಿರಹಟ್ಟಿ ಫಕೀರೇಶನ ಉತ್ಸವದಲ್ಲಿ ಖಾಜಾ ಅಮೀನರ ಹೆಸರನ್ನು, ವಡಬಾಳದ ನಾಗನಾಥನ ಉತ್ಸವದಲ್ಲಿ ನಾಸಿರುದ್ದೀನ್ ಚಿರಾಗರ ಹೆಸರು ಹಿಡಿದು ಕೂಗಲಾಗುತ್ತದೆ.

**ಮಹಿಳಾ ಸೂಫಿಗಳು**

"ಸೂಫಿ ಪರಂಪರೆಯಲ್ಲಿ ಕೇವಲ ಪುರುಷರಲ್ಲದೇ ಕೆಲವು ಮಹಿಳೆಯರು ಸಹ ಸೂಫಿಗಳಾಗಿದ್ದ ಉದಾಹರಣೆಗಳು ಕಂಡುಬರುತ್ತದೆ. ಮಹಿಳಾ ಸೂಫಿಗಳು ದೊಡ್ಡ ಪ್ರಮಾಣದಲ್ಲಿ ಕಂಡುಬರದಿದ್ದರೂ, ಕೆಲವು ಪ್ರದೇಶಗಳಲ್ಲಿ ಹೆಸರಾಂತ ಮಹಿಳಾ ಸೂಫಿಗಳಿದ್ದರೆನ್ನುವುದನ್ನು ಗುರುತಿಸಬಹುದಾಗಿದೆ. ಅವರಲ್ಲಿ ಮುಖ್ಯವಾಗಿ ಖ್ವಾಜಾ ಮೊಯಿನುದ್ದೀನ್ ಚಿಸ್ತಿ ಅವರ ಮಗಳು 'ಬೇಗಂ ಹಫೀಜ್ ಜಮಾಲ್', ಬೆಂಗಳೂರಿನ 'ಹಮಿನಾ ಬೀಬಿ', ಹೈದರಾಬಾದಿನ ಫಿಕೀಕಿ ಬೀಬಿ ಪ್ರಮುಖರಾಗಿದ್ದಾರೆ."[೨೯] ಅನೇಕ ಪುರುಷ ಸೂಫಿಗಳು ಇವರ ಶಿಷ್ಯರಾಗಿದ್ದುದು ಕಂಡುಬರುತ್ತದೆ. ಆದರೆ ಒಂದು ಕಡೆ ಸಾಮಾಜಿಕ ಸಂಪ್ರದಾಯಗಳನ್ನು ಹಾಗೆಯೇ ಇನ್ನೊಂದು ಕಡೆ ಧಾರ್ಮಿಕ ನಂಬಿಕೆಗಳನ್ನು ಎದುರು ಹಾಕಿಕೊಂಡು ಮಹಿಳೆಯರಿಗೂ ಅಂದಿನ ಕಾಲದಲ್ಲಿ ಸೂಫಿಗಳಾಗುವುದು ಅಷ್ಟೊಂದು ಸುಲಭದ ಕಾರ್ಯವಾಗಿರಲಿಲ್ಲ. ಹೀಗಾಗಿ ಅಂದಿನ ಪರಿಸ್ಥಿತಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳಾ ಸೂಫಿಗಳು ಕಂಡುಬರದೇ ಇರಲು ಕಾರಣವಾಗಿರಬಹುದು.

ಸೂಫಿ ಸಂತರ ಸರಳ ಜೀವನ, ಆಧ್ಯಾತ್ಮಿಕತೆ, ಬಹಳ ಬೇಗ ಜನರನ್ನು ಆಕರ್ಷಿಸಿತು. ಇವರ ಕರುಣೆ, ಪ್ರೀತಿ, ಸಹನೆ, ಭ್ರಾತೃತ್ವ, ಸ್ವಭಾವ, ಸಮಾನತೆ, ಸರಳತೆ, ಅನೇಕ ಹಿಂದೂಗಳನ್ನು ಆಕರ್ಷಿಸಿತು. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದಿದ್ದ ಕೆಳವರ್ಗದವರು ಬಹುಬೇಗ ಇವರ ಅನುಯಾಯಿಗಳಾದರು. ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡಿದ್ದ ಹಿಂದುಳಿದ ವರ್ಗದವರಿಗೆ ಸೂಫಿ ಸಂತರು ಹೊಸ ಭರವಸೆ ಮೂಡಿಸಿದರು. ಹಾಗೆಯೇ ಸೂಫಿ ಸಂತರ ಉದಾರನೀತಿ, ಮತೀಯ ಸಾಮರಸ್ಯ ಮುಂತಾದ ವಿಶಾಲ ಗುಣಗಳು ಭಾರತೀಯರಿಗೆ ಮುಸ್ಲಿಮರ ಬಗ್ಗೆ ಇದ್ದ ದ್ವೇಷವನ್ನು ಕಡಿಮೆ ಮಾಡುವಲ್ಲಿ ಮಹತ್ತರ ಪಾತ್ರ ವಹಿಸಿದವು. ಹಿಂದೂ ಮುಸ್ಲಿಮರಲ್ಲಿ ಪರಸ್ಪರ ಪ್ರೀತಿ, ವಿಶ್ವಾಸ ಮತ್ತು ಗೌರವದ ಭಾವನೆಗಳು ಬೆಳೆಯಲು ಪ್ರಾರಂಭಿಸಿದವು. ಮುಸ್ಲಿಮರು ಹಿಂದೂ ಸಂತರನ್ನು ಹಾಗೂ ಹಿಂದೂಗಳು ಮುಸ್ಲಿಂ ಸಂತರನ್ನು ಗೌರವದಿಂದ ಕಾಣಲು ಪ್ರಾರಂಭಿಸಿದರು. ಹೀಗೆ ಸೂಫಿ ಸಂತರು ಭಕ್ತಿಮಾರ್ಗದ ಸಂತರಂತೆ ಸಮಾಜದ ನ್ಯೂನತೆಗಳನ್ನು ಖಂಡಿಸಿ ಸರಳ ಶುದ್ಧ ಸಚ್ಚಾರಿತ್ರ್ಯದ ಜೀವನಕ್ಕೆ ಮಹತ್ವವನ್ನು

ಕೊಟ್ಟಿದ್ದಾರೆ. ಹಿಂದೂ ಮತ್ತು ಮುಸ್ಲಿಮರಲ್ಲಿ ಪರಸ್ಪರ ಪ್ರೀತಿ, ಗೌರವಾದರಗಳು ಬೆಳೆಯಲು ಇವರ ಕೊಡುಗೆ ಅಪಾರವಾಗಿದೆ. ಇವರ ತತ್ವವು ಎಲ್ಲಾ ಧರ್ಮಗಳ ಸಾರರೂಪದಲ್ಲಿದ್ದು ಎಲ್ಲರ ಕ್ಷೇಮವನ್ನು ಬಯಸುತ್ತದೆ. ಸಮಾಜದಲ್ಲಿ ದ್ವೇಷ ಭಾವನೆ, ಅತೃಪ್ತಿ ಹಾಗೂ ನಿರಾಶೆ ಹರಡಿದ್ದ ಸಮಯದಲ್ಲಿ ಸೂಫಿಗಳು ತಮ್ಮ ತತ್ವಗಳ ಮೂಲಕ ಪರಮತಸಹಿಷ್ಣುತಾ ಭಾವನೆಯನ್ನು ಪ್ರಚಾರ ಮಾಡಿ ಸಮಾಜವನ್ನು ಸುಧಾರಿಸಲು ಪ್ರಯತ್ನಿಸಿದ್ದು ಸ್ಮರಣೀಯ ಮತ್ತು ಅನುಕರಣೀಯ ವಾಗಿದೆ.

ಹೀಗಾಗಿಯೇ ಇಂದಿಗೂ ಯಾದಗಿರಿ ಜಿಲ್ಲೆಯಲ್ಲಿ ಹಿಂದೂ ಮುಸ್ಲಿಮರಲ್ಲಿ ಕೋಮು ಭಾವನೆಗಳಿರದೆ, ಎಲ್ಲರೂ ಸೇರಿ ಜಾತ್ರೆಗಳನ್ನು ಉರುಸ್‌ಗಳನ್ನು ಆಚರಿಸುತ್ತಾ ಸಾಮಾಜಿಕ ಸಾಮರಸ್ಯಕ್ಕೆ ಕಾರಣರಾಗಿದ್ದಾರೆ. ಹೀಗೆ ಸೂಫಿ ಸಂಸ್ಕೃತಿಯು ನಮ್ಮ ಸಮಾಜವು ಹೇಗಿರಬೇಕು ಎಂಬ ಕಲ್ಪನೆಯನ್ನು ಕೂಡಿ ಬಾಳುವ ಹಂಬಲವನ್ನು ತಿಳಿಸುತ್ತದೆ. ಧರ್ಮದ ಹೆಸರಲ್ಲಿ ಸಮಾಜ ವನ್ನು ವಿಭಜಿಸುವ ರಾಜಕೀಯ ವಿಚಾರಗಳು ಮೇಲುಗೈ ಪಡೆಯುತ್ತಿರುವ ಇಂದಿನ ದಿನಗಳಲ್ಲಿ ಇಂತಹ ಚಿಂತನೆಗಳು ದಾಖಲಾರ್ಹವಾಗಿದ್ದು ಮುಂದಿನ ಜನಾಂಗಕ್ಕೆ ಮಾರ್ಗ ಸೂಚಿಯಾಗಲಿವೆ.

### ೩.೩. ದಾಸ ಪರಂಪರೆ

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೂ ಮೊದಲು ಹಾಗೂ ಆನಂತರದ ಚಾರಿತ್ರಿಕ ಬೆಳವಣಿಗೆಯಲ್ಲಿ ವಚನ ಹಾಗೂ ದಾಸ ಚಳುವಳಿಗಳು ಅತ್ಯಂತ ಮಹತ್ವ ಪಡೆದುಕೊಂಡಿವೆ. ಶೈವ ಪಂಥೀಯರಲ್ಲಿ ಕಾಣಿಸಿಕೊಂಡ ಪ್ರಗತಿಪರ ನಿಲುವುಗಳು 'ವಚನ ಚಳುವಳಿ' ರೂಪದಲ್ಲಿ ಹೊರಹೊಮ್ಮಿದರೆ ವೈಷ್ಣವರಲ್ಲಿ ಅದು 'ದಾಸ ಚಳುವಳಿ'ಯಾಗಿ ಹೊರಹೊಮ್ಮಿತು. ಎರಡೂ ಚಳುವಳಿಗಳ ಆಶಯ ಮತ್ತು ಗುರಿ ಒಂದೇ ಆಗಿತ್ತು. ದಾಸರು ಸರಳವಾದ ಭಾಷೆಯಲ್ಲಿ ಕೀರ್ತನೆಗಳನ್ನು ಹಾಡುತ್ತಾ, ಸಮಾಜದಲ್ಲಿನ ಮೂಢನಂಬಿಕೆ, ಕಂದಾಚಾರ, ಅನಿಷ್ಟಗಳನ್ನು ತೊಡೆದು ಹಾಕಿ, ಸಮಾಜದಲ್ಲಿ ನೆಮ್ಮದಿಯನ್ನು ತಂದುಕೊಡಲು ಪ್ರಯತ್ನಿಸಿದರು. "ಕರ್ನಾಟಕದಲ್ಲಿ ನಡೆದ ಭಕ್ತಿ ಚಳುವಳಿ ಶಿವಶರಣರ ನಂತರ ಹರಿದಾಸರು ಮಹತ್ತರವಾದ ಪಾತ್ರವನ್ನು ನಿರ್ವಹಿಸಿದರು. ಶಿವಶರಣರಂತೆ ಹರಿದಾಸರು ಕೂಡ ಭಗವತ್‌ಪ್ರೇಮ, ಮಾನವಪ್ರೇಮ, ನೀತಿಪರತೆ, ಹೃದಯಶುದ್ಧಿ, ಸರ್ವಸಮಾನತೆಯ ತತ್ವಗಳನ್ನು ಬೋಧಿಸುತ್ತಾ ಮಾನವ ಜೀವನದ ಮಹತ್ವವನ್ನು ತಿಳಿಸಿಕೊಟ್ಟರು. ಭಗವಂತನನ್ನು ಒಲಿಸಿಕೊಳ್ಳುವುದೇ ಮಾನವನ ಜೀವನದ ಪರಮೋಚ್ಚ ಧ್ಯೇಯ ವೆಂದೂ, ಅದನ್ನು ಪರಿಶುದ್ಧ ಭಕ್ತಿಯಿಂದ ಸಾಧಿಸಬಹುದೆಂದು ಸಾರಿದರು. ಶಿವಶರಣರಂತೆ ಹರಿದಾಸರು ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಯನ್ನು ಕೈಗೊಂಡರು. ಹರಿದಾಸರಲ್ಲಿ ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು, ಶ್ರೀನಿವಾಸದಾಸರು, ದಾಸಾಚಾರ್ಯರು, ಜಗನ್ನಾಥದಾಸರು ಪ್ರಮುಖರಾಗಿದ್ದಾರೆ.

ಹರಿಯನ್ನು ಆರಾಧಿಸುವ ದಾಸರಲ್ಲೂ ಎರಡು ಪ್ರಮುಖ ಬಣಗಳಿದ್ದವು. ಅವುಗಳನ್ನು 'ವ್ಯಾಸಕೂಟ' ಹಾಗೂ 'ದಾಸಕೂಟ'ಗಳೆಂದು ಗುರುತಿಸಲಾಗಿದೆ. ವ್ಯಾಸಕೂಟದವರು ಸಂಸ್ಕೃತ ಶ್ಲೋಕಗಳ ಮೂಲಕ ಹರಿಯನ್ನು ಧ್ಯಾನಿಸುತ್ತಿದ್ದರೆ, ದಾಸಕೂಟದವರು ಅಚ್ಚಕನ್ನಡದಲ್ಲಿ ಸರಳವಾಗಿ

ಕೀರ್ತನೆಗಳನ್ನು ಕಟ್ಟಿ ಜನಮನವನ್ನು ಸಂಸ್ಕರಿಸಿದರು. ದಾಸಕೂಟ ಪರಂಪರೆಯಲ್ಲಿ ಬರುವವರೇ ಪುರಂದರದಾಸರು, ಕನಕದಾಸರು, ವಿಜಯದಾಸರು, ಜಗನ್ನಾಥದಾಸರು, ವೈಕುಂಠದಾಸರು. ಈ ಹರಿದಾಸರು ಭಗವಂತನ ದಾಸರು. ಸದಾ ಹರಿಧ್ಯಾನದಲ್ಲಿ ನಿರತರಾಗಿದ್ದು, ಹರಿಯೇ ಇವರಿಗೆ ಸರ್ವಸ್ವವಾಗಿದ್ದು ಇವರ ಜೀವನವೇ ಹರಿಮಯವಾಗಿದ್ದರಿಂದ, ಹರಿಯ ದಾಸನೇ ಹರಿದಾಸ ಎಂಬ ನಾಮ ಅನ್ವಯವಾದಂತಿದೆ. ಹರಿದಾಸರು ಅಂದಿನ ಸಮಾಜದಲ್ಲಿದ್ದ ಸಮಸ್ಯೆಗಳು, ಕಷ್ಟ ಕಾರ್ಪಣ್ಯಗಳನ್ನು ತಮ್ಮ ಕೀರ್ತನೆಯಲ್ಲಿ ಪ್ರತಿಬಿಂಬಿಸಿದ್ದಾರೆ. ಪ್ರೇಮ, ತ್ಯಾಗಗಳ ಮೂಲಕ ಸಮಾನತೆಯ, ಸುಧಾರಣೆಯ ರಾಜ್ಯ ನಿರ್ಮಾಣವಾಗಬೇಕೆಂದು ಹರಿದಾಸರು ಬಯಸಿದ್ದರು. ಜನರೆಲ್ಲಾ ಒಂದಾಗಿ ದೈವಭಕ್ತಿಯಲ್ಲಿ ಪ್ರೇರಿತರಾಗಿ ವಿಶ್ವಕಲ್ಯಾಣವನ್ನು ಸಾಧಿಸಬೇಕೆಂದು ನಿರಂತರವಾಗಿ ಉಪದೇಶಿಸಿದರು."[೨೦] ಇಂತಹ ಹಿನ್ನೆಲೆಯಲ್ಲಿ ದಾಸ ಪರಂಪರೆಯು ತನ್ನ ಹಾಡುವ ಧಾಟಿ, ಲಯದಿಂದ ಹೊಸ ಸಂಗೀತ ಶೈಲಿಯೊಂದನ್ನು ಹುಟ್ಟು ಹಾಕಿತು ಹಾಗೂ ಸಂಗೀತ ಕ್ಷೇತ್ರದಲ್ಲಿ ಈ ಪ್ರಕಾರವು ಕರ್ನಾಟಕ ಸಂಗೀತ ಎಂದೇ ಹೆಸರಾಯಿತು.

ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಸಮಾಜದ ವಿಮರ್ಶೆಯನ್ನು ಮಾಡುತ್ತಾ, ಅನೀತಿ, ಅನಾಚಾರ, ಸುಳ್ಳು, ಕಪಟ, ಬೂಟಾಟಿಕೆ, ಆಡಂಬರಗಳನ್ನು ಕಟುವಾಗಿ ಟೀಕಿಸಿದರು. ಸರಳ ಭಾಷೆಯಲ್ಲಿ ವಾಸ್ತವ ವಿಚಾರಗಳನ್ನು ಜನರಿಗೆ ಮನದಟ್ಟಾಗುವಂತೆ ಹೇಳುತ್ತಿದ್ದರು. 'ಭಾಗ್ಯದ ಲಕ್ಷ್ಮೀ ಬಾರಮ್ಮ ನಮ್ಮಮ್ಮ ನೀ ಸೌಭಾಗ್ಯದ ಲಕ್ಷ್ಮೀ ಬಾರಮ್ಮ' ಎಂಬ ಕೀರ್ತನೆಯು ಸರಳತೆಗೆ, ಸಹಜತೆಗೆ ಸಾಕ್ಷಿಯಾಗಿದೆ. ಡಾಂಭಿಕ ಭಕ್ತರ ಭಕ್ತಿಯನ್ನು ಕುರಿತು, 'ನಗೆಯು ಬರುತಿದೆ ಎನಗೆ ನಗೆಯು ಬರುತಿದೆ, ತನುವ ನೀರೊಳಗದ್ದಿ ಫಲವೇನು, ಬೇವು ಬೆಲ್ಲದೊಳಿಡಲೇನು ಫಲ, ಹೊಲೆಯ ಹೊರಗಿಹನೆ ಊರೊಳಗಿಲ್ಲವೆ' ಮುಂತಾದ ಅವರ ಕೀರ್ತನೆಗಳು ಸಮಾಜವನ್ನು ತಿದ್ದುವ ವಿಚಾರ, ವಿಮರ್ಶೆಯಿಂದ ಕೂಡಿವೆ. ಸತ್ಯ, ಧರ್ಮ, ಪ್ರಾಮಾಣಿಕತೆ ಜನರಲ್ಲಿ ಬೆಳೆಯ ಬೇಕು ಎಂಬ ಕಳಕಳಿಯಿದೆ. 'ಈಸಬೇಕು ಇದ್ದು ಜಯಿಸಬೇಕು. ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ' ಎನ್ನುವ ಇವರ ಕೀರ್ತನೆಗಳಲ್ಲಿ ಜೀವನದ ಸಾರ್ಥಕತೆಯನ್ನು ಮನಮುಟ್ಟುವಂತೆ ಬಣ್ಣಿಸಿದ್ದಾರೆ.

ಹೀಗೆ ಪುರಂದರದಾಸರು ಸಮಾನತೆಯ ಆಧಾರದ ಮೇಲೆ ಸಮಾಜವನ್ನು ಕಟ್ಟಬಯಸಿದ ಮಹಾನುಭಾವರು. ಕುಲ-ಗೋತ್ರಗಳಿಗೆ ಪ್ರಾಧಾನ್ಯತೆಯನ್ನು ನೀಡದೆ ಸಕಲ ಗುಣವಂತರೆ ಉತ್ತಮರು ಎಂಬ ಉದಾತ್ತ ಮತ್ತು ಉದಾರ ಕಲ್ಪನೆಯನ್ನು ಹೊಂದಿದ್ದರು. ಇದು ಅವರ ಜಾತ್ಯಾತೀತ ಸಮಾಜದ ಕಲ್ಪನೆಯಾಗಿತ್ತು. ಪುರಂದರದಾಸರು ತಮ್ಮ ಕೀರ್ತನೆಗಳ ಮೂಲಕ ಸಾಹಿತ್ಯವನ್ನು ಜನಪ್ರಿಯಗೊಳಿಸಿದಂತೆ ಸಂಗೀತವನ್ನು ಜನಸಾಮಾನ್ಯರಿಗೆ ಮುಟ್ಟಿಸಿದರು. ಹಾಗೆಯೇ ಸುಲಭವಾದ ಸಂಗೀತ ಶಿಕ್ಷಣ ಕ್ರಮವನ್ನು ರೂಪಿಸಿ 'ಕರ್ನಾಟಕ ಸಂಗೀತ ಪಿತಾಮಹ'ರೆಂದು ಪ್ರಖ್ಯಾತಿಯಾಗಿದ್ದಾರೆ. 'ದಾಸರೆಂದರೆ ಪುರಂದರದಾಸರಯ್ಯ ಎಂಬುದಾಗಿ ತಮ್ಮ ಗುರುಗಳಾದ ವ್ಯಾಸರಾಯರಿಂದ ಪ್ರಶಂಸೆ ಪಡೆದ ಮಹಾಪುರುಷರಾಗಿದ್ದಾರೆ.

"ಕರ್ನಾಟಕ ಹರಿದಾಸ ಪಂಥದಲ್ಲಿ ಮತ್ತೊಬ್ಬ ಅಗ್ರಗಣ್ಯ ಹಾಗೂ ಭಕ್ತ ಶ್ರೇಷ್ಠರೆಂದರೆ ಕನಕದಾಸರು. ಸಂಕಷ್ಟದಲ್ಲಿದ್ದ ಸಮಯದಲ್ಲಿ ತಿಮ್ಮಪ್ಪನಿಗೆ ಭೂಗತವಾಗಿದ್ದ ನಿಧಿ ಸಿಕ್ಕರೂ,

ತನ್ನದಲ್ಲದ ಹಣವನ್ನು ಅವರು ದೀನ-ದಲಿತರಿಗೆ ಹಂಚಿದರೆಂದು ತಿಳಿದುಬರುತ್ತದೆ. ಹೀಗಾಗಿ ಇವರು ಕನಕನಾಯಕನೆಂದು ಪ್ರಸಿದ್ಧಿಗೆ ಬಂದರು."[೩೧] "ಕ್ರಮೇಣ ಇವರು ವೈರಾಗ್ಯ ತಾಳಿ ಭಕ್ತಿಯ ಮೂಲಕ ಸರಳ ಜೀವನದ ಬೋಧನೆಯಲ್ಲಿ ತೊಡಗಿ ಕನಕದಾಸರೆಂದೇ ಹೆಸರುವಾಸಿಯಾದರು. ಒಮ್ಮೆ ಇವರ ಕನಸಿನಲ್ಲಿ ಕಾಣಿಸಿಕೊಂಡ ದೈವ ಆದಿಕೇಶವ ಇವರಲ್ಲಿ ವ್ಯಕ್ತಪಡಿಸಿದ ಇಚ್ಛೆಯಂತೆ, ಇವರು ತಮ್ಮ ಹುಟ್ಟೂರಿನ ನಿರ್ಲಕ್ಷ್ಯ ಸ್ಥಳವೊಂದರಲ್ಲಿ ಮೂಲೆಗುಂಪಾಗಿ ಬಿದ್ದಿದ್ದ ಆದಿಕೇಶವ ವಿಗ್ರಹವನ್ನು ಕಾಗಿನೆಲೆ ಎಂಬಲ್ಲಿಗೆ ತಂದು ಪ್ರತಿಷ್ಠಾಪಿಸಿದರು. ಈ ಕಾರಣದಿಂದಲೇನೊ, ಕನಕದಾರ ಕೃತಿಗಳೆಲ್ಲವೂ 'ಬಾಡ', 'ಕಾಗಿನೆಲೆ' ಕ್ಷೇತ್ರಗಳ ಕ್ಷೇತ್ರನಾಥ ಆದಿಕೇಶವನಿಗೆ ಅಂಕಿತವಾಗಿವೆ. ಕಾಗಿನೆಲೆಯ ಹೆಗ್ಗೆರೆಯ ದಂಡೆಯ ಮೇಲೆ ಕನಕದಾಸರ ಸಮಾಧಿಯಿತ್ತೆಂದು ಹೇಳುವ ಸ್ಥಳದಲ್ಲಿಯೇ ಇತ್ತೀಚೆಗೆ ಬೆಂಗಳೂರಿನ 'ಅಖಿಲ ಕರ್ನಾಟಕ ಕುರುಬರ ಸಂಘ'ದಿಂದ ಕಟ್ಟಡವೊಂದು ನಿರ್ಮಾಣಗೊಂಡಿದ್ದು, ಈಗ ಇದು ಕನಕಮಂದಿರವೆಂದು ಪ್ರಸಿದ್ಧಿಯಾಗಿದೆ.

ಕನಕದಾಸರ ಬೋಧನೆಯ ಒಂದು ವೈಶಿಷ್ಟ್ಯವೆಂದರೆ ಅವರು ಮಾಡುತ್ತಿದ್ದ ಕಾರ್ಯಗಳನ್ನು ಹಾಗೂ ಚಿಂತಿಸುತ್ತಿದ್ದ ವಿಚಾರಗಳನ್ನೆಲ್ಲಾ ಕೀರ್ತನೆಯ ರೂಪದಲ್ಲಿ ಪೋಣಿಸಿ ಹೇಳುತ್ತಿದ್ದ ವಿಧಾನ ಮನಸ್ಸಿಗೆ ನಾಟುವಂತಿರುತ್ತಿತ್ತು. "ಅವರ ಕೀರ್ತನೆಗಳ ಕೊನೆಯಲ್ಲಿ ಆದಿಕೇಶವನ ಹೆಸರನ್ನು ಸ್ಮರಿಸುತ್ತಿದ್ದುದರಿಂದ ಮುಂದೆ 'ಶ್ರೀ ಆದಿಕೇಶವ' ಅವರ ಎಲ್ಲ ಕೀರ್ತನೆಗಳ ಅಂಕಿತನಾಮವಾಗಿ ಉಳಿಯಿತು. ಇವರು ಆ ಕಾಲದಲ್ಲಿ ಅನೇಕ ಭಾವಪೂರ್ಣ ಕೀರ್ತನೆಗಳನ್ನು ರಚಿಸಿರುವರಲ್ಲದೆ ಮೋಹನ ತರಂಗಿಣಿ, ನಳಚರಿತ್ರೆ, ಹರಿಭಕ್ತಸಾರ, ರಾಮಧಾನ್ಯ ಚರಿತ್ರೆ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಕನಕದಾಸರ ಹಾಡುಗಳು ಅತ್ಯಂತ ಸರಳವಾಗಿದ್ದು ಸಾಮಾನ್ಯ ಜನರು ಸುಲಭವಾಗಿ ಅರ್ಥ ಮಾಡಿಕೊಳ್ಳುವಂತಿದ್ದವು. ಇವರು ಕೀರ್ತನೆಗಳನ್ನು ರಚಿಸಿ ಹಾಡಿದ ಹರಿದಾಸರು ಮಾತ್ರವಲ್ಲದೆ ಕಾವ್ಯಗಳನ್ನು ರಚಿಸಿರುವ ಕವಿಯೂ, ಹೌದು ಹಾಗೂ ಸಮಾಜದಲ್ಲಿದ್ದ ಅನಿಷ್ಟ ಪದ್ಧತಿಗಳಾಗಿದ್ದ ಜಾತಿ, ಕುಲಗಳ ಮೂಲಗಳನ್ನು ಬಯಲಿಗೆಳೆದ ಸುಧಾರಕರೂ ಆಗಿದ್ದಾರೆ."[೩೨] ಈ ಮೂಲಕ ಅಂದಿನ ಸಾಮಾಜಿಕ ನ್ಯೂನತೆಗಳನ್ನು ಖಂಡಿಸಿ, ಹೊಸ ಸಮಾಜವೊಂದರ ಪ್ರಗತಿಗೆ ತಮ್ಮದೇ ಆದ ಕೊಡುಗೆ ಸಲ್ಲಿಸಿದ್ದಾರೆ.

ಕನಕದಾಸರ ಕೀರ್ತನೆಗಳಲ್ಲಿ 'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ' ಎನ್ನುವ ಹಾಗೂ 'ಕುಲ-ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ' ಹಾಗೂ ಇನ್ನೊಂದು ಕೀರ್ತನೆ 'ಎಲ್ಲಾರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎನ್ನುವ ಕೀರ್ತನೆಗಳು ವಿಶಿಷ್ಟವಾಗಿವೆ. ಕೀರ್ತನೆಗಳ ಮೂಲಕ ಸಮಾಜದ ಅಂಕು-ಡೊಂಕುಗಳನ್ನು ಮುಕ್ತವಾಗಿ ಟೀಕಿಸಿ, ಜನರನ್ನು ಎಚ್ಚರಿಸುತ್ತಾರೆ. ದೀನ ದಲಿತರ ಮೌಢ್ಯ, ರೂಢಿ ಸಂಪ್ರದಾಯಗಳನ್ನು ಬಯಲಿಗೆಳೆದು ಕಳಕಳಿಯಿಂದ ಕಳವಳ ಪಡುತ್ತಾರೆ. ಅಂದಿನ ಜಾತಿ ಭೇದಗಳನ್ನು ಖಂಡಿಸಿ ಸರ್ವಧರ್ಮ ಸಮನ್ವಯವನ್ನು ಎತ್ತಿ ಹಿಡಿದಿದ್ದಾರೆ. ಹೀಗೆ ಕನಕದಾಸರು ಒಬ್ಬ ನಾಯಕನಾಗಿ, ಭಕ್ತನಾಗಿ, ಉಪದೇಶಕನಾಗಿ ಸಂತನಾಗಿ ಪವಾಡ ಪುರುಷನಾಗಿ ಸಮಾಜಕ್ಕೆ ಇವರು ಸಲ್ಲಿಸಿರುವ ಸೇವೆ ಚಿರಸ್ಮರಣೀಯವಾಗಿದೆ. ಇವರ ಜೊತೆಗೆ ಗೋಪಾಲದಾಸ, ವಿಜಯದಾಸ, ಶ್ರೀ ರಾಘವೇಂದ್ರ ಸ್ವಾಮಿಗಳ ಕೊಡುಗೆಗಳು ದಾಸ ಪರಂಪರೆಯ ಅಧ್ಯಯನದಲ್ಲಿ ಪ್ರಮುಖವಾಗಿ ಕಂಡುಬರುತ್ತವೆ.

ವಚನಕಾರರ ವಚನಗಳು ಸರಳ ಭಾಷೆಯಲ್ಲಿದ್ದು ಜನಸಾಮಾನ್ಯರಿಗೆ ಬಹುಬೇಗ ತಲುಪಿ ಪರಿಣಾಮ ಬೀರಿದಂತೆ, "ಹರಿದಾಸರ ಕೀರ್ತನೆಗಳು ಅದೇ ರೀತಿ ಎಷ್ಟರಮಟ್ಟಿಗೆ ಜನಸಾಮಾನ್ಯರಿಗೆ ತಲುಪಿದವು ಮತ್ತು ತಲುಪದೇ ಇರಲು ಕಾರಣಗಳೇನು ಎನ್ನುವ ಅಂಶವನ್ನು ಪ್ರಸ್ತುತ ಅಧ್ಯಯನ ದಲ್ಲಿ ವಿಶ್ಲೇಷಿಸುವುದು ಅವಶ್ಯಕವಾಗಿದೆ. ವಚನಕಾರರಂತೆ ಹರಿದಾಸರು ಸಹಾ ಸಂಸ್ಕೃತವನ್ನು ಬಿಟ್ಟು ತಮ್ಮ ಅನುಭವ, ತತ್ವಗಳನ್ನು ಪ್ರಚಾರ ಮಾಡಲು ಆಡು ನುಡಿ ಕನ್ನಡವನ್ನು ಮಾಧ್ಯಮವನ್ನಾಗಿ ಬಳಸಿದರೂ ಸಹ ಅದು ಹೆಚ್ಚಿನ ಜನತೆಯೊಂದಿಗೆ ಅರ್ಥಪೂರ್ಣ ಸಂಬಂಧವನ್ನು ಹೊಂದುವುದು ಕಷ್ಟವಾಯಿತು. ಅದಕ್ಕೆ ಕಾರಣಗಳನ್ನು ಹುಡುಕುತ್ತಾ ಹೋದರೆ, ಹರಿದಾಸ ಸಾಹಿತ್ಯ ರಚನೆ ಯಾಗಿರುವುದು ಸಂಗೀತಶಾಸ್ತ್ರದ ತಳಹದಿ ಮೇಲೆ ಮತ್ತು ಸಾಹಿತ್ಯ ವಿಶೇಷವಾಗಿ ಬ್ರಾಹ್ಮಣ ವಲಯದಲ್ಲೇ ಬೆಳೆಯಿತು."[೨೩] ಹೀಗಾಗಿ ಈ ಸಾಹಿತ್ಯ ಕೇವಲ ಸಮಾಜದ ಮೇಲ್ವರ್ಗಗಳಲ್ಲೇ ಸುತ್ತುತ್ತಾ ಸಮಾಜದ ತಳಭಾಗದಲ್ಲಿ ತನ್ನ ಪ್ರಭಾವ ಬೀರುವಲ್ಲಿ ಅಷ್ಟೊಂದು ಸಫಲವಾಗಲಿಲ್ಲ ಎನ್ನುವ ಅಭಿಪ್ರಾಯವು ಕೇಳಿ ಬರುತ್ತದೆ.

ಮಾನವನು ಸಮಾಜದ ಜೀವಿಯಾಗಿರುವುದರಿಂದ ಇತರರೊಡನೆ ಅವನು ಹೇಗೆ ಬಾಳ ಬೇಕೆಂಬುದನ್ನು ದಾಸರು ಒತ್ತಿ ಹೇಳಿದ್ದಾರೆ. ಅವರ ಕೀರ್ತನೆಗಳು ನೀತಿಯ ನೆಲೆಗಟ್ಟಿನ ಮೇಲೆ ನಿಂತಿವೆ. ಅದರಲ್ಲೂ ಸ್ತ್ರೀಪರವಾದ ಅವರ ಧ್ವನಿಯನ್ನು ಗುರುತಿಸಬಹುದಾಗಿದೆ. ಸ್ತ್ರೀಯನ್ನು ತಾಯಿಯಾಗಿ, ಮಡದಿಯಾಗಿ, ಸೊಸೆಯಾಗಿ, ಮಗಳಾಗಿ, ಅಕ್ಕ ತಂಗಿಯಾಗಿ ಸಮಾಜದಲ್ಲಿ ಸ್ತ್ರೀ ವಹಿಸುವ ಕರ್ತವ್ಯ ಮತ್ತು ಹೊಣೆಗಾರಿಕೆಯನ್ನು ವಸ್ತುನಿಷ್ಠವಾಗಿ ಪ್ರಸ್ತುತಪಡಿಸಿದ್ದುದು ಇಂದಿಗೂ ಅನುಸರಣೀಯವಾಗಿದೆ. ಜೊತೆಗೆ ಮೇಲು, ಕೀಳು, ಶ್ರೀಮಂತ, ಬಡವ ಎಂಬ ಸಂಕುಚಿತ ಮನೋಭಾವದ ಅಂದಿನ ಸಮಾಜವನ್ನು ತಿದ್ದಲು ದಾಸರು ಪ್ರಯತ್ನಿಸಿದ್ದಾರೆ. ಜಾತಿ ಭೇದಗಳನ್ನು ಖಂಡಿಸಿ ಸಾಮಾಜಿಕ ಸಮಾನತೆಯನ್ನು ಎತ್ತಿ ಹಿಡಿದಿದ್ದಾರೆ. ಸಮಾಜದಲ್ಲಿ ಯಾವುದೇ ಸಂಘರ್ಷಗಳಿಗೆ, ಎಡೆ ಮಾಡಿಕೊಡದೆ, ಯಾವುದೇ ಒತ್ತಾಯವಿಲ್ಲದೆ, ವಿರೋಧವಿಲ್ಲದೆ, ಸಮಾಜವೊಂದರ ಪ್ರಗತಿಗೆ ಪ್ರಯತ್ನಿಸಿದ್ದು ದಾಸ ಪರಂಪರೆಯ ನಿಜವಾದ ಸಾಧನೆ ಆಗಿದೆ. ಇಂತಹ ಪರಂಪರೆ ಇಂದಿನ ಸಮಾಜದ ಸುಧಾರಣೆಗೂ ಮಾರ್ಗದರ್ಶನದಂತಿದೆ.

ಆದರೆ ಇಂದು ಶ್ರೇಷ್ಠ ವ್ಯಕ್ತಿಗಳನ್ನು ಒಂದು ಜಾತಿಗೆ, ಸಮೂಹಕ್ಕೆ ಮೀಸಲಾಗಿಸಿ ಸಮಾಜ ದಿಂದಲೇ ಪ್ರತ್ಯೇಕಿಸಲಾಗುತ್ತಿದೆ. ಉದಾಹರಣೆಗೆ ಕನಕದಾಸರನ್ನು ಕೇವಲ ಕುರುಬ ಸಮಾಜದ ನಾಯಕ ಎನ್ನುವ ರೀತಿಯಲ್ಲಿ ವೈಭವೀಕರಿಸುತ್ತಾ, ಅವರನ್ನು ಆದರ್ಶ ವ್ಯಕ್ತಿಯನ್ನಾಗಿ ನೋಡುವ ಬದಲಾಗಿ ಗುರು, ದೈವೀಪುರುಷರನ್ನಾಗಿ ನೋಡಲಾಗುತ್ತಿದೆ. ಕನಕದಾಸರು ತಮ್ಮ ಹಾಡು ಕೀರ್ತನೆಗಳಲ್ಲಿ ಪ್ರತಿಪಾದಿಸಿದ ತತ್ವಗಳು ಎಲ್ಲಾ ಜಾತಿ ಮತ ಧರ್ಮದವರಿಗೆ ಸಂಬಂಧಿಸಿದವಾಗಿದ್ದವು. ಅದರಲ್ಲೂ ಬಾಗಿಲನು ತೆರದು ಸೇವೆಯನು ಕೊಡು... ಎನ್ನುವ ಹಾಡಿನಲ್ಲಿ ಎಲ್ಲಾ ಕೆಳವರ್ಗದವರ ಕೂಗು ಇದೆ. ಇಂತಹ ವ್ಯಕ್ತಿಯನ್ನು ಒಂದು ಜಾತಿಗೆ ಸೀಮಿತಗೊಳಿಸಿ ಕನಕದಾಸರೆಂಬ ಕುರುಬ ಸಮಾಜದ ಗುರುಗಳು, ಗುರುಪೀಠ, ಕನಕ ಪೀಠ ಮುಂತಾದವುಗಳಿಂದ ಗುರುತಿಸಲಾಗಿದೆ. ಅವರ ತತ್ವ ಸಿದ್ಧಾಂತಗಳನ್ನು ಗಾಳಿಗೆ ತೂರಲಾಗುತ್ತಿದೆ.

## ೩.೪. ತತ್ವಪದಕಾರರ ಪರಂಪರೆ

ಯಾದಗಿರಿ ಜಿಲ್ಲೆಯಲ್ಲಿ ತತ್ವಪದಕಾರರ ವಿಶಿಷ್ಟವಾದ ಪರಂಪರೆಯಿದೆ. ಶರಣರ ಮತ್ತು ದಾಸರ ಕಾರ್ಯಕ್ಷೇತ್ರವಾದ ಪ್ರದೇಶ ತತ್ವಪದಕಾರರ ತಾಣವೂ ಆಗಿದೆ. ವಚನ ಹಾಗೂ ಕೀರ್ತನೆಗಳಂತಹ ವಿಶಿಷ್ಟ ಸಾಹಿತ್ಯವನ್ನು ನೀಡಿದ ಈ ಪ್ರದೇಶವು ಸಮಾಜದ ಎಲ್ಲಾ ವರ್ಗದ ಜನರನ್ನು ಸೆಳೆಯುವ ತತ್ವಪದಗಳನ್ನು ಕೊಟ್ಟಿದೆ. ಸಾಹಿತ್ಯ ಕ್ಷೇತ್ರದಲ್ಲಿ, ಭಕ್ತಿ ಚಳುವಳಿಯಲ್ಲಿ ಮತ್ತು ಸಮಾಜ ಸುಧಾರಣಾ ಚಳುವಳಿಯಲ್ಲಿ ತತ್ವಪದಗಳಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ವಚನಗಳು ಮತ್ತು ಕೀರ್ತನೆಗಳಂತೆ ತತ್ವಪದಗಳು ಸಹಾ ಭಕ್ತಿ ಸಾಹಿತ್ಯದ ಸ್ತೋತ್ರಗಳಾಗಿವೆ. ತತ್ವಪದಗಳಲ್ಲಿ ಗಾಢವಾದ ಅನುಭಾವ, ಆಧ್ಯಾತ್ಮಿಕತೆ, ಭಕ್ತಿಯ ತೀವ್ರತೆ, ನೀತಿ ಬೋಧನೆ, ಕಾವ್ಯಗುಣ ಮೊದಲಾದ ಸತ್ವ ಹಾಗೂ ತತ್ವಗಳು ಅಡಗಿವೆ.

ತತ್ವಪದಗಳ ಉದಯ ಮತ್ತು ಬೆಳವಣಿಗೆಯ ಹಿನ್ನೆಲೆಯನ್ನು ಅಧ್ಯಯನ ಮಾಡಿದಾಗ ಕಂಡುಬರುವ ಚಾರಿತ್ರಿಕ ಅಂಶಗಳೆಂದರೆ, ಆದಿಲ್‌ಶಾಹಿಗಳ ಆಳ್ವಿಕೆ ಕೊನೆಗೊಳ್ಳುತ್ತಿದ್ದಂತೆ ಇಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಅರಾಜಕತೆಗಳು ಹುಟ್ಟಿಕೊಂಡವು. ಯಾವುದೇ ಧರ್ಮವು ಜನಸಮುದಾಯಗಳನ್ನು ಮುನ್ನಡೆಸುವಷ್ಟು ಕ್ರಿಯಾಶೀಲವಾಗಿರಲಿಲ್ಲ. ಲಿಂಗಾಯತರು, ಮುಸ್ಲಿಮರು ತಮ್ಮ ನಿರ್ದಿಷ್ಟ ವಲಯದೊಳಗೆ ಬದುಕುತ್ತಿದ್ದರು. ಬಡವರನ್ನು, ಕೆಳವರ್ಗದವರನ್ನು ಆಕರ್ಷಿಸಿದ್ದ ಸೂಫಿಗಳ ಪ್ರಭಾವವು ಇಳಿಮುಖವಾಗಿತ್ತು. ದಾಸರ ಪದಗಳು ಹೆಚ್ಚಾಗಿ ಬ್ರಾಹ್ಮಣರ ವಲಯದಲ್ಲಿ ಮಾತ್ರ ಇದ್ದವು. ಇಂತಹ ಸಮಯದಲ್ಲಿ "೧೭ರಿಂದ ೧೯ನೇ ಶತಮಾನದಲ್ಲಿ ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ, ಹಾಡುಗಳಿಂದಲೇ ಜನಸಾಮಾನ್ಯರನ್ನು ಆಕರ್ಷಿಸಿ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗೆ ಕಾರಣರಾದವರನ್ನೇ ತತ್ವಪದಕಾರರೆಂದು ಹಾಗೂ ಅವರು ಕಟ್ಟಿ ಹಾಡಿದ ಹಾಡುಗಳೇ ತತ್ವಪದಗಳೆಂದು ಪ್ರಸಿದ್ಧಿಯಾದವು. 'ತತ್ವ' ಎಂದರೆ ಸಿದ್ಧಾಂತ. ಇನ್ನೊಬ್ಬರಿಗೆ ಕೇಡನ್ನು ಬಗೆಯದ ರೀತಿಯಲ್ಲಿ ಸಮಾಜ ನಿರೂಪಿಸಿಕೊಂಡಿರುವ ಒಂದು ಚೌಕಟ್ಟು. ತತ್ವವನ್ನು ಪರ್ಯಾಯವಾಗಿ ದೇವರು ಎಂದು ಗ್ರಹಿಸಿಕೊಳ್ಳಲಾಗುತ್ತದೆ. 'ಪರಮಾತ್ಮನಿಗೆ ಸಂಬಂಧಿಸಿದ ಸಿದ್ಧಾಂತವನ್ನು ಹಾಡಿನ ಮೂಲಕ ಅಭಿವ್ಯಕ್ತಿಸುವ ಕ್ರಿಯೆಗೆ ತತ್ವಪದವೆನ್ನುತ್ತಾರೆ."[೩೪]

ತತ್ವಪದದ ಹಾಡುಗಾರರೆಲ್ಲರು ದೈವ ಭಕ್ತರು. "ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವ ಸಲುವಾಗಿ ಭಕ್ತಿಯಿಂದ ಪ್ರಾರ್ಥಿಸುತ್ತಿದ್ದರು. ಹಾಡುಗಳನ್ನು ಏಕಾಂತದಲ್ಲಿ ಕುಳಿತು ಧ್ಯಾನಮಗ್ನರಾಗಿ ಹಾಡುತ್ತಿದ್ದರು. ಇಂತಹ ಹಾಡುಗಳು ಸಮೂಹದ ಮಧ್ಯದಲ್ಲಿ ಬಂದಾಗ ಭಜನೆಯ ಪದಗಳಾದವು ಹಾಗೂ ಅನುಭವದ ಹಾಡುಗಳಾದವು. ತತ್ವಪದಗಳನ್ನು ವಿಶಾಲಾರ್ಥದಲ್ಲಿ ಧಾರ್ಮಿಕ ಪಠ್ಯಗಳೆನ್ನಬಹುದು. ಇವು ಭಕ್ತಿ ಚಳುವಳಿಯ ಚಿಂತನೆ, ತತ್ವ ಮತ್ತು ಮೌಲ್ಯಗಳನ್ನು ವ್ಯಾಪಕವಾಗಿ ಹರಡುವುದಕ್ಕೆ ರಚನೆಯಾದವುಗಳಾಗಿವೆ. ತತ್ವಪದಗಳನ್ನು ತತ್ವಪದಕಾರರೆ ರಚಿಸಿ ಹಾಡಿದ ಹಾಡುಗಳಾಗಿವೆಯಲ್ಲದೆ ವಚನ ಸಾಹಿತ್ಯದಷ್ಟೇ ಜನಪ್ರಿಯವಾಗಿವೆ. ೨೦ನೇ ಶತಮಾನದವರೆಗೂ ತತ್ವಪದಗಳು ಜನಸಮುದಾಯಗಳ ನಾಲಿಗೆ ಮೇಲಿದ್ದವು. 'ಹಳ್ಳಿ ಹಳ್ಳಿಗಳಲ್ಲಿ ತತ್ವಪದಗಳ ಹಾಡು ಹಾಗೂ ತಂಬೂರಿಯ ನಾದ ಬತ್ತಿದ ದಿನಗಳಿಲ್ಲ' ಎಂಬ ಮಾತಿನಲ್ಲಿ ಉತ್ಪ್ರೇಕ್ಷೆಯಿದ್ದಿಲ್ಲ."[೩೫] ೧೮ನೇ ಶತಮಾನದಿಂದ ಆರಂಭವಾದ

ಸಾಹಿತ್ಯವನ್ನು ಕಟ್ಟಿದವರಲ್ಲಿ ರಾಮಪುರದ ಬಕ್ಕಪ್ಪಯ್ಯ, ಕೂಡಲೂರು ಬಸವಲಿಂಗಪ್ಪ, ಕಡಕೋಳ ಮಡಿವಾಳಪ್ಪ, ಮೊಟ್ನಹಳ್ಳಿ ಹಸನ್‌ಸಾಬ, ನಿಡವುಂಚಿ ಭದ್ರೇಶ್ವರ ಮುಂತಾದ ಸಂತರಿದ್ದಾರೆ. ಇಂದಿಗೂ ಜನಸಮುದಾಯವೇ ತತ್ವಪದಗಳನ್ನು ತನ್ನ ಒಡಲಿನಲ್ಲಿಟ್ಟುಕೊಂಡು ಪೋಷಿಸುತ್ತಾ ಬಂದಿದೆ.

ಇಂತಹ ಸಂತರಿಂದ ರಚನೆಗೊಂಡ ತತ್ವಪದಗಳು ಲಿಖಿತ ಹಾಗೂ ಮೌಖಿಕ ಪರಂಪರೆಯಲ್ಲಿ ಬೆಳೆದುಕೊಂಡು ಬಂದಿರುವುದನ್ನು ಕಾಣಬಹುದು. "ಮಠಮಾನ್ಯಗಳ ಆಶ್ರಯದಲ್ಲಿ ಗುರು ಪರಂಪರೆಯಲ್ಲಿದ್ದಂತಹ ಯೋಗಿಗಳು ಮತ್ತು ಗೀಗೀ ಹಾಡಿನ ವೃತ್ತಿಗಾಯಕರ ಪದಗಳು ಲಿಖಿತ ರೂಪದಲ್ಲಿ ದಾಖಲಾದವು. ದಲಿತರ, ಅಲ್ಪಸಂಖ್ಯಾತರ ಬಡವರ್ಗದವರ ಹಾಡುಗಳು ಮೌಖಿಕ ಪರಂಪರೆಯಲ್ಲಿ ಉಳಿದುಕೊಂಡವು. ಇಂತಹ ಹಾಡುಗಳನ್ನು ದಲಿತರ ಭಜನೆ ಮತ್ತು ಇತರ ಭಜನೆಗಳಲ್ಲಿ ಕಾಣಬಹುದು. ಹೀಗೆ ಎಲ್ಲಾ ಜಾತಿಯ ತತ್ವಪದಕಾರರು ತತ್ವಪದಗಳನ್ನು ರಚನೆ ಮಾಡಿದರು ಎನ್ನುವುದು ವಿಶೇಷವಾದ ಅಂಶವಾಗಿದೆ. ತತ್ವಪದಗಳು ಒಂದು ಅನುಭವದ ಘಟನೆಯಿಂದ ಹುಟ್ಟುತ್ತವೆ. ಆ ಘಟನೆಗಳ ತತ್ವವನ್ನು ಭೇದಿಸುವುದರ ಮೂಲಕ ಅನುಭವವನ್ನು ಅನುಭಾವಕ್ಕೆ ತಿರುಗಿಸುತ್ತವೆ. ಸಂತರ ಅಥವಾ ಅವರ ಶಿಷ್ಯರ ಬದುಕಿನ ಘಟನೆಗಳೇ ತತ್ವಪದಗಳಿಗೆ ವಿವರಣೆಯಾಗುತ್ತವೆ. ತತ್ವಪದಗಳನ್ನು ರಚಿಸುವವರಿಗೆ ಅನುಭಾವಿ ಕವಿಗಳೆಂದು ಕರೆದರೆ, ತತ್ವಪದ ಗಳನ್ನು ಪ್ರಸಾರ ಮಾಡುವವರಿಗೆ ಭಜನೆ ಮೇಳಗಳೆಂದು ಗುರುತಿಸಲಾಗಿದೆ. ತತ್ವಪದದ ಪರಂಪರೆ ಯಲ್ಲಿ ತತ್ವಪದ ರಚನಾಕಾರರೇ ಅದರ ಹಾಡುಗಾರರಾಗಿರುವುದು ವಿಶಿಷ್ಟವಾಗಿದೆ."[೩] ತತ್ವಪದಕಾರರ ಒಡನಾಟ ಮುಖ್ಯವಾಗಿ ಸಾಮಾನ್ಯ ಜನರೊಂದಿಗಿತ್ತು. ಜನಸಾಮಾನ್ಯರ ಆಸೆ, ಆಕಾಂಕ್ಷೆ, ಅನಿಸಿಕೆ, ಅವರ ಬೇಕು ಬೇಡ, ಸುಖ, ದುಃಖ ಎಲ್ಲವನ್ನು ತಿಳಿದುಕೊಂಡು ಅವರಿಗೆ ಬದುಕಲು ಕಲಿಸಿದರು.

ಪರಧರ್ಮ ಹೆಚ್ಚಿನದು, ಇದು ಬೆಳೆದರೆ ಸಮಾಜದ ಆರೋಗ್ಯ ಚೆನ್ನಾಗಿರುವುದೆಂದು ಸಾರಿದರು. ದೈವವಾದವನ್ನು ಅಳಿಸಿ, ಮಾನವತಾವಾದವನ್ನು ಬೆಳೆಸಿದರು. ಇವರ ನುಡಿಗಳಿಂದ ಮೂಢನಂಬಿಕೆಗಳು ಹೋಗಿ ಜನರಲ್ಲಿ ಶುದ್ಧವಾದ ಅರಿವು ಮೂಡಲು ಸಾಧ್ಯವಾಯಿತು. ಸ್ವರ್ಗ, ನರಕ, ಕೈಲಾಸ, ವೈಕುಂಠ ಮುಂತಾದ ಅವೈಜ್ಞಾನಿಕ ಅಪ್ರಬುದ್ಧ ವಿಚಾರಗಳನ್ನು ಅಳಿಸಿ ಇವು ಎಲ್ಲಿಯೂ ಇಲ್ಲ, ನಮ್ಮ ಜೀವನದಲ್ಲಿಯೇ ಇವೆಯೆಂಬುದನ್ನು ತಿಳಿಸಿದರು. ಜೊತೆಗೆ ಭೂಮಿಯನ್ನು ಕೈಲಾಸವೆಂದು ನಂಬಿ ಬೋಧಿಸಿದರು. ಅಲ್ಲದೆ ಜಾತಿಯ ಕಟ್ಟಳೆಗಳನ್ನು ತಿರಸ್ಕರಿಸುತ್ತಾ, ವಿವಿಧ ಜಾತಿ ಧರ್ಮಗಳಲ್ಲಿ ಸಹಬಾಳ್ವೆಯನ್ನು ಸಾಧಿಸಲು ತತ್ವಪದಕಾರರು ಪ್ರಯತ್ನಿಸಿದ್ದಾರೆ.

"ಬಸವಾದಿ ಶರಣರು ವೀರಶೈವ ಸಿದ್ಧಾಂತವನ್ನು ಅನುಸರಿಸಿ ಹಾಡುಗಳನ್ನು ರಚಿಸಿದರೆ, ಹರಿದಾಸರು ವೈದಿಕ ನೆಲೆಯಲ್ಲಿ ಹಾಡಿದರು. ಶರಣ ಮಾರ್ಗಾವಲಂಬಿಗಳಾಗಿ ದಾಸ ಸಾಹಿತ್ಯ ದಂತೆಯೇ ಜನ ಜೀವನವನ್ನು ಯಾವುದೇ ಸಾಂಸ್ಥಿಕ ಧರ್ಮವನ್ನು ಅನುಸರಿಸದೇ ಅನುಭಾವಿಗಳು ಸಾಕಷ್ಟಿದ್ದಾರೆ. ಇವರು ನಿರೂಪಣೆ ಮತ್ತು ಅನುಭಾವದ ಪ್ರತಿಪಾದನೆಗೆ ಗಮನಕೊಟ್ಟವರು. ಧರ್ಮಾತೀತವಾದ ನೆಲೆಯಲ್ಲಿ ನಿಂತು ಮಾನವತೆಯನ್ನು ಎತ್ತಿ ಹೇಳಿದರು. ಹುಟ್ಟಿದ ಜಾತಿ ಧರ್ಮಕ್ಕಿಂತ, ಮನುಷ್ಯ ಇಟ್ಟುಕೊಂಡ ರೀತಿ–ನೀತಿಗಳು, ಸಂಸ್ಕಾರಗಳು ಮುಖ್ಯವೆಂಬುದನ್ನು ಸಾರಿದರು. ಸಂಸಾರದ ತಾಕಲಾಟಗಳಿಂದ ಬಿಡಿಸಿಕೊಂಡು, ಅಂತರಂಗದ ಅರಿವಿನ ಮೂಲಭೂತ

ತತ್ವವನ್ನು ಅರಿತುಕೊಂಡು, ಅನುಭಾವದ ಸಾರವನ್ನು ಪಡೆಯಬೇಕೆಂದು ಹೇಳಿದ ಈ ತತ್ವಪದಕಾರರು ಮೌಲಿಕ ಚಿಂತನೆಗಳಿಂದ ಗಮನ ಸೆಳೆಯುತ್ತಾರೆ."[೩೭]

"ಮುಸ್ಲಿಮರು, ಕ್ರಿಶ್ಚಿಯನ್ನರು, ದಲಿತರು, ಗುರು-ಶಿಷ್ಯ ಪರಂಪರೆಯವರು, ಬೇಡ, ಕಬ್ಬಲಿಗ, ಕುರುಬರು ಹೀಗೆ ಹಲವು ಧರ್ಮ-ಜಾತಿಗಳವರು ಅದರಲ್ಲೂ ದುಡಿವ ವರ್ಗದಿಂದ ಬಂದ ಅನುಭಾವಿ ಕವಿಗಳು ವಿಶೇಷವಾಗಿ ಗಮನ ಸೆಳೆಯುತ್ತಾರೆ. ಬಸವಾದಿ ಶಿವಶರಣರಿಂದ ಗಾಢವಾಗಿ ಪ್ರಭಾವಿತಗೊಂಡ ಈ ಅನುಭಾವಿಗಳು ಸಂಸಾರವನ್ನು ನಶ್ವರವೆಂದು ಭಾವಿಸಿ, ಪಾರಮಾರ್ಥವೇ ಪರಮ ಸತ್ಯವೆಂದು ನಂಬಿದ್ದಾರೆ."[೩೮]

ಬೇಡ, ಕಬ್ಬಲಿಗ, ಕುರುಬ, ದಲಿತ ಮುಂತಾದ ದುಡಿವ ವರ್ಗದಿಂದ ಬಂದವರು ಅನುಭಾವಿಗಳಾಗಿ ವಿಶಿಷ್ಟ ತತ್ವ ಪದಕಾರರೆನಿಸಿದ್ದಾರೆ. ತೆಲಗಬಾಳ ರೇವಪ್ಪ ಎಂಬುವನು ಮಡಿವಾಳಪ್ಪನ ಶಿಷ್ಯ. ಲಿಂಗದೀಕ್ಷೆ ಹೊಂದಿ, ಶಿವಯೋಗದ ಮೂಲಕ ಅನುಭಾವಿಯಾಗಿ ಹಾಡುಗಳನ್ನು ರಚಿಸಿದ್ದಾರೆ. ಕಡ್ಲೆವಾಡ ಸಿದ್ದಪ್ಪ ಕಬ್ಬಲಿಗ ಮನೆತನದಿಂದ ಬಂದವನು. ವೃತ್ತಿಯಿಂದ ಅಂಬಿಗನಾಗಿ, ಪ್ರವೃತ್ತಿಯಿಂದ ಮಡಿವಾಳಪ್ಪನ ಒಡನಾಟದಲ್ಲಿ ಬೆಳೆದು ಶಿವಯೋಗಿಯಾದನು. "ರಸ್ತಾಪುರದ ಭೀಮಕವಿ ಕುರುಬರ ಮನೆತನದಲ್ಲಿ ಜನಿಸಿ, ಶಿಕ್ಷಕನಾಗಿ, ಸಣ್ಣಾಟಗಳನ್ನು ಆಡುತ್ತ, ಅಧ್ಯಾತ್ಮ ಸಾಧನೆಯಿಂದ ಅನುಭಾವಿಯಾದನು. ತತ್ವಪದಗಳ ಜೊತೆಗೆ ಈತ ಕೆಲವು ಕಾವ್ಯಗಳನ್ನು ಬರೆದಿರುವುದುಂಟು. ಮಾದನ ಹಿಪ್ಪರಗದ ಸಿದ್ಧರಾಮ ನೇಕಾರ ಜಾತಿಯಲ್ಲಿ ಜನಿಸಿದವನು. ಹುಬ್ಬಳ್ಳಿಯ ಸಿದ್ಧಾರೂಡರಿಂದ ಪ್ರಭಾವಿತನಾಗಿ ಸಂಸಾರ ವಿರತಿ ಹೊಂದಿ, ಶಿವಯೋಗಿಯಾದನು. ತನ್ನ ತತ್ವಪದಗಳ ಸಂಗ್ರಹಕ್ಕೆ 'ಸಿದ್ಧಲಿಂಗ ಕೈವಲ್ಯ' ಎಂದು ಕರೆದಿದ್ದಾರೆ. ಹೊನ್ನು, ಹೆಣ್ಣು, ಮಣ್ಣು ಇವುಗಳ ಚಿಂತನೆಯಲ್ಲಿ ಕುಳಿತುಕೊಳ್ಳದೆ, ಹೇಸಿ ಸಂಸಾರಕ ಆಸಿ ಮಾಡದೆ ಶಿವಲಿಂಗನನ್ನು ಕೊಡಲು ಕರೆ ನೀಡುತ್ತಾನೆ. ಉನ್ನತ ಅನುಭಾವ ಈತನ ಹಾಡುಗಳಲ್ಲಿ ಮೈದಾಳಿ ನಿಂತಿದೆ."[೩೯]

ದಲಿತ ಜನಾಂಗದಿಂದ ಬಂದ ತತ್ವಪದಕಾರರೂ ಗಣನೀಯ ಸಾಧನೆ ಮಾಡಿದ್ದಾರೆ. ಜಂಬಗಿ ಶರಣಪ್ಪ ದಲಿತನಾಗಿ, ಸಾಧನೆಯಿಂದ ಅನುಭಾವಿಯಾಗಿ ಬೆಳೆದನು. ಬೀಕರ ಬಡತನ, ಕಷ್ಟಕರ ಜೀವನದ ಮಧ್ಯೆಯೂ ಪರಿಶ್ರಮ ಜೀವಿಯಾಗಿ ಜೀವನವನ್ನು ಎದುರಿಸುತ್ತಾ, ಅಧ್ಯಾತ್ಮ ಸಾಧನೆಯ ಮೂಲಕ ಉತ್ತುಂಗ ನಿಲುವನ್ನೇರಿದನು. ಕುಲ ಕುಲವೆಂದು ಕೂಗುತ್ತೀರಿ ನಿಮ್ಮ ಕುಲ ಯಾವುದಣ್ಣ ಎಂದು ಪ್ರಶ್ನಿಸಿದ ಶರಣಪ್ಪ.

"ಮೇಲು ಕೀಳೆಂಬುದೇನ ಕಾರಣ
ಹೊಲಸು ತುಂಬಿದ ಗಡಗಿ ಪೂರ್ಣ
ಮಲ ಮೂತ್ರದಲಿ ಹುಟ್ಟಿ ಚರ್ಮದಂಗಿ ತೊಟ್ಟು
ಚೆಲುವು ನಾ ಅನ್ನಬೇಡಿರಣ್ಣ
ಮಾನವನಲಿರಬೇಕು ಅಂತಃಕರಣ
ದಯಾ-ಧರ್ಮ ತಿಳಿದವನೇ ನಿಜ ಶರಣ"

ಎಲ್ಲಾರೂ ಮಲಮೂತ್ರದಲ್ಲಿ ಹುಟ್ಟಿ ಬಂದವರು. ಮೇಲು-ಕೀಳು ಮಾಡುವುದು ಸರಿಯಲ್ಲ. ದಯೆ-ಧರ್ಮ, ಅಂತಃಕರಣವುಳ್ಳವನೇ ನಿಜವಾದ ಶರಣನೆಂದು ಹೇಳಿರುವುದು ಅನನ್ಯವೆನಿಸಿದೆ."[೪೦]

ಯಾದಗಿರಿ ಜಿಲ್ಲೆಯ (ಅವಿಭಜಿತ) ತತ್ವಪದಕಾರರಲ್ಲಿ, ಜೇವರ್ಗಿ ತಾಲೂಕಿನ ರಾಮಪುರದ ಬಕ್ಕಪ್ಪ ಮೊಟ್ಟ ಮೊದಲನೆಯ ತತ್ವಪದಕಾರನಾಗಿದ್ದಾನೆ. ಈತ ಕ್ರಿ.ಶ. ೧೬೧೦ರಿಂದ ೧೭೦೦ರ ಅವಧಿಯಲ್ಲಿದ್ದಿರಬಹುದೆಂದು ತಿಳಿದುಬರುತ್ತದೆ. ಈತನ ಸುಮಾರು ಇಪ್ಪತ್ತೆರಡು ತತ್ವಪದಗಳು ಹಾಗೂ ಒಂದು ನೂರಾ ಏಳು ತ್ರಿಪದಿಗಳು ದೊರೆತಿವೆ. ವಿಶಿಷ್ಟ ತತ್ವಪದಕಾರರಾಗಿ ತಮ್ಮ ಬೆಳಕಿನ ದಾರಿಯನ್ನು ಈ ಭೂಮಿಯ ಮೇಲೆ ಬಿಟ್ಟು ಹೋದ ಮೋಟನಹಳ್ಳಿ ಹಸನ ಸಾಹೇಬರು ಬಾಳಿ ಬದುಕಿದ್ದು ಯಾದಗಿರಿ ಜಿಲ್ಲೆಯಲ್ಲಿ. ಬಕ್ಕಪ್ಪ ವಿರಕ್ತನಾಗಿದ್ದು ಯೋಗಿಯಾಗಿದ್ದ ನೆಂದು ತಿಳಿದುಬರುತ್ತದೆ. ಇನ್ನು 'ಕಡಕೋಳ ಮಡಿವಾಳಪ್ಪ' ಬಹುಮುಖ್ಯ ತತ್ವಪದಕಾರ. ಈತನ ಕಾಲ ಸು. ಕ್ರಿ.ಶ. ೧೭೬೫ರಿಂದ ೧೮೪೦ರ ಅವಧಿ ಎಂದು ತಿಳಿದುಬರುತ್ತದೆ. ಮಡಿವಾಳಪ್ಪ ತನ್ನ ಮೇಲಾಗುತ್ತಿದ್ದ ಜಾತಿ ನಿಂದನೆಯಿಂದ ಬೇಸತ್ತು, ದಾಸೋಹಮೂರ್ತಿ ಶರಣಬಸಪ್ಪನ ಆಶ್ರಯ ಪಡೆದನು. ನಂತರ ಅವರ ಮಾರ್ಗದರ್ಶನದಲ್ಲಿ ಕಲಕೇರಿ ಮರುಳಾ ರಾಧ್ಯರಿಂದ ಲಿಂಗದೀಕ್ಷೆ ಪಡೆದು ಮುಂದೆ ಅನುಭಾವಿಯಾಗಿ ಬೆಳೆದು ನಿಂತನು. ಶರಣಪ್ಪ ಅನ್ನ ದಾಸೋಹಕ್ಕೆ ಹೆಸರಾದರೆ, ಮಡಿವಾಳಪ್ಪ ಜ್ಞಾನದಾಸೋಹಕ್ಕೆ ಕಾರಣನಾಗಿದ್ದಾನೆ. ಹೀಗೆ ಮಡಿವಾಳಪ್ಪ ಅನೇಕ ಅಪವಾದಗಳನ್ನೆದುರಿಸಿ ಹೋರಾಟದ ಜೀವನ ನಡೆಸುತ್ತಾನೆ. ಆಸ್ತಿ, ಅಂತಸ್ತು, ಜಾತಿ, ಮತ, ಮೇಲು, ಕೀಳು ಈ ಎಲ್ಲ ಭೇದಗಳನ್ನಳಿಸಲು ಪ್ರಯತ್ನಿಸಿದ ಮಡಿವಾಳಪ್ಪ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾನೆ. 'ಮಹಾಂತ' ಅಂಕಿತನಾಮದಲ್ಲಿ ಸಾವಿರಾರು ತತ್ವಪದಗಳನ್ನು ರಚಿಸಿದ್ದಾನೆ.

ಉದಾಹರಣೆಗೆ,

"ಬಾಯಿಲೊಂದು ಆಡ್ತೀರಿ
ಮನಸಿನೊಳಗೊಂದು ಮಾಡ್ತೀರಿ
ಬರೆದಿಟ್ಟಿದು ಓದಿಕೊಂಡು
ಭ್ರಾಂತಿಗೆಟ್ಟು ಹೋಗತೀರಿ
ಶೀಲವಂತರಂತೀರಿ ಸುಳ್ಳೆಶೀಲ ಮಾಡ್ತೀರಿ
ಸಂತ್ಯಾನಲಿಂಗ ಕಟ್ಟಿಕೊಂಡು
ಸತ್ತ್ಯನಾಸ್ಯಾಗಿ ಹೋಗತೀರಿ."[೪೧]

ಮುಸ್ಲಿಂ ತತ್ವಪದಕಾರರೆಂದರೆ 'ಚೆನ್ನೂರ ಜಲಾಲಸಾಹೇಬ'. ಇವರು ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನ ಅಣಕಸೂಗೂರು ಗ್ರಾಮದಲ್ಲಿ ಕ್ರಿ.ಶ. ೧೭೭೦ರಲ್ಲಿ ಜನಿಸಿದರು. ಆ ಕಾಲದ ಅನುಭಾವ ಪಂಥದ ಪ್ರಭಾವಿ ವ್ಯಕ್ತಿಯಾಗಿದ್ದ ಮಡಿವಾಳಪ್ಪನ ಪ್ರಭಾವಕ್ಕೆ ಒಳಗಾಗಿ ಅವರ ಶಿಷ್ಯವರ್ಗದಲ್ಲಿ ಒಬ್ಬರಾದರು. ನಂತರ ಕೂಡಲೂರು ಬಸವಲಿಂಗ ಶರಣರ ಶಿಷ್ಯರಾಗಿ ಹನ್ನೆರಡು ವರ್ಷ ಕಾಲ ಗುರು ಸೇವೆ ಮಾಡಿ ವೀರಶೈವ ಸಿದ್ಧಾಂತದಲ್ಲಿ ಪರಿಣತಿ ಪಡೆದು ಅನುಭಾವಿಯಾಗಿ ಬೆಳೆದು ತತ್ವಪದಗಳನ್ನು ರಚಿಸಿದ. ಆಲಾಲಸಾಹೇಬ ವಿವಾಹಿತನಾಗಿದ್ದು ಸಂಸಾರದಲ್ಲಿದ್ದುಕೊಂಡೇ ಅನುಭಾವದೆತ್ತರವನ್ನು ಮುಟ್ಟಿದ. ಇವರು ಈಶ್ವರ್ ಅಲ್ಲಾ ಒಂದೇ ಎಂದು ಸಾರುತ್ತಾ ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನು ಬೆಳೆಸಿದ್ದಾರೆ. ಜಲಾಲಸಾಹೇಬರು 'ಗುರುಮಡಿವಾಳ'

ಎಂಬ ಅಂಕಿತದಲ್ಲಿ ತತ್ವಪದಗಳನ್ನು ರಚಿಸಿದರು. ಕನ್ನಡ ಉರ್ದು ಮಿಶ್ರಿತ ಆಡುನುಡಿ ಇವರ ತತ್ವಪದಗಳ ಆಕರ್ಷಣೆಯಾಗಿದೆ.

"ಸಬ್ ಕಹತೇ ಈಶ್ವರ ಅಲ್ಲಾ
ಇದರ ಭೇದ ಯಾರಿಗೂ ತಿಳಿಯಲಿಲ್ಲ
ನಿರಂಕಾರಸೇ ಆಕಾರ ಹೂವೇ
ವೇದಶಾಸ್ತ್ರಕ್ಕೆ ನಿಲುಕಿಲ್ಲ
ಹಿಂದೂ ಮುಸ್ಲಿಂ ಶಾಸ್ತ್ರಪಡತೇ ಹೈ
ಗುರುಮನಿ ಕೀಲಿ ಸಿಗಲಿಲ್ಲ........."೨

ಯಾದಗಿರಿ ಜಿಲ್ಲೆಯ ಸೌಹಾರ್ದ ಬದುಕಿಗೆ, ಸಮನ್ವಯ ಆಚರಣೆಗಳಿಗೆ ತತ್ವಪದಗಳು ಸಾಕಷ್ಟು ಪ್ರಭಾವವನ್ನು ಬೀರಿವೆ. ಇದರ ಪ್ರಭಾವವು ಇಂದಿಗೂ ಇಲ್ಲಿ ಉಳಿದುಕೊಂಡು ಬಂದಿರುವುದನ್ನು ಕಾಣುತ್ತಿದ್ದೇವೆ. ಯಾದಗಿರಿ ಜಿಲ್ಲೆಯ (ಅವಿಭಜಿತ) ಚೆನ್ನೂರು ಜಲಾಲಸಾಹೇಬ, ಮೋಟನಹಳ್ಳಿ ಹಸನ್ ಸಾಹೇಬ, ನರೋಣಾದ ಹೈದರಲಿ, ದೇಗಾವದ ಹಜರತ್ ಸಾಹೇಬ, ಮಹಾಗಾಂವದ ಅಮೀರ ಸಾಹೇಬ ಮುಂತಾದವರು ಮುಸ್ಲಿಂ ಜನಾಂಗದಲ್ಲಿ ಹುಟ್ಟಿ ಮೋಡಿ ಉರ್ದುವಿನಲ್ಲಿ ಅಭ್ಯಾಸ ಮಾಡಿ ಕನ್ನಡದಲ್ಲಿ ತತ್ವಪದ ರಚಿಸಿದ್ದು ಬಹುಮುಖ್ಯ ಸಂಗತಿಯಾಗುತ್ತದೆ. ಇವರೆಲ್ಲಾ ತಮ್ಮ ಪದಗಳಲ್ಲಿ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾರೆ. ಜಾತಿ ತೃಣಸಮಾನವೆಂದು ಸಾರಿ ಹೇಳಿದ್ದಾರೆ. ಕೂಡಲಿಂಗ ಬಸವಲಿಂಗ ಶರಣರು 'ಏಕಲ್ ಖಾಜಾ ಸಾಕ್ಷಾತ್ ಶಿವನು ಹಾನ ಆತ್ಮದೊಳಗೆ ಎಂದು ಹಾಡಿದರು. ಹೀಗಾಗಿ ಇಂದಿಗೂ ಕೂಡ ಈ ಭಾಗದಲ್ಲಿ ಹಿಂದೂ ಮುಸ್ಲಿಮರು ಸಾಮರಸ್ಯದ ಬದುಕು ಸಾಗಿಸುತ್ತಿದ್ದಾರೆ. ಹಿಂದೂ ದೇವಾಲಯಗಳಿಗೆ ಅನೇಕ ಮುಸ್ಲಿಮರು ದೇಣಿಗೆ ಕೊಟ್ಟಿದ್ದಾರೆ. ಅದೇ ರೀತಿ ಮಸೀದಿಗಳಿಗೆ ಅನೇಕ ಹಿಂದೂಗಳು ದಾನ ನೀಡಿದ್ದಾರೆ.

ಇನ್ನೂ ವಿಶೇಷವೆಂದರೆ ಹಿಂದೂಗಳಿಗೆ ಮುಸ್ಲಿಮರ ಹೆಸರಿಟ್ಟಿರುವ ಹಾಗೂ ಮುಸ್ಲಿಮರಿಗೆ ಹಿಂದೂಗಳ ಹೆಸರಿಟ್ಟಿರುವ ಉದಾಹರಣೆಗಳಿವೆ. ಮುಸ್ಲಿಮರ ಹಸನ್‌ಸಾಬ್ ಹುಸನಪ್ಪನಾಗಿ, ಹುಸೇನ್‌ಸಾಬ-ಹುಸೇನಪ್ಪನಾಗಿ, ಕರೀಮ್‌ಸಾಬ್ ಕರೀಮಪ್ಪನಾಗಿ, ರಾಜಾಸಾಬ ರಾಜಪ್ಪನಾಗಿ ಹೆಸರಿಟ್ಟುಕೊಂಡರೆ ಹಿಂದೂಗಳ ಹೆಸರಾದ ಅಣ್ಣೆಪ್ಪ ಅಣ್ಣಾ ಸಾಬನಾಗಿ, ಹುಚ್ಚಪ್ಪ ಹುಚ್ಚೇಸಾಬನಾಗಿ ಬುಡಪ್ಪ ಬುಡ್ಡೇಸಾಬನಾಗಿ ಕರೆಸಿಕೊಳ್ಳುತ್ತಾರೆ. ಹೀಗೆ ತತ್ವಪದಕಾರರ ಸಾಮರಸ್ಯದ ಸಮನ್ವಯದ ಬದುಕು ಇಲ್ಲಿ ತೀವ್ರ ಪರಿಣಾಮವನ್ನುಂಟು ಮಾಡಿದೆ. ಯಾದಗಿರಿ ಜಿಲ್ಲೆಗೆ ಮುಸ್ಲಿಂ ತತ್ವಪದಕಾರರ ಕೊಡುಗೆ ಪ್ರಮುಖವಾದುದಾಗಿದೆ.

ಈ ಭಾಗದ ಎಲ್ಲಾ ಮುಸ್ಲಿಂ ತತ್ವಪದಕಾರರಿಗೂ ಹಿಂದುಗಳೇ ಗುರುಗಳಾಗಿದ್ದು ಗಮನಿಸಬೇಕಾದ ಸಂಗತಿಯಾಗಿದೆ. ಇವರಿಗೆ ವೀರಶೈವ ಮಠ ಮಾನ್ಯಗಳ ಆಶ್ರಯ ದೊರೆತಿದ್ದರಿಂದ ಗುರೂಪದೇಶ ಪಡೆದು ವೀರಶೈವ ತತ್ವಕ್ಕೆ ಬದ್ಧರಾಗಿ ತಮ್ಮ ತತ್ವಪದಗಳನ್ನು ರಚನೆ ಮಾಡಿದರು. ಜಾತಿಯಿಂದ ಮುಸ್ಲಿಮರಾಗಿದ್ದರೂ ಅವರ ನಡವಳಿಕೆಯಲ್ಲಿ ಹಿಂದೂಧರ್ಮದ ಪ್ರಭಾವವನ್ನು

ಕಾಣುತ್ತೇವೆ. ಮುಸ್ಲಿಂ ತತ್ವಪದಕಾರನಾದ ಮೋಟ್ನಳ್ಳಿ ಹಸನ್‌ಸಾಬ ಹಿಂದೂ ಮುಸಲ್ಮಾನರನ್ನು ಸಮಾನವಾಗಿ ಕಾಣುತ್ತಾರೆ. ಹಿಂದೂ ಮುಸ್ಲಿಮರು ಕೋಮು ಸಾಮರಸ್ಯದ ಬದುಕಿಗೆ ಕರೆ ಕೊಟ್ಟರು. ಹಿಂದೂ ಮುಸ್ಲಿಂ ಯಾರೇ ಆಗಿರಲಿ ಅವರೆಲ್ಲರಿಗೂ ಪರಮಾತ್ಮ ಒಬ್ಬನೇ ಎಂದು ಮುಸ್ಲಿಂ ತತ್ವಪದಕಾರರ ಅಭಿಪ್ರಾಯವಾಗಿತ್ತು. ಭಾವೈಕ್ಯತೆ, ಮತೀಯ ಸೌಹಾರ್ದತೆ, ಜಾತ್ಯಾತೀತ ಪರಿಕಲ್ಪನೆಯ ತತ್ವಪದಕಾರರಲ್ಲಿ ಮುಸ್ಲಿಮರ ಜೊತೆಗೆ ದಲಿತರು ಹಾಗೂ ಮಹಿಳೆಯರು ಸೇರಿದ್ದಾರೆ. ದಲಿತ ತತ್ವಪದಕಾರರಲ್ಲಿ ಗುಲಬರ್ಗಾದ ದಲಿತ ತತ್ವಪದಕಾರರೆಂದರೆ 'ಜಂಬಗಿ ಶರಣಬಸಪ್ಪ', ಜಂಬಗಿ ಗ್ರಾಮದ ದಲಿತ ಕುಟುಂಬದಲ್ಲಿ ಜನಿಸಿದ ಇವರು ಜಾತಿವ್ಯವಸ್ಥೆಯಿಂದ ಬೇಸರಗೊಂಡು ವೈರಾಗ್ಯ ತಾಳಿದನು.

ಕೊನೆಗೆ ಅಧ್ಯಾತ್ಮದಲ್ಲೂ ಸಾಧನೆ ಮಾಡಿ 'ಬೋಧಾಮೃತ' ಎಂಬ ಆಧ್ಯಾತ್ಮಿಕ ಮಾಸಪತ್ರಿಕೆಯನ್ನು ನಡೆಸುತ್ತಿದ್ದನೆಂದು ತಿಳಿದುಬರುತ್ತದೆ. ಈತ ಅನೇಕ ಪವಾಡಗಳನ್ನು ಮಾಡುತ್ತಾ ಜನಾನುರಾಗಿಯಾಗಿದ್ದ. ಇಂದಿಗೂ ಜಂಬಗಿ ಗ್ರಾಮದಲ್ಲಿ ಶರಣಪ್ಪನ ಜಾತ್ರಾ ಮಹೋತ್ಸವ ನಡೆಯುತ್ತದೆ. 'ಜಂಬಗಿ ಶರಣ' ಈತನ ಅಂಕಿತನಾಮ. ಈತನು ತನ್ನ ತತ್ವಪದಗಳಲ್ಲಿ ಬಸವಣ್ಣನ ಕಲ್ಪನೆಯ ಜಾತ್ಯಾತೀತ ಸಮಾಜದ, ಸಮಾನತೆಯ ತತ್ವಗಳನ್ನು ಹೇಳುತ್ತಾನೆ. ಇದೇ ರೀತಿ ಹೊಸೂರ ತಿಪ್ಪಣ್ಣ ಮತ್ತು ಕಲ್ಮಲಾ ತಾಯಣ್ಣ ಮೊದಲಾದ ದಲಿತ ತತ್ವಪದಕಾರರ ಕೊಡುಗೆ ಅಮೂಲ್ಯವಾದುದು. ಸಮಕಾಲೀನ ಸಂದರ್ಭದ ದಲಿತ ತತ್ವಪದಕಾರರನ್ನು ನೋಡುವುದಾದರೆ, ಹಿರಿಯ ಮತ್ತು ಪ್ರಮುಖ ತತ್ವಪದಕಾರರೆಂದರೆ ಕಾಶೀನಾಥ ಪಂಚಶೀಲ ಗವಾಯಿಗಳು. ಅಂಧರಾಗಿದ್ದ ಗವಾಯಿಗಳು ಕವಿ, ಗಾಯಕ, ಸಂಗೀತಗಾರ ಹಾಗೂ ಸಮಾಜ ಸುಧಾರಣ ಹೋರಾಟಗಾರರಾಗಿದ್ದರು. ನೂರಾರು ತತ್ವಪದಗಳನ್ನು ಹಾಡಿ ಜನರನ್ನು ಜಾಗೃತಗೊಳಿಸಿದರು. ಅವರ ತತ್ವಪದಗಳಲ್ಲಿ ಪ್ರಗತಿಪರ ನಿಲುವು ಹಾಗೂ ಪ್ರಖರ ವೈಚಾರಿಕತೆಯು ಗಮನ ಸೆಳೆಯುತ್ತವೆ. ಐವತ್ತು ಮತ್ತು ಅರವತ್ತರ ದಶಕದಲ್ಲಿಯೇ ಬುದ್ಧ ಮತ್ತು ಡಾ. ಬಿ.ಆರ್.ಅಂಬೇಡ್ಕರ್ ಅವರ ವಿಚಾರಗಳನ್ನು ತಮ್ಮ ಹಾಡುಗಾರಿಕೆ ಮೂಲಕ ದಲಿತರ ಮನೆ ಮನೆಗೆ ತಲುಪಿಸಿದ ಕೀರ್ತಿ ಗವಾಯಿಗಳಿಗೆ ಸಲ್ಲುತ್ತದೆ. ಸುಮಾರು ಐದು ದಶಕಗಳ ಕಾಲ ದಲಿತರ ಉದ್ಧಾರಕ್ಕಾಗಿ ಸುಧಾರಣೆಗಾಗಿ ಗವಾಯಿಗಳು ಶ್ರಮಿಸಿದ್ದಾರೆ. ಡಾ. ಬಿ.ಆರ್. ಅಂಬೇಡ್ಕರ್ ವಾದಿಗಳಾಗಿದ್ದ ಕಾಶೀನಾಥ ಗವಾಯಿಗಳು ಅಸಮಾನತೆಯ, ಜಾತಿವಾದದ, ಅಸ್ಪೃಶ್ಯತೆಯ ವಿರೋಧಿಗಳಾಗಿದ್ದರು ಹಾಗೂ ಸಮಾನತೆಯ ಪ್ರಬಲ ಪ್ರತಿಪಾದಕರಾಗಿದ್ದರು. ೭೦ರ ದಶಕದಲ್ಲಿ ಜಾತಿ ಆಚರಣೆ ಕಠಿಣವಾಗಿದ್ದ ಕಾಲದಲ್ಲಿ ಕಾಶೀನಾಥ ಗವಾಯಿಗಳು ದೇವಾಲಯಗಳಿಗೆ ಪ್ರವೇಶ ನಿರ್ಬಂಧ ಮತ್ತು ಹೋಟೆಲ್‌ಗಳಲ್ಲಿಯ ಅಸ್ಪೃಶ್ಯತೆಯ ಆಚರಣೆಯನ್ನು ವಿರೋಧಿಸಿದರು. ವಿಶೇಷವಾಗಿ ಹಳ್ಳಿಯ ಹೋಟೆಲ್‌ಗಳಲ್ಲಿ ದಲಿತರಿಗೆ ಮೇಲಿನಿಂದ ನೀರು ಕೊಡುವುದು, ಅವರಿಗಾಗಿ ಪ್ರತ್ಯೇಕ ಲೋಟ ಇಟ್ಟು ಅಸ್ಪೃಶ್ಯತೆಯನ್ನು ಆಚರಿಸುವುದರ ವಿರುದ್ಧ ಅವರ ಹಾಡುಗಳಲ್ಲಿ ಜಾತಿ ಖಂಡನೆ ಇರುತ್ತಿತ್ತು. ಇಂತಹ ಒಂದು ಪದವೆಂದರೆ,

"ಹಳ್ಳಿ ಜನರ ಮಳ್ಳ ವಿಚಾರ
ಇನ್ನು ಬಿಟ್ಟಿಲ್ಲಪ್ಪ ಕಳ್ಳಾಟ ಚೋರ

ಹಳ್ಳಿ ಹೋಟೆಲ ಕಪ್ಪು-ಬಸಿ ಬ್ಯಾರ
ಕುಲ ಕೇಳ್ತಾರೋ ನೀವು ಯಾತರವರ
ತಾಯಿ ಹಾರೂರಕಿ ತಂದೆ ಜೈಭೀಮ ದೇವರ
ಯಾವುದು ಹೇಳಬೇಕರಿ ಭೂಮಿ ಬೀಜ ಬ್ಯಾರ"[೪೩]

ಎಂದು ಹಾಡಿ ಅಸ್ಪೃಶ್ಯತೆಯನ್ನು ಆಚರಿಸುವ ಅವಿವೇಕತನವನ್ನು ಬಿಟ್ಟುಕೊಡಲು ಹೇಳಿದ್ದಾರೆ.

ಗವಾಯಿಗಳ ಹಾಡಿನ ಪ್ರೇರಣೆಯಿಂದಾಗಿ ಅನೇಕ ಹಳ್ಳಿಗಳಲ್ಲಿ ದಲಿತರು ಜಾಗೃತಗೊಂಡು ಅಸಮಾನತೆಯನ್ನು ವಿರೋಧಿಸತೊಡಗಿದರು. ಇದರ ಪರಿಣಾಮವಾಗಿ ಕೆಲವು ಊರುಗಳಲ್ಲಿ ದಲಿತರಿಗಾಗಿ ಹೋಟೆಲ್‌ಗಳಲ್ಲಿ ಪ್ರತ್ಯೇಕವಾಗಿ ಲೋಟಗಳನ್ನು ಇಡುವ ಪದ್ಧತಿ ನಿಂತಿತು. ಅನೇಕ ಸ್ಥಳಗಳಲ್ಲಿ ಇತರರೊಂದಿಗೆ ದಲಿತರೂ ಸಹ ಸಾರ್ವಜನಿಕ ಕೆರೆ, ಬಾವಿ, ಕೊಳವೆ, ಬಾವಿಯ ನೀರು ಬಳಸಲು ಸಾಧ್ಯವಾಯಿತು. ಹಾಗೆಯೇ ಡಾ. ಬಿ.ಆರ್. ಅಂಬೇಡ್ಕರ್ ಅವರು ಕೈಗೊಂಡ ಹೋರಾಟಗಳನ್ನು ಕಾಶೀನಾಥ ಗವಾಯಿಗಳು ತಮ್ಮ ಹಾಡುಗಳಲ್ಲಿ ಕೆಳಗಿನಂತೆ ದಾಖಲಿಸಿದ್ದಾರೆ.

"ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನೆಂಬ ಕ್ಷುದ್ರವ ಕಳೆದಿ
ಸರ್ವರು ಸರಿಸಮನಂದಿ, ಹಿಂದುಕೋಡ್ ಬಿಲ್ ತಂದಿ...
ಶೂದ್ರ ಇದ್ದ ಮಹಿಳೆಯರಿಗೆ ಪ್ರತಿಯೊಂದರಲ್ಲಿ ಸ್ಥಾನವ ಮಾಡಿದಿ
ಮಹಾಡ ಸತ್ಯಾಗ್ರಹ ಮುಗಿಸಿ, ಚೌಡರ ಕೆರೆ ನೀರ ಕುಡಿಸಿದಿ
ನಾಸಿಕ ಸತ್ಯಾಗ್ರಹ ಮಾಡಿ, ನಾ ಎಂಬುವರ ನಾಶವ ಮಾಡಿದಿ
ಸತ್ಯಾಗ್ರಹದೊಳು ಜಯಸಿ, ಸತ್ತ ಜನಕ ಸಂಜೀವ ತಂದಿ
ಕಾಳ ರಾಮಮಂದಿರ ತೆರದಿ, ಗುಡಿ ಗೋಪುರ ಭೇದ್ಯಾಕಂದಿ"[೪೪]

ಹೀಗೆ ಡಾ. ಬಿ.ಆರ್. ಅಂಬೇಡ್ಕರ್ ಕೈಗೊಂಡ ವಿವಿಧ ಹೋರಾಟಗಳ ಪಟ್ಟಿ ನೀಡಿದ್ದಲ್ಲದೆ ಸ್ತ್ರೀಯರಿಗೆ ಮಾಡಿಕೊಟ್ಟ ಸವಲತ್ತುಗಳನ್ನು ತಮ್ಮ ಹಾಡಿನಲ್ಲಿ ತಿಳಿಸಿದ್ದಾರೆ.

ಇತರ ತತ್ವಪದಕಾರರಂತೆ ಆತ್ಮ ಪರಮಾತ್ಮನಿಗಷ್ಟೇ ಜೋತು ಬೀಳದೆ ಸಮಕಾಲೀನ ಬದುಕಿನ ಸಮಸ್ಯೆ ಕುರಿತು ರಚಿಸಿ ಹಾಡಿದ ತತ್ವಪದಗಳಿಗೆ ವೈಚಾರಿಕ ಸ್ಪರ್ಶವನ್ನು ನೀಡಿದ್ದು ವಿಶೇಷ ಗಮನಸೆಳೆಯುತ್ತದೆ. ಇವರಷ್ಟು ಆಳವಾಗಿ ಬದುಕನ್ನು ಅನ್ವೇಷಿಸಿದ ಸಾಧಕರು ಬಹಳ ಕಡಿಮೆ. ಸಮಾಜದ ಉದ್ಧಾರಕ್ಕಾಗಿ ಹಗಲಿರುಳು ಶ್ರಮಿಸಿದ ಚಿಂತಕರಿವರು. ಸಾಧಕರ ಪಟ್ಟಿಯಲ್ಲಿ ಇವರ ಹೆಸರನ್ನು ಚರಿತ್ರೆಯ ಪುಟಗಳಲ್ಲಿ ಪುನಃ ದಾಖಲಿಸುವ ಅಗತ್ಯವಿದ್ದು ಇವರ ಚಿಂತನೆಗಳು ಹಾಗೂ ತತ್ವಗಳು ದಲಿತರ ಉದ್ಧಾರಕ್ಕೆ ದಾರಿ ದೀಪವಾಗಲಿವೆ.

ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಲಾವಣಿ ಪದಗಳು ಮತ್ತೊಂದು ಪ್ರಮುಖ ಸಾಹಿತ್ಯವಾಗಿದೆ. ಅನಾದಿಕಾಲದಿಂದ ಪ್ರಸ್ತುತದವರೆಗೂ ಪೌರಾಣಿಕ ವ್ಯಕ್ತಿಗಳ ಪ್ರಮುಖ ಹೋರಾಟಗಾರರ ಚರಿತ್ರೆಯನ್ನು ಲಾವಣಿಕಾರರು ತಮ್ಮ ಸೂಕ್ಷ್ಮ ಸಂವೇದನೆಯ ಮೂಲಕ ಕಟ್ಟಿಕೊಟ್ಟದ್ದಾರೆ. ಲಾವಣಿಕಾರರು ಸಂದರ್ಭ ಸನ್ನಿವೇಶಕ್ಕೆ ತಕ್ಕಂತೆ ಬೇಕಾಗುವ ಅಂಶವನ್ನು

ತಮ್ಮ ಲಾವಣಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಉದಾಹರಣೆಗೆ ದಲಿತ ಓಣಿಗಳಲ್ಲಿ ಹಾಡಲು ನಿಂತರೆ ಡಾ. ಬಿ.ಆರ್.ಅಂಬೇಡ್ಕರ್ ಅವರ ಜೀವನಚರಿತ್ರೆಗೆ ಸಂಬಂಧಿಸಿದ ಹಾಡನ್ನೇ ಹಾಡುತ್ತಾರೆ. ಡಾ. ಬಿ.ಆರ್.ಅಂಬೇಡ್ಕರ್ ಅವರ ಚರಿತ್ರೆ, ಅವರಿಂದ ದಲಿತರಿಗೆ ದೊರೆತ ನ್ಯಾಯದ ವಿಷಯವು ಓದು, ಬರಹ ಬಲ್ಲವರಿಗೆ ಮಾತ್ರ ಗೊತ್ತಿರುತ್ತದೆ. ಆದರೆ ಲಾವಣಿಕಾರರು ಅನಕ್ಷರಸ್ಥ ಜನರಿಗೆ ಡಾ. ಬಿ.ಆರ್. ಅಂಬೇಡ್ಕರ್ ಅವರ ತತ್ವ ಸಿದ್ಧಾಂತಗಳನ್ನು ಜ್ಞಾನವನ್ನು ಸಾಮಾನ್ಯ ಜನರ ಮನೆ ಬಾಗಿಲಿಗೆ ಮುಟ್ಟಿಸುವ ಶ್ರಮ ಮೆಚ್ಚುವಂತಹದ್ದಾಗಿದೆ. ಆ ರೀತಿ ಒಂದು ಗೀಗೀ ಪದ ಕೆಳಗಿನಂತಿದೆ.

"ದಲಿತ ಖಣಿ ದಲಿತ ಧ್ವನಿ ದಲಿತ ಶ್ರೇಷ್ಠಾದ ತೆನಿ
ಹುಸಿ ಆಗಲಿಲ್ಲ ಅಂಬೇಡ್ಕರರ ವಾಣಿಯೂ
ಅಸ್ಪೃಶ್ಯತೆಯೊಳು ತೇಲದುಕಂಡು ಭಾರತ ಧರಣಿಯೂ
ಶೋಷಣೆ ನಾಶ ಮಾಡದಕ್ಕಾಗಿ ಹಿಡಿದ ಲೆಕ್ಕಣಿಯೂ
ಬುದ್ಧ ಬಸವನ ನೀತಿಯಿಂದ ಸಂವಿಧಾನ ಗ್ರಂಥ ಬರೆದು ತಂದ
ಅಖಂಡ ಭಾರತದೊಳು ಅಂಬೇಡ್ಕರರ ಸ್ಮರಣೆಯೂ
ದಲಿತರಿಗಿ ಸಿಗುವ ಹಕ್ಕು ತೆರೆದು ಇಟ್ಟ ಬಂಗಾರ ಭರಣಿಯೂ ||ಗೀ ಗೀ||"[೬೫]

ಯಾದಗಿರಿ ಜಿಲ್ಲೆಯ ಇನ್ನೊಂದು ಪ್ರಮುಖ ಪ್ರಕಾರವೆಂದರೆ ಜನಪದ ಸಾಹಿತ್ಯ. ಜನಪದರು ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ ಹಾಗೂ ಜನಪದ ಗೀತ ಸಾಹಿತ್ಯದಲ್ಲಿ ವೀರತನದ ಪರಿಕಲ್ಪನೆ ಒಳಗೊಂಡಿರುತ್ತದೆ. ಈ ಜಿಲ್ಲೆಯ ಜನಪದ ಹಾಡುಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ರಮಾನಂದ ತೀರ್ಥರ ಬಗ್ಗೆ ರಜಾಕಾರರ ದಬ್ಬಾಳಿಕೆ, ಹೈದರಾಬಾದ್ ವಿಮೋಚನೆ ಮುಂತಾದವು ಹೆಚ್ಚಾಗಿ ಕಂಡಬರುತ್ತವೆ. ಹೈದರಾಬಾದ್ ಸ್ವಾತಂತ್ರ್ಯದ ಸೂರ್ಯನೆಂದೇ ಕರೆಯಿಸಿಕೊಂಡ ಶ್ರೀ ರಮಾನಂದ ತೀರ್ಥರು, ಹೈದರಾಬಾದ್ ವಿಮೋಚನೆಗೆ ಒಂದು ಮಹಾನ್ ಶಕ್ತಿಯಾಗಿ ನಿಂತು ಮಾಡಿದ ಹೋರಾಟವನ್ನು ಲಾವಣಿಕಾರ ಕೆಳಗೆ ಕಾಣಿಸಿದ ಪದದಲ್ಲಿ ಹಾಡಿದ್ದಾರೆ.

"ಹತ್ತಂಬೊತ್ತನೂರು ನಾಲ್ವತ್ತೆಂಟನೆಯ ಜನವರಿ ತಿಂಗಳ ಕಡೆ ಮೊದಲು
ಕೊಲೆಗಾರಂಭವಾದಾಯಿತು ಹೈದರಾಬಾದಿನ ಹಿಂದೂ ಜನತೆಯೊಳು
ಮೂರುನೂರು ಐವತ್ಮೂರು ಹಳ್ಳಿಗಳ ಸುಟ್ಟ ಸುಲಿದ ಚಿನ್ನಾಟಗಳು
ಸಿರಿವಂತರ ಮನೆ ಲೂಟಿಸಿ ಜಗ್ಗಿದ ಕೋಟ್ಯಾವಧಿ ಧನ-ನಾಣ್ಯಗಳು
ಹರಿದು ಹೋಗುತಿರೆ ಸ್ವಾಮಿ ರಮಾನಂದರು ಕೇಳ್ದರು ನಾಡಿನಗೋಳು'

ಹೈದರಾಬಾದ್ ಸಂಸ್ಥಾನದ ಮೇಲೆ ನಡೆದ ಸೈನಿಕ ಕಾರ್ಯಾಚರಣೆಯಲ್ಲಿ ನಿಜಾಮನು ಸೋಲು ಅನುಭವಿಸಿದ್ದು ಹಾಗೂ ಅವನು ಕಟ್ಟಿಕೊಂಡಿದ್ದ ಕನಸುಗಳೆಲ್ಲ ನುಚ್ಚು ನೂರಾದ ಕುರಿತು,

'ಕಡೆಗಾಣದ ನೈಜಾಮರು ಕೊನೆಯಲ್ಲಿ ಶರಣಾಗತಿಯನ್ನು ಸಾರಿದರು ।
ಸಡಿಲಿಸಿದ ಹೈದರಾಬಾದಿನ ಶಕ್ತಿಯ ಪತನದ ವಾರ್ತೆಯ ಕೇಳಿದರು ।

ತಡಮಾಡದೆ ಭಾರತ ಸೇರ್ಪಡೆಯಾಗಲು ಎಂಡ್ರಸನ್‌ರಟ್ಟಿಸಿದರು ।
ನುಡಿದರು ಜಯ ಜಯ ಹಿಂದ ಎಂದು ಜೈ ದನಿಯಲ್ಲಿ ಹಿಂದಿ ಸೈನಿಕರು'॥"[೪೬]

ಯಾದಗಿರಿ ಜಿಲ್ಲೆಯಲ್ಲಿ ಜನಜಾಗೃತಿ ಹಾಗೂ ಸಮಾಜ ಸುಧಾರಣೆ ಕಾರ್ಯದಲ್ಲಿ ಸಾಹಿತ್ಯ ಪ್ರಕಾರಗಳು, ಗೀ ಗೀ ಪದಗಳು, ಸ್ಥಳೀಯ ಚರಿತ್ರೆಯನ್ನು ಕಟ್ಟುವಲ್ಲಿ ಬಹಳ ಪ್ರಮುಖ ಮೂಲಾಧಾರಗಳಾಗಿವೆ. ಹಳ್ಳಿಗಳಲ್ಲಿ ದಿನನಿತ್ಯ ಕಂಡುಬರುವ ಪದಗಳಲ್ಲಿ ಬರಗಾಲ, ಶೋಷಣೆ, ದಬ್ಬಾಳಿಕೆ, ಕೆಳವರ್ಗದವರ ಬದುಕಿನ ದುಮ್ಮಾನಗಳು ಮುಂತಾದ ಅನೇಕ ವಿಚಾರಗಳನ್ನು ತಿಳಿಯಪಡಿಸುತ್ತವೆ. ಹಾಗೆಯೇ ಒಂದು ಪ್ರದೇಶದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸ್ಥಿತಿಯನ್ನು ಪ್ರತಿಬಿಂಬಿಸುವ ಪದಗಳು ಇಂದಿಗೂ ಜನಪದದಲ್ಲಿ ಕೇಳಿಬರುತ್ತಿವೆ. ಇನ್ನು ವಸಹಾತುಶಾಹಿ ಹಿನ್ನೆಲೆಯಲ್ಲಿ ತತ್ವಪದಕಾರರನ್ನು ನೋಡಿದಾಗ ಇನ್ನೂ ವಿಶಿಷ್ಟವಾಗಿ ಕಾಣಿಸುತ್ತಾರೆ. ಸಾಮಾನ್ಯವಾಗಿ ನಾವು ಚಾತುರ್ವಣ ವ್ಯವಸ್ಥೆ ಹೇರಿದ್ದ ಸಾಂಸ್ಕೃತಿಕ ವಸಾಹತುಶಾಹಿ ಹಾಗೂ ಬ್ರಿಟಿಷರ ಹಾಗೂ ಇಲ್ಲಿಯ ಸಂಸ್ಥಾನಿಕರ ವಸಾಹತುಶಾಹಿ ಬಗ್ಗೆ ಮಾತನಾಡಿದರೆ ತತ್ವಪದಕಾರರು ಮನುಷ್ಯನ ಮನಸ್ಸಿನಲ್ಲಿ ಕುದಿಯುತ್ತಿರುವ ಸ್ವಾರ್ಥದ ಮನಸ್ಸಿನ ವಿರುದ್ಧ ಅಂತರಂಗದ ಹೋರಾಟ ನಡೆಸಿದ್ದಾರೆ.

ಮನುಷ್ಯನ ಮನಸ್ಸಿನೊಳಗಡಗಿರುವ ಸ್ವಾರ್ಥ, ಸಣ್ಣತನ, ಮತ್ಸರದಂತಹ ವಸಾಹತುಶಾಹಿ ಹೆಚ್ಚು ಅಪಾಯಕಾರಿ ಎಂಬುದನ್ನರಿತು ಇವರು ಅದರ ವಿರುದ್ಧ ಹೋರಾಡುತ್ತಾ ಬಂದರು. ಹೀಗಾಗಿಯೇ ಎಲ್ಲಾ ತತ್ವಪದಕಾರರು ಚಾತುರ್ವಣ ಪದ್ಧತಿಯನ್ನು ತಿರಸ್ಕರಿಸಿದವರಾಗಿದ್ದಾರೆ ಮತ್ತು ತತ್ವಪದಕಾರರು ಕೆಳವರ್ಗದಿಂದ, ದುಡಿವ ವರ್ಗದಿಂದ, ಜಾನಪದ ಸಂಸ್ಕೃತಿಯಿಂದ ಬಂದವರಾಗಿದ್ದಾರೆ. ಹೀಗೆ, ತತ್ವಪದಕಾರರ ಹೋರಾಟವು ಸಾಮಾಜಿಕ ಮತ್ತು ರಾಜಕೀಯ ಹೋರಾಟಕ್ಕಿಂತ ಅಂತರಂಗಕ್ಕೆ ಹೆಚ್ಚು ಸೀಮಿತವಾಗಿದೆ. ಇವರಲ್ಲಿ ಅನೇಕರು ಸಮಾಜದಲ್ಲಿದ್ದೂ ಇರದಂತಿರುತ್ತಾರೆ. ಬಡತನದ ವಿರುದ್ಧ, ಅಸಮಾನತೆಯ ವಿರುದ್ಧ, ಶೋಷಣೆಯ ವಿರುದ್ಧ ಹಾಗೂ ಆಗಿನ ಜ್ವಲಂತ ಸಮಸ್ಯೆಗಳ ವಿರುದ್ಧ ಇವರು ಮಾತನಾಡುವುದಿಲ್ಲ. ಬದಲಾಗಿ ನೆಲ, ನೆಲೆಯನ್ನು ನಿರಾಕರಿಸಿ, ಹೆಂಡತಿ ಮಕ್ಕಳನ್ನು ಬಿಟ್ಟು ಕೈವಲ್ಯವೊಂದೇ ಪರಮ ಸಾಧನವೆಂದು ನಂಬಿದ ವಿಚಾರಗಳು ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಮಿತಿಗಳಾಗಿ ಕಾಣಿಸಬಹುದು ಹಾಗೂ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರದಲ್ಲಿ ಆಮೂಲಾಗ್ರ ಬದಲಾವಣೆಯನ್ನು ಬಯಸದೆ ಕೇವಲ ಮನುಷ್ಯರಲ್ಲಿ ಮಾತ್ರ ಬದಲಾವಣೆಯಾಗಬೇಕೆಂದು ಬಯಸುವ ಇವರ ಹೋರಾಟ ಮುಖ್ಯವಾಗಿ ಕಾಣಲಾರದು. ಆದರೆ ಅವರು ಪ್ರಚಾರ ಮಾಡಿದ ರಾಷ್ಟ್ರೀಯ ಭಾವೈಕ್ಯತೆ, ಮತೀಯ ಸಹಿಷ್ಣುತೆ, ಸಾಂಸ್ಕೃತಿಕ ಸಮನ್ವಯತೆಯ ದೃಷ್ಟಿಯಿಂದ ತತ್ವಪದಗಳು ಇಂದಿಗೂ ಕೂಡ ಬಹುಮುಖ್ಯವಾಗಿವೆ.

ದೇಸಿ ನೆಲೆಯನ್ನು ಮರೆತು ಕೇವಲ ಪಾಶ್ಚಾತ್ಯ ಸಂಸ್ಕೃತಿಗೆ ಮಾರು ಹೋಗಿರುವ, ಮುಕ್ತ ಆರ್ಥಿಕ ನೀತಿಯ ನೆಪದಲ್ಲಿ ನವವಸಹಾತುಶಾಹಿಯನ್ನು ಸ್ವಾಗತಿಸುತ್ತಿರುವ, ಜಾತಿ ಜಾತಿಗಳ ನಡುವೆ ಕಂದಕಗಳುಂಟಾಗಿ ಜಾತಿ ಆಧಾರದ ಮೇಲೆ ಸಮಾಜ ನಿರ್ಮಾಣವಾಗುತ್ತಿರುವ ಇಂದಿನ ಸಂದರ್ಭದಲ್ಲಿ ತತ್ವಪದಕಾರರ ವಿಚಾರಗಳು ಅಧ್ಯಯನಕ್ಕೆ ಹಾಗೂ ಸಮಾಜದಲ್ಲಿ

ಅಳವಡಿಸಿಕೊಳ್ಳಲಿಕ್ಕೆ ಯೋಗ್ಯವೆಂದೆನಿಸುತ್ತವೆ. ಭಕ್ತಿ ಚಳುವಳಿಯ ಕೇಂದ್ರವಸ್ತು ದೈವದಲ್ಲಿ ಅನನ್ಯವಾದ ಭಕ್ತಿಯಾದರೂ ಆ ಭಕ್ತಿಯಲ್ಲಿ ಯಾವುದೇ ಲಿಂಗಭೇದ, ಜಾತಿಭೇದ ಇರಬಾರದು ಎಂಬುದೇ ಬಹುತೇಕರ ತತ್ವವಾಗಿತ್ತು. ಹೊಸ ಧರ್ಮವನ್ನು ಸ್ಥಾಪಿಸುವುದು ಯಾವುದೇ ಭಕ್ತಿ ಚಳುವಳಿಗಳ ಧ್ಯೇಯವಾಗಿರಲಿಲ್ಲ. ಇರುವ ಧರ್ಮವನ್ನೇ ಉತ್ತಮಗೊಳಿಸಿ ಜನರ ಬಾಳನ್ನು ಉತ್ತಮಗೊಳಿಸುವುದು ಅವುಗಳ ಮುಖ್ಯ ಧ್ಯೇಯವಾಗಿತ್ತು.

ಹೀಗೆ ವಚನ, ಸೂಫಿ, ತತ್ವಪದಕಾರರ ಹೋರಾಟವನ್ನು ಗಮನಿಸಿದಾಗ, ರಾಜಪ್ರಭುತ್ವ ಅಸ್ತಿತ್ವದಲ್ಲಿದ್ದ ಸಮಯದಲ್ಲಿ ಹಾಗೂ ಸಂಪ್ರದಾಯಸ್ಥ ಶತಮಾನದಲ್ಲಿ ಪ್ರತಿರೋಧವನ್ನು ಎದುರಿಸಿ ಪ್ರಜಾಪ್ರಭುತ್ವದ ನೆಲೆಯಲ್ಲಿ ಜಾಗೃತಿಯನ್ನು ಮೂಡಿಸಿ, ಜನಮುಖಿ ನೆಲೆಯಲ್ಲಿ ಹೋರಾಟ ಮಾಡಿದ್ದು ಇವರ ಸಾಧನೆಯಾಗಿದೆ. ಹೀಗೆ ತಮ್ಮ ಚಿಂತನೆಗಳ ಮೂಲಕ ನವಸಿದ್ಧಾಂತಗಳನ್ನು ಮುಂದಿನ ಜನಾಂಗಕ್ಕೆ ಕೊಟ್ಟು ಹೋದರು. ಅದರ ಫಲಶ್ರುತಿಯೇ ಇಂದು ಚಳುವಳಿಯಾಗಿ ಮಾರ್ಪಟ್ಟಿದೆ.

**ಕೊನೆ ಟಿಪ್ಪಣಿಗಳು**

೧. ಪಾಟೀಲ ಬಸನಗೌಡ, ಎಸ್.ಹುಣಸಗಿ, ಯಾದಗಿರಿ ಸಿರಿ, ಪುಟ ೬೪.
೨. ಅದೇ, ಪುಟ ೬೬.
೩. ಅದೇ, ಪುಟ ೬೭.
೪. ಪಾಟೀಲ ಬಸನಗೌಡ, ಎಸ್.ಹುಣಸಗಿ, ಯಾದಗಿರಿ ಸಿರಿ, ಪುಟ ೪೪.
೫. ಅದೇ, ಪುಟ ೪೫.
೬. ಅದೇ, ಪುಟ ೪೬.
೭. ಅದೇ, ಪುಟ ೪೭.
೮. ಪಾಟೀಲ ಬಸನಗೌಡ, ಎಸ್.ಹುಣಸಗಿ, ಯಾದಗಿರಿ ಸಿರಿ, ಪುಟ ೪೮.
೯. ಅದೇ, ಪುಟ ೪೯.
೧೦. ಅದೇ, ಪುಟ ೫೦.
೧೧. ಮಹೇಶ ತಿಪ್ಪಶೆಟ್ಟಿ(ಸಂ), ಬಸವತತ್ವ: ಸಾಮಾಜಿಕ ಬದಲಾವಣೆ, ಪುಟ ೧.
೧೨. ಬಸವರಾಜ ಸಬರದ, ವಚನ ಚಳವಳಿ, ಪುಟ ೩.
೧೩. ರಂಜಾನ್‌ದರ್ಗಾ, ಬಸವಧರ್ಮದ ವಿಶ್ವಸಂದೇಶ, ಪುಟ ೧೭.
೧೪. ರಾಮಕೃಷ್ಣೇಗೌಡ ಕೋ.ವೆಂ.(ಸಂ), ಕನ್ನಡನುಡಿ, ಪುಟ ೧೩.
೧೫. ಭೂಸನೂರಮಠ ಸಂ.ಶಿ.(ಸಂ), ವಚನ ಸಾಹಿತ್ಯ ಸಂಗ್ರಹ, ಪುಟ ೬೩
೧೬. ರಾಮಕೃಷ್ಣೇಗೌಡ ಕೋ.ವೆಂ.(ಸಂ), ಕನ್ನಡನುಡಿ, ಪುಟ ೪.
೧೭. ಮಹೇಶ ತಿಪ್ಪಶೆಟ್ಟಿ(ಸಂ), ಬಸವತತ್ವ: ಸಾಮಾಜಿಕ ಬದಲಾವಣೆ, ಪುಟ ೧.
೧೮. ಚಂದ್ರಶೇಖರ ಟಿ.ಆರ್., ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು, ಪುಟ ೧೫.
೧೯. ಬಸವರಾಜ ಸಬರದ, ವಚನ ಚಳುವಳಿ, ಪುಟ ೫.

೨೦. ಶೌತನ್ ಜೆ.ಪಿ., ರೆವೆಲ್ಯೂಶನ್ ಆಫ್ ಮಿಸ್ಟಿಕ್ಸ್, ಪುಟ ೧೩೯.

೨೧. ಚಂದ್ರಶೇಖರ ಟಿ.ಆರ್., ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು, ಪುಟ ೨೩.

೨೨. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪುಟ ೨೪, ೨೫.

೨೩. ರಹಮತ್ ತರೀಕೆರೆ, ಕರ್ನಾಟಕ ಸೂಫಿಗಳು, ಪುಟ ೧೭.

೨೪. ಅದೇ, ಪುಟ ೨೩.

೨೫. ಪುಟ್ಟಪ್ಪ ಕೆ.ವಿ.(ಪ್ರ.ಸಂ.), ನಾಗೇಗೌಡ ಎಚ್.ಎಲ್.(ಸಂ.ಸಂ.), ಪ್ರವಾಸಿ ಕಂಡ ಇಂಡಿಯಾ, ಸಂ. ೫, ಪುಟ ೨೨೭.

೨೬. ಸಯೀದ್ ಅತ್ತರ್ ಅಬ್ಬಾಸ್ ರಿಜ್ವಿ, ಎ ಹಿಸ್ಟರಿ ಆಫ್ ಸೂಫಿಸಂ ಇನ್ ಇಂಡಿಯಾ, ವಾಲ್ಯೂಮ್–II.

೨೭. ಕಪಟರಾಳ ಕೃಷ್ಣರಾವ್, ಕರ್ನಾಟಕದ ಸಂಸ್ಕೃತಿ ಸಂಶೋಧನೆ, ಪುಟ ೧೨೨.

೨೮. ಫಕೀರ್ ಮಹಮದ್ ಕಟ್ಪಾಡಿ, ಸೂಫಿ ಮಹಿಳೆಯರು, ಪುಟ ೭೮.

೨೯. ಭಾಸ್ಕರ್ ಟಿ.ಎಂ., ರಾಜಶೇಖರ ಹತಗುಂದಿ(ಸಂ), ಕಲಬುರ್ಗಿ ಜಿಲ್ಲಾ ದರ್ಶನ, ಪುಟ ೧೨೩.

೩೦. ಮೋಹನ್‌ಕೃಷ್ಣ ರೈ ಕೆ., ಚರಿತ್ರೆ ಎಂ.ಎ. ಪ್ರಥಮ, ಪತ್ರಿಕೆ–೪, ಪುಟ ೧೩೫, ೧೩೬.

೩೧. ನಾಗರತ್ನ ಟಿ.ಎನ್., ಕನಕದಾಸ, ಪುಟ ೧.

೩೨. ಮಳಲಿ ವಸಂತಕುಮಾರ್, ಕನಕದಾಸ, ಪುಟ ೬೭.

೩೩. ವರದರಾಜರಾವ್ ಜಿ.(ಸಂ), ಹರಿದಾಸ ಸಾಹಿತ್ಯ ಸಮೀಕ್ಷೆ, ಪುಟ ೫೪.

೩೪. ಅಮರೇಶ ನುಗಡೋಣಿ, ಹೈದರಾಬಾದು ಕರ್ನಾಟಕ ಹಾಡುಪಾಡು, ಪುಟ ೩೮.

೩೫. ವಾಸುದೇವ ಅಗ್ನಿಹೋತ್ರಿ(ಸಂ), ಕೀರ್ತನ ತತ್ವಪದಗಳ ಸಂಗ್ರಹ, ಪ್ರಸ್ತಾವನೆ.

೩೬. ಸುಭಾಶ್ಚಂದ್ರ ಕೌಲಗಿ, ಮೋಟ್ನಳ್ಳಿ ವಸ್ತಾದೆಪ್ಪ, ಪುಟ ೨೮.

೩೭. ಅದೇ, ಪುಟ ೨೯.

೩೮. ಅದೇ, ಪುಟ ೩೧.

೩೯. ಅದೇ ಪುಟ ೩೨.

೪೦. ಬಸವರಾಜ ಸಬರದ, ಹೈದರಾಬಾದ್ ಕರ್ನಾಟಕದ ತತ್ವಪದಗಳು, ಪುಟ ೧೫.

೪೧. ಅದೇ, ಪುಟ ೧೯.

೪೨. ಮಲ್ಲಿಕಾರ್ಜುನ ಜೆ. ಅಮ್ಮೆ, ದಲಿತ ತತ್ವಪದಕಾರ, ಪುಟ ೩೪.

೪೩. ಅದೇ, ಪುಟ ೪೯, ೫೦.

೪೪. ಹರಿಶ್ಚಂದ್ರ ದಿಗ್ಸಂಗಿಕರ್, ಚಾರಿತ್ರಿಕ ಲಾವಣಿಗಳು, ಪುಟ ೧೨೫.

೪೫. ನಿಂಗಣ್ಣ ಸಣ್ಣಕ್ಕಿ, ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಗಳು. ಪುಟ ೭೭.

೪೬. ಅದೇ ಪುಟ ೭೯.

## ಅಧ್ಯಾಯ : ನಾಲ್ಕು

# ಸ್ವಾತಂತ್ರ್ಯೋತ್ತರ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು

ಅಧ್ಯಾಯ : ನಾಲ್ಕು

# ಸ್ವಾತಂತ್ರ್ಯೋತ್ತರ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು

ಸಾಮಾಜಿಕ ಚಳುವಳಿಗಳು ನಡೆದುಬಂದ ದಾರಿಯನ್ನು ಅವಲೋಕಿಸಿದಾಗ ೧೯೮೦ರ ದಶಕವು ಚಳುವಳಿಗಳ ಬೆಳವಣಿಗೆ ದೃಷ್ಟಿಯಿಂದ ಯಾದಗಿರಿ ಜಿಲ್ಲೆಯಲ್ಲಿ ವಿಶಿಷ್ಟವಾದ ಮತ್ತು ಗಮನಾರ್ಹವಾದ ದಶಕವಾಗಿದೆ. ಏಕೆಂದರೆ, ಈ ದಶಕದಲ್ಲಿ ಸಾಮಾಜಿಕ ಚಳುವಳಿಗಳು ಹೊಸ ಉದ್ದೇಶಗಳೊಂದಿಗೆ ಹಾಗೂ ಚಿಂತನೆಗಳೊಂದಿಗೆ ರೂಪುಗೊಳ್ಳುತ್ತಾ ಸಾಮಾಜಿಕ ಚೌಕಟ್ಟಿ ನೊಳಗೆ ಭದ್ರವಾಗಿ ನೆಲೆಯೂರಲು ಪ್ರಯತ್ನಿಸಿದವು. ಎಂಬತ್ತರ ದಶಕದಲ್ಲಿ ರೈತ, ದಲಿತ, ಹಿಂದುಳಿದ, ಕಾರ್ಮಿಕ ಮತ್ತು ಮಹಿಳಾ ಹೋರಾಟಗಳ ಹುಟ್ಟು ಮತ್ತು ಚಿಂತನೆಗಳಲ್ಲಿ ವೈವಿಧ್ಯವಿದೆ. ವಿಶೇಷವಾಗಿ ಇದೇ ಕಾಲದಲ್ಲಿ ಹುಟ್ಟಿ ಬಂದ ಎಡಪಂಥೀಯ ಚಿಂತನೆಗಳೂ ಸಹ ಸಾಮಾಜಿಕ ಚಳುವಳಿಗಳಲ್ಲಿ, ಅದರಲ್ಲೂ ಮುಖ್ಯವಾಗಿ ರೈತ, ದಲಿತ, ಹಿಂದುಳಿದ, ಕಾರ್ಮಿಕ ಮತ್ತು ಮಹಿಳಾ ಚಳುವಳಿಗಳ ಮೇಲೆ ಹೆಚ್ಚು ಕೇಂದ್ರೀಕೃತಗೊಂಡವು.

ಇಂತಹ ಬೆಳವಣಿಗೆಯ ಜೊತೆಗೆ ಇಲ್ಲಿಯವರೆಗೆ ಶೋಷಣೆ, ಹಿಂಸೆ, ದೌರ್ಜನ್ಯ ಮತ್ತು ಅವಮಾನ, ನೋವು ಅನುಭವಿಸುತ್ತಾ ಬಂದಿದ್ದ ವರ್ಗಗಳು, ಕ್ರಮೇಣ ತಮ್ಮ ಪರಿಸ್ಥಿತಿಯ ಸುಧಾರಣೆಗಾಗಿ ಧ್ವನಿ ಎತ್ತತೊಡಗಿದ ಕಾಲವಾಗಿದೆ. ನೊಂದ ಜನರು ಸಂಘಟನೆಯ ಪ್ರಜ್ಞೆಯನ್ನು ಬೆಳೆಸಿಕೊಂಡು ಜಾಗೃತರಾಗಿ ಹೋರಾಟಕ್ಕಿಳಿದರು. ಕ್ರಮೇಣ ಹೋರಾಟ ಸ್ಫೋಟಗೊಳ್ಳುತ್ತಾ ಚಳುವಳಿಗಳಾಗಿ ರೂಪುಗೊಂಡವು. ಹೋರಾಟಗಳ ಮನೋಭಾವ, ಉಗ್ರ ಪ್ರತಿಭಟನೆ ಮತ್ತು ಸಂಘಟನಾಶಕ್ತಿಯ ಮನೋಭಾವಗಳು ಪ್ರಮುಖವಾಗಿ ಹಿಂದುಳಿದ, ರೈತ, ದಲಿತ, ಕಾರ್ಮಿಕ ಮತ್ತು ಮಹಿಳಾ ವರ್ಗಗಳಲ್ಲಿ ಕಂಡುಬಂದು, ಇಲ್ಲಿಂದ ಇವರ ಹೋರಾಟಗಳು ಹಿಂದುಳಿದ ಚಳುವಳಿ, ರೈತ ಚಳುವಳಿ, ದಲಿತ ಚಳುವಳಿ, ಕಾರ್ಮಿಕ ಮತ್ತು ಮಹಿಳಾ ಚಳುವಳಿಗಳೆಂದು ಹೊಸ ರೂಪದಲ್ಲಿ ಗುರುತಿಸಿಕೊಳ್ಳುವಂತಾದವು ಹಾಗೂ ತಮ್ಮ ಮುಂದಿನ ಹೋರಾಟಗಳಿಗೆ ತಮ್ಮದೇ ನೆಲೆಯನ್ನು, ಹೋರಾಟದ ಗುರಿ ಉದ್ದೇಶಗಳನ್ನು ಕಂಡುಕೊಂಡವು.

ಪ್ರಸ್ತುತ ಅಧ್ಯಯನದಲ್ಲಿ ವಿಶೇಷವಾಗಿ ಗುರುತಿಸಿರುವ ಅಂಶವೆಂದರೆ, ಯಾದಗಿರಿ ಜಿಲ್ಲೆಯಲ್ಲಿ ನಡೆದ ಸಾಮಾಜಿಕ ಚಳುವಳಿಗಳ ಸ್ವರೂಪ ಮತ್ತು ಮಹತ್ವ ಹಾಗೂ ಬೇರೆ ಪ್ರದೇಶಗಳಲ್ಲಿ ನಡೆದ ಸಾಮಾಜಿಕ ಚಳುವಳಿಗಳಿಗಿಂತ ಹೇಗೆ ಭಿನ್ನವಾಗಿವೆ ಎಂಬುದು. ಏಕೆಂದರೆ ಯಾದಗಿರಿ ಜಿಲ್ಲೆ ಭೌಗೋಳಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ

ನಡೆದ ಸಾಮಾಜಿಕ ಚಳುವಳಿಗಳಿಗಿಂತ ಹೇಗೆ ಭಿನ್ನವಾಗಿವೆ ಎಂಬುದು. ಏಕೆಂದರೆ ಯಾದಗಿರಿ ಜಿಲ್ಲೆ ಭೌಗೋಳಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ತನ್ನದೇ ಆದ ವಿಭಿನ್ನ ಸ್ಥಾನಮಾನ ಹೊಂದಿದೆ. ಇಲ್ಲಿನ ಪರಿಸ್ಥಿತಿಗಳು ಮತ್ತು ಸಮಸ್ಯೆಗಳು ಬೇರೆ ಜಿಲ್ಲೆಗಳಿಗಿಂತ ಭಿನ್ನವಾಗಿದೆ. ಇಲ್ಲಿ ಜಮೀನ್ದಾರಿ ಪದ್ಧತಿ ಇನ್ನೂ ಜೀವಂತವಾಗಿರುವುದನ್ನು, ಬಂಡವಾಳಶಾಹಿಗಳ ಪ್ರಾಬಲ್ಯವಿರುವುದನ್ನು, ಜಾತಿವ್ಯವಸ್ಥೆಯೇ ನಿರ್ಧಾರಕ ಅಂಶವಾಗಿರುವುದನ್ನು ಕಾಣಬಹುದಾಗಿದೆ. ಹೀಗಾಗಿ ಈ ಜಿಲ್ಲೆಯಲ್ಲಿ ಶೋಷಕರು ಯಾರು? ಶೋಷಿತರ ಸ್ಥಿತಿಗತಿಗಳು ಹೇಗಿದ್ದವು? ಅಜ್ಞಾನದಿಂದ ಮತ್ತು ತಮ್ಮ ಹಕ್ಕುಗಳ ಅರಿವಿಲ್ಲದೆ ಶೋಷಣೆಯ ವಿರುದ್ಧ ಧ್ವನಿ ಎತ್ತಲಿಕ್ಕೆ ಸಾಧ್ಯವಿಲ್ಲದ ಸ್ಥಿತಿಯಲ್ಲಿದ್ದಾಗ, ಸಂಘಟನೆಗಳ ಬಲವಿಲ್ಲದಿದ್ದಾಗ, ಅಸಹಾಯಕರಾಗಿ ಅನುಭವಿಸಿದ ನೋವು, ಶೋಷಣೆ, ಹಿಂಸೆ, ದೌರ್ಜನ್ಯಗಳು ಎಂತಹವು ಮತ್ತು ಇಂತಹ ನೋವುಗಳನ್ನು ವ್ಯಕ್ತಪಡಿಸಲು ಬಲವಿಲ್ಲದೆ ಅದುಮಿಟ್ಟುಕೊಂಡು ಅನುಭವಿಸಿದ ಸಂಕಟ ಎಂತಹದು ಎನ್ನುವುದನ್ನು ಗುರುತಿಸುವ ಉದ್ದೇಶ ಹೊಂದಲಾಗಿದೆ.

**೪.೧. ರೈತ ಚಳುವಳಿಗಳು**

"ಕರ್ನಾಟಕದಲ್ಲಿ ರೈತ ಸಂಘದ ಉದಯವನ್ನು ೧೯೮೦ರಲ್ಲಿ ನಡೆದ ಮಲಪ್ರಭಾ ರೈತರ ಹೋರಾಟದ ಘಟನೆಯೊಂದಿಗೆ ಗುರುತಿಸಲಾಗಿದೆ. ಈ ಹೋರಾಟವು ರೈತ ಚಳುವಳಿಯ ಮುಖ್ಯ ತಿರುವಾಗಿದೆ. ಈ ಯೋಜನೆಯಲ್ಲಿ ನೀರಾವರಿ ಕಾಲುವೆಗಳು ಪೂರ್ಣಗೊಳ್ಳದೆ, ರೈತರ ಹೊಲಗಳಿಗೆ ನೀರು ಹರಿಯುವ ಮುಂಚೆಯೇ ರೈತರ ಮೇಲೆ ಪೂರ್ವಾನ್ವಯ ತೆರಿಗೆಯನ್ನು ಹಾಕಲಾಯಿತು. ಇದರ ಪರಿಣಾಮವೇ ೧೯೮೦ ಜುಲೈ ೨೧ರಂದು ನಡೆದ ನರಗುಂದ ಗೋಲಿಬಾರ್ ದುರಂತ. ದುರಂತದಲ್ಲಿ ಮಡಿದವರಿಗೆ ಮುಖ್ಯಮಂತ್ರಿಗಳಾಗಿದ್ದ ಗುಂಡೂರಾವ್ ಸರಕಾರ ಘೋಷಿಸಿದ ಪರಿಹಾರವು ಸಂಬಂಧಪಟ್ಟ ರೈತರಿಗೆ ತಲುಪಲಿಲ್ಲ."[೧] ಆದ್ದರಿಂದ ಚಳುವಳಿ ಮುಂದುವರಿಯಿತು.

ಇದೇ ಸಮಯಕ್ಕೆ ಶಿವಮೊಗ್ಗ ಜಿಲ್ಲಾ ಭದ್ರ ಸಹಕಾರ ಸಕ್ಕರೆ ಕಾರ್ಖಾನೆಯ ಸಮಸ್ಯೆ ತೀವ್ರಗೊಂಡಿತು. ಆಗ ಇಲ್ಲಿನ ರೈತ ಕುಟುಂಬದಿಂದ ಬಂದಂತಹ ಕಾನೂನು ಪ್ರಾಧ್ಯಾಪಕರಾದ ಪ್ರೊ. ಎಂ.ಡಿ. ನಂಜುಂಡಸ್ವಾಮಿ ಹಾಗೂ ಪ್ರಗತಿಪರ ರೈತ ಎನ್.ಡಿ.ಸುಂದರೇಶ್, ಮಾಜಿ ಸಚಿವರಾದ ಎಚ್.ಎಸ್. ರುದ್ರಪ್ಪ, ರೇವಣ್ಣಸಿದ್ಧಯ್ಯ ಮೊದಲಾದವರ ನಾಯಕತ್ವದಲ್ಲಿ ಶಿವಮೊಗ್ಗ ಜಿಲ್ಲಾ ರೈತ ಸಭೆ ಜರುಗಿತು. "ಸಮಾವೇಶದಲ್ಲಿ ಸುಮಾರು ೧೯ ಬೇಡಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಲು ೧೯೮೦ ಸೆಪ್ಟೆಂಬರ್ ೧ರಂದು ತೀರ್ಮಾನಿಸಲಾಯಿತು. ಬಂಧಿತ ರೈತರ ಬಿಡುಗಡೆ. ಬ್ಯಾಂಕ್ ಸಾಲ ಮನ್ನಾ, ಶೇ. ೪ರ ಬಡ್ಡಿ ದರದಲ್ಲಿ ಕೃಷಿ ಸಾಲ, ಬೆಳೆ ವಿಮೆ ಮುಂತಾದವು. ಅದೇ ದಿನಾ ರೈತ ಚಳುವಳಿಗಾರರೆಲ್ಲಾ ಹಸಿರು ಟೋಪಿ, ಹಸಿರು ಶಾಲು ಧರಿಸುವಂತೆ ತೀರ್ಮಾನಿಸಲಾಯಿತು. ಅದೇ ಸಂದರ್ಭದಲ್ಲಿ ಅಧಿಕಾರ ಕಳೆದುಕೊಂಡಿದ್ದ ಡಿ.ದೇವರಾಜ ಅರಸರ ಅಧ್ಯಕ್ಷತೆಯಲ್ಲಿ ಸಿಪಿಐ., ಸಿ.ಪಿ.ಎಂ ಪಕ್ಷಗಳು ಸೇರಿಕೊಂಡು ಪ್ರಗತಿಪರ ರೈತರ ವೇದಿಕೆಯನ್ನು ಆರಂಭಿಸಿದವು. ೧೯೮೦ ಅಕ್ಟೋಬರ್ ೧೭ರಂದು ಬೆಂಗಳೂರಿನಲ್ಲಿ ಸಮಾವೇಶ ಗೊಂಡ ರೈತರು 'ಕರ್ನಾಟಕ ರಾಜ್ಯ ರೈತ ಸಂಘ'ವನ್ನು ಅಧಿಕೃತವಾಗಿ ಸ್ಥಾಪಿಸಿದರು. ಕರ್ನಾಟಕ

ರೈತ ಹೋರಾಟಗಳಲ್ಲಿ ಅತ್ಯಂತ ಮಹತ್ತರ ಪಾತ್ರ ವಹಿಸಿದ್ದು 'ಕರ್ನಾಟಕ ರಾಜ್ಯ ರೈತ ಸಂಘ' ಶಿವಮೊಗ್ಗ ಜಿಲ್ಲೆಯ ರೈತ ಹಾಗೂ ಕಬ್ಬು ಬೆಳೆಗಾರರ ಸಂಘಟನೆಯಲ್ಲಿ ಆರಂಭಗೊಂಡ ರೈತ ಸಂಘಟನೆ ಮುಂದೆ ವಿವಿಧ ಜಿಲ್ಲೆಯ ರೈತರ ಬೇಡಿಕೆಗಳನ್ನು ಕ್ರೋಡೀಕರಿಸಿ ಸನದಿನ ರೂಪದಲ್ಲಿ ಮುಂದಿಟ್ಟಾಗ ಅದು 'ರಾಜ್ಯ ರೈತ ಸಂಘ'ವಾಗಿ ಪರಿವರ್ತಿತವಾಯಿತು."೨

## ೪.೧.೧. ಸ್ವಾತಂತ್ರ್ಯೋತ್ತರ ರೈತ ಚಳುವಳಿಗಳು

ಯಾದಗಿರಿ ಜಿಲ್ಲೆಯಲ್ಲಿ ನಡೆದ ಸಾಮಾಜಿಕ ಚಳುವಳಿಗಳಲ್ಲಿ ರೈತ ಚಳುವಳಿಯು ಅತ್ಯಂತ ಪ್ರಮುಖವಾದುದು ಮತ್ತು ಭಿನ್ನವಾದುದಾಗಿದೆ. ಜಿಲ್ಲೆಗೆ ಸಂಬಂಧಿಸಿದಂತೆ ಎಂಬತ್ತು ಮತ್ತು ತೊಂಬತ್ತರ ದಶಕವು ಅತ್ಯಂತ ಮಹತ್ವದ ಕಾಲಘಟ್ಟವಾಗಿದೆ. ಈ ಕಾಲಘಟ್ಟದಲ್ಲಿ ಇಡೀ ಯಾದಗಿರಿ ಜಿಲ್ಲೆಯಲ್ಲಿ ರೈತ ಚಳುವಳಿ ಒಂದು ಹೊಸ ಅಲೆಯನ್ನು ಸೃಷ್ಟಿಸಿತೆಂದರೆ ತಪ್ಪಾಗಲಾರದು. ಏಕೆಂದರೆ ಹಲವಾರು ರೈತ ಹೋರಾಟಗಳನ್ನು ಇಲ್ಲಿ ಕಾಣುತ್ತೇವೆ. ಯಾದಗಿರಿ ಜಿಲ್ಲೆಯಲ್ಲಿ ಇಂತಹ ಅನೇಕ ಚಳುವಳಿಗಳು ನಡೆದಿರುವುದನ್ನು ಮತ್ತು ಈಗಲೂ ನಡೆಯುತ್ತಿರುವುದನ್ನು ಕಾಣಬಹುದು. ಏಕೆಂದರೆ, ಯಾದಗಿರಿ ಜಿಲ್ಲೆಯು ಭೌಗೋಳಿಕವಾಗಿ ಒಣ ಹವೆಯಿಂದ ಕೂಡಿದ್ದು ಮಳೆ ಪ್ರಮಾಣ ಬಹಳ ಕಡಿಮೆ ಇದೆ. ಇದರಿಂದ ಈ ಜಿಲ್ಲೆಯು ಪದೇ ಪದೇ ಬರಗಾಲಕ್ಕೆ ಈಡಾಗುತ್ತದೆ.

ಇತ್ತೀಚೆಗೆ ಇದು ಆಗಾಗ ಅತಿವೃಷ್ಟಿ ಹಾಗೂ ಅನಾವೃಷ್ಟಿಗೆ ಒಳಗಾಗುತ್ತಿದೆ. ಒಂದು ಕಡೆ ಬರಗಾಲದ ಬೇಗೆಯಲ್ಲಿ ಬೇಯುತ್ತಿರುವ ರೈತರು ಮತ್ತೊಂದು ಕಡೆ ಪ್ರಕೃತಿ ವಿಕೋಪಕ್ಕೆ ಬಲಿಯಾಗುತ್ತಿದ್ದಾರೆ. ಇನ್ನೊಂದು ಕಡೆ ಸರಕಾರದ ಸೌಲಭ್ಯಗಳು ಇಲ್ಲಿನ ರೈತರಿಗೆ ದೊರಕುತ್ತಿಲ್ಲ. ಇಲ್ಲಿನ ನೀರಾವರಿ ಯೋಜನೆಗಳು ದಶಕಗಳಿಂದ ನಿಧಾನಗತಿಯಲ್ಲಿ ಸಾಗಿವೆ. ಇರುವ ಸ್ವಲ್ಪ ಪ್ರಮಾಣದ ಫಲವತ್ತಾದ ಭೂಮಿಯನ್ನು ಕೈಗಾರಿಕಾ ಉದ್ದೇಶಗಳಿಗೆ ವಶಪಡಿಸಿಕೊಳ್ಳಲಾಗುತ್ತಿದೆ. ಇನ್ನು ಈ ಭಾಗದ ರೈತರು ಬೆಳೆದ ತೊಗರಿ, ಕಬ್ಬು, ಭತ್ತ, ಜೋಳ ಮುಂತಾದ ಧಾನ್ಯಗಳಿಗೆ ಸರಿಯಾದ ಬೆಂಬಲ ಬೆಲೆ ಸಿಗುತ್ತಿಲ್ಲ. ಹೀಗಾಗಿ ರೈತರು ತಮ್ಮ ಸಮಸ್ಯೆಗಳನ್ನು ಮತ್ತು ಕಷ್ಟಗಳನ್ನು ಪರಿಹರಿಸಿಕೊಳ್ಳಲು, ವ್ಯವಸ್ಥೆಯ ವಿರುದ್ಧ ಹೋರಾಟ ಮಾಡಲೇಬೇಕಾದ ಅನಿವಾರ್ಯತೆ ಎದುರಾಗಿದೆ. ಆರಂಭದಲ್ಲಿ ಹೋರಾಟವು ರಸ್ತೆ ತಡೆ, ಬಂದ್ ಮತ್ತು ಸತ್ಯಾಗ್ರಹಗಳನ್ನು ಅವಲಂಬಿಸಿದ್ದರೆ, ಈಗ ಇಂತಹ ಹೋರಾಟವು ರೈತನ ಆತ್ಮಹತ್ಯೆ ತನಕ ಬಂದು ನಿಂತಿದೆ.

## ನಾರಾಯಣಪುರ ಬಲದಂಡೆ ಹೋರಾಟ

"ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿಯು ಜನರ ಪ್ರಮುಖ ಜೀವನೋಪಾಯದ ಉದ್ಯೋಗವಾಗಿದೆ. ಇಂದಿನ ಆಧುನಿಕ ತಂತ್ರಜ್ಞಾನದ ಭರಾಟೆಯಲ್ಲೂ ಸಹ ಕೃಷಿಯು ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ. ಕೇವಲ ಸಾಂಪ್ರದಾಯಿಕ ಕೃಷಿಪದ್ಧತಿಯನ್ನು ಹೊಂದಿದ ಭಾರತದ ದೇಶವು ಬ್ರಿಟಿಷರ ಆಗಮನದ ನಂತರ ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಅಣೆಕಟ್ಟುಗಳನ್ನು ನಿರ್ಮಿಸಿ ಕಾಲುವೆ, ಉಪಕಾಲುವೆಗಳ ಮೂಲಕ ಭೂಮಿಗೆ ನೀರುಣಿಸಲು ಪ್ರಯತ್ನಪಟ್ಟಿತು. ಕಾಲುವೆ ನಿರ್ಮಾಣ ಮಾಡುವ ಸಂದರ್ಭದಲ್ಲಿ ಭೂಮಿಯು

ಸಮತಟ್ಟಾಗಿಲ್ಲದ್ದರಿಂದ ಕೆಲವು ಪ್ರದೇಶಗಳು ನೀರಿನ ಸೌಲಭ್ಯದಿಂದ ವಂಚಿತವಾದವು. ಇದರಿಂದಾಗಿ ಆ ಪ್ರದೇಶದಲ್ಲಿ ಹೋರಾಟಗಳು ಹುಟ್ಟಿಕೊಂಡವು. ಇಂತಹ ಪರಿಣಾಮವಾಗಿ ನಾರಾಯಣಪುರ ಬಲದಂಡೆ ಹೋರಾಟವು ಯಾದಗಿರಿ ಪ್ರದೇಶದಲ್ಲಿ ನಡೆದ ಪ್ರಮುಖ ರೈತ ಹೋರಾಟವಾಗಿದೆ.

ಯಾದಗಿರಿ, ಶಹಾಪುರ ಮತ್ತು ಸುರಪುರ ತಾಲೂಕುಗಳಲ್ಲಿ ನೀರಾವರಿ ಇಲ್ಲದೇ ರೈತರು ಸಂಕಷ್ಟದಲ್ಲಿದ್ದು ಭೂಮಿಗಳು ಬರಡಾಗಿದ್ದವು. ಇಂತಹ ಸಂದರ್ಭದಲ್ಲಿ ಕಾಲುವೆ ನೀರಾವರಿ ವ್ಯವಸ್ಥೆಗಾಗಿ ಜನರು ಸಣ್ಣಪುಟ್ಟ ಹೋರಾಟಗಳನ್ನು ಪ್ರಾರಂಭಿಸಿದರು. ರೈತ ಮುಖಂಡರು ಹಲವಾರು ಕಾರ್ಯಕ್ರಮಗಳ ಮೂಲಕ ರೈತರಿಗೆ ಸಮಸ್ಯೆಗಳನ್ನು ಹಾಗೂ ಅವುಗಳನ್ನು ಎದುರಿಸಲು ಮಾರ್ಗೋಪಾಯಗಳನ್ನು ತಿಳಿಸುತ್ತಿದ್ದರು.”[೩] ಇದರ ಪರಿಣಾಮವಾಗಿ ೩ ತಾಲೂಕಿನ ಜನ ಹಲವಾರು ಸಂಘ ಸಂಸ್ಥೆಗಳೊಡನೆ ಸೇರಿ ದೊಡ್ಡ ಸಮಾವೇಶವನ್ನು ನಡೆಸಿದರು. ಈ ನಾರಾಯಣಪುರ ಬಲದಂಡೆ ಹೋರಾಟವು ಯಾದಗಿರಿ ಜಿಲ್ಲೆಯ ರೈತರ ಮೇಲೂ ಹೆಚ್ಚಿನ ಪ್ರಭಾವ ಬೀರಿತು.

## ಮಲ್ಲಾಬಾದ ಏತ ನೀರಾವರಿಗಾಗಿ ಹೋರಾಟ

ಬರಗಾಲ ಹಾಗೂ ಅನಾವೃಷ್ಟಿಗೆ ಹೆಸರಾಗಿರುವ ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ನೀರಾವರಿಗೆ ಅವಕಾಶಗಳು ಬಹಳ ಕಡಿಮೆ. ಇಂತಹ ಪರಿಸ್ಥಿತಿಯಲ್ಲಿ ಜಾರಿಯಾಗಬೇಕಾದ ನೀರಾವರಿ ಯೋಜನೆಗಳು ಸರಿಯಾಗಿ ಜಾರಿಯಾಗದೆ ಹಾಗೆಯೇ ಉಳಿದಿವೆ ಹಾಗೂ ಯೋಜನೆಗಳ ಜಾರಿಗಾಗಿ ರೈತರು ಬೀದಿಗಿಳಿದು ಹೋರಾಟ ಮಾಡಬೇಕಾದ ಪರಿಸ್ಥಿತಿ ಅನೇಕ ಬಾರಿ ಉದ್ಭವವಾಗಿದೆ. ಇಂತಹ ಹೋರಾಟಗಳಲ್ಲಿ ಅತಿ ಪ್ರಮುಖವಾದುದೆಂದರೆ ಮಲ್ಲಾಬಾದ ಏತ ನೀರಾವರಿಗಾಗಿ ಹೋರಾಟ.

ಕೃಷ್ಣಾ ಮೇಲ್ದಂಡೆ ಯೋಜನೆ ಮೂಲಕ ನೀರಾವರಿ ಪ್ರಾರಂಭವಾದಾಗ ಕಲಬುರಗಿ ಜಿಲ್ಲೆಯ ಜೇವರ್ಗಿ ಸುತ್ತಮುತ್ತಲಿನ ಗ್ರಾಮಗಳ ಜನರು ತಮಗೂ ನೀರಾವರಿ ಸೌಲಭ್ಯ ದೊರಕುವುದೆಂದು ಮತ್ತು ಇದರಿಂದ ತಮ್ಮ ಜೀವನ ಬದಲಾಗುತ್ತದೆಂದು, ನೆಮ್ಮದಿಯ ಬದುಕು ಸಾಧ್ಯವೆಂದು ತಿಳಿದಿದ್ದರು. ಆದರೆ ಜೇವರ್ಗಿ ತಾಲೂಕಿನ ಸುಮಾರು ೪೦ ಹಳ್ಳಿಗಳು ಎತ್ತರ ಪ್ರದೇಶದಲ್ಲಿ ಇರುವುದರಿಂದ ನೀರಿನ ಸೌಲಭ್ಯದಿಂದ ವಂಚಿತರಾದರು. ಸಮಸ್ಯೆಯನ್ನು ಬಗೆಹರಿಸಲು ಸರಕಾರವಾಗಲಿ ಇಲ್ಲಿನ ಜನಪ್ರತಿನಿಧಿಗಳಾಗಲಿ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಆಗ ರಾಜಕಾರಣಿ ಹಾಗೂ ಪ್ರಗತಿಪರ ಚಿಂತಕರಾದ ಶ್ರೀ ಕೇದಾರಲಿಂಗಯ್ಯ ಹಿರೇಮಠ ಎನ್ನುವವರು ಮಲ್ಲಾಬಾದ ಏತ ನೀರಾವರಿ ಬಗ್ಗೆ ಚಿಂತನೆ ಹಾಗೂ ಅಧ್ಯಯನ ಮಾಡಿ ಹಲವಾರು ಇಂಜಿನಿಯರ್‌ಗಳನ್ನು, ನೀರಾವರಿ ತಜ್ಞರನ್ನು ಭೇಟಿ ಮಾಡಿ ಅವರಿಂದ ಸಲಹೆ ಸೂಚನೆಗಳನ್ನು ಪಡೆದರು. ಮಲ್ಲಾಬಾದ ಏತ ನೀರಾವರಿಯಿಂದ ಈ ಭಾಗದ ರೈತರಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಸಾಧ್ಯವಿದೆ ಎಂದು ತಿಳಿದು, ಪ್ರತಿ ಹಳ್ಳಿಗಳಿಗೆ ಹೋಗಿ ವಿಚಾರವನ್ನು ಸಂಬಂಧಪಟ್ಟ ರೈತರ ಜೊತೆ ಹಂಚಿಕೊಂಡರು. ಯೋಜನೆ ಆರಂಭವಾಗಬೇಕಾದರೆ ಸರಕಾರದ ಗಮನ ಸೆಳೆಯಲು ದೊಡ್ಡ ಹೋರಾಟ ಅನಿವಾರ್ಯ ಎಂಬುದನ್ನು ಮನದಟ್ಟು ಮಾಡಿಕೊಟ್ಟು ರೈತರನ್ನು, ರೈತ ಮುಖಂಡರನ್ನು, ಹೋರಾಟಕ್ಕೆ ಸಜ್ಜುಗೊಳಿಸಿದರು. ಹೋರಾಟಕ್ಕೆ

ರೈತ ಸಂಘಗಳು ಬೆಂಬಲ ನೀಡಿದ ಫಲವಾಗಿ ಮಲ್ಲಾಬಾದ ಏತ ನೀರಾವರಿ ಬೇಡಿಕೆ ಹೋರಾಟ ಆರಂಭವಾಯಿತು.

"ಮಲ್ಲಾಬಾದ ಏತ ನೀರಾವರಿಗಾಗಿ ನಡೆದ ಚಳುವಳಿಯು ನಾನಾ ಹಂತಗಳಲ್ಲಿ ಹಾಗೂ ನಾನಾ ರೂಪಗಳಲ್ಲಿ ನಡೆಯಿತು. ೨೦೦೩ರಲ್ಲಿ ಜೆಡಿಎಸ್ ಪಕ್ಷದ ನಾಯಕರಾಗಿದ್ದ ಶ್ರೀ ಕೇದಾರ ಲಿಂಗಯ್ಯ ಹಿರೇಮಠ ಅವರೊಂದಿಗೆ ಚಂದ್ರಶೇಖರ ಹೊಸಮನಿ, ಎಸ್.ಎಸ್. ಸಲಗರ ಮುಂತಾದವರ ನೇತೃತ್ವದಲ್ಲಿ, ಜನಜಾಗೃತಿ ಮೂಡಿಸಲು ಮತ್ತು ಸರಕಾರದ ಗಮನ ಸೆಳೆಯಲು ಜೇವರ್ಗಿ ತಾಲೂಕಿನ ೪೦ ಹಳ್ಳಿಗಳಿಗೆ ಪಾದಯಾತ್ರೆ ಕೈಗೊಂಡರು."[੪] ನಂತರ ಹೋರಾಟಕ್ಕೆ ವಿಶೇಷ ಮೆರಗು ನೀಡಲು ೨೦೦೪ರಲ್ಲಿ ಎತ್ತಿನ ಬಂಡಿಯ ಜಾಥಾ ಆರಂಭಿಸಿದ ರಾಜಕೀಯ ಮುಖಂಡರು, ರೈತರು, ಕಾರ್ಯಕರ್ತರನ್ನೊಳಗೊಂಡ ಜನರ ದಂಡು ತಹಶೀಲ್ದಾರರ ಕಚೇರಿಗೆ ಮುತ್ತಿಗೆ ಹಾಕಿ ಧರಣಿ ನಡೆಸಿದರು. "ಇಂತಹ ಹೋರಾಟದ ಫಲವಾಗಿ ಆಗಿನ ಲೋಕೋಪಯೋಗಿ ಸಚಿವರಾಗಿದ್ದ ಶ್ರೀ ಧರ್ಮಸಿಂಗ್ ಅವರು ಶೀಘ್ರದಲ್ಲಿ ಮಲ್ಲಾಬಾದ ಏತ ನೀರಾವರಿ ಯೋಜನೆ ಜಾರಿಗೊಳಿಸಿ ಒಂದು ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸುವ ಭರವಸೆ ನೀಡಿದರು. ಆದರೆ ಆಶ್ವಾಸನೆಯಿಂದ ತೃಪ್ತರಾಗದ ರೈತರು ನೀರಾವರಿ ಯೋಜನೆ ಜಾರಿಗಾಗಿ ಹೋರಾಟವನ್ನು ತೀವ್ರಗೊಳಿಸಿದರು. ಆಗ ೨೦೦೪ರಲ್ಲಿ ಸಮೀಕ್ಷೆ ನಡೆಸಲು ರಾಜ್ಯ ಸರಕಾರ ಆದೇಶ ಹೊರಡಿಸಿತು."[೫]

ಹೋರಾಟದ ಒತ್ತಡಕ್ಕೆ ಮಣಿದ ರಾಜ್ಯ ಸರಕಾರ ಏತ ನೀರಾವರಿಯ ತಾಂತ್ರಿಕ ಸಮೀಕ್ಷೆ ನಡೆಸಲು ಆದೇಶ ನೀಡಿ, ೨೦೦೫-೦೬ರ ಬಜೆಟ್‌ನಲ್ಲಿ ೫ ಕೋಟಿ ರೂಪಾಯಿಗಳನ್ನು ಸರ್ವೇ ಮಾಡಲು ಮಂಜೂರು ಮಾಡಿತು. ಹೀಗಾಗಿ ಸರ್ವೇ ಕಾರ್ಯ ಮುಗಿದು ವರದಿ ಸರಕಾರವನ್ನು ತಲುಪಿತು. ಆಗ ವರದಿಯ ಜಾರಿಗೆ ಜೇವರ್ಗಿ ಮತ್ತು ಕಲಬುರಗಿಯ ರೈತರು, ರೈತ ಸಂಘಟನೆಗಳು ವಿವಿಧ ರಾಜಕೀಯ ಮುಖಂಡರು, ಮಠಾಧೀಶರು ಜನಸಾಮಾನ್ಯರು ಉಪವಾಸ, ಪ್ರತಿಭಟನೆಗಳನ್ನು ಆರಂಭಿಸಿ ಆದಷ್ಟು ಬೇಗ ಯೋಜನೆಯನ್ನು ಆರಂಭಿಸುವಂತೆ ಒತ್ತಡ ಹೇರಿದರು. ಹೋರಾಟ ತೀವ್ರ ಸ್ವರೂಪ ಪಡೆದಾಗ ಎಚ್ಚೆತ್ತ ಸರಕಾರ ೨೦೦೮-೦೯ರ ಸಾಲಿನ ಬಜೆಟ್‌ನಲ್ಲಿ ೪೨ ಕೋಟಿ ರೂಪಾಯಿಗಳ ಅಂದಾಜು ವೆಚ್ಚಕ್ಕೆ ಟೆಂಡರ್ ಕರೆಯುವ ಅವಕಾಶ ಮಾಡಿಕೊಟ್ಟಿತು. ರೈತರ ಹೋರಾಟದ ಫಲವಾಗಿ ಈಗ ನೀರಾವರಿ ಯೋಜನೆ ಕಾರ್ಯ ಆರಂಭವಾಗಿದ್ದರೂ ತೀವ್ರಗತಿಯಲ್ಲಿ ಸಾಗುತ್ತಿಲ್ಲ ಎನ್ನುವ ಅಪವಾದ ಇದೆ. ಕಾಮಗಾರಿ ಯೋಜನೆ ಸಂಪೂರ್ಣಗೊಂಡು ಈ ಭಾಗದ ರೈತರಿಗೆ ನೀರಾವರಿ ಸೌಲಭ್ಯ ದೊರಕುವುದು ಯಾವಾಗ, ಇಲ್ಲಿನ ಜನರ, ರೈತರ ಬದುಕು ಹಸನಾಗುವುದು ಯಾವಾಗ ಎನ್ನುವ ಪ್ರಶ್ನೆಗೆ ಉತ್ತರ ದೊರಕದೇ ಪ್ರಶ್ನೆ ಮಾತ್ರ ಹಾಗೆಯೇ ಉಳಿದಿದೆ. ಒಟ್ಟಿನಲ್ಲಿ ರೈತರು ನೀರಾವರಿ ಯೋಜನೆಯ ಆರಂಭಕ್ಕಾಗಿ ಪಟ್ಟಂತ ಶ್ರಮ ಮತ್ತು ಹೋರಾಟ ಸಫಲವಾಗಿರುವುದು ಸಂತೋಷಕರ ವಿಷಯವಾಗಿದೆ.

**ತೊಗರಿ ಬೆಂಬಲ ಬೆಲೆ ಚಳುವಳಿ**

ಯಾದಗಿರಿ ಜಿಲ್ಲೆಯ ರೈತರ ಇನ್ನೊಂದು ಪ್ರಮುಖ ಹೋರಾಟವೆಂದರೆ, ತೊಗರಿ ಬೆಂಬಲ ಬೆಲೆಗಾಗಿ ನಡೆದ ಚಳುವಳಿಗಳು. ಪ್ರಮುಖವಾಗಿ ಕಲಬುರಗಿ, ಯಾದಗಿರಿ ಸುತ್ತಮುತ್ತ

ಸುಮಾರು ೪ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ತೊಗರಿಯನ್ನು ಬೆಳೆಯಲಾಗುತ್ತಿದೆ. ಕಲಬುರಗಿ ತೊಗರಿ ಕಣಜವೆಂದೇ ಖ್ಯಾತಿ ಪಡೆದ ಜಿಲ್ಲೆಯಾಗಿದೆ. ಆದರೆ ಕಲಬುರಗಿ ಮತ್ತು ಯಾದಗಿರಿ ತೊಗರಿ ಬೆಳೆಗಾರರಿಗೆ ಸುಖವಿಲ್ಲ. ಒಮ್ಮೆ ಅತಿವೃಷ್ಟಿಯಾದರೆ ಇನ್ನೊಮ್ಮೆ ಅನಾವೃಷ್ಟಿ. ಇನ್ನು ಬೆಳೆ ಚೆನ್ನಾಗಿ ಬಂತೆಂದರೆ ಆಗ ಬೆಲೆ ಕುಸಿತದ ಕಾಟ. ಹೀಗಾಗಿ ತೊಗರಿ ಬೆಳೆಯನ್ನು ಬೆಳೆಯುವ ರೈತ ಸರಿಯಾದ ಬೆಲೆ ಸಿಗದೇ ಸರಕಾರದ ವಿರುದ್ಧ ಬೆಂಬಲ ಬೆಲೆಗಾಗಿ ಪ್ರತಿಭಟನೆಗೆ ಇಳಿಯುವ ಸಂದರ್ಭಗಳು ಮೇಲಿಂದ ಮೇಲೆ ಒದಗಿ ಬರುತ್ತಿವೆ. ಕಲಬುರಗಿ ಮತ್ತು ಯಾದಗಿರಿಯಲ್ಲಿ ತೊಗರಿ ಬೆಂಬಲ ಬೆಲೆಗಾಗಿ ಒತ್ತಾಯಿಸಿ ಸರಕಾರದ ವಿರುದ್ಧ ಅನೇಕ ಹೋರಾಟಗಳು ನಡೆದಿವೆ. ಅದರಲ್ಲೂ ೨೦೦೦ರಲ್ಲಿ ನಡೆದ ಹೋರಾಟ ಗಮನಾರ್ಹವಾಗಿದೆ.

"೧೯೯೫-೯೬ ಮತ್ತು ೧೯೯೬-೯೭ನೇ ವರ್ಷಗಳಲ್ಲಿ ಕಲಬುರಗಿ ಮತ್ತು ಯಾದಗಿರಿಯ ಸುತ್ತಮುತ್ತ ಒಳ್ಳೆಯ ಮಳೆ ಬಿದ್ದ ಕಾರಣದಿಂದ ಉತ್ತೇಜಿತರಾದ ರೈತರು ಅತಿ ಹೆಚ್ಚು ತೊಗರಿಯನ್ನು ಬೆಳೆದರು. ಒಂದೇ ವರ್ಷದಲ್ಲಿ ತೊಗರಿ ಉತ್ಪಾದನೆ ದಾಖಲೆ ಮಟ್ಟವನ್ನು ಮುಟ್ಟಿತು. ಒಳ್ಳೆಯ ಇಳುವರಿಯಿಂದ ಉತ್ಪಾದನೆ ಹೆಚ್ಚಾಗಿದ್ದರ ಪರಿಣಾಮವಾಗಿ ತೊಗರಿ ಬೆಲೆಯು ಕುಸಿಯತೊಡಗಿತು. ೧೯೯೫-೯೬ರಲ್ಲಿ ತೊಗರಿ ಬೆಲೆ ಕ್ವಿಂಟಲಿಗೆ ರೂ. ೧೮೦೦ರಿಂದ ೧೯೦೦ ಇದ್ದದ್ದು, ೧೯೯೬-೯೭ರಲ್ಲಿ ೧೫೦೦ ರೂಪಾಯಿಗಳಿಗೆ ಇಳಿಯಿತು ಹಾಗೂ ಇನ್ನೂ ಇಳಿಯುವ ಸಂಭವವಿತ್ತು. ಇದರಿಂದಾಗಿ ಬೆಳೆದ ರೈತ ಶೋಚನೀಯ ಸ್ಥಿತಿಯನ್ನು ಎದುರಿಸಬೇಕಾದ ಪರಿಸ್ಥಿತಿ ಉಂಟಾಯಿತು. ಇನ್ನು ತೊಗರಿಗೆ ಬೆಂಬಲ ಬೆಲೆ ಘೋಷಿಸುವಲ್ಲಿ ಮತ್ತು ನಿರ್ದಿಷ್ಟ ಬೆಲೆಯನ್ನು ನಿರ್ಧರಿಸುವಲ್ಲಿ ಸರಕಾರವು ವಿಫಲವಾಯಿತು."[೬]

ಕಲಬುರಗಿ ಮತ್ತು ಯಾದಗಿರಿ ಪ್ರದೇಶಗಳಲ್ಲಿ 'ತೊಗರಿ ಮಂಡಳಿ' ರಚಿಸುವಂತೆ ರೈತ ಸಂಘಗಳು ಬೇಡಿಕೆಯನ್ನಿಟ್ಟು ಸರಕಾರವನ್ನು ಒತ್ತಾಯಿಸತೊಡಗಿದವು. ಆದರೆ ಬೇಡಿಕೆಯನ್ನು ಆಗಿನ ಮಾನ್ಯ ಮುಖ್ಯಮಂತ್ರಿಗಳು ತಿರಸ್ಕರಿಸಿದರಲ್ಲದೆ ಬೆಲೆ ಕುಸಿದ ಕಾರಣ ಬೆಂಬಲ ಬೆಲೆಯಲ್ಲಿ ತೊಗರಿಯನ್ನು ಖರೀದಿಸಲು ೧೦೦ ಕೋಟಿ ರೂ.ಗಳನ್ನು ಮೀಸಲಾಗಿಡುವ ಬದಲಾಗಿ ಕೇವಲ ೨೦ ಕೋಟಿ ರೂಪಾಯಿಗಳನ್ನು ಮೀಸಲಿಡಲು ಒಪ್ಪಿದರು. ಆಗ ಸರಕಾರದ ನೀತಿಯನ್ನು ವಿರೋಧಿಸಿ ಕರ್ನಾಟಕ ಪ್ರಾಂತ ರೈತ ಸಂಘಟನೆಯ ರಾಜ್ಯಾಧ್ಯಕ್ಷರಾದ ಮಾರುತಿ ಮಾನ್ಪಡೆ ಮತ್ತು ರೈತ ಸಂಘಟನೆಗಳು ತೊಗರಿಗೆ ಬೆಂಬಲ ಬೆಲೆ ಮತ್ತು ತೊಗರಿ ಮಂಡಳಿ ರಚನೆಗಾಗಿ ಹೋರಾಟಕ್ಕಿಳಿದರು. ಪ್ರಾಂತ ರೈತ ಸಂಘದ ೨೧ನೇ ರಾಜ್ಯ ಸಮಾವೇಶವನ್ನು ೨೦.೯.೨೦೦೦ರಂದು ಕಲಬುರಗಿಯಲ್ಲಿ ಹಮ್ಮಿಕೊಂಡು ತೊಗರಿ ಮಂಡಳಿ ಸ್ಥಾಪನೆ ಮತ್ತು ಉತ್ತಮ ತೊಗರಿ ತಳಿಗಳ ಸಂಶೋಧನೆಗೆ ಆದ್ಯತೆ ನೀಡಬೇಕು ಹಾಗೂ ಸರಕಾರಗಳು ತೊಗರಿಯ ಆಮದು ನೀತಿಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕೆಂದು ಈ ಸಮಾವೇಶದಲ್ಲಿ ಒತ್ತಾಯಿಸಲಾಯಿತು. ರೈತರು ಪಾದಯಾತ್ರೆ ಮತ್ತು ಉಪವಾಸ ಸತ್ಯಾಗ್ರಹ ಕೈಗೊಂಡಿದ್ದರ ಫಲವಾಗಿ ತೊಗರಿ ಉತ್ಪನ್ನಗಳನ್ನು ಕ್ವಿಂಟಾಲಿಗೆ ೧೫೦೦ ರೂಪಾಯಿಗಳಿಗೆ ಖರೀದಿಸಲು ಕ್ರಮ ಕೈಗೊಳ್ಳಲಾಯಿತು. ಇಷ್ಟೆಲ್ಲಾ ಹೋರಾಟಗಳ ನಂತರವೂ ರೈತರ ನಿಜವಾದ ಸಮಸ್ಯೆಗಳನ್ನು ಬಗೆಹರಿಸಲು ಸರಕಾರ ವಿಫಲವಾಯಿತು. ಪರಿಣಾಮವಾಗಿ ಈ ಭಾಗದ ರೈತರ ಕೆಲವು ಜ್ವಲಂತ ಸಮಸ್ಯೆಗಳು

ಸಮಸ್ಯೆಗಳಾಗಿಯೇ ಉಳಿದಿರುವುದು ಕೆಲವು ರೈತ ನಾಯಕರ ಸಂದರ್ಶನದ ಮೂಲಕ ತಿಳಿದುಬಂದಿದೆ.

೨೦೧೪ರಲ್ಲಿ ಯಾದಗಿರಿ ಜಿಲ್ಲೆಯಾದ್ಯಂತ ಬರ, ಅನಾವೃಷ್ಟಿ ಹಾಗೂ ತೊಗರಿ ಬೆಳೆಗೆ ರೋಗ ತಗುಲಿ ಬೆಳೆ ಸಂಪೂರ್ಣ ನಾಶವಾಯಿತು. ಹಾಗಾಗಿ ತೊಗರಿ ಬೆಳೆ ನಷ್ಟಕ್ಕೆ ಪರಿಹಾರ ಕೊಡಬೇಕು ಮತ್ತು ಮುಂದಿನ ದಿನಗಳಲ್ಲಿ ಬೆಂಬಲ ಬೆಲೆ ನೀಡಬೇಕೆಂದು ರೈತರು, ಸಂಘಟನೆಗಳು ಪ್ರತಿಭಟನೆಗಿಳಿದರು. ಯಾದಗಿರಿ, ಗುರುಮಠಕಲ್, ಶಾಹಾಪುರ, ಸುರಪುರ ಮುಂತಾದ ಕಡೆಗಳಲ್ಲಿ ಪ್ರತಿಭಟನೆಗೆ ಇಳಿದ ರೈತರು ತಮ್ಮ ಬೇಡಿಕೆಯ ಈಡೇರಿಕೆಗಾಗಿ ಒತ್ತಾಯಿಸಿ ರಸ್ತೆ ತಡೆ ನಡೆಸಿದರು. ನಂತರ ಸುತ್ತಮುತ್ತಲಿನ ರೈತರೆಲ್ಲಾ ಎತ್ತು, ಬಂಡಿಗಳ ಜಾಥಾ ನಡೆಸಿ ಯಾದಗಿರಿ ತಹಸೀಲ್ದಾರ್ ಕಛೇರಿಗೆ ಮುತ್ತಿಗೆ ಹಾಕಿ ಪ್ರತಿಭಟನೆಗಿಳಿದರು. ಪ್ರತಿಭಟನೆ ತೀವ್ರ ಸ್ವರೂಪ ಪಡೆದಾಗ ಜನಪ್ರತಿನಿಧಿಗಳು ಮಧ್ಯ ಪ್ರವೇಶ ಮಾಡಿ ಸಾಂಕೇತಿಕವಾಗಿ ಕೆಲವು ರೈತರಿಗೆ ಸ್ವಲ್ಪ ಹಣ ಹಂಚಿದಂತೆ ಮಾಡಿ, ಇನ್ನೂ ಹೆಚ್ಚಿನ ಪರಿಹಾರವನ್ನು ಸರಕಾರದಿಂದ ಕೊಡಿಸುವ ಭರವಸೆ ನೀಡಿ ರೈತರನ್ನು ಸಮಾಧಾನಗೊಳಿಸಿ ಹೋರಾಟ ತಣ್ಣಗಾಗುವಂತೆ ಮಾಡಿದರು. ಹೋರಾಟದ ವಿಫಲತೆಗೆ ಸಂಘಟನಾ ಕೊರತೆ ಮತ್ತು ಸೂಕ್ತ ನಾಯಕರ ಕೊರತೆಯೇ ಕಾರಣವಾಗಿದೆ ಎನ್ನುವುದು ಗಮನಿಸಬೇಕಾದ ಅಂಶವಾಗಿದೆ.

### ವಿದ್ಯುತ್ ಸಂಬಂಧ ಚಳುವಳಿ

ಯಾದಗಿರಿ ಜಿಲ್ಲೆಯಲ್ಲಿ ವಿದ್ಯುತ್ ಅಭಾವ ತಲೆದೋರುವುದು ಸಾಮಾನ್ಯ. ಅದರಲ್ಲೂ ೨೦೦೦ ಮತ್ತು ೨೦೦೧ರಲ್ಲಿ ಅವಿಭಜಿತ ಗುಲ್ಬರ್ಗಾ ಜಿಲ್ಲೆಯಾದ್ಯಂತ ತೀವ್ರ ವಿದ್ಯುತ್ ಅಭಾವ ತಲೆದೋರಿತ್ತು. ಸರಕಾರದ ನಿರ್ಲಕ್ಷದಿಂದ ಕೃಷಿಗೆ ನಿರಂತರ ವಿದ್ಯುತ್ ಪೂರೈಸದೇ ಗ್ರಾಮಾಂತರ ಪ್ರದೇಶಕ್ಕೆ ಎಲ್ಲಾ ರೀತಿಯ ತಾರತಮ್ಯ ನೀತಿಯನ್ನು ಅನುಸರಿಸಿದ ಪರಿಣಾಮವಾಗಿ ರೈತರ ಪಂಪ್‌ಸೆಟ್ಟುಗಳಿಗೆ ತೀವ್ರ ವಿದ್ಯುತ್ ಕೊರತೆ ತಲೆದೋರಿತ್ತು. ಎಷ್ಟೋ ರೈತರು ವಿದ್ಯುತ್‌ನ ಅಭಾವದಿಂದ ಜಮೀನುಗಳಿಗೆ ಸಮರ್ಪಕವಾಗಿ ನೀರು ಹಾಯಿಸಲು ಸಾಧ್ಯವಾಗದೇ ಸಾಕಷ್ಟು ಕಷ್ಟ ನಷ್ಟ ಅನುಭವಿಸಿದ್ದರು. ಇದನ್ನರಿತ ರೈತ ಸಂಘಟನೆಗಳು ಮತ್ತು ನಾಯಕರು ಸರಕಾರ ಮತ್ತು ಕೆಪಿಟಿಸಿಎಲ್ ವಿರುದ್ಧ ಹೋರಾಟಕ್ಕೆ ಮುಂದಾಗಿದ್ದರು. ನೀರಾವರಿ ಕೃಷಿಗೆ ನಿರಂತರ ವಿದ್ಯುತ್ ಪೂರೈಸಬೇಕೆಂಬ ಬೇಡಿಕೆಗಳನ್ನು ಮುಂದಿಟ್ಟುಕೊಂಡು ಕರ್ನಾಟಕ ಪ್ರಾಂತ ರೈತಸಂಘ, ರಾಜ್ಯ ರೈತಸಂಘ, ವಿದ್ಯುತ್ ಪಂಪ್‌ಸೆಟ್ ಬಳಕೆದಾರರ ಸಂಘ ಹಾಗೂ ಜಿಲ್ಲಾ ಅಭಿವೃದ್ಧಿ ಹೋರಾಟ ಸಮಿತಿ ಇತ್ಯಾದಿ ರೈತ ಸಂಘಟನೆಗಳು ೨೯.೧೨.೨೦೦೧ರಂದು ಕಲಬುರಗಿಯ ಕೆಪಿಟಿಸಿಎಲ್ ಕಛೇರಿಗೆ ಮುತ್ತಿಗೆ ಹಾಕಲು ತೀರ್ಮಾನಿಸಿ ಚಳುವಳಿಗೆ ಕರೆಕೊಟ್ಟಿದ್ದವು. ಗಾಜರಕೋಟ, ಕೋಟಗೇರ, ಗುರುಮಠಕಲ್ ಹೀಗೆ ಅನೇಕ ಬೇರೆ ಬೇರೆ ಗ್ರಾಮಗಳಿಂದ ಬಂದ ರೈತರು, ಕಾರ್ಯಕರ್ತರು ಕೆಪಿಟಿಸಿಎಲ್ ಕಛೇರಿಗೆ ನುಗ್ಗಲು ಪ್ರಯತ್ನಿಸಿದಾಗ, ಅವರನ್ನು ತಡೆಯಲೆತ್ನಿಸಿದಾಗ ಪೊಲೀಸರು ಮತ್ತು ರೈತರ ಮಧ್ಯೆ ವಾದ ವಿವಾದಗಳು ಆರಂಭವಾದವು. ಆಗ ನಡೆದ ಘರ್ಷಣೆಯಲ್ಲಿ ಪೊಲೀಸರು ರೈತರನ್ನು ಚದುರಿಸಲು ಲಾಠಿ ಚಾರ್ಜ್ ಆರಂಭಿಸಿದರು. ಇದನ್ನು ಲೆಕ್ಕಿಸದ ಆವೇಶಗೊಂಡ ರೈತರಿಂದ ಕಲ್ಲು ತೂರಾಟ ಆರಂಭಗೊಂಡಿತು. ಪರಿಸ್ಥಿತಿ ಗಂಭೀರವಾಗುತ್ತಿ

ದ್ದಂತೆ ಪೊಲೀಸರು ಗುಂಪನ್ನು ಚದುರಿಸಲು ಗಾಳಿಯಲ್ಲಿ ಗುಂಡು ಹಾರಿಸಿದರು. ಇದರಿಂದ ರೊಚ್ಚಿಗೆದ್ದ ರೈತರು ಮತ್ತು ನಾಗರಿಕರು ಕಲಬುರಗಿಯ ಸರ್ದಾರ್ ವಲ್ಲಭಭಾಯಿ ಪಟೇಲ್ ವೃತ್ತದಲ್ಲಿ ಸೇರಿ ಪ್ರತಿಭಟನೆ ಆರಂಭಿಸಿ ಎಲ್ಲಾ ಅಂಗಡಿ, ರಸ್ತೆಗಳನ್ನು ಬಂದ್ ಮಾಡಿಸಿ ಪ್ರತಿಭಟನೆ ಮಾಡಿದರು. ಹೀಗೆ ಪರಿಸ್ಥಿತಿಯು ಹಿಂಸಾರೂಪಕ್ಕೆ ತಿರುಗುತ್ತಿದ್ದಂತೆ ಹಿಂಸೆಗೆ ಪ್ರಚೋದನೆ ಮಾಡಿದ ಆರೋಪದ ಮೇಲೆ ಪ್ರಾಂತ ರೈತ ಸಂಘದ ಮಾರುತಿ ಮಾನ್ಪಡೆ ಸೇರಿದಂತೆ ಸುಮಾರು ೪೨ ರೈತರನ್ನು ಬಂಧಿಸಲಾಯಿತು.

ರೈತರ ಮೇಲಿನ ಲಾಠಿ ಮತ್ತು ಗೋಲಿಬಾರನ್ನು ಖಂಡಿಸಿ ೩೦.೧೨.೨೦೦೧ರಂದು ಕಾರ್ಮಿಕ ಮುಖಂಡ ಎಸ್.ಕೆ.ಕಾಂತಾ, ವಿಧಾನ ಪರಿಷತ್ ಮಾಜಿ ಉಪಸಭಾಪತಿ ಶ್ರೀ ವಿ.ಆರ್. ಹನುಮಂತರಾವ್ ದೇಸಾಯಿ ಮುಂತಾದವರು ಬಾಯಿಗೆ ಕಪ್ಪು ಬಟ್ಟೆ ಕಟ್ಟಿಕೊಂಡು ಮೌನ ಮೆರವಣಿಗೆ ನಡೆಸಿ ಲಾಟಿ ಪ್ರಹಾರಕ್ಕೆ ಕಾರಣರಾದ ಪೊಲೀಸರನ್ನು ಅಮಾನತ್ತು ಮಾಡಬೇಕೆಂದು, ಬಂಧಿತ ರೈತರನ್ನು ಬಿಡುಗಡೆ ಮಾಡಬೇಕೆಂದು, ನಿರಂತರ ವಿದ್ಯುತ್ ಪೂರೈಕೆಗೆ ಕ್ರಮ ತೆಗೆದುಕೊಳ್ಳಬೇಕೆಂದು ಚಳುವಳಿಯನ್ನು ಆರಂಭಿಸಿದರು. ನಂತರ ಸರಕಾರ ಮತ್ತು ಕೆಪಿಟಿಸಿಎಲ್ ಅಧಿಕಾರಿಗಳ ಮಧ್ಯಸ್ಥಿಕೆಯಲ್ಲಿ ಬೇಡಿಕೆಗಳ ಈಡೇರಿಸುವ ಭರವಸೆಗಳನ್ನು ನೀಡಲಾಯಿತು. ಆದರೆ ಇತ್ತೀಚೆಗೆ ಕ್ಷೇತ್ರದಲ್ಲಿ ಈ ಭಾಗದ ಮುಖಂಡರ ಸಂದರ್ಶನ ಮಾಡಿದಾಗ ಆ ಭರವಸೆಗಳು ಇಂದಿಗೂ ಈಡೇರಿಲ್ಲವೆಂದು, ವಿದ್ಯುತ್ ಸಮಸ್ಯೆಯು ಹೆಚ್ಚಾಗಿದೆಯೇ ಹೊರತು ಕಡಿಮೆಯಾಗಿಲ್ಲ ಎನ್ನುವ ಅಂಶವು ಗಮನಕ್ಕೆ ಬಂದಿತು.

**ರೈತ ಕೂಲಿಕಾರ್ಮಿಕರ ಸಂಘದ ಹೋರಾಟ**

ಯಾದಗಿರಿ ಜಿಲ್ಲೆಗೆ ಸೇರಿದ ಶಹಾಪುರ, ಸುರಪುರ ಮತ್ತು ಯಾದಗಿರಿ ತಾಲೂಕುಗಳು ರಾಜ್ಯದಲ್ಲಿಯೇ ಅತ್ಯಂತ ಹಿಂದುಳಿದ ಪ್ರದೇಶವಾಗಿವೆ ಎಂದು ಅಧ್ಯಯನದಿಂದ ತಿಳಿದುಬರುತ್ತದೆ. ಇದಕ್ಕೆ ಕಾರಣ ಜಿಲ್ಲೆಯಲ್ಲಿ ಆರ್ಥಿಕ ಸಂಪನ್ಮೂಲಗಳ ಕೊರತೆ, ಬರ, ನೀರಿನ ಅಭಾವ, ಕಡಿಮೆ ಮಳೆ, ಅಜ್ಞಾನ, ಅನಕ್ಷರತೆ ಹೆಚ್ಚಾಗಿದೆ. ಹೀಗಾಗಿ ಇಲ್ಲಿನ ಬಡಜನರು, ಕೂಲಿ ಕಾರ್ಮಿಕರು ಭೂಮಾಲೀಕರನ್ನು ಅವಲಂಬಿಸಲೇಬೇಕಾದ ಅನಿವಾರ್ಯತೆ ಇದ್ದು, ಭೂಮಾಲೀಕರು ತಮ್ಮ ಲಾಭಕ್ಕಾಗಿ ಕೂಲಿ ಕಾರ್ಮಿಕರನ್ನು ಶೋಷಣೆ ಮಾಡುತ್ತಿರುವುದು ಸಾಮಾನ್ಯವಾಗಿದೆ. ಇದರ ಜೊತೆಗೆ ಬಂಡವಾಳಗಾರರೆ ಇಲ್ಲಿನ ಆಡಳಿತಾಧಿಕಾರದ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿದ್ದಾರೆ. ಹೀಗಾಗಿ ಹತಾಶರಾದ ಕೂಲಿ ಕಾರ್ಮಿಕರು ತಮ್ಮ ನೋವನ್ನು ಏಕಾಂಗಿಯಾಗಿ ವ್ಯಕ್ತಪಡಿಸಲು ಸಾಧ್ಯವಾಗದಿದ್ದಾಗ ನ್ಯಾಯ ಪಡೆಯಲು ಸಂಘಟನೆಗಳ ಕಡೆ ಒಲವು ತೋರಿದರು. ಇವರು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸಂಘಟನೆಗಳ ಮೂಲಕ ಪ್ರತೀಕಾರ, ಆಕ್ರಮಣ ಬೆದರಿಕೆ ಒಡ್ಡುವ ಹಾದಿಯನ್ನು ಹಿಡಿದರು. ಕ್ರಮೇಣ ಸಂಘಟನೆಯು ಎಡಪಂಥೀಯ ಧೋರಣೆಗಳನ್ನು ಅಳವಡಿಸಿಕೊಳ್ಳುತ್ತಾ ಸಿಪಿಐ(ಎಂ.ಎಲ್). ಮುಂತಾದ ಸಂಘಟನೆಗಳ ಸಹಕಾರ ಪಡೆದು ರೈತರ ಸಮಸ್ಯೆಗಳಿಗೆ ತನ್ನದೇ ಆದ ರೀತಿಯಲ್ಲಿ ಪರಿಹಾರ ಕಂಡುಕೊಳ್ಳಲು ಹೋರಾಟಕ್ಕಿಳಿದರು.

"ಯಾದಗಿರಿಯಲ್ಲಿ ಒಂದು ಕಡೆ ಭೂಮಾಲೀಕ ಮತ್ತು ಕೃಷಿ ಕಾರ್ಮಿಕರ ನಡುವೆ ಭಿನ್ನಾಭಿಪ್ರಾಯ ಇದ್ದರೆ, ಇನ್ನೊಂದು ಕಡೆ ಸರಕಾರ ಮತ್ತು ರೈತ ಕೂಲಿಕಾರರ ಸಂಘದ

ನಡುವೆ ಭಿನ್ನತೆ ಮತ್ತು ಅಂತರ ಹೆಚ್ಚುತ್ತಿತ್ತು. ಹೀಗಾಗಿ ಸರಕಾರ, ಪ್ರಜಾಪ್ರಭುತ್ವ ವಿರೋಧಿ ಸಂಘಟನೆಗಳನ್ನು ಹತ್ತಿಕ್ಕಲು ಮತ್ತು ಕಾನೂನು ಸುವ್ಯವಸ್ಥೆ ಕಾಪಾಡಲು ಪೋಲೀಸ್ ಶಕ್ತಿಯ ಮೂಲಕ ಕಾರ್ಯಾಚರಣೆ ಪ್ರಾರಂಭಿಸಿತು. ಕಾರ್ಯಾಚರಣೆ ಎಷ್ಟರಮಟ್ಟಿಗೆ ಚರ್ಚೆಗೆ ಗ್ರಾಸ ವಾಯಿತೆಂದರೆ, ದೌರ್ಜನ್ಯ ಕುರಿತು ವರದಿ ಸಲ್ಲಿಸಲು ಸತ್ಯಶೋಧಕ ಸಮಿತಿ ರಚಿಸಲಾಯಿತು. ಹೀಗೆ ಭೂಮಾಲೀಕರು ಹಾಗೂ ರೈತ ಕೂಲಿ ಕಾರ್ಮಿಕರಿಗೂ ಇರುವ ಭೂಸಂಬಂಧ ಸಮಸ್ಯೆ ಗಳು ಇಂದು 'ಪ್ರಜಾಪ್ರಭುತ್ವವಾದಿಗಳ' ಹಾಗೂ ಅದರ ವಿರೋಧಿಗಳ ಸಂಘರ್ಷದ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತಿದೆ."[೭] ಇದಕ್ಕೆ ಯಾದಗಿರಿಯಲ್ಲಿ ನಡೆಯುತ್ತಿರುವ ಭೂ ಸಂಬಂಧಿ ಪ್ರಶ್ನೆಗಳೇ ಮುಖ್ಯ ಸಾಕ್ಷಿಗಳಾಗುತ್ತವೆ.

### ೪.೧.೨. ಸಮಕಾಲೀನ ಸಂದರ್ಭದಲ್ಲಿ ರೈತರ ಸಮಸ್ಯೆಗಳು ಮತ್ತು ಸ್ಥಿತಿಗತಿಗಳು

"ಯಾದಗಿರಿ ಜಿಲ್ಲೆಯಲ್ಲಿ ಮಳೆಯನ್ನೇ ನಂಬಿರುವ ಹಾಗೂ ೧ರಿಂದ ೨ ಎಕರೆ ಭೂಮಿ ಯನ್ನು ಮಾತ್ರ ಹೊಂದಿರುವ ಹೆಚ್ಚಿನ ರೈತರು ಗ್ರಾಮೀಣ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ತಲತಲಾಂತರಗಳಿಂದ ಇವರ ಬದುಕು ಬಡತನದಲ್ಲೇ ಸಾಗಿದೆ. ಮಳೆಯನ್ನೇ ನಂಬಿದ ಇವರ ಕೃಷಿ ಬದುಕು, ಬರ, ಅತಿವೃಷ್ಟಿ, ವಿದ್ಯುತ್ ಅಭಾವ ಮತ್ತು ಸರಕಾರದ ನೀತಿಗಳಿಂದ ಬದುಕು ಅತಂತ್ರವಾಗಿದೆ. ಸರಕಾರ ರೈತನಿಗೆ ಸಬ್ಸಿಡಿಯ ಆಮಿಷವೊಡ್ಡಿ ರೈತನು ಸಾಲಗಾರನಾಗುವಂತೆ ಮಾಡಿದೆ."[೮] ಸ್ವಾತಂತ್ರ್ಯಾನಂತರದಲ್ಲಿ ದೇಶದ ರೈತರು ಸ್ವಾವಲಂಬಿಗಳಾಗಿ ಬದುಕುವ ಸ್ವಾತಂತ್ರ್ಯವನ್ನೇ ಕಳೆದುಕೊಂಡಿದ್ದಾರೆ. "ಸುಧಾರಿತ ಬೀಜ, ನವೀನ ತಳಿ, ಹೆಚ್ಚಿನ ಇಳುವರಿ ಎಂಬ ಕಂಪನಿಗಳ ಜಾಹೀರಾತು ಮತ್ತು ಪ್ರಚಾರಕ್ಕೆ ಒಳಗಾದ ರೈತರು ದೇಶಿ ತಳಿಗಳನ್ನೇ ಕೈ ಬಿಟ್ಟು, ಹೊಸ ತಳಿಗಳಿಗೆ ಆಕರ್ಷಿತರಾದರು. ರಸಗೊಬ್ಬರ ಬಳಕೆಯಲ್ಲಿ ವಿವೇಚನೆ ಮರೆತು ರೈತರು ಭೂಮಿಯ ಸತ್ವವನ್ನೇ ಹಾಳು ಮಾಡಿಕೊಂಡಿದ್ದಾರೆ. ರೈತರ ಮೇಲೆ ಅವಲಂಬಿತರಾದ ಉಪ ಕುಲಕಸುಬುದಾರರು ತಮ್ಮ ಕಸುಬುಗಳನ್ನು ತೊರೆದು ಇನ್ನಾವುದೋ ಕೆಲಸದಲ್ಲಿದ್ದಾರೆ."[೯] ಹೀಗಾಗಿ ಯಾದಗಿರಿ ಜಿಲ್ಲೆಯ ರೈತರು ಒಂದಲ್ಲಾ ಒಂದು ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

### ಬರ ಸಂದರ್ಭಗಳು

ಯಾದಗಿರಿ ಜಿಲ್ಲೆ ಎಂದಾಕ್ಷಣ ನೆನಪಿಗೆ ಬರುವುದೇ ಬರಗಾಲದ ನಾಡು ಮತ್ತು ಬಿಸಿಲಿನ ತವರೆಂದು. ಇಲ್ಲಿನ ಬಿಸಿಲಿನ ತಾಪದ ಬಗ್ಗೆ ಋತುಮಾನಗಳ ಬಗ್ಗೆ ಇಲ್ಲಿನ ಭಾಷೆಯಲ್ಲಿ ಹೇಳಬೇಕೆಂದರೆ ಇವರಿಗೆ ತಿಳಿದಿರುವುದು ಎರಡು ಕಾಲಗಳು. ಒಂದು ಬೇಸಿಗೆ ಕಾಲ, ಇನ್ನೊಂದು ಅತಿ ಬೇಸಿಗೆ ಕಾಲ. ಇಂತಹ ಮಾತು ಅತಿಶಯೋಕ್ತಿ ಎನಿಸಿದರೂ ಈ ಪ್ರದೇಶಗಳ ಬಿಸಿಲಿನ ತಾಪವನ್ನು ಅನುಭವಿಸಿದವರಿಗೆ ಇದರ ವಾಸ್ತವ ತಿಳಿಯುತ್ತದೆ. "ಏಪ್ರಿಲ್, ಮೇ ತಿಂಗಳಲ್ಲಿ ಇಲ್ಲಿನ ಉಷ್ಣತೆ ೪೨ರಿಂದ ೪೩ ಡಿಗ್ರಿ ಸೆಲ್ಸಿಯಸ್ನಷ್ಟಿರುತ್ತದೆ. ಇಲ್ಲಿನ ಕೃಷಿ ಜೂನ್‌ನಿಂದ ಸೆಪ್ಟೆಂಬರ್ ನಡುವೆ ಬೀಳುವ ಮಳೆಯನ್ನೇ ಹೆಚ್ಚಾಗಿ ಅವಲಂಬಿಸಿದೆ. ಇಲ್ಲಿನ ಗ್ರಾಮೀಣ ಜನತೆಯ ಆಹಾರ ಬೆಳೆಗಳು ಮತ್ತು ವಾಣಿಜ್ಯ ಬೆಳೆಗಳು ಮಳೆಯನ್ನೇ ಅವಲಂಬಿಸಿವೆ. ಶೇ. ೭೦ರಷ್ಟು ರೈತರು ಮುಂಗಾರು ಮಳೆಯನ್ನೇ ಅವಲಂಬಿಸಿರುವ ಭಾಗದಲ್ಲಿ ಮಳೆ ಮಾತ್ರ ಸಕಾಲದಲ್ಲಿ ಬಾರದಿರುವುದು ಸಾಮಾನ್ಯವಾಗಿದೆ. ಬೇಸಿಗೆಯಲ್ಲಿ ರೈತರ ಭೂಮಿ ಬಿರುಕು

ಬಿಟ್ಟಿರುತ್ತದೆ. ಹುಲ್ಲು ಒಣಗಿ ಮಣ್ಣು ಸೇರಿರುತ್ತದೆ."[೧೦] ರೈತ ಆಕಾಶವನ್ನು, ಮೋಡಗಳನ್ನು ನೋಡುತ್ತಾ ಮಳೆಗಾಗಿ ಕಾಯುತ್ತಾ ಕುಳಿತುಕೊಳ್ಳುವುದು ಮಾತ್ರ ತಪ್ಪಿಲ್ಲ. ಮುಂಗಾರು ಮಳೆ ಕೈ ಕೊಟ್ಟರೆ ಈ ಭಾಗದ ರೈತರ ಒಂದು ವರ್ಷದ ಬೆಳೆಯು ಕೈಕೊಟ್ಟಂತೆ.

ಯಾದಗಿರಿ ಜಿಲ್ಲೆಯು ಬರಪೀಡಿತವೆಂದು ಘೋಷಿಸಬೇಕೆಂದು ೨೦೧೪ರಂದು ಯಾದಗಿರಿ ಜಿಲ್ಲೆಯ ರೈತರು, ಹಿಂದುಳಿದ ವರ್ಗಗಳು ಜಿಲ್ಲಾಧ್ಯಕ್ಷರಾದ ಉಮೇಶ ಕೆ. ಮುದ್ನಾಳ ಅವರ ನೇತೃತ್ವದಲ್ಲಿ ಪ್ರತಿಭಟನೆಯನ್ನು ಮಾಡಿದರು. "ಮಳೆಗಾಲ ಪ್ರಾರಂಭಗೊಂಡು ತಿಂಗಳು ಗತಿಸಿದರೂ ಯಾದಗಿರಿ ಜಿಲ್ಲೆಯಲ್ಲಿ ಇನ್ನೂ ಮಳೆ ಬಿದ್ದಿಲ್ಲ, ಹೀಗಾಗಿ ಸರಕಾರ ಕೂಡಲೆ ಗುಲ್ಬರ್ಗಾದಲ್ಲಿ ಸಚಿವ ಸಂಪುಟ ಸಭೆ ನಡೆಸಿ ಈ ಭಾಗವನ್ನು ಬರಪೀಡಿತವೆಂದು ಘೋಷಣೆ ಮಾಡುವಂತೆ ಒತ್ತಾಯಿಸಿ ಯಾದಗಿರಿ ಜಿಲ್ಲೆಯ ಜಿಲ್ಲಾಧಿಕಾರಿ ಮೂಲಕ ಮುಖ್ಯಮಂತ್ರಿಗೆ ಮನವಿ ಸಲ್ಲಿಸಿದರು. ಜೂನ್ ತಿಂಗಳು ಮುಗಿದು ಜುಲೈ ಆರಂಭವಾದರೂ ಇದುವರೆಗೂ ಮಳೆ ಬಿದ್ದಿಲ್ಲ. ಇದರಿಂದ ರೈತಾಪಿ ವರ್ಗದ ಬದುಕು ತತ್ತರಿಸಿದೆ. ಕೃಷಿಯನ್ನೇ ನಂಬಿ ಜೀವನ ಸಾಗಿಸುವ ಗ್ರಾಮೀಣ ಭಾಗದ ಜನತೆ ಉದ್ಯೋಗಕ್ಕಾಗಿ ದೊಡ್ಡ ನಗರಗಳಿಗೆ ಗುಳೆ ಹೋಗುತ್ತಿದ್ದಾರೆ. ಕೂಡಲೇ ಸರಕಾರ ಯಾದಗಿರಿ ಜಿಲ್ಲೆಯನ್ನು ಬರಗಾಲ ಪೀಡಿತ ಪ್ರದೇಶ ಎಂದು ಘೋಷಿಸಿ ವಿಶೇಷ ಪ್ಯಾಕೇಜ್ ನೀಡಬೇಕು. ಈ ಭಾಗದಲ್ಲಿ ಸಾರ್ವಜನಿಕರಿಗೆ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಜಾನುವಾರುಗಳಿಗೆ ಮೇವಿನ ಬ್ಯಾಂಕ್ ಸ್ಥಾಪಿಸಬೇಕು."[೧೧] ಗುಲ್ಬರ್ಗಾದಲ್ಲಿ ಕಲ್ಯಾಣ ಸೌಧ ನಿರ್ಮಾಣ ಮಾಡಿ ಪ್ರತೀ ವರ್ಷ ಅಧಿವೇಶನ ನಡೆಸಿ, ಈ ಭಾಗದ ಅಭಿವೃದ್ಧಿಗೆ ನಾಂದಿ ಹಾಡಬೇಕು ಎಂದು ಒತ್ತಾಯಿಸಿ ಪ್ರತಿಭಟನೆಯನ್ನು ಮಾಡಿದರು.

## ನೆರೆ ಹಾವಳಿ

ಶತಮಾನಗಳಿಂದಲೂ ಮಳೆ ಅಭಾವದಿಂದ ಬರಗಾಲಕ್ಕೆ ತುತ್ತಾಗುತ್ತಿರುವ ಯಾದಗಿರಿ ಜಿಲ್ಲೆಯ ಪ್ರದೇಶದಲ್ಲಿ ವಲಸೆ ಹೋಗುವುದು, ಉದ್ಯೋಗ ಅರಸಿ ಗುಳೆ ಹೋಗುವುದು ಸಾಮಾನ್ಯವಾಗಿದೆ. ೨೦೦೨ ರಿಂದ ೨೦೧೦ರ ಅವಧಿಯಲ್ಲಿ ಅತ್ಯಂತ ಕಡಿಮೆ ಮಳೆ ಬಿದ್ದಿದ್ದರಿಂದ ಜನ ಕುಡಿಯುವ ನೀರಿಗೂ ಪರದಾಡಬೇಕಾದ ಸ್ಥಿತಿ ಇತ್ತು. ಆದರೆ ಆಗಾಗ ಇಲ್ಲಿ ಉಂಟಾಗುವ ಅತಿವೃಷ್ಟಿ ಜನರನ್ನೇ ಅತಂತ್ರಗೊಳಿಸಿ ಅವರ ಜೀವನವನ್ನೇ ನರಕ ಸದೃಶ್ಯವನ್ನಾಗಿ ಮಾಡಿ ಬಿಡುತ್ತದೆ. ಉದಾಹರಣೆಗೆ, ೨೦೧೦ರ ಸೆಪ್ಟೆಂಬರ್ ೨೯ ರಿಂದ ಅಕ್ಟೋಬರ್ ೨೪ರವರೆಗೆ ಈ ಭಾಗದಲ್ಲಿ ಸುರಿದ ಭಾರಿ ಮಳೆ ಇಲ್ಲಿನ ಜನಜೀವನವನ್ನು ತತ್ತರಗೊಳಿಸಿತು. ಶತಮಾನದಲ್ಲೇ ಕಂಡರಿಯದ ಭೀಕರ ಪ್ರವಾಹ ಯಾದಗಿರಿ ಜಿಲ್ಲೆಯಲ್ಲಿ ಅಪ್ಪಳಿಸಿ ಹಿಂದೆಂದೂ ಕಾಣದಂತ ಪ್ರವಾಹದ ಅಬ್ಬರಕ್ಕೆ ಸಿಲುಕಿ ಇಲ್ಲಿನ ಜನರು ನಲುಗಿ ಹೋದರು.

ಸೆಪ್ಟೆಂಬರ್‌ನಲ್ಲಿ ಸುರಿದ ಮಳೆಗೆ ಭೀಮಾ ನದಿ ಮತ್ತು ಚಿಕ್ಕಪುಟ್ಟ ಹಳ್ಳಗಳೆಲ್ಲಾ ತುಂಬಿ ಉಕ್ಕಿ ಹರಿದು ಯಾದಗಿರಿ ಜಿಲ್ಲೆ ನೆರೆಯ ಹಾವಳಿಗೆ ಸಿಲುಕಿ ನರಳಿ ಹೋಯಿತು. ಕಳೆದ ೪೦ ವರ್ಷಗಳ ಇತಿಹಾಸದಲ್ಲಿ ದಾಖಲಾದ ಎರಡನೇ ಅತ್ಯಧಿಕ ಮಳೆ ಈ ಅವಧಿಯಲ್ಲಿ ಸುರಿದಿತ್ತು. ಮಳೆಯಿಂದ ಅನಾಹುತಕ್ಕೆ ಅನೇಕ ಜನ ಜಾನುವಾರುಗಳು ಪ್ರಾಣ ಕಳೆದುಕೊಂಡವು. ರಸ್ತೆಗಳು.

ಸೇತುವೆಗಳು, ಸಣ್ಣಪುಟ್ಟ ಅಣೆಕಟ್ಟುಗಳು, ನಾಲೆಗಳು, ಮನೆಗಳು, ಪಂಪ್‌ಸೆಟ್‌ಗಳು, ಕುಡಿಯುವ ನೀರಿನ ಸಂಪರ್ಕಗಳು, ಪೈಪ್‌ಲೈನ್‌ಗಳು, ವಿದ್ಯುತ್ ಕಂಬಗಳು ಕೊಚ್ಚಿಕೊಂಡು ಹೋದವು. ವಿಭಜಿತ ಗುಲಬರ್ಗಾ ಜಿಲ್ಲೆ ಒಂದರಲ್ಲೇ ಸುಮಾರು ಎರಡೂವರೆ ಲಕ್ಷ ಮನೆಗಳು ಕುಸಿದುಬಿದ್ದವು. ನೆರೆ ಹಾವಳಿಯಿಂದ ಸಾಂಕ್ರಾಮಿಕ ರೋಗದ ಭೀತಿ ಎದುರಾಗಿತ್ತು. ಯಾದಗಿರಿ ಜಿಲ್ಲೆಯಲ್ಲಿ ವಾರ್ಷಿಕ ವಾಡಿಕೆ ಪ್ರಮಾಣಕ್ಕಿಂತ ಹೆಚ್ಚು ಮಳೆ ಸುರಿದ ಕಾರಣಕ್ಕೆ ಜಲ ಪ್ರಳಯದಿಂದ ಇಡೀ ಯಾದಗಿರಿ ಜಿಲ್ಲೆಯ ಜನರು ತಲ್ಲಣಗೊಂಡರು.

ನೆರೆ ಪರಿಹಾರ ಕಾಮಗಾರಿಗಳನ್ನು ಸರಕಾರ ತಕ್ಷಣ ಕೈಗೊಂಡು ಪರಿಹಾರ, ಪುನರ್‌ವಸತಿ ಏರ್ಪಡಿಸಲು ಪ್ರಯತ್ನಗಳನ್ನು ಆರಂಭಿಸಿತು. ಆದರೆ ಮನೆ, ಮಠ ಆಸ್ತಿ ಕಳೆದುಕೊಂಡ ಇಲ್ಲಿನ ಜನರ ನಷ್ಟ ಭರಿಸುವವರ್ಯಾರು, ಈ ಜನರ ಜೀವನ ಮೊದಲ ಸ್ಥಿತಿಗೆ ಬರಲು ಎಷ್ಟು ವರ್ಷಗಳು ಬೇಕಾಗಬಹುದು ಅಥವಾ ಮನೆ, ಆಸ್ತಿ, ಜಾನುವಾರುಗಳನ್ನು ಕಳೆದುಕೊಂಡು ಬದುಕಲು ಆಗದೆ, ಸಾಯಲು ಆಗದೆ ಅವರು ಅನುಭವಿಸಿದ, ಇನ್ನೂ ಅನುಭವಿಸುತ್ತಿರುವ ಸಂಕಟವನ್ನು ಕೇಳುವವರ್ಯಾರು, ಜಲಪ್ರಳಯದಿಂದ ವಸತಿಹೀನರಾದ ಜನರು ಶಾಲೆ, ಸಮುದಾಯ ಭವನ, ದೇವಸ್ಥಾನ, ರೈಲು ನಿಲ್ದಾಣದಲ್ಲಿ ಆಶ್ರಯ ಪಡೆಯುವಂತಾಯಿತು. ಸರಕಾರ ನವಗ್ರಾಮ ಯೋಜನೆಯಡಿಯಲ್ಲಿ ಪುನರ್‌ವಸತಿ ಕೇಂದ್ರಗಳನ್ನು ಶೆಡ್‌ಗಳನ್ನು ನಿರ್ಮಿಸುತ್ತದೆಯಾದರೂ ಇವು ತಾತ್ಕಾಲಿಕ ಆಶ್ರಯವನ್ನು ಒದಗಿಸುತ್ತವೆ.

## ವಿದ್ಯುತ್ ಸಮಸ್ಯೆ

ಯಾದಗಿರಿ ಜಿಲ್ಲೆಯ ರೈತರು ಎದುರಿಸುತ್ತಿರುವ ಮತ್ತೊಂದು ಗಂಭೀರ ಸಮಸ್ಯೆಯೆಂದರೆ ವಿದ್ಯುತ್ ಸಮಸ್ಯೆ. ಇಲ್ಲಿನ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ದಿನದಲ್ಲಿ ನಿರ್ದಿಷ್ಟ ಕೆಲವೇ ಗಂಟೆಗಳು ಮಾತ್ರ ವಿದ್ಯುತ್ ಸರಬರಾಜಾಗುವುದು ಕಂಡುಬರುತ್ತದೆ. ಬೇಸಿಗೆ ಕಾಲದಲ್ಲಂತೂ ವಿದ್ಯುತ್ ನಿಲುಗಡೆ ಮತ್ತು ಅಭಾವ ಇನ್ನೂ ಹೆಚ್ಚಾಗುವುದು ಸಾಮಾನ್ಯವಾಗಿದೆ. ಇದರ ಜೊತೆಗೆ ಲೋಡ್‌ಶೆಡ್ಡಿಂಗ್, ಟ್ರಾನ್ಸ್‌ಫಾರ್ಮರ್‌ಗಳು ಪದೇ ಪದೇ ಕೆಟ್ಟು ಹೋಗುವುದು, ಕೆಟ್ಟು ಹೋದ ಟ್ರಾನ್ಸ್‌ಫಾರ್ಮರ್‌ಗಳನ್ನು ತಕ್ಷಣ ಬದಲಾಯಿಸದಿರುವುದು, ವಿದ್ಯುತ್ ಖಾಸಗೀಕರಣ, ಪಂಪ್‌ಸೆಟ್‌ಗಳಿಗೆ ಮೀಟರ್ ಅಳವಡಿಕೆಗೆ ಒತ್ತಾಯ, ವಿದ್ಯುತ್ ಸ್ಥಾವರಗಳಲ್ಲಿ ತಾಂತ್ರೀಕರಣ, ದೋಷ ಹಾಗೂ ಕಲ್ಲಿದ್ದಲು ಯಾದಗಿರಿ ಜಿಲ್ಲೆಯ ರೈತರು ವಿದ್ಯುತ್ ಸಂಬಂಧಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹೀಗಾಗಿ ನಿರಂತರ ವಿದ್ಯುತ್ ಸರಬರಾಜಿನ ಬೇಡಿಕೆಗಾಗಿ ಪದೇ ಪದೇ ಹೋರಾಟಗಳು ಕಂಡುಬರುತ್ತವೆ. ಕೆಲವೊಂದು ಸಲ ರೈತರ ಹೋರಾಟಗಳು ಎಷ್ಟೊಂದು ಉಗ್ರರೂಪ ತಾಳಿವೆ ಎಂದರೆ ಕ್ರೋಧಗೊಂಡ ರೈತರು ಅಧಿಕಾರಿಗಳ ಮೇಲೆ ಹಲ್ಲೆ, ವಿದ್ಯುತ್ ಕೇಂದ್ರಗಳಿಗೆ ಬೀಗ ಹಾಕುವುದು, ರಸ್ತೆ ತಡೆ, ಆತ್ಮಹತ್ಯೆ ಪ್ರಯತ್ನಗಳಿಗೆ ಮುಂದಾಗುವುದು. ಪರಿಣಾಮವಾಗಿ ರೈತರ ಮೇಲೆ ಲಾಠಿ ಪ್ರಹಾರ, ಗೋಲಿಬಾರ್ ನಂತಹ ಘಟನೆಗಳು ತಲೆ ದೋರುವವು.

## ಬೆಳೆಗೆ ಕನಿಷ್ಠ ಬೆಂಬಲ ಬೆಲೆ ಸಮಸ್ಯೆ

ಯಾದಗಿರಿ ಜಿಲ್ಲೆಯ ರೈತರು ಬರ, ನೆರೆಹಾವಳಿ ಮುಂತಾದ ಸಮಸ್ಯೆಗಳನ್ನು ದಾಟಿ ಬೆಳೆ ಅವರ ಕೈಗೆ ಬಂದಾಗ ಎದುರಿಸುವ ಸಮಸ್ಯೆಯೆಂದರೆ, ಬೆಳೆಗೆ ಕನಿಷ್ಠ ಬೆಂಬಲ ಬೆಲೆ ಸಿಗದಿರುವುದು. ರೈತರು ಬೆಳೆದ ಬೆಳೆಯ ಹಿಂದೆ ಸಾಕಷ್ಟು ಬಂಡವಾಳ ಹೂಡಿಕೆ, ದಕ್ಷತೆ, ಶ್ರಮ, ವೆಚ್ಚಗಳು ಇರುತ್ತವೆ. ಹೀಗಾಗಿ ಒಂದು ಧಾನ್ಯದ ಕನಿಷ್ಠ ಬೆಂಬಲ ಬೆಲೆ ನಿರ್ಧರಿಸುವಾಗ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿರ್ಧರಿಸಬೇಕು. ಆದರೆ ಮುಂಗಾರಿನಲ್ಲಿ ಧಾನ್ಯಗಳು ಬೃಹತ್ ಪ್ರಮಾಣದಲ್ಲಿ ಮಾರುಕಟ್ಟೆಯನ್ನು ಪ್ರವೇಶಿಸುವುದರಿಂದ ಸಾಮಾನ್ಯವಾಗಿ ಬೆಲೆಗಳು ಇಳಿಯುತ್ತವೆ. ಮಧ್ಯವರ್ತಿಗಳು ಲಾಭ ಮಾಡಿಕೊಳ್ಳುತ್ತಾರೆ. ಇನ್ನು ಸರಕಾರವು ಕನಿಷ್ಠ ಬೆಂಬಲ ಬೆಲೆ ನಿಗದಿ ಮಾಡುವಾಗ ರೈತನ ಉತ್ಪಾದನೆಯ ಶ್ರಮ, ಖರ್ಚು, ವೆಚ್ಚ, ಲಾಭಗಳನ್ನು ಮಾನದಂಡವನ್ನಾಗಿ ಇಟ್ಟುಕೊಳ್ಳದೇ ವೈಜ್ಞಾನಿಕವಾಗಿ ಬೆಂಬಲ ಬೆಲೆ ಘೋಷಿಸದೆ ರೈತರ ಒತ್ತಾಯಕ್ಕೆ ಅವೈಜ್ಞಾನಿಕವಾಗಿ ಬೆಂಬಲ ಬೆಲೆ ಘೋಷಿಸುತ್ತವೆ. ಕೆಲವೊಮ್ಮೆ ಸರಕಾರ ಘೋಷಿಸಿದ ಕನಿಷ್ಠ ಬೆಂಬಲ ಬೆಲೆ, ಮುಕ್ತ ಮಾರುಕಟ್ಟೆಯ ಬೆಲೆಗಿಂತ ಕಡಿಮೆ ಇರುತ್ತದೆ.

ಯಾದಗಿರಿ ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯುವ ತೊಗರಿ, ಜೋಳ ಶಹಾಪುರ ಮತ್ತು ಸುರಪುರ ತಾಲೂಕಗಳಲ್ಲಿ ಭತ್ತ, ಕಬ್ಬು, ಹತ್ತಿ ಬೆಳೆಗಾರರು ತಮ್ಮ ಬೆಳೆಗಳಿಗೆ ಕನಿಷ್ಠ ಬೆಲೆ ಸಿಗದೆ ಸರಕಾರದ ವಿರುದ್ಧ ಪ್ರತಿಭಟನೆ, ಹೋರಾಟ, ಚಳುವಳಿ ಮಾಡುವುದು ಪದೇ ಪದೇ ಕಂಡುಬರುತ್ತದೆ. ಕಬ್ಬು ಮತ್ತು ತೊಗರಿಗೆ ಬೆಂಬಲ ಬೆಲೆಗೆ ಬೇಡಿಕೆ, ಹೋರಾಟಗಳು ಪ್ರಾರಂಭವಾಗಿವೆ. ಏಕೆಂದರೆ, ಒಂದು ಕ್ವಿಂಟಾಲ್ ಭತ್ತ ಬೆಳೆಯಲು ೨೦೦೦ರಿಂದ ೨೫೦೦ ರೂ. ಖರ್ಚಾಗುತ್ತದೆ. ಆದರೆ ಕೇಂದ್ರ ಸರಕಾರ ೧೦೫೦ ರೂ. ಬೆಂಬಲ ಬೆಲೆ ನೀಡುತ್ತಿದೆ. ಆದ್ದರಿಂದ ರೈತ ಭತ್ತ ಬೆಳೆಯಲು ಹಿಂಜರಿಯುವ ಪರಿಸ್ಥಿತಿ ನಿರ್ಮಾಣವಾಗಿದೆ. ಕಾರ್ಮಿಕರ ಕೊರತೆ ಹಾಗೂ ಎತ್ತುಗಳ ಅಭಾವದಿಂದ ವರ್ಷದಿಂದ ವರ್ಷಕ್ಕೆ ಭತ್ತದ ಕೃಷಿ ಇಳಿಮುಖವಾಗುತ್ತಿದೆ. ನಾಟಿಗೆ ಯಂತ್ರೋಪಕರಣ ಬಳಸಿದರೆ ಎಕರೆಗೆ ೧೨೫೦ ರೂ. ವೆಚ್ಚವಾಗುತ್ತದೆ ಇದರಿಂದ ರೈತರು ಭತ್ತ ಬೆಳೆಯುವುದನ್ನು ತ್ಯಜಿಸುತ್ತಿದ್ದಾರೆ. ಇದು ಹೀಗೇ ಮುಂದುವರಿದರೆ ಆಹಾರಭದ್ರತೆ ಸಮಸ್ಯೆ ತಲೆದೋರಲಿದೆ.

ಹೀಗಾಗಿ ಸರಕಾರಗಳು ಭತ್ತದ ಬೆಳೆಯ ಉತ್ಪಾದನೆ ಆಧರಿಸಿ ರೈತರಿಗೆ ಲಾಭದಾಯಕ ಬೆಲೆ ನೀಡಬೇಕು. ನೇರವಾಗಿ ಸಬ್ಸಿಡಿ ನೀಡುವ ಯೋಜನೆಯನ್ನು ಜಾರಿಗೆ ತರಬೇಕು. ರಾಜ್ಯ ಸರಕಾರಗಳೇ ಭತ್ತದ ಮಾರುಕಟ್ಟೆ ಬೆಲೆ ನಿಗದಿಯ ಮೇಲೆ ಹಾಗೂ ರೈತನ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿರ್ಧರಿಸುವಂಥ ಯೋಜನೆಗಳನ್ನಾಗಲಿ ಅಥವಾ ನಿಯಮಗಳನ್ನಾಗಲಿ ಜಾರಿಗೆ ತಂದಿಲ್ಲ. ರೈತರು ಬೆಂಬಲ ಬೆಲೆಗೆ ಹೋರಾಟ ಆರಂಭಿಸಿದಾಗ, ಕಣ್ಣೊರೆಸುವ ತಂತ್ರ ಅನುಸರಿಸಿ ನಾಮಕಾವಸ್ಥೆಗೆ ಬೆಂಬಲ ಬೆಲೆ ಘೋಷಿಸಿ ಕೈತೊಳೆದುಕೊಳ್ಳುತ್ತದೆ. ಇನ್ನು ಸರಕಾರದ ನೀತಿಯನ್ನು ವಿರೋಧಿಸಿ ರೈತರು ಹೋರಾಟಕ್ಕೆ ಇಳಿದರೆ ಗೋಲಿಬಾರ್, ಗುಂಡಿನ ದಾಳಿ ಆರಂಭಿಸುತ್ತಾರೆ. ಇದರಿಂದ ಮತ್ತೆ ನಷ್ಟಕ್ಕೆ, ಶೋಷಣೆಗೆ ಒಳಗಾಗುವುದು ರೈತರು. ಇನ್ನೂ ಸೋಜಿಗದ ಸಂಗತಿ ಎಂದರೆ ಯಾದಗಿರಿ ಜಿಲ್ಲೆಯಲ್ಲಿ ನಡೆದ ರೈತರ ಆತ್ಮಹತ್ಯೆಗಳಿಗೆ ಕಾರಣ

ನೋಡಿದಾಗ ಬೆಳೆಗೆ ಸೂಕ್ತ ಬೆಂಬಲ ಬೆಲೆ ಸಿಗದಿರುವುದರಿಂದಾದ ಆತ್ಮಹತ್ಯೆ ಪ್ರಕರಣಗಳು ಕಂಡುಬರುತ್ತದೆ. ಈ ಭಾಗದ ರೈತರು ಬೆಂಬಲ ಬೆಲೆ ಸಿಗದೆ ಆತ್ಮಹತ್ಯೆ ಮಾಡಿಕೊಂಡರೆ ಸರಕಾರದಿಂದ ಯಾವುದೇ ಅನುದಾನ ಸಿಗುವುದು ಕಷ್ಟದ ಕೆಲಸ. ಅದೇ ಮೈಸೂರು ಪ್ರದೇಶದ ಕಡೆಗಳಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡರೆ ತಕ್ಷಣ ಪರಿಹಾರ ಘೋಷಣೆ ಮಾಡುತ್ತದೆ. ಆದರೆ ಯಾದಗಿರಿ ಭಾಗದ ರೈತರು ಆತ್ಮಹತ್ಯೆ ಮಾಡಿಕೊಂಡರೆ ಯಾವುದೇ ಸುದ್ದಿ ಸಮಾಚಾರಗಳಿರುವುದಿಲ್ಲ. ಸರಕಾರ ಕೂಡ ಈ ಭಾಗದ ರೈತರಿಗೆ ಮಲತಾಯಿ ದೋರಣೆ ಅನುಸರಿಸುತ್ತಿದೆ.

**ಭೂಸತ್ವಹೀನ ಸಮಸ್ಯೆ**

ಬರಗಾಲ ಮತ್ತು ನೀರಿನ ಸಮಸ್ಯೆ ಎದುರಿಸುತ್ತಿರುವ ಯಾದಗಿರಿ ಜಿಲ್ಲೆಯ ರೈತರು, ಲಭ್ಯವಾಗುವ ಒಂದೇ ಬೆಳೆಯಲ್ಲಿ ಅತ್ಯಧಿಕ ಇಳುವರಿ ಪಡೆದು ಶ್ರೀಮಂತರಾಗಬೇಕೆಂಬ ಧಾವಂತದಲ್ಲಿ ಅತಿಯಾದ ಗೊಬ್ಬರ ಬಳಸಿ ಭೂಮಿಯ ಸತ್ವವನ್ನು ನಾಶ ಮಾಡಿಕೊಳ್ಳುತ್ತಿದ್ದಾರೆ. ಅತಿಯಾದ ರಸಗೊಬ್ಬರ ಕ್ರಿಮಿನಾಶಕ ಬಳಕೆಯಿಂದ ಮಣ್ಣಿನ ಸವಕಳಿ ಹೆಚ್ಚಿದ್ದು, ಲಘು ಪೋಷಕಾಂಶಗಳು ಕೊಚ್ಚಿ ಹೋಗುತ್ತಿವೆ. ಸಾವಯವ ಜೀವಸಾರ ಬಳಕೆ ಸದ್ಯ ಅನಿವಾರ್ಯವಾಗಿದ್ದರೂ ರೈತರು ಆ ಬಗ್ಗೆ ಗಮನ ಕೊಡುತ್ತಿಲ್ಲ. ಭತ್ತದ ಬೆಳೆಗೆ ಮಾರು ಹೋಗಿರುವ ರೈತರು ಪರ್ಯಾಯ ಬೆಳೆ ಪದ್ಧತಿಯನ್ನು ಸಂಪೂರ್ಣ ಮರೆತಿದ್ದಾರೆ. ವಿಚಿತ್ರವೆಂದರೆ ಭತ್ತ, ಕಬ್ಬು ಬೆಳೆಯುವ ಬಹುತೇಕ ಜಮೀನುಗಳಲ್ಲಿ ಸದ್ಯ ಬೇರೆ ಬೆಳೆ ಬೆಳೆಯುವುದು ಅಸಾಧ್ಯ ಎನ್ನುವಷ್ಟರಮಟ್ಟಿಗೆ ಭೂಸಾರ ಕುಂದಿದೆ. ಪರಿಸ್ಥಿತಿ ಹೀಗೆಯೇ ಮುಂದುವರಿದರೆ ಕೆಲವೇ ವರ್ಷಗಳಲ್ಲಿ ಭೂಮಿ ಬರಡಾಗಲಿದೆ ಎಂದು ಕೃಷಿತಜ್ಞರು ಆತಂಕ ವ್ಯಕ್ತಪಡಿಸಿದ್ದಾರೆ. ಸವಳುಪೀಡಿತ ಪ್ರದೇಶಗಳು ಸತ್ವಹೀನವಾಗಿ ಬೆಳೆಗಳ ಮೇಲೆ ಪರಿಣಾಮ ಬೀರಿದೆ.

ಭೂ ಸತ್ವಹೀನತೆಯನ್ನು ತಡೆಗಟ್ಟಲು ಮಣ್ಣು ಪರೀಕ್ಷೆ ಕಡ್ಡಾಯಗೊಳಿಸಬೇಕಿದ್ದು, ಫಲಿತಾಂಶದ ಅನುಗುಣವಾಗಿ ಪೋಷಕಾಂಶಗಳ ಸಮತೋಲನಗೊಳಿಸಬೇಕಿದೆ. ರಸಗೊಬ್ಬರ, ಕೀಟನಾಶಕ ಬಳಕೆಯಲ್ಲಿ ಎಚ್ಚರ ವಹಿಸಬೇಕು. ಸಾವಯುವ ಗೊಬ್ಬರ ಬಳಕೆಯಿಂದ ಮಣ್ಣಿನಲ್ಲಿರುವ ರಾಸಾಯನಿಕ ಮತ್ತು ಲವಣಗಳಿಂದಾಗುವ ಹಾನಿ ತಗ್ಗಿಸಬಹುದು. ಸವಕಳಿ ತಡೆಗಟ್ಟಲು ಅಲ್ಪ ಇಳಿಜಾರು, ಅಂಚುಪಟ್ಟಿಗಳ ಕಡೆ ರೈತರು ಮತ್ತು ಸರಕಾರ ಗಮನ ಕೊಡಬೇಕಾಗಿದೆ. ಈಗ ರೈತರಿಗೆ ಸಲಹೆ ನೀಡಲು ಗುಲ್ಬರ್ಗಾದಲ್ಲಿ ಕೃಷಿ ವಿಜ್ಞಾನ ಕೇಂದ್ರ ಕಾರ್ಯ ನಿರ್ವಹಿಸುತ್ತಿದ್ದು, ಕೇಂದ್ರ ಇನ್ನೂ ಹೆಚ್ಚಿನ ಮಟ್ಟದಲ್ಲಿ ರೈತರೊಂದಿಗೆ ಮುಖಾಮುಖಿಯಾಗಿ ಸಲಹೆ ಸೂಚನೆಗಳನ್ನು ಕೊಡಬೇಕಾದ ಅವಶ್ಯಕತೆ ಇದೆ ಮತ್ತು ಕೇಂದ್ರದ ಸಂಪೂರ್ಣ ಸದುಪಯೋಗ ಬಳಕೆ ಪಡೆಯುವ ಜವಾಬ್ದಾರಿಯು ರೈತರ ಮೇಲಿದೆ. ಹಾಗಾದಲ್ಲಿ ಮಾತ್ರ ಇಲ್ಲಿನ ಭೂಮಿಗಳು ಪೂರ್ಣ ಬರಡಾಗುವುದನ್ನು ತಪ್ಪಿಸಲು ಸಾಧ್ಯವಾಗಬಹುದು.

**ಕೆರೆಗಳ ಹೂಳಿನ ಸಮಸ್ಯೆ**

ಯಾದಗಿರಿ ಜಿಲ್ಲೆಯಲ್ಲಿ ಜೀವನಾಡಿಗಳಾಗಿರುವ ಅನೇಕ ಕೆರೆಗಳು ಇಂದು ಹೂಳಿನಿಂದ ತುಂಬಿ ಹೋಗಿವೆ. ಈ ಭಾಗದ ಬಹುತೇಕ ಕೆರೆಗಳು ಹೂಳು ಹೆಚ್ಚು ಸಂಗ್ರಹವಾಗುತ್ತಿರುವುದರಿಂದ

ಮಳೆಗಾಲದಲ್ಲಿ ಬಹಳ ಬೇಗ ತುಂಬಿಕೊಳ್ಳುವ ಇವು ಬೇಸಿಗೆ ಆರಂಭವಾಗುತ್ತಿದ್ದಂತೆ ದನ, ಕರುಗಳಿಗೆ ಕುಡಿಯಲು ನೀರಿಗೆ ಕಷ್ಟ ಪಡಬೇಕಾದ ಸಮಸ್ಯೆಯನ್ನು ತಂದೊಡ್ಡಿವೆ. ಉದಾಹರಣೆಗೆ ಗಾಜರಕೋಟ ಗ್ರಾಮದ ದಂಡ ಕೆರೆ, ಗೌಡರ ಕೆರೆ, ಗುರುಮಠಕಲ್ ಕೆರೆ, ಕೋಟಗೆರ ಕೆರೆ, ಕಾಕಲವಾರ ಕೆರೆ, ಯಾದಗಿರಿ ಕೆರೆ ಹೀಗೆ ಯಾದಗಿರಿ ಜಿಲ್ಲೆಯಲ್ಲಿರುವ ಅನೇಕ ಕೆರೆಗಳು ಹೂಳಿನಿಂದ ತುಂಬಿದ್ದರಿಂದ ಮಳೆಗಾಲದಲ್ಲಿ ಬಹುಬೇಗನೆ ತುಂಬಿ ಬಹು ಬೇಗನೆ ಅಂದರೆ ಬೇಸಿಗೆ ಆರಂಭವಾಗುತ್ತಲೇ ಕೆರೆಗಳಲ್ಲಿ ನೀರು ಖಾಲಿಯಾಗುತ್ತವೆ. ಇದರಿಂದ ಗ್ರಾಮೀಣ ಪ್ರದೇಶದ ದನ ಕರುಗಳಿಗೆ ಕುಡಿಯುವ ನೀರಿನ ತೊಂದರೆ ಆಗುತ್ತಿದೆ. ಇದರ ಬಗ್ಗೆ ಯಾದಗಿರಿ ಜಿಲ್ಲೆಯ ಜನರು ಸರಕಾರದ ವಿರುದ್ಧ ಪ್ರತಿಭಟನೆ ಮಾಡುತ್ತಲೇ ಇದ್ದಾರೆ. ಆದರೆ ಸರಕಾರ ರೈತರಿಗೆ ಭರವಸೆಗಳನ್ನು ನೀಡುತ್ತಲೇ ಬಂದಿದೆ. ಆದರೆ ಇದುವರೆಗೆ ಯಾವುದೇ ಕೆರೆಗಳ ಹೂಳೆತ್ತುವ ಕೆಲಸ ಮಾತ್ರ ಆಗಿಲ್ಲ. ಇದರಿಂದ ಗ್ರಾಮೀಣ ಪ್ರದೇಶದ ರೈತರು ಈ ಸಮಸ್ಯೆಯನ್ನು ಇಂದಿಗೂ ಎದುರಿಸುತ್ತಲೇ ಇದ್ದಾರೆ.

**ರೈತ ಚಳುವಳಿ ತನ್ನ ಕಾವು ಕಳೆದುಕೊಳ್ಳುತ್ತಿದೆಯೇ?**

ಎಂಬತ್ತರ ದಶಕದಲ್ಲಿ ರೈತ ಚಳವಳಿ ಎಷ್ಟೊಂದು ಪ್ರಬಲವಾಗಿತ್ತೆಂದರೆ, ರೈತರು ಬೀದಿಗಿಳಿಯುತ್ತಾರೆಂದರೆ ಸರಕಾರ ಗಡಗಡ ನಡುಗುತ್ತಿತ್ತು. ರೈತ ನಾಯಕರನ್ನು ಕರೆಸಿ ಸಮಸ್ಯೆ ಬಗ್ಗೆ ಮಾತನಾಡುತ್ತಿತ್ತು. ಆದಷ್ಟು ಬೇಗ ಸಮಸ್ಯೆ ಬಗೆಹರಿಸುವ ನಿಟ್ಟಿನಲ್ಲಿ ಅಧಿಕಾರಿಗಳೂ ಕಾರ್ಯಪ್ರವೃತ್ತರಾಗುತ್ತಿದ್ದರು. ಆದರೆ ಇವತ್ತು ಏನಾಗಿದೆ, ರೈತ ಸಂಘದ ಪ್ರತಿಭಟನೆ ಅಂದರೆ ಮಾಡಿಕೊಳ್ಳಲಿ ಬಿಡಿ ಎನ್ನುವ ಮಟ್ಟಕ್ಕೆ ಬಂದು ನಿಂತಿದೆ. ಸರಕಾರ ಕೂಡ ನಿರ್ಲಕ್ಷ್ಯ ಮಾಡುತ್ತದೆ. ಅವರಿಗೆ ಮಾಡೋಕೆ ಕೆಲಸ ಇಲ್ಲದೆ ಹೀಗೆ ಮಾಡುತ್ತಿದ್ದಾರೆಂದು ಗೇಲಿ ಮಾಡುವ ಪರಿಸ್ಥಿತಿ ನಿರ್ಮಾಣವಾಗಿದೆ. ಇದಕ್ಕೆ ಕಾರಣ, ಇತ್ತೀಚೆಗೆ ರೈತ ಚಳುವಳಿ ತನ್ನ ಬಿಗಿ ನಿಲುವುಗಳನ್ನು ಪ್ರದರ್ಶಿಸುತ್ತಿಲ್ಲ. ವೈಯಕ್ತಿಕ ಪ್ರತಿಷ್ಠೆಗಳಿಂದಾಗಿ ಅದು ತನ್ನ ವರ್ಚಸ್ಸು ಕಳೆದುಕೊಳ್ಳುತ್ತಿದೆ. ಚಳುವಳಿಯಲ್ಲಿನ ಹಲವರು ಅಧಿಕಾರದ ದಾಹಕ್ಕೆ ಬಲಿಯಾಗುತ್ತಿದ್ದಾರೆ.

ಇದರ ಜೊತೆಗೆ ಪುಟ್ಟಣ್ಣಯ್ಯ ನೇತೃತ್ವದ ರೈತ ಸಂಘದ ಬಣಕ್ಕೂ ಉತ್ತರ ಕರ್ನಾಟಕದ ರೈತ ಸಂಘಕ್ಕೂ ಭಿನ್ನಾಭಿಪ್ರಾಯಗಳು ಹೆಚ್ಚುತ್ತಾ ಬಂದಿವೆ. ಅವುಗಳಲ್ಲಿ ಭೌಗೋಳಿಕ, ಜಾತೀಯ ಮತ್ತು ರಾಜಕೀಯದ ಸ್ವಾರ್ಥಗಳು ಪ್ರಮುಖವಾಗಿ ಗೋಚರಿಸುತ್ತದೆ. ಇತ್ತೀಚೆಗೆ ಯಾದಗಿರಿ ಜಿಲ್ಲೆಯ ತಾತಳಗೇರ ಗ್ರಾಮದ ಶರಣಪ್ಪ ತಾತಳಗೇರ ಅವರು ಯಾದಗಿರಿ ರೈತ ಸಂಘದ ಬಣಗಳನ್ನು ಒಗ್ಗೂಡಿಸಲು ಮಾಡಿದ ಪ್ರಯತ್ನಗಳು ವಿಫಲವಾದವು. ಅವರನ್ನು ಭೇಟಿಯಾಗಿ ರೈತ ಸಂಘದ ಬಗ್ಗೆ ವಿಚಾರಿಸಿದಾಗ, ಅವರು ರೈತ ಸಂಘದ ಅಧ್ಯಕ್ಷರಾಗಿ ಸುಮಾರು ೧೦-೧೨ ವರ್ಷಗಳ ಕಾಲ ಕಾರ್ಯ ನಿರ್ವಹಿಸಿ ರೈತ ಸಂಘವನ್ನು ಬೆಳೆಸುವಲ್ಲಿ ಬಹು ಮುಖ್ಯ ಪಾತ್ರ ವಹಿಸಿದ್ದರು. ಆದರೆ ಪ್ರಬಲ ರಾಜಕೀಯ ವ್ಯಕ್ತಿಗಳು ಅವರ ಮೇಲೆ ಮಾರಣಾಂತಿಕ ಹಲ್ಲೆ ನಡೆಸಿ ರೈತ ಸಂಘ ತ್ಯಜಿಸುವಂತೆ ಒತ್ತಡ ಏರಿದರು, ಇದಕ್ಕೆ ಸ್ಥಳೀಯ ಪೋಲೀಸರು ಕೂಡ ಕುಮ್ಮಕ್ಕು ನೀಡಿದರು. ಆದ ಕಾರಣ ಅವರು ಈಗ ಈ ರೈತ ಸಂಘವನ್ನೇ ಬಿಟ್ಟಿದ್ದಾರೆ. ಅವರು ರೈತ ಸಂಘ ತ್ಯಜಿಸಿದ ತಕ್ಷಣ ಆ ಸಂಘದ ಸದಸ್ಯರು ಕೂಡ ರೈತ ಸಂಘವನ್ನು

ತ್ಯಜಿಸಿದ್ದಾರೆ, ಇದರಿಂದ ರೈತ ಸಂಘ ಒಡೆದು ಹೋಗಿದೆ. ಮತ್ತೆ ಯಾದಗಿರಿ ಜಿಲ್ಲೆಯಲ್ಲಿ ಪ್ರಬಲವಾದ ರೈತ ಸಂಘಗಳು ತಲೆ ಎತ್ತಲೇ ಇಲ್ಲ, ಕಾರಣ ಪ್ರಬಲ ರಾಜಕೀಯ ವ್ಯಕ್ತಿಗಳು ಮತ್ತು ಪೊಲೀಸರ ಪ್ರಭಾವ.

ಯಾದಗಿರಿ ಜಿಲ್ಲೆಯಲ್ಲಿ ಸಾಮಾನ್ಯವಾಗಿ ರೈತ ಚಳುವಳಿ ವಿಫಲವಾಗಲು ಮುಖ್ಯ ಕಾರಣಗಳು ಇಂತಿವೆ.

೧. "ರೈತ ಸಂಘದಲ್ಲಿ ವರ್ಚಸ್ಸಿನ ನಾಯಕರಿಲ್ಲದಿರುವುದು.

೨. ದೊಡ್ಡ ರೈತರು ಮತ್ತು ಜಮೀನ್ದಾರರು ರೈತ ಸಂಘಕ್ಕೆ ಬೆಂಬಲ ನೀಡದಿರುವುದು.

೩. ರೈತ ಸಂಘದ ಪ್ರಣಾಳಿಕೆ ಸಾಮಾನ್ಯ ಜನರನ್ನು ಆಕರ್ಷಿಸದಿರುವುದು.

೪. ರೈತ ಕಾರ್ಮಿಕರು ಕೂಡ ಇತರ ರಾಜಕೀಯ ಪಕ್ಷಗಳ ಪ್ರಭಾವಕ್ಕೆ ಒಳಗಾಗುತ್ತಿರುವುದು.

೫. ರೈತ ಸಂಘಗಳಿಗೆ ಧನಬಲದ ಕೊರತೆ."[೨]

**ಯಾದಗಿರಿ ಜಿಲ್ಲೆಯ ರೈತ ಹೋರಾಟಗಾರರು**

೧.ಶರಣಪ್ಪ ಸಲಾದಪೂರ್

೨.ಮಲ್ಲಿಕಾರ್ಜುನ ಸತ್ಯಂಪೇಟ್

೩.ಶರಣಪ್ಪ ತಾತಳಗೇರ

೪.ಮೈಲಾರಪ್ಪ ಸಾಗರ

೫.ಮಲ್ಲಣ್ಣ ಪರಿವಾರ ಗೋಗಿ

೬.ವಿಶ್ವನಾಥರೆಡ್ಡಿ ಗೊಂದಡಗಿ

೭.ಬಸವರಾಜಪ್ಪಗೌಡ ಹೆಮ್ಮಡಗಿ

೮.ಹನುಮಗೌಡ ನಾರಾಯಣಪುರ.

**೪.೨. ದಲಿತ ಚಳುವಳಿ**

"ದಲಿತ ಎಂಬ ಪದದ ನಿಷ್ಪತ್ತಿಯ ಕುರಿತು ಅನೇಕ ಬಗೆಯ ವ್ಯಾಖ್ಯಾನಗಳು ಅಸ್ತಿತ್ವದಲ್ಲಿವೆ. ದಲಿತ ಎಂದರೆ ಯಾರು? ದಲಿತತ್ವ ಎಂದರೆ ಏನು? ಎಂಬ ವಿಚಾರವನ್ನು ಅನೇಕರು ಹಲವಾರು ರೀತಿಯಲ್ಲಿ ವ್ಯಾಖ್ಯನಿಸಿದ್ದಾರೆ. ಸಾಮ್ಯಾನ್ಯ ಅರ್ಥದಲ್ಲಿ ಹೇಳುವುದಾದರೆ, ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲ ಶೋಷಣೆಗೆ ಈಡಾದ ಎಲ್ಲ ಜನರು ದಲಿತರು. ಏಕೆಂದರೆ ಶೋಷಣೆಗೆ ಜಾತಿ ಭೇದವಿರುವುದಿಲ್ಲ."[೩] ಬದಲಿಗೆ ಶೋಷಣೆಯ ಸ್ವರೂಪ ಜಾತಿಯನ್ನು ಮೀರಿ ನಿಂತಿರುತ್ತದೆ. ಭಾರತದ ಸಾಮಾಜಿಕ ವ್ಯವಸ್ಥೆಯ ಸಂದರ್ಭದಲ್ಲಿ ಇವರನ್ನು ಪಂಚಮರು, ದಾಸರು, ಬಹಿಷ್ಕೃತರು, ಚಾಂಡಾಲರು, ಅಸ್ಪೃಶ್ಯರು, ಶೂದ್ರರು ಎಂದು ಕರೆಯಲಾಗುತ್ತದೆ. ಹೀಗೆ ಶತಮಾನಗಳಿಂದ ಜನಸಮುದಾಯದಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ

ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು. "ಒಬ್ಬ ಮನುಷ್ಯ ಸಮಾಜದೊಂದಿಗೆ ಬದುಕಲಾರದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಬಿತರಾಗಿ ಹೆಸರು, ಜಾತಿ ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲ ದಲಿತರೆನಿಸಿ ಕೊಳ್ಳುತ್ತಾರೆ."[೧೪] ಸವರ್ಣೀಯರು ಇವರನ್ನು ಅಸ್ಪೃಶ್ಯರು ಎಂದು ಕರೆಯುತ್ತಾರೆ.

"ಕರ್ನಾಟಕದಲ್ಲಿ ದಲಿತ ಪದವನ್ನು ಬಳಸಿ ಚಲಾವಣೆಗೆ ತಂದವರು ದಲಿತ ಕ್ರಿಯಾ ಸಮಿತಿಯವರು. ದಲಿತ ಎಂದರೆ ಹಿಂಸೆಗೊಳಗಾದ, ದಮನಕ್ಕೆ ಒಳಗಾದ, ಶೋಷಣೆಗೆ ಒಳಗಾದ ಎಂಬುದರಿಂದ ಹಿಡಿದು ಅದೊಂದು ಜೀವನ ಪದ್ಧತಿಯೆನ್ನುವವರೆಗೆ ಅದರ ಅರ್ಥಗಳನ್ನು ವಿಸ್ತರಿಸಲಾಗಿದೆ. 'ದಲ' ಎಂಬ ಸಂಸ್ಕೃತ ಶಬ್ದದಿಂದ ಬಂದುದು ದಲಿತ. ದಲ ಎಂದರೆ ಚೂರು, ತುಂಡು, ಭಾಗ, ಛಿದ್ರವಾದವರು, ದಲನ ಕ್ರಿಯೆಗೆ ಒಳಗಾದವರು ಎಂಬರ್ಥ ಬರುತ್ತದೆ. ಹೀಗಾಗಿ ಯಾರು ಶೋಷಿತರೋ ಅವರೇ ದಲಿತರು. ದಲಿತ ಎಂಬುದು ಎಲ್ಲಾ ಶೋಷಿತರನ್ನು ಒಳಗೊಳ್ಳುವಂತದ್ದು. ಅಸ್ಪೃಶ್ಯರು, ಶ್ರಮಜೀವಿಗಳು, ಭೂ–ಹೀನರು, ಕೃಷಿಕಾರ್ಮಿಕರು, ಆದಿವಾಸಿಗಳು, ಮುಸ್ಲಿಮರು, ಶೋಷಣೆಗೆ ಒಳಗಾದ ಮಹಿಳೆಯರು ಹೀಗೆ ತುಳಿತಕ್ಕೊಳಗಾದವರೆ ದಲಿತರು ಎಂಬುದು ದಲಿತ ಪ್ಯಾಂಥರ್ಸ್‌ನ ವ್ಯಾಖ್ಯಾನ."[೧೫] ಹೀಗೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ನಿರಂತರವಾಗಿ ಶೋಷಣೆಗೊಳಗಾದವರೆ ದಲಿತರೆಂಬ ಭಾವನೆ ಎಲ್ಲೆಡೆ ಇರುವಂತದ್ದು.

### ೪.೨.೧. ಸ್ವಾತಂತ್ರ್ಯೋತ್ತರ ದಲಿತ ಚಳುವಳಿಗಳು

"ಅಜ್ಞಾನ, ಅನಕ್ಷರತೆ, ಬಡತನದ ಜೊತೆಗೆ ಜಮೀನ್ದಾರಿಕೆ ಪದ್ಧತಿ ಜೀವಂತವಾಗಿರುವ ಯಾದಗಿರಿ ಜಿಲ್ಲೆಯಲ್ಲಿ ಜಮೀನ್ದಾರರ ಮತ್ತು ಮೇಲ್ವರ್ಗದವರ ದಬ್ಬಾಳಿಕೆಯಲ್ಲಿ ದಲಿತರು ನಲುಗಿ ಹೋಗಿದ್ದರು. ಇಂದಿಗೂ ಕೂಡ ಇಲ್ಲಿ ದಲಿತರ ಮೇಲೆ ದೌರ್ಜನ್ಯ, ಶೋಷಣೆ ಹಾಗೂ ಅವರ ಹಲವಾರು ನಾಗರಿಕ ಹಕ್ಕುಗಳ ಉಲ್ಲಂಘನೆ ನಡೆಯುತ್ತಲೇ ಇದೆ. ಹೀಗಾಗಿ ಅನೇಕ ಚಿಂತಕರು, ಸಂಘಟನೆಗಳು ಇಲ್ಲಿನ ವ್ಯವಸ್ಥೆಯ ಸುಧಾರಣೆಗೆ ಪ್ರಯತ್ನಗಳನ್ನು ಆರಂಭಿಸಿದರು. ಅಂತಹ ಸಮಯದಲ್ಲಿ ನಾಯಕರಾಗಿ ಹೊರಹೊಮ್ಮಿದವರೆ ಬಿ. ಶ್ಯಾಮಸುಂದರ ಮತ್ತು ಅವರು ಹುಟ್ಟುಹಾಕಿದ 'ಭೀಮಸೇನೆ' ಎಂಬ ಸಂಘಟನೆ."[೧೬] ಡಾ. ಬಿ.ಆರ್. ಅಂಬೇಡ್ಕರ್ ನಂತರದಲ್ಲಿ ಸಾಮಾಜಿಕ ಸುಧಾರಣೆಗಾಗಿ ದಲಿತ ಮತ್ತು ಸಮಗ್ರ ಶೋಷಿತ ಸಮುದಾಯದ ಪರ ಧ್ವನಿ ಎತ್ತಿ ಅವರ ಕುರಿತು ಬದುಕಿನುದ್ದಕ್ಕೂ ಚಿಂತಿಸಿದ ಮೇರು ವ್ಯಕ್ತಿತ್ವ ಶ್ಯಾಮಸುಂದರ ಅವರದು. ಖ್ಯಾತ ವಿಚಾರವಾದಿಯಾಗಿ, ವಾಗ್ಮಿಯಾಗಿ, ಸಾಹಿತಿಯಾಗಿ, ರಾಜಕಾರಣಿಯಾಗಿ, ಸಮಾಜ ಸುಧಾರಕರಾಗಿ ದಲಿತರ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಸಮಗ್ರ ವ್ಯವಸ್ಥೆಯನ್ನೇ ಬದಲಾಯಿಸಲು ಪ್ರಯತ್ನಿಸಿ 'ದಲಿತ ಚಳುವಳಿಯ ಪಿತಾಮಹ', ದೀನದಲಿತರ, ಹಿಂದುಳಿದ ಅಲ್ಪಸಂಖ್ಯಾತರ ಏಳ್ಗೆಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡು ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಹೀಗೆ ಮೂರು ರಾಜ್ಯಗಳಲ್ಲಿ ಡಾ.ಬಿ.ಆರ್. ಅಂಬೇಡ್ಕರ್ ಅವರ ತತ್ವ, ಚಿಂತನೆಗಳನ್ನು ಪ್ರಚಾರಪಡಿಸಿದವರು. ಸಾಂಪ್ರದಾಯಿಕ ವ್ಯವಸ್ಥೆಯನ್ನು ಧಿಕ್ಕರಿಸುವುದರ ಮೂಲಕ ಜಾತಿಪದ್ಧತಿ ಹಾಗೂ ಶೋಷಣೆಯನ್ನು ನಿರ್ಮೂಲನೆ ಮಾಡಲು ತಮ್ಮ ಜೀವನದುದ್ದಕ್ಕೂ ಹೋರಾಟ ಮಾಡಿದರು. ಸಾಮಾಜಿಕ ನೆಲೆಯಲ್ಲಿ ಅಂದಿನ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಗೆ ಸವಾಲಾಗಿ

ನಿಂತು, ಸಮಾಜದ ಕಟ್ಟಕಡೆಯ ವ್ಯಕ್ತಿಯ ಪರವಾಗಿ ಧ್ವನಿ ಎತ್ತಿ ಅವನನ್ನು ಸಮಾಜದ ಬಹುಮುಖಿಗೆ ತರಲು ಪ್ರಯತ್ನಿಸಿ ಯಶಸ್ವಿಯಾದವರು ಬಿ. ಶ್ಯಾಮಸುಂದರ.

ಬಿ. ಶ್ಯಾಮಸುಂದರ ಅವರು ಮಹಾರಾಷ್ಟ್ರ ರಾಜ್ಯದ ಔರಂಗಾಬಾದ್‌ನಲ್ಲಿ ೧೯೦೮ ಡಿಸೆಂಬರ್ ೨೧ ರಂದು ಜನಿಸಿದರು. ಇವರ ತಂದೆ, ಆಗ ಅಸ್ಪೃಶ್ಯರೆನಿಸಿದ 'ಮಾಲಾ' ಜಾತಿಯ, ಬದುಲಾಮಾಣಿಕ್ಯಂ ಮತ್ತು ತಾಯಿ ಸುಧಾಬಾಯಿ. ಇವರ ತಂದೆ ರೈಲ್ವೆ ಇಲಾಖೆಯಲ್ಲಿ ಮುಖ್ಯ ಪೇದೆಯಾಗಿದ್ದರು. ಶ್ಯಾಮಸುಂದರ ಅವರು ತಮ್ಮ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ೧೯೧೩ರಿಂದ ೧೯೧೮ರ ಅವಧಿಯಲ್ಲಿ ಔರಂಗಾಬಾದ್‌ನಲ್ಲಿ ಕ್ರೈಸ್ತ ಮಿಶನರಿಯ 'ಸೆವೆನ್ ಫ್ಲವರ್ಸ್' ಶಾಲೆಯಲ್ಲಿ ಪೂರ್ಣಗೊಳಿಸಿದರು. ಅನಂತರ ಅವರ ತಂದೆಗೆ ಹೈದರಾಬಾದಿಗೆ ವರ್ಗಾವಣೆಯಾದ ಕಾರಣ, ಹೈದರಾಬಾದಿಗೆ ಹೋಗಿ ಅರ್ಥಶಾಸ್ತ್ರದಲ್ಲಿ ಬಿ.ಎ. ಪದವಿಯನ್ನು ರ್‍ಯಾಂಕ್‌ನೊಂದಿಗೆ ಪಡೆದರು. ಆ ಕಾಲದಲ್ಲಿ ದಲಿತ ವಿದ್ಯಾರ್ಥಿಯೊಬ್ಬ ಇಂತಹ ಸಾಧನೆ ಮಾಡಿದ ಮೊದಲಿಗರಾಗಿದ್ದರು. ಇಂತಹ ಸಾಧನೆಗಾಗಿ ಅವರಿಗೆ 'ಖುಸ್ರು-ಎ-ದಕ್ಕನ್' ಎಂಬ ಬಿರುದನ್ನು ಹಾಗೂ ಬಂಗಾರದ ಪದಕವನ್ನು ೧೯೨೪ರಲ್ಲಿ ಪ್ರದಾನ ಮಾಡಲಾಯಿತು. ನಂತರ ಎಲ್.ಎಲ್.ಬಿ. ಕಾನೂನು ಪದವಿಯನ್ನು ಪಡೆದರು.

ಶ್ಯಾಮಸುಂದರ ಅವರು ವಿದ್ಯಾರ್ಥಿ ದೆಸೆಯಿಂದಲೆ ಸಂಘಟನಾ ಸಾಮರ್ಥ್ಯ ಹೊಂದಿದ್ದು, ಅನೇಕ ಸಂಘ ಸಂಸ್ಥೆಗಳ ನೇತೃತ್ವ ವಹಿಸಿದ್ದರು. ಅನೇಕ ನೌಕರರ ಒಕ್ಕೂಟಗಳ ನೇತೃತ್ವ ಕೂಡ ಅವರು ನಿಭಾಯಿಸಿದ್ದಾರೆ. ಅವರು ಭಾರತೀಯ ಸಾಂಸ್ಕೃತಿಕ, ಧಾರ್ಮಿಕ ವಿಚಾರಗಳನ್ನು ಕುರಿತಂತೆ ಆಳವಾದ ಅಧ್ಯಯನ ಮಾಡಿದ್ದರು. ಅವರ ಆಳವಾದ ಅಧ್ಯಯನದ ಫಲದಿಂದಾಗಿ ಹಿಂದಿ, ಇಂಗ್ಲಿಷ್, ಉರ್ದು ಭಾಷೆಗಳಲ್ಲಿ ಒಟ್ಟು ಹದಿನಾರು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ದಿ ಬರ್ನ್'(ಇಂಗ್ಲಿಷ್) 'ಭೀಮಸೇನಾ ಅವರ ಪೋಸ್ಟ್ ಆಂಡ್ ಪ್ರೆಸೆಂಟ್'(ಇಂಗ್ಲಿಷ್), 'ಹಿಂದು ದೇವತಾವೊಂಕಾ ಮ್ಯಾನಿಫೆಸ್ಟೊ'(ಹಿಂದಿ), 'ಭಾರತೀಯ ಜಾತೀಕಾ ಪ್ರಾಚೀನ ಇತಿಹಾಸ್' (ಹಿಂದಿ) ಮುಂತಾದವು ಸೇರಿವೆ.

**ಭೀಮಸೇನೆ**

"ಭೀಮಸೇನೆ ಎಂಬ ಸಂಘಟನೆಯನ್ನು ಬಿ. ಶ್ಯಾಮಸುಂದರ ೧೯೬೮ರಲ್ಲಿ ಗುಲ್ಬರ್ಗಾದಲ್ಲಿ ಸ್ಥಾಪಿಸಿದರು. ಭೀಮಸೇನೆಯ ಇತಿಹಾಸವೆಂದರೆ ಅದು ಸಾಮಾಜಿಕ ಅಸಮಾನತೆ ಮತ್ತು ಅನ್ಯಾಯದ ವಿರುದ್ಧ ಹೋರಾಟಗಳ ದಲಿತರ, ಶೋಷಿತರ, ಕಂಠದ ದನಿಯಾಗಿ ಹೊರಬಂದಿತು. ಕೆಳವರ್ಗದ ಹಾಗೂ ಗುಲಾಮಗಿರಿಯನ್ನು ಅನುಭವಿಸಿಕೊಂಡು ಬಂದ ಮುಗ್ಧ ಜನರನ್ನು ಮೇಲೆತ್ತುವ, ಕೋಟ್ಯನುಕೋಟಿ ಶೋಷಿತ ಸಮುದಾಯವನ್ನು ಒಂದುಗೂಡಿಸಿ ಹೊಸ ನಾಡು ಕಟ್ಟಬೇಕೆಂಬ ಆಶ್ರಯವನ್ನು ಶ್ಯಾಮಸುಂದರ್ ಹೊಂದಿದ್ದರು. ಇಂತಹ ಉದ್ದೇಶವನ್ನಿಟ್ಟುಕೊಂಡು ಡಾ.ಬಿ.ಆರ್.ಅಂಬೇಡ್ಕರ್ ಅವರ ೭೭ನೆಯ ಹುಟ್ಟುಹಬ್ಬದಂದು ಅಂದರೆ ೨೯.೪.೧೯೬೮ರಂದು 'ಭಾರತೀಯ ಭೀಮಸೇನೆ' ಎಂಬ ಸಂಘಟನೆಯನ್ನು ಗುಲ್ಬರ್ಗಾದ ಹೃದಯ ಭಾಗವಾದ ಜಗತ್ ಸರ್ಕಲ್‌ನಲ್ಲಿ ವಿಧ್ಯುಕ್ತವಾಗಿ ಉದ್ಘಾಟನೆ ಮಾಡಲಾಯಿತು."[೬೭]

"ಭೀಮಸೇನೆಯ ಅಂದಿನ ಪದಾಧಿಕಾರಿಗಳು

೧. ಶ್ರೀ ಶ್ಯಾಮಸುಂದರ – ಸ್ಥಾಪಕ ಅಧ್ಯಕ್ಷರು

೨. ಶ್ರೀ ಗುಂಡಪ್ಪ ಭರಣಿ – ಅಧ್ಯಕ್ಷರು

೩. ಶ್ರೀ ಜಡಪ್ಪಾ ಒಂಟಿ – ಉಪಾಧ್ಯಕ್ಷರು

೪. ಶ್ರೀ ಚಂದ್ರಶೇಖರ ಬಬ್ಲಾದ – ಸಾಮಾನ್ಯ ಕಾರ್ಯದರ್ಶಿ

೫. ಶ್ರೀ ರಾಜಾರಾಮ ಗಾಜರೆ – ವ್ಯವಸ್ಥಾಪಕ ಕಾರ್ಯದರ್ಶಿ

೬. ಶ್ರೀ ಮಾರುತಿ ಮಾಲೆ – ಖಜಾಂಚಿ"[೧೮]

ಬಿ. ಶ್ಯಾಮಸುಂದರ ಅವರು ಶಿಕ್ಷಣ ಮತ್ತು ಸಮಾಜಕ್ಕೆ ಎಷ್ಟು ಒತ್ತು ನೀಡಿದ್ದರೋ ಅಷ್ಟೇ ಮಹತ್ವವನ್ನು ರಾಜಕೀಯಕ್ಕೂ ನೀಡಿದರು. "ಒಂದು ಸಮುದಾಯದ ವರ್ಗಗಳಿಗೆ ರಾಜಕೀಯ ಅಭಯಹಸ್ತ ಇದ್ದಾಗ ಮಾತ್ರ ಏನಾದರೂ ಸಾಧನೆ ಮಾಡಲು ಸಾಧ್ಯ ಎಂಬ ಸತ್ಯ ಅವರಿಗೆ ಮನವರಿಕೆಯಾಗಿದ್ದಿತು. ಹಾಗಾಗಿ ಅಂದಿನ ಕಲುಷಿತವಾದ ಭಾರತೀಯ ಧರ್ಮ ಮತ್ತು ಜಾತಿವ್ಯವಸ್ಥೆಯ ನಡುವೆ ಸಿಕ್ಕಿ ಹಾಕಿಕೊಂಡ ಶೋಷಿತರು ದಲಿತರನ್ನು ಮೇಲೆತ್ತಬೇಕೆಂಬ ಹೆಬ್ಬಯಕೆಯಿಂದ ಹೈದರಾಬಾದ್ ನಿಜಾಮನ ಸಂಸ್ಥಾನದಲ್ಲಿ ಸ್ಥಾನ ಪಡೆದು, ನಿಜಾಂ ಸರಕಾರದ ಮಂತ್ರಿಮಂಡಲದಲ್ಲಿ ಸಹಾಯಕ ಹಣಕಾಸು ಮಂತ್ರಿಯಾಗಿದ್ದರು. ೧೯೪೫ರಲ್ಲಿ 'ಡಿಪ್ರೆಸ್ಡ್ ಕ್ಲಾಸ್ ಅಸೋಸಿಯೇಷನ್' ಅಧ್ಯಕ್ಷರಾಗಿ ಶೋಷಿತ ಸಮುದಾಯಕ್ಕೆ ಜೀವ ತುಂಬಿದರು. ೧೯೪೦ರಲ್ಲಿ ನಡೆದ ಹೈದರಾಬಾದ್ ವಿಧಾನಸಭೆಗೆ ಚುನಾಯಿತರಾಗಿ ಆಯ್ಕೆಗೊಂಡರು. ೧೯೪೮ರಲ್ಲಿ ಹೈದರಾಬಾದ್ ಸಂವಿಧಾನ ಸಭೆಯ ಉಪಸಭಾಪತಿಯಾಗಿ ಆಯ್ಕೆಗೊಂಡರು. ಬಿ. ಶ್ಯಾಮಸುಂದರ ಅವರು ವಿಶ್ವಸಂಸ್ಥೆಗೆ ಪ್ರತಿನಿಧಿಯಾಗಿ ಹೋಗಿ ಅಲ್ಲಿ ಭಾಷಣ ಮಾಡಿ ಭಾರತದಲ್ಲಿಯ ೧೬೦ ಮಿಲಿಯನ್‌ದಷ್ಟಿರುವ ದಲಿತರಿಗೆ ಮಾನವ ಹಕ್ಕುಗಳ ಲಾಭ ನೀಡುವುದು ಇಂದಿನ ಅಗತ್ಯವಾಗಿದೆ ಎಂದು ಪ್ರತಿಪಾದಿಸಿದರು."[೧೯] ಭಾರತದ ಮೊಟ್ಟಮೊದಲ ಸಾರ್ವತ್ರಿಕ ಚುನಾವಣೆಗೆ ಸ್ಪರ್ಧಿಸಿ ಸೋತರು. ನಂತರ ೧೯೫೭ರಲ್ಲಿ ಮೈಸೂರು ವಿಧಾನಸಭೆಗಾಗಿ ನಡೆದ ಚುನಾವಣೆಯಲ್ಲಿ ಭಾಲ್ಕಿ ಮತಕ್ಷೇತ್ರದಿಂದ ಸ್ಪರ್ಧಿಸಿ ಜಯ ಗಳಿಸಿದರಲ್ಲದೇ ಇವರ ಎದುರಾಳಿ ಅಭ್ಯರ್ಥಿಯ ಠೇವಣಿ ಜಪ್ತಿಯಾಯಿತು. ಆದರೆ ನಂತರ ೧೯೬೧ರಲ್ಲಿ ನಡೆದ ವಿಧಾನಸಭೆ ಚುನಾವಣೆಯಲ್ಲಿ ಆಳಂದ ಹಾಗೂ ಬೀದರ್‌ನಲ್ಲಿ ಸ್ಪರ್ಧಿಸಿ ಎರಡೂ ಕಡೆ ಸೋಲನ್ನು ಅನುಭವಿಸಿದರು.

**ಭೀಮಸೇನೆಯ ಹೋರಾಟಗಳು**

ಭೀಮಸೇನೆಯ ಸ್ಥಾಪನೆಯ ಹಿನ್ನೆಲೆ ಮತ್ತು ಉದ್ದೇಶಗಳನ್ನು ಅವಲೋಕಿಸಿದಾಗ, ಇಲ್ಲಿಯವರೆಗಿದ್ದ ಸುಧಾರಣಾವಾದಿ ಸಂಘಟನೆಗಳಿಗೆ ಹೋಲಿಸಿದಲ್ಲಿ ಭೀಮಸೇನಾ ಒಂದು ಕ್ರಾಂತಿಕಾರಕ ಸಂಘಟನೆಯಾಗಿ ಕಾಣುತ್ತದೆ. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳುವಳಿಯ ಹರಿಕಾರನಂತೆ ಭೀಮಸೇನಾ ಕೆಲಸ ಮಾಡಿದುದನ್ನು ಗುರುತಿಸಲಾಗುತ್ತದೆ. ಸಂಘಟನೆ ಸ್ಪಷ್ಟವಾಗಿ ಘೋಷಿಸಿದ್ದು, ಹಿಂಸೆಯನ್ನು ಹಿಂಸೆಯಿಂದಲೇ ಎದುರಿಸಬೇಕು ಹಾಗೂ ಉಗ್ರ ಹೋರಾಟಗಳಿಂದ ಮಾತ್ರ

ದಲಿತರ ವಿಮೋಚನೆ ಸಾಧ್ಯ ಎಂದು ದಿಟ್ಟ ನಿಲುವಿನೊಂದಿಗೆ ಭೀಮಸೇನಾ ಹೋರಾಟಗಳನ್ನು ರೂಪಿಸುತ್ತಿತ್ತು. ಭೀಮಸೇನೆಯು ಸರಕಾರದ ಮುಂದೆ ಮಂಡಿಸಿದ ಬೇಡಿಕೆಗಳೆಂದರೆ,

೧. ಪ್ರತಿ ತಾಲೂಕಿನಲ್ಲಿಯೂ ಶೇ. ೨೫ರಷ್ಟು ಹಳ್ಳಿಗಳನ್ನು ದಲಿತರಿಗೆ ಬಿಟ್ಟು ಕೊಡಬೇಕು.

೨. ಒಂದು ಪ್ರತ್ಯೇಕ ಚುನಾವಣಾ ಕ್ಷೇತ್ರವನ್ನು ದಲಿತರಿಗೆ ಬಿಟ್ಟು ಕೊಡುವುದು.

೩. ಪ್ರತಿಯೊಂದು ರಾಜ್ಯದಲ್ಲಿ ಪರಿಶಿಷ್ಟ ಜಾತಿಯವರಿಗೆ ಒಂದು ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪಿಸುವುದು.

೪. ಅಸ್ಪೃಶ್ಯರಿಗಾಗಿಯೇ ಒಂದು ರಾಜಕೀಯ ಸಂಘಟನೆ ಸ್ಥಾಪಿಸುವುದು.

### ಜಾತಿವಾದಿಗಳ ವಿರುದ್ಧ ಹೋರಾಟ

ಬಿ.ಶ್ಯಾಮಸುಂದರ ಅವರು ನಾಸ್ತಿಕರಾಗಿದ್ದು ಆಸ್ತಿಕವಾದಿಗಳನ್ನು ನಂಬುತ್ತಿರಲಿಲ್ಲ ಹಾಗೂ ಅಂಥವರಿಗೆ ಪ್ರೋತ್ಸಾಹವನ್ನು ನೀಡುತ್ತಿರಲಿಲ್ಲ. ಪುರಾತನ ಕಾಲದಿಂದ ಪುರೋಹಿತ ವರ್ಗವು ನಂಬಿಸಿಕೊಂಡು ಬಂದಿದ್ದ ದೇವರು, ಪುನರ್‌ಜನ್ಮ, ಹಣೆಬರಹ ಮುಂತಾದ ಮೂಢನಂಬಿಕೆಗಳಲ್ಲಿ ಅವರಿಗೆ ನಂಬಿಕೆಯೂ ಇರಲಿಲ್ಲ. ಬದಲಾಗಿ ಶತಶತಮಾನಗಳಿಂದ ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ ದಲಿತರನ್ನು ಕತ್ತಲೆಗೆ ತಳ್ಳಿ ಅಸ್ಪೃಶ್ಯತೆಗೆ ಕಾರಣವಾಗಿದ್ದ ಹಿಂದೂ ದೇವತೆಗಳ ಫೋಟೊಗಳನ್ನು ಸಾಮೂಹಿಕವಾಗಿ ನಾಶ ಮಾಡುವ, ಸುಟ್ಟುಹಾಕುವ ಚಳವಳಿ ಕೈಗೊಂಡರು. ಇವರ ಇಂತಹ ಹೋರಾಟಕ್ಕೆ ಯಾದಗಿರಿ ಪ್ರದೇಶದ ದಲಿತರು ಸ್ಪಂದಿಸಿದರು. ಶ್ಯಾಮಸುಂದರ ಅವರ ಹೋರಾಟಕ್ಕೆ ಬೆಂಬಲವಾಗಿ ನಿಂತ ದಲಿತರು ಎಲ್ಲ ದೇವಾನುದೇವತೆಗಳ ಫೋಟೋಗಳನ್ನು ಸುಟ್ಟು ಹಾಕುವುದರ ಮೂಲಕ ಶೋಷಣೆಯ ವಿರುದ್ಧ ಪ್ರತಿಭಟಿಸಿದರು. ಪ್ರತಿಭಟನೆಯು ಗುಲ್ಬರ್ಗಾದಲ್ಲಿ ತೀವ್ರ ಸ್ವರೂಪ ಪಡೆದು ಗುಲ್ಬರ್ಗಾದಲ್ಲಿದ್ದ ಸುಮಾರು ಮೂರು ಸಾವಿರ ಭೀಮಸೇನೆಯ ಸದಸ್ಯರು ಹಿಂದೂ ದೇವರುಗಳ ಚಿತ್ರಗಳನ್ನು ಸುಡುವ ಹಾಗೂ ಮನೆಯಲ್ಲಿರುವ ಫೋಟೋಗಳನ್ನು ಚರಂಡಿಗೆ ಎಸೆಯುವ ಘಟನೆಗಳು ಜರುಗಿ, ಜಾತಿವಾದಿಗಳಲ್ಲಿ ಆಶ್ಚರ್ಯವನ್ನು ಮೂಡಿಸಿದರು. ಇವರ ಕ್ರಾಂತಿಕಾರಿ ಹೋರಾಟಗಳನ್ನು ಕಂಡು ಅಂದಿನ ರಾಜ್ಯದ ನೇತಾರರಾದ ಎಸ್. ನಿಜಲಿಂಗಪ್ಪ, ವೀರೇಂದ್ರ ಪಾಟೀಲ ಇತರ ಅನೇಕ ನಾಯಕರು ದಿಗ್ಭ್ರಮೆಗೊಳಗಾದರು. ಇಂತಹ ಚಟುವಟಿಕೆಗಳು ಮುಂದೆ ಯಾದಗಿರಿಯಲ್ಲಿ ಮುಂದುವರಿದವು.

### ದಲಿತ ಮಹಿಳೆಯರ ಮೇಲಿನ ದೌರ್ಜನ್ಯದ ವಿರುದ್ಧ ಹೋರಾಟ

ಗುಲ್ಬರ್ಗಾ ಜಿಲ್ಲೆಯಲ್ಲಿ ಭೀಮಸೇನೆ ಸ್ಥಾಪನೆಯಾದ ನಂತರ ದಲಿತರ ಮೇಲೆ ಅದರಲ್ಲೂ ದಲಿತ ಮಹಿಳೆಯರ ಮೇಲೆ ದೌರ್ಜನ್ಯವಾದರೆ ತತ್‌ಕ್ಷಣ ಅದರ ವಿರುದ್ಧ ಹೋರಾಟಕ್ಕಿಳಿಯುತ್ತಿತ್ತು. ಭೀಮಸೇನೆಯ ಹೋರಾಟದ ತೀವ್ರತೆಯ ಬಗ್ಗೆ ಹೇಳುವುದಾದರೆ, ೧೯೭೦ರಲ್ಲಿ ದಲಿತ ಮಹಿಳೆಯರ ದೌರ್ಜನ್ಯದ ವಿರುದ್ಧ ನಡೆಸಿದ ಹೋರಾಟವು ರಾಷ್ಟ್ರವ್ಯಾಪ್ತಿ ಗಮನ ಸೆಳೆಯಿತು. ಗುಲಬರ್ಗಾ ಜಿಲ್ಲೆ ಕಮಲಾಪುರ ಕ್ಷೇತ್ರದ ಶಾಸಕ ಹಾಗೂ ಮುಖಂಡ ಶಂಕರಶೆಟ್ಟಿ ಪಾಟೀಲರ ಮನೆಗೆಲಸದಲ್ಲಿದ್ದ ನಿಂಗಮ್ಮ ಎಂಬ ದಲಿತ ಮಹಿಳೆ ಅಕಾಲಿಕ ಮರಣವನ್ನಪ್ಪಿದಳು. ಶವಪರೀಕ್ಷೆ ಮಾಡಿದ ವೈದ್ಯರು ಆಕೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ ಎಂದು ಪ್ರಮಾಣ ಪತ್ರ ನೀಡಿದರು.

ಆದರೆ ಆಕೆಯ ಸಾವಿನ ಬಗ್ಗೆ ಸಂಶಯಗಳು ಭುಗಿಲೆದ್ದಾಗ, ಭೀಮಸೇನೆಯ ಸದಸ್ಯರು ಶ್ಯಾಮಸುಂದರ ಅವರ ನೇತೃತ್ವದಲ್ಲಿ ಸ್ಥಳಕ್ಕೆ ಭೇಟಿ ನೀಡಿ, ಇದು ಆತ್ಮಹತ್ಯೆಯೋ ಅಥವಾ ಕೊಲೆಯೋ ಎಂದು ನಿರ್ಧರಿಸಲು ಪುನಃ ಶವಪರೀಕ್ಷೆ ಮಾಡಬೇಕೆಂದು ಗುಲಬರ್ಗಾದಲ್ಲಿ ಬೃಹತ್ ಪ್ರತಿಭಟನೆ ಆರಂಭಿಸಿದರು. ಇದರಿಂದಾಗಿ ಆಕೆಯ ಶವವನ್ನು ಮರುಪರೀಕ್ಷೆಗೊಳಪಡಿಸಿದಾಗ ಅದು ಕೊಲೆ ಎಂದು ಸಾಬೀತಾಯಿತು. ಇದರಿಂದ ರೊಚ್ಚಿಗೆದ್ದ ನೂರಾರು ದಲಿತರು ಶಂಕರಶೆಟ್ಟಿ ಪಾಟೀಲರನ್ನು ಸಾರ್ವಜನಿಕ ವೇದಿಕೆಯಲ್ಲಿ ಹಲ್ಲೆ ಮಾಡಿ ಥಳಿಸಿದರು. ಹಾಗಾಗಿ ಸಮಸ್ಯೆ ದೊಡ್ಡ ವಿಷಯವಾಗಿ ವಿಧಾನಸಭೆಯಲ್ಲಿಯೂ ಪ್ರತಿಧ್ವನಿಸಿ ಚರ್ಚೆ ನಡೆಯಿತು. ಆಗ ಗೃಹಮಂತ್ರಿಗಳು ಮಧ್ಯೆ ಪ್ರವೇಶಿಸಿ, ಇದು ಕೊಲೆ ಎಂಬುದನ್ನು ತಿಳಿದು, ಶಾಸಕರ ಮೇಲೆ ಕೊಲೆ ಆರೋಪ ಹೊರಿಸಲಾಯಿತು.

**ದಲಿತ ಸಂಘರ್ಷ ಸಮಿತಿಯ ಹೋರಾಟಗಳು**

೧೯೭೪ರಿಂದ ೧೯೮೫ರ ಕಾಲಘಟ್ಟವು ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿಯ ಹೋರಾಟದ ಉಚ್ಛ್ರಾಯ ಕಾಲವೆನ್ನಬಹುದು. ೧೯೭೪ರಲ್ಲಿ ದಲಿತ ಸಂಘರ್ಷ ಸಮಿತಿಯ ಸ್ಥಾಪನೆ ಆದಾಗ ಅದರ ಒಂದು ಶಾಖೆಯು ಗುಲಬರ್ಗಾದಲ್ಲೂ ಸ್ಥಾಪನೆ ಆಯಿತು. ಪ್ರಾರಂಭದಲ್ಲಿ ಡಿ.ಜಿ. ಸಾಗರ್ ಆ ಸಂಘಟನೆಯ ನಾಯಕರಾಗಿ ಹೋರಾಟದ ನೇತೃತ್ವ ವಹಿಸಿದ್ದರು. ಹೀಗಾಗಿ ಗುಲ್ಬರ್ಗಾದ ದಲಿತ ಸಂಘರ್ಷ ಸಮಿತಿಯ ಹುಟ್ಟು, ಬೆಳವಣಿಗೆ ಮತ್ತು ಹೋರಾಟಗಳು ಮತ್ತು ಡಿ.ಜಿ. ಸಾಗರ್ ಅವರ ಕಾರ್ಯಚಟುವಟಿಕೆಗಳ ಇತಿಹಾಸವು ಜೊತೆ ಜೊತೆಯಾಗಿಯೇ ಸಾಗುತ್ತವೆ. ಒಂದು ಹಂತದಲ್ಲಿ ಗುಲ್ಬರ್ಗಾ ಜಿಲ್ಲೆ ಭಾಗದಲ್ಲಿ ದಲಿತ ಸಂಘರ್ಷ ಸಮಿತಿ ಎಂದರೆ ಡಿ.ಜಿ. ಸಾಗರ್, ಡಿ.ಜಿ. ಸಾಗರ್ ಎಂದರೆ ದಲಿತ ಸಂಘರ್ಷ ಸಮಿತಿ ಎನ್ನುವಷ್ಟರಮಟ್ಟಿಗೆ ಇವರ ಹೆಸರು ಗುರುತಿಸಲ್ಪಟ್ಟಿತ್ತು. ಈಗಲೂ ಸಹ ಗುಲಬರ್ಗಾ ಜಿಲ್ಲೆಯ ದಲಿತ ಸಂಘರ್ಷ ಸಮಿತಿಯ ಪ್ರಮುಖ ಬಣ ಎಂದರೆ ಡಿ.ಜಿ. ಸಾಗರ್ ಬಣವಾಗಿದೆ.

ವಿದ್ಯಾರ್ಥಿ ದೆಸೆಯಿಂದಲೆ ಡಿ.ಜಿ. ಸಾಗರ್ ಅವರಲ್ಲಿದ್ದ ಹೋರಾಟದ ಗುಣಗಳು, ಸಂಘಟನಾ ಚತುರತೆ ಮುಂತಾದ ನಾಯಕತ್ವದ ಗುಣಗಳನ್ನು ಗುರುತಿಸಿದ ಪ್ರೊ. ಬಿ. ಕೃಷ್ಣಪ್ಪ ಇವರು ದಲಿತ ಸಂಘರ್ಷ ಸಮಿತಿಯ ಪದಾಧಿಕಾರಿ ಸ್ಥಾನವನ್ನು ಕಲ್ಪಿಸಿದರು. ನಂತರ, ಸ್ವಸಾಮರ್ಥ್ಯದಿಂದ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಅಧ್ಯಕ್ಷರಾಗಿ, ಜಿಲ್ಲಾ ಸಂಘಟನಕಾರರಾಗಿ ಹಂತ ಹಂತವಾಗಿ ಮೇಲೇರುತ್ತಾ, ರಾಜ್ಯಮಟ್ಟದ ಸಂಚಾಲಕರಾಗಿ ಉನ್ನತ ಸ್ಥಾನಕ್ಕೇರಿದರು. ಈ ಎಲ್ಲಾ ಕಾರಣಗಳಿಂದಾಗಿ ಡಿ.ಜಿ. ಸಾಗರ್ ನೇತೃತ್ವದಲ್ಲಿ ಅವಿಭಜಿತ ಕಲಬುರಗಿ ಜಿಲ್ಲೆಯ ದಲಿತ ಸಂಘರ್ಷ ಸಮಿತಿ ಆಶ್ರಯದಲ್ಲಿ ನಡೆದ ಹೋರಾಟಗಳನ್ನು ಸಾಧನೆಗಳನ್ನು ದಾಖಲಿಸುವ ಅಗತ್ಯವಿದೆ.

**ಚಿಂಚನಸೂರು ದಲಿತರ ಬೆತ್ತಲೆಸೇವೆ ಮೆರವಣಿಗೆ ವಿರುದ್ಧ ಹೋರಾಟ**

ಗುಲಬರ್ಗಾ ಜಿಲ್ಲೆಯ ಚಿಂಚನಸೂರು ಎನ್ನುವ ಹಳ್ಳಿಯಲ್ಲಿ ಒಂದು ಅಮಾನವೀಯ ಪದ್ಧತಿಯು ಜಾರಿಯಲ್ಲಿತ್ತು. ಹಳ್ಳಿಯಲ್ಲಿ ಮಹಾಮರದೇವಿಯ ದೇವಸ್ಥಾನವಿದ್ದು, ಇಲ್ಲಿನ ದೇವಿಗೆ

ಹೆಣ್ಣುಮಕ್ಕಳು ಸಲ್ಲಿಸುವ ಬೆತ್ತಲೆಸೇವೆ ಹರಕೆ ಈ ಭಾಗದಲ್ಲಿ ಪ್ರಸಿದ್ಧವಾಗಿತ್ತು. ಹಳ್ಳಿಯ ಮತ್ತು ಸುತ್ತಮುತ್ತಲ ಹಳ್ಳಿಗಳಲ್ಲಿ ಆಗ ತಾನೆ ಮೈನೆರೆದು ಮದುವೆಯಾಗದೇ ಉಳಿದ ಹೆಣ್ಣುಮಕ್ಕಳನ್ನು ಪ್ರತಿ ವರ್ಷ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಕೇರಿಯಿಂದ ಬೆತ್ತಲೆಯಾಗಿ ದೇವಸ್ಥಾನಕ್ಕೆ ಕಳುಹಿಸುತ್ತಿದ್ದರು. ಅಲ್ಲಿ ಐದು ಶುಕ್ರವಾರ ಮತ್ತು ಐದು ಮಂಗಳವಾರ ದೇವಸ್ಥಾನದಲ್ಲಿರಿಸಿ ಅವರನ್ನು ಶಾಶ್ವತವಾಗಿ ಜೋಗಿತಿಯರನ್ನಾಗಿ ಮಾಡುವ ವಿಧಿವಿಧಾನಗಳನ್ನು ನೆರವೇರಿಸಲಾಗುತ್ತಿತ್ತು. ಹೀಗಾಗಿ ಹಳ್ಳಿಯಲ್ಲಿ ನಡೆಯುತ್ತಿದ್ದ ಅನಿಷ್ಟ ಪದ್ಧತಿ ವಿರುದ್ಧ ದಲಿತ ಸಂಘರ್ಷ ಸಮಿತಿಯು ಡಿ.ಜಿ. ಸಾಗರ್ ಅವರ ನೇತೃತ್ವದಲ್ಲಿ ಪ್ರತಿಭಟನೆ ಆರಂಭಿಸಿತು.

ಡಿ.ಜಿ. ಸಾಗರ್ ನೇತೃತ್ವದ ದಲಿತ ಸಂಘಟನೆ ಅಲ್ಲಿನ ಹಳ್ಳಿಗಳಿಗೆ ಹೋಗಿ ದಲಿತರಿಗೆ ಇಂತಹ ಅಮಾನವೀಯ ಆಚರಣೆ ಬಗ್ಗೆ, ಮೂಢನಂಬಿಕೆ ಬಗ್ಗೆ ಅರಿವನ್ನು ಮೂಡಿಸಲು ಪ್ರಯತ್ನಿಸಿತು. ಆದರೆ ಆ ಜನರಿಗೆ ನೀಡಿದ ತಿಳುವಳಿಕೆ, ಎಚ್ಚರಿಕೆಗಳೆಲ್ಲವು ವಿಫಲವಾದವಲ್ಲದೆ ಆ ಜನರಲ್ಲಿ ಅಧೈರ್ಯ ಮತ್ತು ಭಯ ಮಾತ್ರ ದೂರವಾಗಲಿಲ್ಲ. ಆಗ ಸಮಿತಿಯು ಸಂಬಂಧಪಟ್ಟ ಸರಕಾರಿ ಇಲಾಖೆಯ ಅಧಿಕಾರಿಗಳನ್ನು ಭೇಟಿ ಮಾಡಿ ಅನಿಷ್ಟ ಪದ್ಧತಿಯನ್ನು ತಡೆಗಟ್ಟಲು ಕಟ್ಟುನಿಟ್ಟಾದ ಕ್ರಮವನ್ನು ಕೈಗೊಳ್ಳುವಂತೆ ಒತ್ತಡ ಹೇರಿದ್ದಲ್ಲದೆ, ತತ್‌ಕ್ಷಣ ಇಲ್ಲಿನ ಅನಿಷ್ಟ ಪದ್ಧತಿಯ ನಿಲುಗಡೆಗೆ ಕ್ರಮ ಕೈಗೊಳ್ಳದಿದ್ದರೆ ಉಗ್ರ ಹೋರಾಟ ನಡೆಸುವ ಎಚ್ಚರಿಕೆ ನೀಡಿತು. ಎಚ್ಚರಗೊಂಡ ಜಿಲ್ಲಾಡಳಿತ ಇಲ್ಲಿನ ಹಳ್ಳಿಗಳಲ್ಲಿ ನಡೆಯುತ್ತಿದ್ದ ಬೆತ್ತಲೆ ಮೆರವಣಿಗೆ ಹರಕೆ ಮುಂತಾದ ಸಾಮಾಜಿಕ, ಧಾರ್ಮಿಕ ಅನಿಷ್ಟ ಪದ್ಧತಿಗಳನ್ನು ನಿಲ್ಲಿಸಲು ಕ್ರಮ ಕೈಗೊಂಡಿತು.

### ಅಸ್ಪೃಶ್ಯತೆ ವಿರುದ್ಧ ಹೋರಾಟ

ಯಾದಗಿರಿ ಜಿಲ್ಲೆಯ ಸಾಮಾಜಿಕ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಇಲ್ಲಿ ಒಂದು ಕಡೆ ಎಲ್ಲಾ ಸೌಲಭ್ಯಗಳನ್ನು ಅನುಭವಿಸುತ್ತಿರುವ ಶ್ರೀಮಂತವರ್ಗವಿದ್ದರೆ, ಇನ್ನೊಂದು ಕಡೆ ಸೌಲಭ್ಯವಂಚಿತ ಅತ್ಯಂತ ಬಡವರ್ಗ ಇರುವುದು ಕಂಡುಬರುತ್ತದೆ. ದಲಿತರು ಕೇವಲ ಜೀತದಾಳುಗಳಾಗಿ, ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದು ಇವರನ್ನು ಸಮಾಜದಲ್ಲಿ ಅತ್ಯಂತ ನಿಕೃಷ್ಟವಾಗಿ ನಡೆಸಿಕೊಳ್ಳುವ ಪದ್ಧತಿ ಇಲ್ಲಿನ ಅನೇಕ ಹಳ್ಳಿಗಳಲ್ಲಿ ನಡೆದುಕೊಂಡು ಬಂದಿತ್ತು. ದಶಕಗಳ ಹಿಂದೆ ಹಳ್ಳಿಗಳಲ್ಲಿ ಬಾವಿಗಳು, ಹಳ್ಳಗಳು, ಕೆರೆಗಳೇ ಬಳಸುವ ನೀರಿನ ಮೂಲಗಳಾಗಿದ್ದವು. ಆದರೆ ದಲಿತರಿಗೆ ಊರಿನಲ್ಲಿರುವ ಸಾರ್ವಜನಿಕ ಬಾವಿ ನೀರನ್ನು ಬಳಸದಂತೆ, ದೇವಸ್ಥಾನದೊಳಗೆ ಪ್ರವೇಶ ಮಾಡದಂತೆ, ಹೋಟೆಲ್‌ಗಳಲ್ಲಿ ಎಲ್ಲರ ಜೊತೆ ಕುಳಿತುಕೊಳ್ಳದಂತೆ ಮುಂತಾದ ನಿರ್ಬಂಧಗಳಿದ್ದವು. ಇಂತಹ ಅಸ್ಪೃಶ್ಯತಾ ನಿವಾರಣೆಗೆ ಹೋರಾಟವನ್ನು ಆರಂಭಿಸಲಾಯಿತು.

### ಪೊಲೀಸ್ ದೌರ್ಜನ್ಯದ ವಿರುದ್ಧ ಹೋರಾಟ

ಯಾದಗಿರಿ ಜಿಲ್ಲೆಯಲ್ಲಿ ದಲಿತ ಸಂಘಟನೆಗಳು ಪೊಲೀಸರ ದೌರ್ಜನ್ಯ ಮತ್ತು ಅವರ ಅಮಾನವೀಯ ವರ್ತನೆ ವಿರುದ್ಧ ಹೋರಾಟ ಮಾಡಿದ ಘಟನೆಗಳು ಆಗಾಗ ನಡೆದಿವೆ. ಸವರ್ಣೀಯರು ಮತ್ತು ದಲಿತರ ನಡುವೆ ನಾನಾ ವಿಷಯಕ್ಕೆ ಸಂಬಂಧಿಸಿದಂತೆ ಆಗಾಗ ಘರ್ಷಣೆಗಳು ನಡೆಯುತ್ತಿದ್ದವು. ಇಂತಹ ಘರ್ಷಣೆಗಳು ನಡೆದಾಗ ಇವುಗಳನ್ನು ತಡೆ

ಹಿಡಿಯಬೇಕಾದ ಹಾಗೂ ಹೀಗಾಗದಂತೆ ನೋಡಿಕೊಳ್ಳಬೇಕಾದ ಪೋಲೀಸರು ನಿರ್ಲಕ್ಷ್ಯ ಮಾಡುವುದು ಮತ್ತು ಪಕ್ಷಪಾತವಾಗಿ ವರ್ತಿಸುವುದು ಸಾಮಾನ್ಯವಾಗಿತ್ತು. ಪೋಲೀಸರ ಇಂತಹ ಪಕ್ಷಪಾತವನ್ನು ವಿರೋಧಿಸಿ ಹೋರಾಟ ಮಾಡಬೇಕಾದ ಅನಿವಾರ್ಯತೆಯೂ ದಲಿತ ಸಂಘರ್ಷ ಸಮಿತಿಗೆ ಯಾದಗಿರಿ ಜಿಲ್ಲೆಯಲ್ಲಿ ಎದುರಾಯಿತು.

**ದಲಿತರ ಭೂಸುಧಾರಣಾ ಚಳುವಳಿ**

ಯಾದಗಿರಿ ಜಿಲ್ಲೆಯನ್ನು ಕರ್ನಾಟಕದ ಇತರ ಜಿಲ್ಲೆಗಳೊಂದಿಗೆ ಹೋಲಿಸಿ ನೋಡಿದರೆ, ಇಲ್ಲಿ ಊಳಿಗಮಾನ್ಯವು ಭೂಮಾಲೀಕತ್ವದ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಇಲ್ಲಿ ಸಾವಿರಾರು ಎಕರೆಗಳನ್ನು ಹೊಂದಿರುವ ಭೂಮಾಲೀಕರನ್ನು ಕಾಣಬಹುದು. "೧೯೮೨ರಲ್ಲಿ ಜಾರಿಗೆ ಬಂದ ಭೂಸುಧಾರಣಾ ಕಾಯ್ದೆಯನ್ವಯ ಸರಕಾರವು ಜಮೀನ್ದಾರರಿಂದ ಭೂಮಿ ವಶಪಡಿಸಿಕೊಂಡು ಭೂಹೀನರಿಗೆ ಅದರಲ್ಲೂ ದಲಿತರಿಗೆ ಹಂಚಲಾಗಿತ್ತು. ಆದರೆ ದಲಿತರು ಪಡೆಯಬೇಕಾಗಿದ್ದ ಭೂ ಒಡೆತನದ ಸಂಬಂಧ ಭೂಮಾಲೀಕರು ಪದೇ ಪದೇ ನ್ಯಾಯಾಲಯದಿಂದ ತಡೆಯಾಜ್ಞೆಗಳನ್ನು ತಂದು ಅಡ್ಡಿಪಡಿಸುತ್ತಿದ್ದರಿಂದಾಗಿ ದಲಿತರಿಗೆ ದಕ್ಕಬೇಕಾಗಿದ್ದ ಭೂಮಿಯ ಒಡೆತನ ಮತ್ತು ಸಾಗುವಳಿ ಸಮಸ್ಯೆ ಬಗೆಹರಿಯದೆ ಹಾಗೆಯೇ ಮುಂದುವರಿದಿತ್ತು. ದಲಿತರ ಇಂತಹ ಸಮಸ್ಯೆಯು ದಲಿತ ಸಂಘರ್ಷ ಸಮಿತಿಯ ಗಮನಕ್ಕೆ ಬಂದಾಗ ಡಿ.ಜಿ. ಸಾಗರ್ ನೇತೃತ್ವದಲ್ಲಿ ದಲಿತ ಸಂಘರ್ಷ ಸಮಿತಿ ದಲಿತರ ಭೂಮಿಗಾಗಿ ಹೋರಾಟಕ್ಕಿಳಿಯಿತು.

೧೯೮೨ ಜನವರಿ ೧೧ರಂದು ಡಿ.ಜಿ. ಸಾಗರ್ ಅವರ ನೇತೃತ್ವದಲ್ಲಿ ಸಮಿತಿಯು ಬೃಹತ್ ಪ್ರತಿಭಟನಾ ರ್‍ಯಾಲಿಯನ್ನು ಹಮ್ಮಿಕೊಂಡಿತು. ನಂತರ ದಲಿತರಿಗೆ ಭೂ ಒಡೆತನದ ಪಟ್ಟ ದೊರಕಿಸಲು ಚಿಂಚೋಳಿ ತಾಲೂಕಿನ ಕೊಂಡಪಲ್ಲಿ ಗ್ರಾಮದಲ್ಲಿ ೧೯೮೨ ಸೆಪ್ಟೆಂಬರ್ ೨ರಂದು ಹೋರಾಟವನ್ನು ಆರಂಭಿಸಿದರು. ಹೋರಾಟ ಬೃಹತ್ ಮಟ್ಟದಲ್ಲಿ ಮತ್ತು ನಿರಂತರವಾಗಿ ನಡೆದ ಪರಿಣಾಮವಾಗಿ ಇಲ್ಲಿನ ಗ್ರಾಮಗಳ ದಲಿತರಿಗೆ ಭೂಮಿ ಹಂಚಿಕೆಯಾಗಿ ಸಂಬಂದಪಟ್ಟವರಿಗೆ ಭೂಮಿಯ ಪಟ್ಟಾಗಳನ್ನು ಕೂಡ ವಿತರಿಸಲಾಯಿತು."[೨೦] ಕ್ರಮೇಣ ದಲಿತರ ಭೂ ಒಡೆತನಕ್ಕೆ ಸಂಬಂದಪಟ್ಟಂತೆ ತಡೆಯಾಜ್ಞೆಗಳು ಕೂಡ ಕಡಿಮೆಯಾಗತೊಡಗಿದವು. ಅಲ್ಲದೆ ಭೂಹೀನರಿಗೆ ಭೂಮಿ ದೊರಕಿಸಿಕೊಡಲು ಮುಂದಿನ ಭೂಹೋರಾಟಕ್ಕೆ ದಾರಿ ಮಾಡಿಕೊಟ್ಟಿತು.

**೪.೨.೨. ಸಮಕಾಲೀನ ಸಂದರ್ಭದಲ್ಲಿ ದಲಿತರ ಸಮಸ್ಯೆಗಳು ಮತ್ತು ಸ್ಥಿತಿಗತಿಗಳು**

**ಅಸ್ಪೃಶ್ಯತೆಯ ಸಮಸ್ಯೆ**

ಅಸ್ಪೃಶ್ಯತೆಯು ಹಿಂದೂ ಸಮಾಜದ ವರ್ಣವ್ಯವಸ್ಥೆಯಲ್ಲಿರುವ ಒಂದು ಅನಿಷ್ಟ ಪದ್ಧತಿಯಾಗಿದೆ. ಸಮಾಜದಲ್ಲಿನ ಒಂದು ಜಾತಿಯು ಮತ್ತೊಂದು ಜಾತಿಯ ಮೇಲೆ ನಡೆಸಿದ ಮತ್ತು ನಡೆಸುತ್ತಿರುವ ದಬ್ಬಾಳಿಕೆ ಮತ್ತು ಶೋಷಣೆ ಅತಿ ಕ್ರೂರತನದ್ದು ಮತ್ತು ಅಸಹನೀಯವೂ ಆಗಿದೆ. ಮನುಷ್ಯ ಮನುಷ್ಯನನ್ನೇ ದ್ವೇಷಿಸುವ, ಹಿಂಸಿಸುವ ಅಸಹ್ಯಪದ್ಧತಿಗೆ ಸಮಾನವಾದ ಇನ್ನೊಂದು ಪದ್ಧತಿ ಎಲ್ಲೂ ಇಲ್ಲ. ಶತಮಾನಗಳಿಂದ ದಲಿತರನ್ನು ತುಳಿದು ಕೇವಲ ದುಡಿಮೆಗೆ ಸೀಮಿತಗೊಳಿಸಿ ಯಾವ ಆಸ್ತಿಯನ್ನು ಹೊಂದದಂತೆ ಮಾಡಿ ಅವರನ್ನು ಸಮಾಜದಿಂದಲೇ ದೂರ ಇಟ್ಟಿದೆ.

ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಪರಿಸ್ಥಿತಿಯನ್ನು ವಿಶ್ಲೇಷಣೆ ಮಾಡಿ ನೋಡಿದರೆ, ಜಾತಿವ್ಯವಸ್ಥೆ ಇನ್ನೂ ಜೀವಂತವಾಗಿರುವ ಇಲ್ಲಿ ಅತಿ ಹೆಚ್ಚು ಅಸ್ಪೃಶ್ಯತೆ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಜಮೀನ್ದಾರಿಕೆ ವ್ಯವಸ್ಥೆ ಪ್ರಬಲವಾಗಿರುವ ಈ ಜಿಲ್ಲೆಯಲ್ಲಿ ಭೂರಹಿತ ದಲಿತರು ಅವರ ಆಶ್ರಯದಲ್ಲಿ ಇರುವುದರಿಂದ ಅವರು ಗುಲಾಮರಾಗಿದ್ದಾರೆ. ಇಂದಿಗೂ ಇಲ್ಲಿನ ಎಷ್ಟೋ ಹಳ್ಳಿಗಳಲ್ಲಿ ದಲಿತರು ಊರ ದೇವಾಲಯಗಳ ಒಳಗೆ ಹೊಗುವಂತಿಲ್ಲ, ಮೇಲ್ವರ್ಗದ ಮನೆಗಳ ಒಳಗೆ ಹೋಗುವಂತಿಲ್ಲ, ಮದುವೆ ಸಮಾರಂಭಗಳಲ್ಲಿ ಸಾಮೂಹಿಕ ಭೋಜನ ಮಾಡುವಂತಿಲ್ಲ ಎನ್ನುವ ಅನೇಕ ನಿರ್ಬಂಧಗಳಿವೆ. ಒಂದು ವೇಳೆ ಇದನ್ನು ಉಲ್ಲಂಘಿಸಿದರೆ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುವ ಭೀತಿ ಇದೆ. ಇಂತಹ ಪರಿಸ್ಥಿತಿ ಇಂದಿಗೂ ಕೂಡ ಯಾದಗಿರಿ ಜಿಲ್ಲೆಯಲ್ಲಿ ಕಂಡು ಬರುತ್ತದೆ. ಕೆಲವು ಗ್ರಾಮಗಳಲ್ಲಿ ಭೂಮಾಲೀಕರು ದಲಿತರು ಒಬ್ಬರಿಗೊಬ್ಬರು ಹೊಂದಿಕೊಂಡು ಅನುಕೂಲ ಸಿಂಧು ರೀತಿ ಬಾಳುವ ವ್ಯವಸ್ಥೆಯೂ ಕಂಡುಬರುತ್ತದೆ.

## ದಲಿತರ ಮೇಲಿನ ದೌರ್ಜನ್ಯ

ದಲಿತರು ಸ್ವಾಭಿಮಾನದ ಬದುಕನ್ನು ಕಟ್ಟಿಕೊಳ್ಳಲು ಅವಕಾಶಕ್ಕಾಗಿ ಒತ್ತಾಯ ಮಾಡಿದಾಗ, ತಾರತಮ್ಯವಾದಿ ಆಚರಣೆಗಳ ವಿರುದ್ಧ ಆಕ್ರೋಶಗೊಂಡಾಗ ಅಂತಹ ಬೇಡಿಕೆಗಳನ್ನು ಹತ್ತಿಕ್ಕಲು ದೌರ್ಜನ್ಯಗಳು ನಡೆಯುವವು. ಆರ್ಥಿಕವಾಗಿ ಹಿಂದುಳಿದಿರುವ ದಲಿತರು ಭೂಮಿಗಾಗಿ, ವಸತಿಗಾಗಿ, ಕೂಲಿಗಾಗಿ ಸಮಾನ ವೇತನಕ್ಕಾಗಿ ಹೋರಾಟ ಮಾಡಿದಾಗ ಅವರ ಹಕ್ಕುಗಳನ್ನು ಹತ್ತಿಕ್ಕಲು ದೌರ್ಜನ್ಯಗಳು ಜರುಗುವವು. ದಲಿತರ ಮೇಲಿನ ದೌರ್ಜನ್ಯಗಳ ಸ್ವರೂಪವು ದೇಶದ ಎಲ್ಲ ಭಾಗಗಳಲ್ಲೂ ಏಕರೂಪಿಯಾಗಿಲ್ಲ. ದೇಶದ ಕೆಲವು ಪ್ರಾಂತ್ಯಗಳಲ್ಲಿ ಅವು ಕಡಿಮೆ ಇದ್ದರೆ, ಬಡತನ, ಅಜ್ಞಾನ, ಹಿಂದುಳಿದಿರುವಿಕೆ, ಜಮೀನ್ದಾರಿಕೆ, ಊಳಿಗಮಾನ್ಯ ಇರುವಂತಹ ಯಾದಗಿರಿ ಜಿಲ್ಲೆಯಲ್ಲಿ ಹೆಚ್ಚು ಇವೆ. ಇಲ್ಲಿ ದಲಿತರ ಮೇಲಿನ ದೌರ್ಜನ್ಯ ಹಿಂಸೆ ಕೇವಲ ಕಾನೂನು ಸುವ್ಯವಸ್ಥೆಯ ಪ್ರಶ್ನೆಯಾಗಿಲ್ಲ, ಬದಲಾಗಿ ಇಲ್ಲಿನ ಸಮಾಜದ ಮೇಲ್‌ಜಾತಿಯವರ ನಂಬಿಕೆ ಮನೋಭಾವ ಹಾಗೂ ವಿಚಾರಗಳಲ್ಲಿ ದಲಿತರು ಅಪವಿತ್ರರು, ಅಶುದ್ಧರು, ಅವರಿರುವುದು ಗುಲಾಮಗಿರಿಗೆ, ಜೀತಕ್ಕೆ ಎನ್ನುವ ಕಲ್ಪನೆಯಿದೆ. ಹೀಗಾಗಿ ಇವರು ನಡೆಸಿಕೊಂಡು ಬರುತ್ತಿರುವ ಕೃತ್ಯಗಳು ಹಿಂಸೆ ದೌರ್ಜನ್ಯ ಎಂದು ಪರಿಗಣಿಸುವುದಿಲ್ಲ. ಹಾಗಾಗಿಯೇ ದಲಿತರ ಮೇಲಿನ ದೌರ್ಜನ್ಯ ಹಾಗೂ ಅಸ್ಪೃಶ್ಯತೆಯಂತಹ ಕ್ರೂರ ಆಚರಣೆಯ ಮೂಲದಲ್ಲಿ ಧಾರ್ಮಿಕ ಸೂತ್ರಗಳು ಕೆಲಸ ಮಾಡುತ್ತಿರುವುದನ್ನು ತಳ್ಳಿ ಹಾಕುವಂತಿಲ್ಲ.

## ದಲಿತರ ಎಡಗೈ ಬಲಗೈ ವಿವಾದ

ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕದ ದಲಿತರ ಸಂಬಂಧಗಳು ಎಡಗೈ ಮತ್ತು ಬಲಗೈ ಗುಂಪುಗಳ ನಡುವೆ ನಡೆಯುತ್ತಿರುವ ವಿರಸ ಮತ್ತು ವಾಗ್ವಾದಗಳು ತೀವ್ರಗೊಂಡಿರುವುದು ಕಂಡುಬರುತ್ತದೆ. ಮಾದಿಗ ಜನಾಂಗದವರು ಹೇಳುವುದೇನೆಂದರೆ ತಮ್ಮ ಎಲ್ಲಾ ಮೀಸಲಾತಿ ಸೌಲಭ್ಯಗಳನ್ನು ಹೊಲೆಯ ಜನಾಂಗದವರೆ ಅನುಭವಿಸಿದ್ದಾರೆ ಹಾಗೂ ಅನುಭವಿಸುತ್ತಿದ್ದಾರೆ ಎನ್ನುವ ಆಪಾದನೆಯನ್ನು ಹೊಲೆಯರ ಮೇಲೆ ಹೊರಿಸುತ್ತಾರೆ. ಮಾದಿಗ ಜನಾಂಗದವರ ದೃಷ್ಟಿಯಲ್ಲಿ ಇದು ಸತ್ಯ ಎನಿಸಿದರೂ ಸಹ ಕ್ಷೇತ್ರಕಾರ್ಯದ ಅಧ್ಯಯನ ಫಲಿತ ಹಾಗೂ

ವಾಸ್ತವದ ವಿಷಯವೇ ಭಿನ್ನವಾಗಿರುತ್ತದೆ. "ಕರ್ನಾಟಕದ ಸಂದರ್ಭದಲ್ಲಿ ನೋಡುವುದಾದರೆ ಹೊಲೆಯ ಜನಾಂಗದವರು ಬೇರೆ ಉಪವೃತ್ತಿಗಳಿಲ್ಲದೆ, ಕೇವಲ ಕೃಷಿಯ ಕೆಲಸವನ್ನೇ ಆಧರಿಸಿ, ಜಮೀನ್ದಾರರ, ಬಂಡವಾಳಶಾಹಿಗಳ, ಊಳಿಗಮಾನ್ಯಶಾಹಿಗಳ, ಸವರ್ಣೀಯರ ಮನೆಗಳಲ್ಲಿ ಕೃಷಿ ಜೀತಗಾರಿಕೆಗಳಲ್ಲಿ ತೊಡಗಿದರು. ಇದನ್ನು ಹೊರತುಪಡಿಸಿ ಬೇರೆ ಯಾವುದೇ ವೃತ್ತಿಯು ಅವರಿಗೆ ತಿಳಿದಿರಲಿಲ್ಲ. ಆದರೆ ಮಾದಿಗ ಜನಾಂಗದ ಇತಿಹಾಸವನ್ನು ಅವಲೋಕಿಸಿದರೆ ಅವರಿಗೆ ಅವರದೇ ಆದ ವಂಶಪಾರಂಪರಿಕವಾದ ಚರ್ಮ ಆಧಾರಿತವಾದ ಕುಲಕಸುಬು ಉಳಿದುಕೊಂಡು ಬಂದಿತ್ತು.

ಆದರೆ ಮೇಲೆ ತಿಳಿಸಿದಂತೆ ಕೃಷಿ ಮತ್ತು ಜೀತಗಾರಿಕೆಯಲ್ಲಿ ತಲ್ಲೀನರಾಗಿದ್ದ ಹೊಲೆಯ ಸಮುದಾಯ ಕಾಲಕ್ರಮೇಣ ಬ್ರಿಟಿಷ್ ಸರ್ಕಾರದ ಮತ್ತು ಮೈಸೂರು ಒಡೆಯರ ಸರ್ಕಾರಗಳು ಮೀಸಲಾತಿ ಆಧಾರಿತ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತಂದಾಗ ಆಯಾ ಪ್ರದೇಶದಲ್ಲಿ ಹೊಲೆಯ ಸಮುದಾಯದವರು ಹೆಚ್ಚಿನ ಪ್ರಮಾಣದಲ್ಲಿ ಶಾಲೆಗೆ ಪ್ರವೇಶ ಪಡೆದರು. ಸಹಜವಾಗಿ ಇಂತಹ ಭಾಗದಲ್ಲಿ ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರಾಗಿ ಹೊಲೆಯ ಸಮುದಾಯ ಹೊರಹೊಮ್ಮಿತು. ಹೀಗಾಗಿ ಸಹಜವಾಗಿಯೇ ಸರ್ಕಾರಿ ನೌಕರಿಗಳು ಅವರಿಗೆ ಲಭ್ಯವಾದವು ಎನ್ನುವುದು. ಮೇಲಿನ ಕಾರಣಗಳನ್ನು, ಶೈಕ್ಷಣಿಕ ದೃಷ್ಟಿಕೋನವನ್ನು ಆಧಾರವಾಗಿಟ್ಟುಕೊಂಡು ಸಾಮಾಜಿಕ ಸ್ಥಾನಮಾನವನ್ನು ನೊಡದಿದ್ದರೆ ಎಡಗೈ ಮತ್ತು ಬಲಗೈ ಸಮಸ್ಯೆಗೆ ಉತ್ತರ ಹುಡುಕುವುದು ಕಷ್ಟ. ಈ ವಿಷಯದಲ್ಲಿ ಸ್ಪಷ್ಟವಾಗಿ ಗಮನಿಸಬಹುದಾದ ಅಂಶವೆಂದರೆ ಎಡಗೈ ಮತ್ತು ಬಲಗೈ ಸಮುದಾಯದವರು ಯಾವುದೇ ರೀತಿಯ ವಿವಾಹ ಸಂಬಂಧವನ್ನು ಬೆಳೆಸಿರುವುದು ವಿರಳ.

ಹಾಗೆಯೇ ಎರಡೂ ಸಮುದಾಯಗಳು ಭಾರತದ ಸಾಮಾಜಿಕ ರಚನೆಯಲ್ಲಿ ಅಸ್ಪೃಶ್ಯ ಸಮುದಾಯವಾಗಿಯೇ ಗುರುತಿಸಿಕೊಂಡಿವೆ. ಇಂತಹ ಜಾತಿ ಅಸಮಾನತೆ ವಿರುದ್ಧ ಒಗ್ಗಟ್ಟಾಗಿ ಹೋರಾಡಿ ನ್ಯಾಯ ಪಡೆಯುವ ಯೋಚನೆಯನ್ನು ಮಾಡದೆ, ರಾಜಕೀಯ ಪಕ್ಷಗಳ, ರಾಜಕೀಯ ಮುಖಂಡರ ದಾಳಕ್ಕೆ ಬಲಿಯಾಗಿ ಮತ್ತೆ ತಮ್ಮ ಸಾಂಸ್ಕೃತಿಕ ವಿಷಯ ಕಿತ್ತಾಟದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದು ದಲಿತ ಸಮಾಜದ ಪರಿವರ್ತನೆ ದೃಷ್ಟಿಯಿಂದ ಹಿತಕರವಲ್ಲ. ಪ್ರಸ್ತುತ ಎಡಗೈ ಮತ್ತು ಬಲಗೈ ವಿವಾದವು ಯಾವ ಹಂತವನ್ನು ಮುಟ್ಟಿದೆ ಎಂದರೆ ಮಾದಿಗರು ಪ್ರತ್ಯೇಕ ಒಳಮೀಸಲಾತಿಗಾಗಿ ಬೇಡಿಕೆ ಸಲ್ಲಿಸಿ ಹೋರಾಟಕ್ಕಿಳಿದಿದ್ದಾರೆ.

**ದಲಿತ ಸಂಘಟನೆಯಲ್ಲಿ ಒಡಕು**

೧೯೭೪ರಲ್ಲಿ ಸ್ಥಾಪನೆಯಾದ ದಲಿತ ಸಂಘರ್ಷ ಸಮಿತಿ ಸುಮಾರು ಎರಡು ದಶಕಗಳ ಕಾಲ ಅತ್ಯಂತ ಪ್ರಭಾವಶಾಲಿ ಸಂಘಟನೆಯಾಗಿ ದಲಿತ ಚಳುವಳಿಯನ್ನು ಮುನ್ನಡೆಸಿತು. ಕರ್ನಾಟಕದಲ್ಲಿ ಅದರಲ್ಲೂ ಯಾದಗಿರಿ ಜಿಲ್ಲೆಯಲ್ಲಿ ದಲಿತರಲ್ಲಿ ತೀವ್ರವಾದ ಸ್ವಾಭಿಮಾನ ಮತ್ತು ದಲಿತ ಪ್ರಜ್ಞೆ ಮೂಡಿಸಿ, ದಲಿತರು ಜಾಗೃತರಾಗುವಂತೆ ಮಾಡಿ ಅವರ ಬದುಕಿನಲ್ಲಿ ಮಹತ್ತರ ಬದಲಾವಣೆಗಳನ್ನುಂಟು ಮಾಡುವುದರಲ್ಲಿ ಯಶಸ್ವಿಯಾಯಿತು."[೫] ಆದರೆ ಇಂತಹ ಪ್ರಬಲ ಸಂಘಟನೆ ಎಂಬತ್ತರ ದಶಕದ ಕೊನೆಯಲ್ಲಿ ಇಬ್ಭಾಗವಾಗಿ ಒಡೆದು ಹೋಯಿತು. ನಂತರ

ಕಾಲಕ್ರಮೇಣ ವ್ಯಕ್ತಿ ತತ್ವಕ್ಕೆ ಒಳಗಾಗಿ ಹಲವು ಸಂಘಟನೆಗಳಾಗಿ ಒಡೆದು ಛಿದ್ರವಾಯಿತು. ದಲಿತ ಸಂಘರ್ಷ ಸಮಿತಿಯ ತತ್ವಾಧಾರಿತ ಹೋರಾಟ ಕ್ಷೀಣಿಸಿ ವಿವಿಧ ಬಣಗಳಾಗಿ ಒಡೆದು ದಲಿತ ಚಳವಳಿಯ ಭಿನ್ನ ಮಾರ್ಗವು ಪ್ರಸ್ತುತ ಸಂದರ್ಭದ ದಲಿತರ ದೊಡ್ಡ ಸಮಸ್ಯೆಯಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ದಲಿತ ಸಂಘಟನೆಗಳು ವಿವಿಧ ಬಣಗಳಾಗಿ ಒಡೆದು ಹೋಗಿ ದಲಿತರ ಸಂಘಟನೆಗೆ ಹೋರಾಟಕ್ಕೆ ಬಲವಾದ ಪೆಟ್ಟು ಬಿದ್ದಿದೆ. ಉದಾಹರಣೆಗೆ ಯಾದಗಿರಿ ಜಿಲ್ಲೆಯಲ್ಲಿ,

೧. ದಲಿತ ಸಂಘರ್ಷ ಸಮಿತಿ–ಸಾಗರ್ ಬಣ–ಮಲ್ಲಿಕಾರ್ಜುನ ಮಲ್ಲಪ್ಪ ಕ್ರಾಂತಿ(ಜಿಲ್ಲಾ ಸಂಚಾಲಕರು)

೨. ದಲಿತ ಸಂಘರ್ಷ ಸಮಿತಿ–ಶಂಕರ್‌ಬಣ–ರಾಮಣ್ಣ ಕಲ್ಲದೇವನಹಳ್ಳಿ(ಜಿಲ್ಲಾ ಸಂಚಾಲಕರು)

೩. ದಲಿತ ಸಂಘರ್ಷ ಸಮಿತಿ–ನಾಗವರ್ ಬಣ–ಚಂದ್ರ ಚಕ್ರವರ್ತಿ(ಜಿಲ್ಲಾ ಸಂಚಾಲಕರು)

೪. ದಲಿತ ಸಂಘರ್ಷ ಸಮಿತಿ–ಕಲ್ಲೂರ್ ವಾದ–(ಡಾ.ಬಿ.ಆರ್. ಅಂಬೇಡ್ಕರ್) ಬೀಮರಾಯ ಹೊಸಮನಿ(ಜಿಲ್ಲಾ ಸಂಚಾಲಕರು)

೫. ದಲಿತ ಸಂಘರ್ಷ ಸಮಿತಿ–ಭೀಮ ವಾದ–ಭೀಮರಾಯ ಸಿಂದಿಗೇರೆ(ಜಿಲ್ಲಾ ಸಂಚಾಲಕರು)

೬. ದಲಿತ ಸಂಘರ್ಷ ಸಮಿತಿ–ದಲಿತ ಸಂಘರ್ಷ ಸಮಿತಿ ಜಿಲ್ಲಾ ಶಾಖೆ–ಮಾರುತಿ ಜಂಬುಗ(ಜಿಲ್ಲಾ ಸಂಚಾಲಕರು)

೭. ಮಾದಿಗ ದಂಡೋರ ಸಮಿತಿ–ಹನುಮಂತ ಲಿಂಗೇರಿ(ಜಿಲ್ಲಾ ಸಂಚಾಲಕರು)

ಇವುಗಳ ಜೊತೆಗೆ ಸಮತಾ ಸೈನಿಕ ದಳ, ರೈತ ಆಂದೋಲನ ಸಮಿತಿ, ದಲಿತ ಅಭಿವೃದ್ಧಿ ಒಕ್ಕೂಟ, ಹೀಗೆ ಹತ್ತಾರು ಸಂಘಟನೆಗಳು ತಲೆ ಎತ್ತಿವೆ.

ಯಾದಗಿರಿ ಜಿಲ್ಲೆಯಲ್ಲಿ ದಲಿತರು ಮತ್ತು ಹಿಂದುಳಿದವರು ತಮ್ಮ ಮೂಲ ಧರ್ಮವನ್ನು ಬಿಟ್ಟು ಬೇರೆ ಧರ್ಮಗಳಿಗೆ ಮತ ಸ್ವೀಕಾರ ಮಾಡಿ ಗಮನಿಸಿದಾಗ ಅದಕ್ಕೆ ಮೂಲ ಕಾರಣ ಅವರ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಹಾಗೂ ಅವರು ಅನುಭವಿಸುತ್ತಿರುವ ಅಭದ್ರತೆ ಮತ್ತು ಕೀಳರಿಮೆಯಾಗಿದೆ. ಯಾದಗಿರಿ ಜಿಲ್ಲೆಯಲ್ಲಿ ಮಂತಾಂತರ ಪ್ರಕ್ರಿಯೆಯು ಬಹು ಹಿಂದಿನಿಂದಲೂ ನಡೆದುಬಂದಿದೆ ಹಾಗೂ ಇಂದೂ ಸಹ ಹೆಚ್ಚಾಗಿ ನಡೆಯುತ್ತಿರುವುದು ಕಂಡುಬರುತ್ತಿದೆ. ಇಲ್ಲಿ ದಲಿತರು ಹೆಚ್ಚಾಗಿ ಬೌದ್ಧ ಮತ್ತು ಕ್ರೈಸ್ತಧರ್ಮಕ್ಕೆ ಮತ ಸ್ವೀಕಾರ ಮಾಡುವದನ್ನು ಗಮನಿಸಬಹುದಾಗಿದೆ. ಇವರಲ್ಲಿ ಹೊಲೆಯ ಅಥವಾ ಛಲವಾದಿ ಜನಾಂಗದವರು ಬೌದ್ಧಧರ್ಮದ ಕಡೆಗೆ ಆಕರ್ಷಿತರಾಗಿ ಬೌದ್ಧಧರ್ಮಕ್ಕೆ ಮತಾಂರವಾಗುತ್ತಿದ್ದಾರೆ. ಹಾಗೆಯೇ ಮಾದಿಗರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳುತ್ತಿದ್ದಾರೆ. ಉಳಿದವರು ತಮ್ಮ ಮೂಲ ಮತಕ್ಕೆ ಅಂಟಿಕೊಂಡಿರುವುದು ಕಂಡುಬರುತ್ತದೆ.

ಈ ಜಿಲ್ಲೆಯ ದಲಿತರು ಹೆಚ್ಚಾಗಿ ಬೌದ್ಧ ಧರ್ಮದ ಕಡೆ ಆಕರ್ಷಿತರಾಗಲು ಕಾರಣಗಳನ್ನು ಅವಲೋಕಿಸಿದಾಗ ಡಾ. ಬಿ.ಆರ್. ಅಂಬೇಡ್ಕರ್ ಅವರ ಆದರ್ಶಗಳು, ತತ್ವಗಳು ಹಾಗೂ

ಮಾರ್ಗದರ್ಶನಗಳು ಅವರ ಮೇಲೆ ಬೀರಿರುವ ಪ್ರಭಾವ ಎದ್ದು ಕಾಣುತ್ತದೆ. ಇದರ ಜೊತೆಗೆ ಇತ್ತೀಚೆಗೆ ದಲಿತ ಮುಖಂಡರು ಹಾಗೂ ಪ್ರಭಾವಿ ರಾಜಕಾರಣಿಗಳಾದ ಎಂ. ಮಲ್ಲಿಕಾರ್ಜುನ ಖರ್ಗೆಯವರು ಬೌದ್ಧಧರ್ಮದ ಬಗ್ಗೆ ಕೈಗೊಂಡಿರುವ ಚಟುವಟಿಕೆಗಳು ಹಾಗೂ ದಲಿತರ ಸ್ಥಾನಮಾನಗಳಲ್ಲಿ ಬದಲಾವಣೆ ತರಲು ಇತ್ತೀಚೆಗೆ ಗುಲಬರ್ಗಾದಲ್ಲಿ ಸ್ಥಾಪಿಸಿರುವ 'ಬುದ್ಧ ವಿಹಾರವು' ಅನೇಕ ಬದಲಾವಣೆಗಳಿಗೆ ಕಾರಣವಾಗುತ್ತಿದೆ.

**ಹಳೆ ತಲೆಮಾರಿನ ದಲಿತ ಹೋರಾಟಗಾರರು**

೧. ದೇವೇಂದ್ರ ಹೆಗ್ಡೆ

೨. ಮಲ್ಲಿಕಾರ್ಜುನ ಪೂಜಾರಿ

೩. ನೀಲಕಂಠ ಬಡಿಗೇರ

೪. ಬಾಬುರಾವ್ ಬೂತಾಳ

೫. ಶ್ರೀಶೈಲ ಹೊಸಮನಿ

೬. ಮಾನಯ್ಯ ಗೋಗೆ

೭. ಚಂದ್ರು ಚಕ್ರವರ್ತಿ

೮. ಶರಣಪ್ಪ ಸಂಘರ್ಷ

೯. ಹೊನ್ನಪ್ಪ ರಸ್ತಾಪುರ

೧೦. ಭೀಮರಾಯ ಬೀರನೂರು

೧೧. ಲಿಂಗರಾಜು ಕೋಳೂರು

ಮುಂತಾದವರು ಯಾದಗಿರಿ ಜಿಲ್ಲೆಯ ಹಳೆಯ ತಲೆಮಾರಿನ ದಲಿತ ಹೋರಾಟಗಾರರಾಗಿದ್ದು ಈ ಜಿಲ್ಲೆಯ ದಲಿತ ಹೋರಾಟಗಳಲ್ಲಿ ಪ್ರಮುಖ ಪಾತ್ರ ವಹಿಸಿ, ದಲಿತ ಹೋರಾಟಗಳಿಗೆ ಭದ್ರ ಬುನಾದಿಯನ್ನು ಹಾಕಿಕೊಟ್ಟ ನಾಯಕರಾಗಿದ್ದಾರೆ.

**ಹೊಸ ತಲೆಮಾರಿನ ದಲಿತ ಹೋರಾಟಗಾರರು**

೧. ಭೀಮರಾಯ ಹೊಸಮನಿ

೨. ಶಿವುಕುಮಾರ್ ತಳವಾರ

೩. ಶಿವಪುತ್ರ ಜವಳಿ

೪. ಕನ್ಯಾಕೋಳುರು ಮರೆಪ್ಪ

೫. ಮರೆಪ್ಪ ಜಾಲಿಗಂಜಿ

೬. ರವಿಂದ್ರನಾಥ ಕನ್ಯಾಕೋಳೂರು

೭. ಭೀಮಣ್ಣ ಅಂಚೆಸೂಗೂರು

೮. ಗಾಳ್ಯಪ್ಪ ಪೂಜಾರಿ

೯. ಚಂದ್ರಶೇಖರ್ ದೊಡ್ಡಮನಿ

೧೦.ಮರ್ರೆಪ್ಪ ನಾಟೇಕರ್

೧೧.ವೀರಣ್ಣ ಬಡಿಗೇರ್

ಮುಂತಾದ ನಾಯಕರು ಯಾದಗಿರಿ ಜಿಲ್ಲೆಯ ಹೊಸ ತಲೆಮಾರಿನ ದಲಿತ ಹೋರಾಟಗಾರರಾಗಿದ್ದು, ಹಳೆ ತಲೆಮಾರಿನ ದಲಿತ ಹೋರಾಟಗಾರರು ಹಾಕಿ ಕೊಟ್ಟ ಮಾರ್ಗದಲ್ಲಿ ಈ ಜಿಲ್ಲೆಯಲ್ಲಿ ಹೋರಾಟಗಳನ್ನು ಮಾಡುತ್ತಾ ಇಲ್ಲಿನ ದಲಿತರಿಗೆ ಸರಕಾರದಿಂದ ದೊರೆಯಬೇಕಾದ ಸವಲತ್ತುಗಳನ್ನು ದೊರಕಿಸಿಕೊಡುತ್ತಿದ್ದಾರೆ.

**ದಲಿತರ ಸ್ಥಿತಿಗತಿಗಳು**

ಯಾದಗಿರಿ ಜಿಲ್ಲೆಯಲ್ಲಿ ದಲಿತರ ಪರವಾಗಿ ಶೋಷಣೆಯ ವಿರುದ್ಧವಾಗಿ ಹೋರಾಡುತ್ತಾ ಬಂದ ದಲಿತ ಸಂಘರ್ಷ ಸಮಿತಿಗೆ ತಮ್ಮದೇ ಆದ ಸಮಸ್ಯೆಗಳಿವೆ. ಸ್ವಾರ್ಥ ರಾಜಕಾರಣ, ಆರ್ಥಿಕ ಅಸಮಾನತೆ ಹೆಚ್ಚುತ್ತಿರುವ ಈ ಕಾಲಘಟ್ಟದಲ್ಲಿ ಶೋಷಿತ ವರ್ಗದ ಹಿರಿಯಣ್ಣನಂತಿರುವ ದಲಿತರ ಮುಂದಿರುವ ಸವಾಲು ದೊಡ್ಡದು. ದಲಿತ ಚಳುವಳಿ ತಾನು ಹುಟ್ಟಿದ ಸಂದರ್ಭದಲ್ಲಿ ಯಾವ ರೀತಿಯ ಸವಾಲುಗಳನ್ನು ಎದುರಿಸಬೇಕಿತ್ತೋ ಅದಕ್ಕಿಂತ ಗಂಭೀರ ಸ್ವರೂಪದ ಸಮಸ್ಯೆಗಳನ್ನು ಇಂದು ಎದುರಿಸಬೇಕಾಗಿದೆ. ದಲಿತ ಚಳುವಳಿಯನ್ನು ಒಂದು ನೆಲೆಗಟ್ಟಿನ ಮೇಲೆ ನಿಲ್ಲಿಸಬೇಕಾಗಿದೆ. ಇಂತಹ ಸವಾಲನ್ನು ಎದುರಿಸಲು ದಲಿತ ಸಂಘಟನೆಗಳು ಒಗ್ಗೂಡಬೇಕು ಮತ್ತು ದಲಿತ ಚಳುವಳಿ ಗಟ್ಟಿಯಾಗಿರಬೇಕಿರುವುದು ಅನಿವಾರ್ಯವಾಗಿದೆ.

**೪.೩. ಹಿಂದುಳಿದ ವರ್ಗಗಳ ಚಳುವಳಿ**

ಯಾದಗಿರಿ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳಲ್ಲಿ ಸಮಗ್ರ ಬದಲಾವಣೆಯನ್ನು ತರುವಂತಹ ಹೋರಾಟಗಳು ನಡೆದಿಲ್ಲ. ಕಾಲಕಾಲಕ್ಕೆ ನೇಮಕವಾದ ವಿವಿಧ ಹಿಂದುಳಿದ ವರ್ಗಗಳ ಆಯೋಗಗಳಿಗೆ ಪ್ರತಿಕ್ರಿಯೆಯಾಗಿ ಕೆಲವೊಂದು ಹೇಳಿಕಾ ರೂಪದ ಪ್ರತಿಕ್ರಿಯೆಗಳು ಮಾತ್ರ ಕಂಡು ಬರುತ್ತವೆಯೇ ಹೊರತು, ಸಂಘಟನಾತ್ಮಕ ಪ್ರತಿಕ್ರಿಯೆಗಳಾಗಲಿ, ಹೋರಾಟಗಳಾಗಲಿ ಕಂಡುಬರುವುದಿಲ್ಲ. ಬದಲಾಗಿ ಕರ್ನಾಟಕದಾದ್ಯಂತ ನಡೆದ ಹಿಂದುಳಿದ ವರ್ಗಗಳ ಚಳುವಳಿಗಳ ಹಿನ್ನೆಲೆಯಲ್ಲಿಯೇ, ಇಲ್ಲೂ ಸ್ವಲ್ಪಮಟ್ಟಿಗೆ ಹೋರಾಟಗಳು ನಡೆದಿವೆ. ವಾಸ್ತವವಾಗಿ ಇಲ್ಲಿ ವಿವಿಧ ಉಪಜಾತಿಗಳಿಗೆ ಸೇರಿದ ಮೂಲ ನೆಲೆಯಿಲ್ಲದ, ಅಸಂಘಟಿತರಾಗಿರುವ, ಮೂಲ ಸೌಲಭ್ಯಗಳಿಂದ ವಂಚಿತರಾಗಿರುವ ಸಮುದಾಯಗಳು ಹೆಚ್ಚಿವೆ.

ಕರ್ನಾಟಕದ ಇತರ ಭಾಗಗಳಲ್ಲಾದ ಹಿಂದುಳಿದ ವರ್ಗಗಳ ಚಳುವಳಿಗಳಿಗೂ, ಯಾದಗಿರಿ ಜಿಲ್ಲೆಯ ಹಿಂದುಳಿದ ವರ್ಗಗಳ ಚಳುವಳಿಗಳಿಗೂ ಅಜಗಜಾಂತರ ಅಂತರವಿದೆ. ಇಲ್ಲಿ ಒಂದು ಕಡೆ ಜಾತಿ ಸಂಘರ್ಷ, ಅನಕ್ಷರತೆ, ಬಡತನ, ಸಾಮಾಜಿಕ ಅಸಮಾನತೆ ಕಾಡುತ್ತಿದ್ದರೆ, ಇನ್ನೊಂದೆಡೆ ಸರಕಾರ ಮತ್ತು ಇಲ್ಲಿನ ಜನ ಪ್ರತಿನಿಧಿಗಳ ನಿರ್ಲಕ್ಷ್ಯ ಕಂಡುಬರುತ್ತದೆ. ಹಿಂದುಳಿದ ವರ್ಗಗಳು ಸಂಘಟಿತರಾಗಿ ಸರಕಾರದ ಮೇಲೆ ಒತ್ತಡ ಹೇರುವಲ್ಲಿ ವಿಫಲವಾಗುತ್ತಿವೆ. ಇಂದಿಗೂ

ಈ ಜಿಲ್ಲೆಯಲ್ಲಿ ಅನೇಕ ಹಿಂದುಳಿದ ವರ್ಗಗಳು ಸಂವಿಧಾನಾತ್ಮಕ ಸೌಲಭ್ಯಗಳಿಂದ ವಂಚಿತರಾಗಿ ಹಿಂದುಳಿಯುತ್ತಾ ಸಾಗಿವೆ.

**೪.೩.೧. ಸ್ವಾತಂತ್ರ್ಯೋತ್ತರ ಹಿಂದುಳಿದ ವರ್ಗಗಳ ಚಳುವಳಿಗಳು**

"೧೯ನೇ ಶತಮಾನದಲ್ಲಿ ಮೈಸೂರು ಪ್ರಾಂತ್ಯದಲ್ಲಿ ಬ್ರಿಟಿಷರ ಆಳ್ವಿಕೆಯ ಪರಿಣಾಮವಾಗಿ ಕ್ರೈಸ್ತರ ಶಾಲಾ ಕಾಲೇಜುಗಳು ಸ್ಥಾಪನೆಯಾದವು. ಅವುಗಳಲ್ಲಿ ಬ್ರಾಹ್ಮಣೇತರರೂ ಶಿಕ್ಷಣದ ಸೌಲಭ್ಯ ಪಡೆದು ಅಧಿಕಾರದ ಸ್ಥಾನಗಳನ್ನು ಗಳಿಸಿದರಲ್ಲದೆ ಸಾಮಾಜಿಕ ಸಮಾನತೆಗಾಗಿ ಒತ್ತಾಯ ತಂದರು. ಜೊತೆಗೆ ಹಿಂದುಳಿದ ವರ್ಗಗಳು ಸರ್ಕಾರಿ ಸೇವೆಗಳಿಗೆ ನಿಗದಿಪಡಿಸಿದ ಅರ್ಹತೆಯನ್ನು ಸಡಿಲಿಸಬೇಕೆಂದೂ, ತಮಗೆ ಸರ್ಕಾರಿ ನೌಕರಿಗಳಲ್ಲಿ ಮೀಸಲಾತಿ ಕೊಡಬೇಕೆಂದು ಒತ್ತಾಯಿಸತೊಡಗಿದರು. ಕೊನೆಗೆ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಮೀಸಲಾತಿಗೆ ಒಪ್ಪಿ, ೧೯೧೬ರಲ್ಲಿ ಶೇ. ೨೫ರಷ್ಟು ಸ್ಥಾನಮಾನಗಳನ್ನು ಹಿಂದುಳಿದ ವರ್ಗಗಳಿಗೆ ಮೀಸಲು ನೀಡಿದರು. ೧೯೧೭ರಲ್ಲಿ ಬೆಂಗಳೂರಿನಲ್ಲಿ ಪ್ರಪ್ರಥಮ ಬಾರಿಗೆ ಹಿಂದುಳಿದ ವರ್ಗಗಳ ಸಮಾವೇಶ ಜರುಗಿತು. ಅದೇ ವರ್ಷ ಎಂ. ಬಸವಯ್ಯ ಮತ್ತು ಎಚ್. ಚನ್ನಯ್ಯ ಅವರ ಪ್ರಯತ್ನದಿಂದಾಗಿ ಹಿಂದುಳಿದ ವರ್ಗಗಳ ರಾಜಕೀಯ ಪಕ್ಷವಾದ ಪ್ರಜಾಮಿತ್ರಮಂಡಳಿ ಸ್ಥಾಪನೆಯಾಯಿತು. ಬ್ರಾಹ್ಮಣೇತರ ಸಮುದಾಯಗಳ ಮುಖಂಡರು ೧೯೧೮ರಲ್ಲಿ ಮಹಾರಾಜರನ್ನು ಭೇಟಿ ಮಾಡಿ, ನೌಕರಿ ಮತ್ತು ಸ್ಥಳೀಯ ಸಂಸ್ಥೆಗಳಲ್ಲಿ ಹಿಂದುಳಿದ ವರ್ಗಗಳಿಗೆ ಸಮಾನ ಅವಕಾಶ ಕಲ್ಪಿಸಿಕೊಡಬೇಕೆಂದು ಬಿನ್ನವಿಸಿ ಒತ್ತಾಯ ತಂದರು, ಇದರ ಪರಿಣಾಮವಾಗಿ ಸರ್ಕಾರಿ ಶಾಲೆ ಕಾಲೇಜುಗಳಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರವೇಶ ಮತ್ತು ವಿದ್ಯಾರ್ಥಿ ವೇತನಗಳು ಸಿಗುವಂತಾಯಿತು."[೨೨]

ಆದರೆ ಇದೇ ಸಮಯದಲ್ಲಿ ಮೈಸೂರು ಪ್ರಾಂತ್ಯಕ್ಕೆ ಹೋಲಿಸಿದರೆ ಹೈದರಾಬಾದ್ ಕರ್ನಾಟಕದ ಸ್ಥಿತಿಗತಿ ಬೇರೆಯಾಗಿತ್ತು. ಹೈದರಾಬಾದ್ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದ ಯಾದಗಿರಿ ಜಿಲ್ಲೆಯಲ್ಲಿ ಇಂತಹ ಚಳುವಳಿಗೆ ಅವಕಾಶವೇ ಇರಲಿಲ್ಲ. ೧೯೪೭ ಆಗಸ್ಟ್ ೧೫ರಂದು ಇಡೀ ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಇಲ್ಲಿನ ಜನ ಮಾತ್ರ ನಿಜಾಮನ ಆಡಳಿತದಿಂದ ವಿಮೋಚನೆ ಆಗಲು, ನಿಜಾಮರ ವಿರುದ್ಧ ಹೋರಾಟಕ್ಕಿಳಿದಿದ್ದರು. ಹೀಗಾಗಿ ಈ ಭಾಗದಲ್ಲಿ ಇಂತಹ ಚಳುವಳಿಗಳು ಆರಂಭವಾಗಲು ಸಾಧ್ಯವೇ ಇರಲಿಲ್ಲ. ಇತ್ತೀಚೆಗೆ ಅಂದರೆ ೮೦ ಮತ್ತು ೯೦ರ ದಶಕದಲ್ಲಿ ಇಲ್ಲಿಯ ಕೆಲವು ಸಂಘಟನೆಗಳು, ನಾಯಕರು, ವಿವಿಧ ಆಯೋಗಗಳ ವರದಿಗೆ ಪ್ರತಿಕ್ರಿಯೆ ನೀಡುತ್ತಾ, ತಮ್ಮ ಸಮುದಾಯಗಳ ಪರವಾಗಿ ಹೋರಾಟ ಆರಂಭಿಸಿದರು. ಹೀಗಾಗಿ ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದ ಹಿಂದುಳಿದ ವರ್ಗಗಳಿಗೆ ಸೌಲಭ್ಯ ಒದಗಿಸಲು ನೇಮಕವಾದ ಆಯೋಗಗಳಾವುವು ಮತ್ತು ಅವುಗಳ ವರದಿಯ ಅಂಶಗಳೇನು ಹಾಗೂ ವರದಿಯಿಂದ ಯಾದಗಿರಿ ಜಿಲ್ಲೆಯ ಮೇಲಾದ ಪ್ರಭಾವ ಎಂತಹದು ಎನ್ನುವುದನ್ನು ಅಧ್ಯಯನ ಮಾಡುವುದು ಅವಶ್ಯಕವಾಗಿದೆ.

**ಡಾ. ಆರ್. ನಾಗನಗೌಡ ಸಮಿತಿ-೧೯೬೦**

ಹಿಂದುಳಿದ ವರ್ಗಗಳ ಸ್ಥಿತಿಗತಿಗಳ ಕುರಿತು ಅಧ್ಯಯನ ಮಾಡಲು ಹಾಗೂ ಆ ವರ್ಗಗಳಿಗೆ ಸಂವಿಧಾನಾತ್ಮಕ ಮೀಸಲಾತಿ ಸೌಲಭ್ಯ ಒದಗಿಸಲು ಸರಕಾರದಿಂದ ನೇಮಕವಾದ

ಆರಂಭದ ಆಯೋಗಗಳಲ್ಲಿ ನಾಗನಗೌಡ ಸಮಿತಿ ಪ್ರಮುಖವಾದುದಾಗಿದೆ. "ಕರ್ನಾಟಕದ ಆಗಿನ ಮುಖ್ಯಮಂತ್ರಿಗಳಾಗಿದ್ದ ಎಸ್. ನಿಜಲಿಂಗಪ್ಪ ಅವರು ೧೯೬೦ ಜನವರಿ ತಿಂಗಳಲ್ಲಿ ಡಾ. ಆರ್. ನಾಗನಗೌಡ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ನೇಮಿಸಿದರು. ಇದನ್ನು 'ಮೈಸೂರು ಹಿಂದುಳಿದ ವರ್ಗಗಳ ಸಮಿತಿ' ಎಂದು ಕರೆಯಲಾಯಿತು. ಸಮಿತಿಯ ಕಾರ್ಯವ್ಯಾಪ್ತಿ ಏನಾಗಿತ್ತೆಂದರೆ ಸರಕಾರವು ರಾಜ್ಯದ ಜನತೆಯ ಯಾವ ವರ್ಗ ಮತ್ತು ಜಾತಿ ಪಂಗಡದವರನ್ನು ಹಿಂದುಳಿದವರು ಎಂಬುದಾಗಿ ಪರಿಗಣಿಸಬೇಕು, ಹೀಗೆ ಪರಿಗಣಿಸಲು ಯಾವ ಮಾನದಂಡವನ್ನು ಅನುಸರಿಸಬೇಕು ಎಂಬುದನ್ನು ಸೂಚಿಸಬೇಕಿತ್ತು. ಇಂತಹ ವರ್ಗದವರಿಗೆ ಸಂಸ್ಥೆಗಳಿಗೆ ಪ್ರವೇಶವನ್ನು ಹಾಗೂ ಸರ್ಕಾರಿ ಹುದ್ದೆಗಳಿಗೆ ಆಯ್ಕೆಯನ್ನು ಮತ್ತು ನಿಯಂತ್ರಿಸುವ ರೀತಿಯನ್ನು ಯಾವ ರೀತಿ ಮಾಡಬೇಕೆಂದು ಸರ್ಕಾರಕ್ಕೆ ಸೂಚಿಸಬೇಕೆಂದು ತಿಳಿಸಲಾಯಿತು.

ಸಮಿತಿಯು ೧೯೬೦ರ ಫೆಬ್ರವರಿ ತಿಂಗಳಲ್ಲಿ ತನ್ನ ಹಂಗಾಮಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು. ಆ ವರದಿಯ ಪ್ರಕಾರ ಜಾತಿಗಳ, ಸಮುದಾಯಗಳ ಆಧಾರದ ಮೇಲೆ ಒಂದು ಸಮುದಾಯದ ಸಾಕ್ಷರತಾ ಪ್ರಮಾಣ ಮಟ್ಟ ಮತ್ತು ಸರ್ಕಾರಿ ಸೇವೆಯಲ್ಲಿ ಅದರ ಪ್ರಾತಿನಿಧ್ಯದ ಶೇಕಡವಾರು ಪ್ರಮಾಣದ ಮೇಲೆ ಹಿಂದುಳಿದಿರುವಿಕೆಯನ್ನು ನಿರ್ಧರಿಸಬೇಕು ಎಂಬುದಾಗಿ ತಿಳಿಸಿತು. ನಾಗನಗೌಡ ಸಮಿತಿಯ ಶಿಫಾರಸ್ಸುಗಳನ್ನು ರಾಜ್ಯ ಸರ್ಕಾರ ಒಪ್ಪಿ ಸೂಕ್ತ ಆಜ್ಞೆಯ ಮೂಲಕ ೧೯೬೨ರಲ್ಲಿ ಅವುಗಳನ್ನು ಜಾರಿಗೆ ತಂದಿತು. ಆದರೆ ಸರ್ವೋಚ್ಚ ನ್ಯಾಯಾಲಯವು ಹಿಂದುಳಿದಿರುವಿಕೆಯನ್ನು ನಿರ್ಧರಿಸುವಲ್ಲಿ ಕೇವಲ ಜಾತಿಯೊಂದನ್ನೇ ಮಾನದಂಡವನ್ನಾಗಿ ಬಳಸಿರುವ ಕಾರಣ, ಶಿಫಾರಸ್ಸು ಮಾಡಲಾದ ಮೀಸಲಾತಿ ಪ್ರಮಾಣ ಹೆಚ್ಚಿರುವುದಾಗಿ ಅಭಿಪ್ರಾಯಪಟ್ಟು ಸರ್ಕಾರಿ ಆಜ್ಞೆಯನ್ನು ರದ್ದು ಪಡಿಸಿತು ಮತ್ತು ವಿಶೇಷ ಸವಲತ್ತು ಶೇ. ೫೦ಕ್ಕಿಂತ ಕಡಿಮೆ ಇರಬೇಕು ಎಂಬುದನ್ನು ಆದೇಶಿಸಿತು."[೨೩]

## ಶ್ರೀ ಎಲ್.ಜಿ. ಹಾವನೂರು ಆಯೋಗ-೧೯೭೨

"೧೯೬೨ರಲ್ಲಿ ನಾಗಗೌಡ ಸಮಿತಿ ವರದಿಯಂತೆ ಜಾರಿಗೆ ಬಂದ ಮೀಸಲಾತಿ ಕಾನೂನನ್ನು ಶ್ರೇಷ್ಠ ನ್ಯಾಯಾಲಯ ೧೯೬೩ರಲ್ಲಿ ಅನೂರ್ಜಿತಗೊಳಿಸಿತು ಹಾಗೂ ೧೯೬೩ರಲ್ಲಿ ಹೊರಡಿಸಿದ ಸರ್ಕಾರಿ ಆಜ್ಞೆಯೂ ಕರ್ನಾಟಕದ ಉಚ್ಚ ನ್ಯಾಯಾಲಯದಲ್ಲಿ ನಿಲ್ಲಲಿಲ್ಲ. ಇದರ ಜೊತೆಗೆ ಇಲ್ಲಿಯವರೆಗೆ ಹಿಂದುಳಿದಿರುವಿಕೆಯನ್ನು ನಿರ್ಧರಿಸಲು ಮಾನದಂಡವಾಗಿದ್ದ ಉದ್ಯೋಗ ಮತ್ತು ವರಮಾನದ ಆಧಾರಿತ ಪ್ರಮಾಣದಿಂದಾಗಿ ಅನೇಕರು ಅತೃಪ್ತರಾಗಿದ್ದರು. ಅಲ್ಲದೇ, ಅಸಮಾನಗೊಂಡಿದ್ದ ವರ್ಗದವರು ಪದೇ ಪದೇ ಸರಕಾರಕ್ಕೆ ಬೇಡಿಕೆ ಮಂಡಿಸುತ್ತಿದ್ದರು. ನಂತರ ೧೯೭೨ರಲ್ಲಿ ರಾಜ್ಯದಲ್ಲಿ ಮೊಟ್ಟಮೊದಲ ಬಾರಿಗೆ ಲಿಂಗಾಯತೇತರ ಹಾಗೂ ಒಕ್ಕಲಿಗರೇತರ ವರ್ಗಕ್ಕೆ ಸೇರಿದ ಡಿ. ದೇವರಾಜ ಅರಸ್ ಅವರು ರಾಜ್ಯದ ಮುಖ್ಯಮಂತ್ರಿಯಾದರು. ಪರಿಣಾಮವಾಗಿ ಸರ್ಕಾರವು ೧೯೭೨ರಲ್ಲಿ ನ್ಯಾಯವಾದಿ ಎಲ್.ಜಿ. ಹಾವನೂರ ಅವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಹಿಂದುಳಿದ ವರ್ಗದ ಆಯೋಗವನ್ನು ರಚಿಸಿತು. ಹಾವನೂರ ಆಯೋಗ ಸುದೀರ್ಘ ಅಧ್ಯಯನ ನಡೆಸಿ ಅನೇಕ ಸಂಪುಟಗಳ ಭಾರಿ ಗಾತ್ರದ ವರದಿಯನ್ನು ಸಿದ್ಧಪಡಿಸಿ ೧೯೭೫ರಲ್ಲಿ ಸರ್ಕಾರಕ್ಕೆ ಸಲ್ಲಿಸಿತು.

ಹಾವನೂರ ಆಯೋಗವು ಹಿಂದುಳಿದ ವರ್ಗಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿತು. ಅವುಗಳೆಂದರೆ ಹಿಂದುಳಿದ ಸಮುದಾಯಗಳು, ಹಿಂದುಳಿದ ಜಾತಿಗಳು, ಹಿಂದುಳಿದ ಬುಡಕಟ್ಟುಗಳು. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೪ರಷ್ಟು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜೊತೆಗೆ ಶೇ. ೪೪.೫೨ರಷ್ಟು ಜನಸಂಖ್ಯೆಯನ್ನು ಇತರ ಹಿಂದುಳಿದ ವರ್ಗಗಳೆಂದು ಆಯೋಗ ನಿರ್ಧರಿಸಿತು."[೨೪] ಹೀಗೆ ದೇವರಾಜ ಅರಸು ಅವರ ಆಡಳಿತ ಅವಧಿಯಲ್ಲಿ ಹಿಂದುಳಿದ ವರ್ಗಗಳ ಸಂಘಟನೆ ರಾಜಕೀಯವಾಗಿಯೂ ಬಹಳ ಪ್ರಬಲವಾಗಿ ಬೆಳೆಯಿತು. ಮುಂದೆ ವರದಿಯ ವೈಜ್ಞಾನಿಕತೆಯನ್ನು ನ್ಯಾಯಾಲಯದಲ್ಲಿ ಪ್ರಶ್ನಿಸಲಾಯಿತು. ಮೀಸಲಾತಿಯ ಸಮಗ್ರ ವಿಷಯವನ್ನು ಪುನಃ ನಿರ್ಧರಿಸುವುದಕ್ಕೆ ಕ್ರಮಗಳನ್ನು ಕೈಗೊಳ್ಳಬೇಕೆಂದು ಆದೇಶಿಸಿತು. ಇದರಿಂದಾಗಿ ಸರಕಾರಕ್ಕೆ ಹೊಸ ಆಯೋಗವನ್ನು ನೇಮಿಸುವ ಅನಿವಾರ್ಯತೆ ಎದುರಾಗಿ ಶ್ರೀ ಟಿ. ವೆಂಕಟಸ್ವಾಮಿ ಆಯೋಗವನ್ನು ನೇಮಿಸಲು ಕಾರಣವಾಯಿತು.

**ಶ್ರೀ ಟಿ. ವೆಂಕಟಸ್ವಾಮಿ ಆಯೋಗ-೧೯೮೩**

"೧೮ ಏಪ್ರಿಲ್ ೧೯೮೩ರಂದು ಟಿ. ವೆಂಕಟಸ್ವಾಮಿ ಅವರ ನೇತೃತ್ವದಲ್ಲಿ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಲಾಯಿತು. ಆಯೋಗವು ವಿವಿಧ ಜಾತಿಗಳ ಸಾಮಾಜಿಕ, ಆರ್ಥಿಕ ಸ್ಥಿತಿಗಳ ಬಗ್ಗೆ ಅಂಕಿ ಅಂಶಗಳನ್ನು ಸಂಗ್ರಹಿಸಲು ಬಹುದೊಡ್ಡ ಸಮೀಕ್ಷೆಯನ್ನು ಹಮ್ಮಿಕೊಂಡಿತು. ಸುಮಾರು ೬,೦೩೨,೬೭೩ ಕುಟುಂಬಗಳನ್ನೊಳಗೊಂಡಂತೆ ೨ ಕೋಟಿ ೬೧ ಲಕ್ಷ ಜನರ ಬಗ್ಗೆ ಆಯೋಗವು ಅಂಕಿ ಅಂಶಗಳನ್ನು ಸಂಗ್ರಹಿಸಿತು. ಆಯೋಗ ತನ್ನ ಸಮೀಕ್ಷೆ ಆಧಾರದ ಮೇಲೆ ಕೇವಲ ಶೇ. ೩೩ರಷ್ಟು ಜನಸಂಖ್ಯೆಯನ್ನು ಮಾತ್ರ ಇತರ ಹಿಂದುಳಿದ ಜಾತಿ ಮತ್ತು ಹಿಂದುಳಿದ ಬುಡಕಟ್ಟುಗಳೆಂಬ ಮೂರು ವಿಭಾಗಗಳಿಗೆ ಬದಲಾಗಿ ಎ.ಬಿ.ಸಿ.ಡಿ. ಎಂಬ ನಾಲ್ಕು ಸಮೂಹಗಳಾಗಿ ವಿಭಾಗಿಸಿತು. ಸಂಖ್ಯಾತ್ಮಕವಾಗಿ ಬೃಹತ್ ಪ್ರಮಾಣದಲ್ಲಿದ್ದ, ರಾಜಕೀಯವಾಗಿ ಪ್ರಬಲರಾಗಿದ್ದ, ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದ ಒಕ್ಕಲಿಗರನ್ನು ಇತರ ಹಿಂದುಳಿದ ವರ್ಗಗಳ ಪಟ್ಟಿಗೆ ಸೇರಿಸದೇ ಕೈಬಿಟ್ಟಿತು. ಹೀಗೆ ಅನೇಕ ಜಾತಿಗಳನ್ನು ಮಾನ್ಯ ಮಾಡದೆ ಆಯೋಗವು ಪ್ರಚಲಿತ ಶೇ. ೪೯ರಷ್ಟು ಮೀಸಲಾತಿಗೆ ಬದಲಾಗಿ ಶೇ. ೨೭ರಷ್ಟು ಮೀಸಲಾತಿ ಇರಬೇಕು ಎಂಬುದಾಗಿ ಸಲಹೆ ನೀಡಿತು.

ಆದರೆ ಒಕ್ಕಲಿಗರನ್ನು ಪಟ್ಟಿಯಲ್ಲಿ ಸೇರಿಸಲ್ಪಡದ ಇತರ ಜಾತಿಗಳು ಆಯೋಗದ ವರದಿಯ ವಿರುದ್ಧ ಪ್ರತಿಭಟನೆ ನಡೆಸಿದವು. ಬಂದ್ ಆಚರಿಸಿ ವರದಿಯನ್ನು ತಿರಸ್ಕರಿಸುವಂತೆ ಸರಕಾರದ ಮೇಲೆ ಒತ್ತಡ ಹೇರಿದವು. ಹೀಗಾಗಿ ವೆಂಕಟ್ಟಸ್ವಾಮಿ ಆಯೋಗವು ಸಂಗ್ರಹಿಸಿದ ಅಂಕಿ ಅಂಶಗಳು ವಾಸ್ತವವಲ್ಲ ಮತ್ತು ಸಂಗ್ರಹಿಸಲು ಅನುಸರಿಸಿದ ವಿಧಾನ ವೈಜ್ಞಾನಿಕವಾದುದಲ್ಲ ಎಂಬ ಕಾರಣವನ್ನೊಡ್ಡಿ ರಾಮಕೃಷ್ಣ ಹೆಗಡೆಯವರ ನೇತೃತ್ವದ ಸರಕಾರ ೭ನೇ ಅಕ್ಟೋಬರ್ ೧೯೮೬ರಂದು ವೆಂಕಟಸ್ವಾಮಿ ಆಯೋಗದ ವರದಿಯನ್ನು ತಿರಸ್ಕರಿಸುವ ಹಾಗೂ ಮತ್ತೊಂದು ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸುವ ಮತ್ತು ತಾತ್ಕಾಲಿಕವಾಗಿ ಹೊಸ ಮೀಸಲಾತಿಯನ್ನು ಜಾರಿಗೆ ತರುವ ನಿರ್ಧಾರವನ್ನು ತೆಗೆದುಕೊಂಡಿತು."[೨೫]

### ಚಿನ್ನಪ್ಪರೆಡ್ಡಿ ಆಯೋಗ-೧೯೮೬

"೧೯೮೬ರಲ್ಲಿ ನ್ಯಾಯಮೂರ್ತಿ ಚಿನ್ನಪ್ಪರೆಡ್ಡಿ ಅಧ್ಯಕ್ಷತೆಯಲ್ಲಿ ಕರ್ನಾಟಕದ ಮೂರನೆಯ ಹಿಂದುಳಿದ ವರ್ಗಗಳ ಆಯೋಗವನ್ನು ನೇಮಕ ಮಾಡಲಾಯಿತು. ಆಯೋಗವು ಮೀಸಲಾತಿ ನಿರ್ಧಾರಕ್ಕಾಗಿ ಆರ್ಥಿಕ ಪ್ರಮಾಣವನ್ನು ಕುರಿತು ಸವಿಸ್ತಾರವಾಗಿ ಚರ್ಚಿಸಿ, ೧೯೯೦ರಂದು ವರದಿ ಸಲ್ಲಿಸಿತು. ಒಕ್ಕಲಿಗರನ್ನು ಹಿಂದುಳಿದ ವರ್ಗಗಳಿಗೆ ಸೇರಿದವರಲ್ಲವೆಂದು ತೀರ್ಮಾನಿಸಿತು. ಇದರ ಜೊತೆಗೆ ಸರಕಾರದ ಮೊದಲ ಹಾಗೂ ಎರಡನೇ ದರ್ಜೆ ಅಧಿಕಾರಿಗಳ ಮಕ್ಕಳು ಮತ್ತು ಆ ದರ್ಜೆಗಳಷ್ಟೇ ಸಂಬಳ ಪಡೆಯುವ ಖಾಸಗಿ ವಲಯದ ಅಧಿಕಾರಿಗಳ ಮಕ್ಕಳು ೮ ಹೆಕ್ಟೇರ್‌ಗಿಂತ ಜಾಸ್ತಿ ಜಮೀನು ಹೊಂದಿರುವವರ ಮಕ್ಕಳು ಹಿಂದುಳಿದ ವರ್ಗಗಳಲ್ಲಿ ಸೇರಲು ಬರುವುದಿಲ್ಲ ಎಂದು ತಿಳಿಸಿತು.

ವರದಿಯಲ್ಲಿ ಒಕ್ಕಲಿಗರು ಮತ್ತು ಲಿಂಗಾಯತರನ್ನು ಮುಂದುವರಿದ ಗುಂಪಿಗೆ ಸೇರಿಸಿದ್ದ ಮತ್ತು ಹಿಂದುಳಿದ ವರ್ಗಗಳಲ್ಲಿ ಆರ್ಥಿಕವಾಗಿ ಮುಂದುವರಿದವರಿಗೆ ಮೀಸಲಾತಿಯ ಸೌಲಭ್ಯ ನೀಡಬಾರದು ಎನ್ನುವ ಚಿನ್ನಪ್ಪರೆಡ್ಡಿ ವರದಿಯ ಶಿಫಾರಸ್ಸುಗಳು ಬಹಳ ವಿವಾದಕ್ಕೆ ಒಳಗಾದವು. ವರದಿಯ ವಿರುದ್ಧ ಪ್ರತಿಭಟನೆಯೂ ನಡೆಯಿತು. ಆಗ ಮುಖ್ಯಮಂತ್ರಿಗಳಾಗಿದ್ದ ವೀರೇಂದ್ರ ಪಾಟೀಲರು ಹಾಗೂ ನಂತರ ಬಂದ ಮುಖ್ಯಮಂತ್ರಿ ಬಂಗಾರಪ್ಪನವರೂ ವರದಿಯ ಅನುಷ್ಠಾನವನ್ನು ಮುಂದೂಡುತ್ತಾ ಬಂದರು. ನಂತರ ವೀರಪ್ಪ ಮೊಯಿಲಿ ಅವರ ಸರ್ಕಾರ ಪ್ರಬಲ ಕೋಮುಗಳ ಒತ್ತಾಯಕ್ಕೆ ಮಣಿದು ಸುಮಾರು ಶೇ.೭೦ರಷ್ಟು ಮೀಸಲಾತಿಯನ್ನು ಕೊಡುವ ಸರ್ಕಾರದ ಹೊಸ ನೀತಿಯನ್ನು ಪ್ರಕಟಗೊಳಿಸಿತು. ಆದರೆ ಇಂತಹ ಸಮಯಕ್ಕಾಗಲೇ ಭಾರತದ ಸರ್ವೋಚ್ಚ ನ್ಯಾಯಾಲಯವು ಮೀಸಲಾತಿಯ ಪ್ರಮಾಣವು ಶೇ.೫೦ಕ್ಕೆ ಹೆಚ್ಚಿರಬಾರದೆಂದು ತೀರ್ಪು ಕೊಟ್ಟಿದ್ದರಿಂದ ಅದಕ್ಕನುಗುಣವಾಗಿ ಸರ್ಕಾರವು ಮೀಸಲಾತಿ ನೀತಿಯನ್ನು ಶೇ.೫೦ರ ಮಿತಿಗೆ ತಂದು ಜಾರಿಗೊಳಿಸಲಾಯಿತು.

### ಆಯೋಗಗಳ ವರದಿಗೆ ಪ್ರತಿಕ್ರಿಯೆಗಳು

ಯಾದಗಿರಿ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಹೋರಾಟವನ್ನು ಮತ್ತು ವಿವಿಧ ಆಯೋಗಗಳ ವರದಿಗಳಿಗೆ ಬಂದ ಪ್ರತಿಕ್ರಿಯೆಯನ್ನು ನೋಡಿದಾಗ ಈ ಭಾಗದಲ್ಲಿ ತೀವ್ರವಾದ ಪ್ರತಿಕ್ರಿಯೆ ಮತ್ತು ಹೋರಾಟಗಳು ಕಂಡುಬಂದಿಲ್ಲ. ಈ ಜಿಲ್ಲೆಯಲ್ಲಿ ಕೆಲವೊಂದು ಭಾಗಗಳಲ್ಲಿ ಮುಂಬಯಿ ಕರ್ನಾಟಕದ ಹೋರಾಟಗಳಿಂದ ಪ್ರಭಾವಿತರಾಗಿ ಸರ್ಕಾರದ ಮುಂದೆ ಬೇಡಿಕೆಗಳನ್ನಿಟ್ಟಿರುವುದನ್ನು ಗಮನಿಸಬಹುದು.

ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಸರಕಾರದ ಮೇಲೆ ಒತ್ತಡ ಹೇರಲು ಜಾತಿ ಆಧಾರಿತ ಸಂಘಟನೆಗಳನ್ನು ಆರಂಭಿಸಿದವು. ಪರಿಣಾಮವಾಗಿ ಗಂಗಾಮತಸ್ಥರ ಸಂಘ, ಕುರುಬರ ಸಂಘ, ಮಡಿವಾಳರ ಸಂಘ, ನಾಯಕರ ಸಂಘ, ನೇಕಾರರ ಸಂಘ ಮುಂತಾದ ಸಂಘಗಳು ಸ್ಥಾಪನೆಯಾದವು. ಸಂಘಗಳು ತಮ್ಮ ಸಮಾವೇಶಗಳ ಮೂಲಕ ತಮ್ಮ ಜನಾಂಗಕ್ಕೆ ಸಿಗಬೇಕಾದ ಸೌಲಭ್ಯಗಳ ಈಡೇರಿಕೆಗಾಗಿ ಸರಕಾರದ ಮೇಲೆ ಒತ್ತಡ ತಂತ್ರ ಅನುಸರಿಸಲು ಆರಂಭಿಸಿದವು.

ಹೀಗಾಗಿ ಕೂಡಿ ಹೋಗಬೇಕಾದ, ಕೂಡಿ ಸ್ಪಷ್ಟ ಗುರಿ ಸಾಧನೆಗಾಗಿ ಹೋರಾಟ ಮಾಡಬೇಕಾದ ಹಿಂದುಳಿದ ವರ್ಗಗಳು ಪ್ರತ್ಯೇಕವಾಗಿ, ಸ್ವಹಿತಾಸಕ್ತಿಯಿಂದ ತಮ್ಮ ತಮ್ಮ ಜನಾಂಗಗಳ ಏಳಿಗೆಗಾಗಿ ಹೋರಾಟಕ್ಕಿಳಿದರು.

ಯಾದಗಿರಿ ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಆಯೋಗಗಳ ವರದಿಗೆ ಪ್ರತಿಕ್ರಿಯೆಯನ್ನು ನೋಡಿದಾಗ, ಆ ಆಯೋಗಗಳ ವರದಿ ಇಲ್ಲಿನ ಹಿಂದುಳಿದ ವರ್ಗ ಮತ್ತು ದಲಿತ ಸಮುದಾಯದಲ್ಲಿ ಗೊಂದಲವನ್ನೇ ಸೃಷ್ಟಿಸಿತು. ಶ್ರೀ ಮಲ್ಲಿಕಾರ್ಜುನ ಖರ್ಗೆ ಮುಂತಾದ ನಾಯಕರು ಹಾವನೂರು ಆಯೋಗದ ವರದಿಯನ್ನೇ ಸುಟ್ಟು ಹಾಕಿ ಪ್ರತಿಭಟಿಸಿದರು. ನಂತರ ಬಂದ ಮಂಡಲ್ ಆಯೋಗದ ವರದಿಯ ಬಗ್ಗೆಯೂ ಗೊಂದಲವುಂಟಾಗಿ ಇಲ್ಲಿನ ಹಿಂದುಳಿದವರು, ವರದಿಯು ಹಿಂದುಳಿದವರ ಮತ್ತು ದಲಿತರ ವಿರುದ್ಧವಾಗಿದೆ ಎಂದು ಈ ವರ್ಗದವರ ಮೀಸಲಾತಿಯನ್ನು ಕಿತ್ತುಕೊಳ್ಳುವ ಹುನ್ನಾರವಾಗಿದೆ ಎಂದು ಭಾವಿಸಿ ವರದಿ ವಿರುದ್ಧ ದೊಡ್ಡ ಪ್ರತಿಭಟನೆಯನ್ನೇ ಕೈಗೊಂಡಿದ್ದರು.

**ಮಂಡಲ ಆಯೋಗದ ಕುರಿತು ರಾಜ್ಯ ಮಟ್ಟದ ಕಾರ್ಯಾಗಾರ-೧೯೯೩**

೧೯೯೩ರಲ್ಲಿ ಮಂಡಲ ಆಯೋಗದ ವರದಿಯಲ್ಲಿರುವ ಅಂಶಗಳನ್ನು ಹಿಂದುಳಿದವರು ಮತ್ತು ಬುದ್ದಿ ಜೀವಿಗಳಿಗೆ ತಿಳಿಸಲು ಮತ್ತು ವಿವರಿಸಲು ರಾಜ್ಯಮಟ್ಟದ ಕಾರ್ಯಾಗಾರದಲ್ಲಿ ನಾಯಕರಾದ ಚಿನ್ನಪ್ಪರೆಡ್ಡಿ, ಎಲ್.ಬಿ. ಹಾವನೂರು, ಪ್ರೊ. ರವಿಕುಮಾರ್ ಮುಂತಾದವರು ಭಾಗವಹಿಸಿ ಮಂಡಲ ವರದಿಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವಿವರಿಸಿ ಹೇಳಿದರು. ಕಾರ್ಯಾಗಾರದ ಮೂಲಕ ದಲಿತರು ಮತ್ತು ಹಿಂದುಳಿದವರಿಗೆ ಆಯೋಗದ ವರದಿಯ ಅಂಶಗಳನ್ನು ತಿಳಿಸಲಾಯಿತು."[೨೬] ನಂತರ ಆರ್.ಕೆ. ಹುಡುಗಿ ನೇತೃತ್ವದಲ್ಲಿ ಆಯೋಗಗಳ ವರದಿಯನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರಿಸಿ ಸುಮಾರು ೫೦೦೦ ಪ್ರತಿಗಳನ್ನು ಮುದ್ರಿಸಿ, ಪ್ರಮುಖ ನಾಯಕರಿಗೆ ಹಂಚುವ ಮೂಲಕ ಹಿಂದುಳಿದ ವರ್ಗಗಳಲ್ಲಿ ಜಾಗೃತಿ ಮೂಡಿಸುವ ಕಾರ್ಯವು ನಡೆಯಿತು.

**೪.೩.೨. ಸಮಕಾಲೀನ ಸಂದರ್ಭದಲ್ಲಿ ಹಿಂದುಳಿದ ವರ್ಗಗಳ ಸಮಸ್ಯೆಗಳು ಮತ್ತು ಸ್ಥಿತಿಗತಿಗಳು**

ಹಿಂದುಳಿದ ವರ್ಗಗಳು ಎದುರಿಸುತ್ತಿರುವ ಸಮಸ್ಯೆಗಳು ಹಲವು ಬಗೆಯವು. ಸಂಬಂಧಪಟ್ಟ ಆಯೋಗಗಳು ಪರಿಹರಿಸದ ಅಥವಾ ಸರಿಯಾಗಿ ಅರ್ಥೈಸದ ಕಾರಣಕ್ಕಾಗಿ ಕೆಲವು ಜಾತಿಗಳು ಇನ್ನೂ ಹಿಂದಿನ ಸ್ಥಿತಿಯಲ್ಲಿಯೇ ಕಂಡುಬರುತ್ತವೆ. ತಮಗಾದ ಅನ್ಯಾಯವನ್ನು ಸರಿಪಡಿಸುವಂತೆ ಸರಕಾರದ ಗಮನ ಸೆಳೆಯಲು ಮೆರವಣಿಗೆ, ಸಮಾವೇಶ ಏರ್ಪಡಿಸುವುದು, ಸೌಲಭ್ಯಗಳನ್ನು ಒದಗಿಸುವಂತೆ ಸಂಬಂಧಿಸಿದವರಿಗೆ ಮೇಲಿಂದ ಮೇಲೆ ಮನವಿ ಪತ್ರಗಳನ್ನು ಸಲ್ಲಿಸುವುದು, ರಾಜಕೀಯ ಪ್ರಾತಿನಿಧ್ಯಕ್ಕಾಗಿ ಆಗ್ರಹಪಡಿಸುವುದು ಮುಂತಾದ ಪ್ರಯತ್ನಗಳು ಸಾಕಷ್ಟು ನಡೆದಿವೆ ಮತ್ತು ಇಂದಿಗೂ ನಡೆಯುತ್ತಲೇ ಇವೆ. ಹಿಂದುಳಿದ ವರ್ಗಗಳ ಅಭಿವೃದ್ಧಿಯ ದೃಷ್ಟಿಯಿಂದ ಹಾಗೂ ಸರ್ಕಾರದ ಗಮನ ಸೆಳೆಯಲು ಇಂತಹ ಸಮಾವೇಶಗಳು ಅನಿವಾರ್ಯವೆಂಬ ಪರಿಸ್ಥಿತಿಯೂ ಇದೆ. ಆದರೆ ಇತ್ತೀಚೆಗೆ ರಾಜಕೀಯ ಪ್ರಾತಿನಿಧ್ಯ ಹಾಗೂ ಚುನಾವಣಾ

ಮೀಸಲಾತಿಗಾಗಿ ಈ ವರ್ಗಗಳಿಂದ ಬೇಡಿಕೆ ಮತ್ತು ಒತ್ತಡಗಳು ಹೆಚ್ಚುತ್ತಿರುವುದು ಗಮನಾರ್ಹ. ಅದಕ್ಕಾಗಿ ಜಾತಿ ಸಮಾವೇಶಗಳನ್ನು ಅದ್ದೂರಿಯಿಂದ ಏರ್ಪಡಿಸಿ, ತಮ್ಮ ಜಾತಿಶಕ್ತಿಯನ್ನು ಪ್ರದರ್ಶಿಸುವುದು ಸಾಮಾನ್ಯವಾಗಿದೆ.

"ರಾಜ್ಯದಲ್ಲಿ ಜನಸಂಖ್ಯೆ ಆಧಾರದ ಮೇಲೆ ಮೂರನೇ ಸ್ಥಾನದಲ್ಲಿರುವ ಕುರುಬ ಜನಾಂಗಕ್ಕೆ ರಾಜಕೀಯದಲ್ಲಿ ಸೂಕ್ತ ಪ್ರಾತಿನಿಧ್ಯ ನೀಡಬೇಕೆಂಬ ಕೂಗು ಇದ್ದೇ ಇದೆ. ರಾಜಕೀಯವಾಗಿ ತಮ್ಮನ್ನು ತೀರಾ ನಿರ್ಲಕ್ಷಿಸಲಾಗಿದೆಯೆಂದು ಕುರುಬ ಜನಾಂಗದ ನಾಯಕರು ಆರೋಪಿಸುತ್ತಲೇ ಬಂದಿದ್ದಾರೆ. ರಾಜ್ಯದಲ್ಲಿ ಸುಮಾರು ೨೫ ಲಕ್ಷದಷ್ಟಿರುವ ಉಪ್ಪಾರ ಸಮುದಾಯದವರು ಶಿಕ್ಷಣ ಮತ್ತು ಸಂಘಟನೆಯ ಕೊರತೆಯ ಕಾರಣದಿಂದಾಗಿ ನಿರಂತರ ಶೋಷಣೆಗೆ ಒಳಗಾಗಿರುವುದು ಕಂಡುಬರುತ್ತದೆ. ಹೀಗಾಗಿ ತಮ್ಮ ಏಳಿಗೆಗಾಗಿ ಶೈಕ್ಷಣಿಕ, ಆರ್ಥಿಕ, ಸೌಲಭ್ಯಗಳನ್ನು ಒದಗಿಸಬೇಕೆಂದು ಬೇಡಿಕೆಯನ್ನು ಸಲ್ಲಿಸುತ್ತಿದ್ದಾರೆ. ಇದೇ ರೀತಿ ರಜಪೂತ ಸಮುದಾಯದವರು ಸಹ ಇಂದಿಗೂ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಯಾವುದೇ ಸೌಲಭ್ಯ ದೊರಕದೆ ಸೌಲಭ್ಯವಂಚಿತರಾಗಿ ಸರಕಾರದಿಂದ ತೀವ್ರ ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯಗಳಲ್ಲಿ ಒಂದಾಗಿದೆ. ಯಾದಗಿರಿ ಜಿಲ್ಲೆಯಲ್ಲಿ ಅತಿ ಹೆಚ್ಚಿರುವ ಮಡಿವಾಳ ಸಮುದಾಯದವರು ಅತಿ ಹಿಂದುಳಿದ ಜನಾಂಗವೆನಿಸಿಕೊಂಡಿದೆ."[೭೭] ಹೀಗಾಗಿ ಇವರು ಚುನಾವಣಾ ಮೀಸಲಾತಿ, ರಾಜಕೀಯ ಪ್ರಾತಿನಿಧ್ಯ ನೀಡಬೇಕೆಂಬ ಬೇಡಿಕೆಯನ್ನು ಇಡುತ್ತಿದ್ದಾರೆ.

ಯಾದಗಿರಿ ಭಾಗದಲ್ಲಿ ಅಲೆಮಾರಿ ಸಮುದಾಯವೆಂದೇ ಗುರುತಿಸಲ್ಪಟ್ಟಿರುವ ಸುಡುಗಾಡುಸಿದ್ದರು ಸರಕಾರದ ಎಲ್ಲಾ ಸೌಲಭ್ಯಗಳಿಂದಲೂ, ವಂಚಿತರಾಗಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಯಾವುದೇ ಸ್ಥಾನಮಾನ ಪಡೆಯದೇ ಸಂಪೂರ್ಣ ನಿರ್ಲಕ್ಷಿತರಾಗಿದ್ದಾರೆ. ಇವರಲ್ಲಿಯೇ ಹಗಲು ವೇಷಗಾರರು, ರಾಳಕೊಂಡ, ನಿರಂಜನ ಮುಂತಾದ ಉಪಪಂಗಡಗಳಿವೆ. "ಅತ್ಯಂತ ಅಭದ್ರ ಸ್ಥಿತಿಯಲ್ಲಿರುವ ಇಂತಹ ಸಮುದಾಯದವರು ಬದುಕಲು ರಾಮಾಯಣ ಮಹಾಭಾರತ ಪಾತ್ರಗಳ ವೇಷ ಧರಿಸಿ ಹೊಟ್ಟೆಪಾಡಿಗೆಗಾಗಿ ಹಳ್ಳಿಗಳಲ್ಲಿ ತಿರುಗಾಡುತ್ತಾ ದಯನೀಯ ಸ್ಥಿತಿಯಲ್ಲಿದ್ದಾರೆ. ಕೆಲವರು ಸ್ಥಳೀಯ ನಿವಾಸಿಗಳಾಗಿ ಬದುಕು ನಡೆಸುತ್ತಿದ್ದರೂ ಇವರಿಗೆ ಮತದಾನದ ಹಕ್ಕು ಸಿಕ್ಕಿಲ್ಲ, ಸರಕಾರದಿಂದ ಯಾವ ಸೌಲಭ್ಯವೂ ಇಲ್ಲ. ಬಣ್ಣ ಹಚ್ಚಿದರೆ ಊಟ, ಇಲ್ಲದಿದ್ದರೆ ಉಪವಾಸ ಎಂಬ ಸ್ಥಿತಿ ಇದೆ."[೭೮]

ಯಾದಗಿರಿ ಭಾಗದಲ್ಲಿರುವ ಗೌಳಿ ಸಮುದಾಯದವರು ಬಹು ವಿಭಿನ್ನವಾದಂತಹ ಸಮಸ್ಯೆಯನ್ನು ಎದುರಿಸುತ್ತಿರುವುದನ್ನು ಕಾಣಬಹುದು. ಗೌಳಿ ಸಮುದಾಯದವರು ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ತಲತಲಾಂತರಗಳಿಂದ ಪಶುಪಾಲನೆ ಇವರ ಮುಖ್ಯ ವೃತ್ತಿಯಾಗಿದ್ದು, ಅದನ್ನೇ ಮುಂದುವರಿಸಿಕೊಂಡು ಬಂದಿದ್ದಾರೆ. ಆದರೆ ಇತ್ತೀಚೆಗೆ ಗೌಳಿ ಸಮುದಾಯದವರಲ್ಲಿ ಆತಂಕ ಮೂಡಿಸಿರುವ ಸಂಗತಿಯೆಂದರೆ ಇವರಿಗಷ್ಟೇ ಸೀಮಿತವಾಗಿದ್ದ ಇವರ ಕಸುಬನ್ನು ಇತರ ಜನಾಂಗದವರೂ ಮತ್ತು ಸರ್ಕಾರವು ನಡೆಸುತ್ತಿದೆ. ಬ್ಯಾಂಕ್‌ನಿಂದ ಸಿಗುವ ಸಾಲಸೌಲಭ್ಯ ಪಡೆದ ಚಿಕ್ಕ ರೈತರು, ಯುವಕರು, ನಿರುದ್ಯೋಗಿಗಳು

ಪಶುಪಾಲನೆಯನ್ನು ಒಂದು ಉದ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಹೀಗಾಗಿ ಮೂಲ ಸಮುದಾಯಕ್ಕೆ ಇದು ಸವಾಲಾಗಿದೆಯಲ್ಲದೆ ಇವರನ್ನು ಆತಂಕಕ್ಕೀಡು ಮಾಡಿದೆ. ಇದರ ಜೊತೆಗೆ ಇಲ್ಲಿನ ಭೀಕರ ಬರಗಾಲ, ಸತತ ಬರ ಪರಿಸ್ಥಿತಿ ಎದುರಾಗುತ್ತಿರುವುದರಿಂದ ಗೌಳಿ ಕುಟುಂಬಗಳು ಬೀದಿ ಪಾಲಾಗುತ್ತಿವೆ. ಈ ಸಮುದಾಯದ ಸಮಸ್ಯೆಗಳನ್ನು ಅರಿತು 'ಗೌಳಿ ಸಮಾಜ ಸೇವಾ ಸಂಘ'ವು ತನ್ನದೇ ಆದ ಬೇಡಿಕೆಗಳನ್ನಿಟ್ಟಿದೆ. ಗೌಳಿ ಸಮುದಾಯಕ್ಕೆ ರಾಜ್ಯ ಹಿಂದುಳಿದ ವರ್ಗಗಳ ಇಲಾಖೆಯಿಂದ ನೇರ ಸಾಲಸೌಲಭ್ಯ ಸಿಗಬೇಕು, ವಿಧಾನ ಪರಿಷತ್ತಿಗೆ ಗೌಳಿ ಪ್ರತಿನಿಧಿಯನ್ನು ನಾಮಕರಣ ಮಾಡಬೇಕು, ಸಮುದಾಯವನ್ನು ಹಿಂದುಳಿದ ವರ್ಗದಿಂದ ಬದಲಾಯಿಸಿ ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆ ಮಾಡಬೇಕು. ಸಮುದಾಯದ ವಿದ್ಯಾವಂತ ನಿರುದ್ಯೋಗಿಗಳಿಗೆ ಪಶುಸಂಗೋಪನಾ ಇಲಾಖೆಯಲ್ಲಿ ಶೇ.೨೫ರಷ್ಟು ಉದ್ಯೋಗವನ್ನು ಮೀಸಲಿಡಬೇಕು ಎಂಬುದಾಗಿದೆ.

ಯಾದಗಿರಿ ಜಿಲ್ಲೆಯಲ್ಲಿರುವ ಗಂಗಾಮತಸ್ಥರು ಇನ್ನೊಂದು ರೀತಿಯ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಕೇಂದ್ರ ಸರ್ಕಾರದ ಮೀಸಲಾತಿ ಪಟ್ಟಿಯಲ್ಲಿದ್ದರೂ ಅವರಿಗೆ ಪರಿಶಿಷ್ಟ ಪಂಗಡದ ಪ್ರಮಾಣ ಪತ್ರ ಹಾಗೂ ಸಿಂಧುತ್ವ ಪ್ರಮಾಣ ಪತ್ರಗಳನ್ನು ನೀಡದೆ ಅಧಿಕಾರಿಗಳು ತೊಂದರೆ ಕೊಡುತ್ತಿದ್ದಾರೆ. ಗಂಗಾಮತಸ್ಥರು ತಮ್ಮನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವಂತೆ ಒತ್ತಾಯಿಸುತ್ತಿದ್ದಾರೆ. ಪರಿಶಿಷ್ಟ ಜಾತಿಯ ವ್ಯಾಪ್ತಿಗೆ ಸೇರಬಯಸುವ ಇನ್ನೊಂದು ಸಮುದಾಯದ ವೆಂದರೆ ಹೆಳವ ಸಮುದಾಯ. ವಂಶಾವಳಿಗಳ ದಾಖಲೆಯುಳ್ಳ ದೊಡ್ಡ ಪುಸ್ತಕಗಳ ಗಂಟನ್ನು ಹೊತ್ತುಕೊಂಡು ಊರೂರಿಗೆ ತಿರುಗುತ್ತಲಿರುವ ಹೆಳವರು ಒಂದು ಕಡೆ ನೆಲೆಸಿ ಜೀವನ ಮಾಡುವಲ್ಲಿ ಸಾಧ್ಯವಾಗದಿದ್ದರಿಂದಾಗಿ ಅವರು ಸಮಾಜದ ಮುಖ್ಯವಾಹಿನಿಯಿಂದ ಹೊರಗುಳಿದಿದ್ದಾರೆ.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಆಯೋಗಗಳ ವರದಿಗಳಿಂದ ಸಂಪೂರ್ಣ ನ್ಯಾಯ ದೊರಕಿಲ್ಲ ಎಂಬುದಕ್ಕೆ ನಿರಂತರವಾಗಿ ನಡೆಯುತ್ತಿರುವ ಹೋರಾಟಗಳು ಸಾಕ್ಷಿಯಾಗಿದೆ. ಅದರಲ್ಲಿರುವ ಲೋಪದೋಷಗಳನ್ನು ಸರಿಪಡಿಸುವಂತೆ ನಿರಂತರ ಹೋರಾಟಗಳು ನಡೆಯುತ್ತಿವೆ. ಸಂವಿಧಾನ ಬದ್ಧವಾದ ಮೀಸಲಾತಿ ಪ್ರಮಾಣವನ್ನು ನಿಗದಿಪಡಿಸುವ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸುವುದು ಹೇಗೆ ಎಂಬ ಸಮಸ್ಯೆಯನ್ನು ಗಮನಿಸಿದ ಸರ್ವೋಚ್ಚ ನ್ಯಾಯಾಲಯ ೧೯೯೨ ರಲ್ಲಿ ಒಂದು ಮೊಕದ್ದಮೆಯ ತನ್ನ ತೀರ್ಪಿನಲ್ಲಿ ಹಿಂದುಳಿದ ವರ್ಗಗಳ ನ್ಯಾಯಯುತ ಸಮಸ್ಯೆ ಗಳನ್ನು ಪರಿಶೀಲಿಸುವ ಸಲುವಾಗಿ ಪ್ರತಿಯೊಂದು ರಾಜ್ಯದಲ್ಲೂ ಒಂದು ಶಾಶ್ವತ ಆಯೋಗ ರಚಿಸಬೇಕೆಂದು ನಿರ್ದೇಶಿಸಿತು. ಸೂಚನೆಯಂತೆ ಕರ್ನಾಟಕ ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಕಾಯ್ದೆಯನ್ನು ೧೯೯೫ರಲ್ಲಿ ಪಾಸು ಮಾಡಿತು. ಇದರ ಅನ್ವಯ ೧೯೯೬ರಲ್ಲಿ ಆಯೋಗ ಜಾರಿಯಾಯಿತು.

**ಯಾದಗಿರಿ ಜಿಲ್ಲೆಯ ಹಿಂದುಳಿದ ವರ್ಗಗಳ ಹೋರಾಟಗಾರರು**

೧. ಸಾಯಿಬಣ್ಣ ಬೋರಬಂಡ

೨. ಉಮೇಶ್ ಕೆ. ಮುದ್ನಾಳ

೩. ನಾಗಪ್ಪ ನಕ್ಕ ಗಾಜರಕೋಟ್

೪. ಮಲ್ಲಿಕಾರ್ಜುನ ಅರುಣಿ

೫. ಸಿ.ಎಂ. ಪಟ್ಟೇದಾರ್ ಯಾದಗಿರಿ

೬. ಬಾಸ್ಕರರಾವು ಮೂಡಬೂಳ್

**೪.೪. ಕಾರ್ಮಿಕ ಚಳವಳಿ**

ಯಾದಗಿರಿ ಜಿಲ್ಲೆಯ ರಾಜಕೀಯ, ಸಾಮಾಜಿಕ, ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಇಲ್ಲಿ ಕಂಡುಬರುವ ಕಾರ್ಖಾನೆಗಳು, ಸಂಘಟನೆಗಳು, ಕಾರ್ಮಿಕರ ಹೋರಾಟಗಳ ಪರಿಸ್ಥಿತಿಯೇ ಬೇರೆಯಾಗಿದೆ. ಈ ಪ್ರದೇಶಗಳಲ್ಲಿ ಕಡಿಮೆ ಮಳೆ, ಅತಿಯಾದ ಬಿಸಿಲು, ಅನಕ್ಷರತೆ ಮುಂತಾದ ಅಂಶಗಳಿಂದ ಇಲ್ಲಿಯ ಜನ ಬಡತನಕ್ಕೀಡಾಗಿದ್ದರು. ಕೃಷಿಯನ್ನು ಹೊರತುಪಡಿಸಿದರೆ ಬೇರೆ ಉದ್ಯೋಗಾವಕಾಶಗಳೇ ಇಲ್ಲ. ಇಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದ ಹತ್ತಿಯನ್ನು ಹೈದರಾಬಾದ್, ಮುಂಬಯಿ, ಮದ್ರಾಸ್ ಮತ್ತು ಅಹಮದಾಬಾದ್ ನಗರಗಳ ಮಿಲ್ಲುಗಳಿಗೆ ಕಳುಹಿಸಲಾಗುತ್ತಿತ್ತು. ಇಲ್ಲಿ ಅಪಾರ ನೈಸರ್ಗಿಕ ಸಂಪತ್ತಿದ್ದರೂ, ಕಾರ್ಖಾನೆಗಳ ಕೊರತೆಯಿಂದ ಇಲ್ಲಿ ದೊರೆಯುತ್ತಿದ್ದ ಅಮೂಲ್ಯ ಗುಣಮಟ್ಟದ ಸುಣ್ಣದ ಕಲ್ಲು, ಗ್ರಾನೈಟ್ ಮುಂತಾದವುಗಳನ್ನು ಬೇರೆ ಕಡೆ ಸಾಗಿಸಲಾಗುತ್ತಿತ್ತು. ಹೀಗಾಗಿ ಇಲ್ಲಿನ ಜನರಿಗೆ ನಿರುದ್ಯೋಗ ದೊಡ್ಡ ಸಮಸ್ಯೆಯಾಗಿ ಕಾಡುತ್ತಿತ್ತು. ಇಂತಹ ಅಂಶಗಳನ್ನು ಗಮನಿಸಿದ ನಿಜಾಮ ಸರಕಾರ ೧೮೮೪ರಲ್ಲಿ ಗುಲಬರ್ಗಾದಲ್ಲಿ ಎಂ.ಎಸ್.ಕೆ. ಮಿಲ್ಲನ್ನು ಆರಂಭಿಸಿದರು. ಮಿಲ್‌ನ ಕಾರ್ಮಿಕರ ಶ್ರದ್ಧೆ, ನಿಷ್ಠೆಯ ದುಡಿಮೆಯ ಫಲದಿಂದಾಗಿ ಮಿಲ್‌ನಲ್ಲಿ ತಯಾರಾದ ಉತ್ಕೃಷ್ಟ ಬಟ್ಟೆ ಬಹಳ ಬೇಗ ಹೆಸರಾಗಿ ರಷ್ಯಾ ಮುಂತಾದ ಪರ ರಾಷ್ಟ್ರಗಳಿಗೂ ರಫ್ತಾಗುವ ಹಂತಕ್ಕೂ ತಲುಪಿತ್ತು.

ನಂತರ ದಕ್ಷಿಣ ಭಾರತದಲ್ಲೇ ಮೊಟ್ಟಮೊದಲ ಸಿಮೆಂಟ್ ಉತ್ಪಾದನೆಯ ಎ.ಸಿ.ಸಿ. ಕಾರ್ಖಾನೆಯನ್ನು ೧೯೨೫ರಲ್ಲಿ ಶಹಬಾದ್‌ನಲ್ಲಿ ಹೊಳಪು ಕಲ್ಲಿನ ಗಣಿ ಉದ್ಯಮಗಳು ಆರಂಭವಾದವು. ಹೀಗೆ ಒಂದೊಂದೆ ಕೈಗಾರಿಕೆಗಳು ಸ್ಥಾಪನೆಯಾಗುತ್ತಿದ್ದಂತೆ ಇಲ್ಲಿನ ಜನರಿಗೆ ಕೈ ತುಂಬಾ ಉದ್ಯೋಗಾವಕಾಶಗಳು ದೊರೆತವು. ಕಾರ್ಖಾನೆಗಳ ಉತ್ಪಾದನೆ, ಲಾಭ ಹೆಚ್ಚಿದ್ದರಿಂದ ಕಾರ್ಮಿಕರಿಗೂ ಆರಂಭದಲ್ಲಿ ಅಂತಹ ದೊಡ್ಡ ಸಮಸ್ಯೆಯಾಗಲಿ ಅಥವಾ ಶೋಷಣೆಯಾಗಲಿ ಇರಲಿಲ್ಲ. ಶೋಷಣೆ ಇದ್ದರೂ ನಿಜಾಮಶಾಹಿಯನ್ನು ವಿರೋಧಿಸುವ ಧೈರ್ಯವಾಗಲಿ, ಅವಕಾಶವಾಗಲಿ ಇರಲಿಲ್ಲ. ಒಂದು ವೇಳೆ ವಿರೋಧಿಸಿದ್ದಾದರೆ ಕೆಲಸವನ್ನೇ ಕಳೆದುಕೊಳ್ಳುವ ಅಥವಾ ಶಿಕ್ಷೆ ಅನುಭವಿಸುವ ಪರಿಸ್ಥಿತಿ ಇತ್ತು ಎನ್ನುವುದರ ಜೊತೆಗೆ ಹಿಂದಿನಿಂದ ನಿರುದ್ಯೋಗ, ಬಡತನ ಸಮಸ್ಯೆಯನ್ನು ಸಾಕಷ್ಟು ಅನುಭವಿಸಿದ್ದ ಭಾಗದ ಜನರಿಗೆ ಅಂತಹ ಅವಶ್ಯಕತೆಯು ಇರಲಿಲ್ಲ ಹಾಗೂ ಆಗ ಕಾರ್ಮಿಕರು ಬೃಹತ್ ಸಂಖ್ಯೆಯಲ್ಲಿರಲಿಲ್ಲ. ಹೀಗಾಗಿ ಕಾರ್ಮಿಕರ ಸಂಘಟನೆ, ಹೋರಾಟ ಚಳವಳಿಗಳನ್ನು ಆಗ ಯೋಚಿಸಲು ಅಥವಾ ಕಲ್ಪಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಇಂತಹ ಹಿನ್ನೆಲೆಯನ್ನು ವಿಶ್ಲೇಷಿಸಿದಾಗ, ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಅಂದರೆ ನಿಜಾಮನ ಆಳ್ವಿಕೆಯಲ್ಲಿ ಯಾವುದೇ ಕಾರ್ಮಿಕ ಚಳುವಳಿಗಳು ಕಂಡುಬರುವುದಿಲ್ಲ.

ಆದರೆ ನಿಜಾಮನಿಂದ ಜನಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರವಾದ ನಂತರ ಆಡಳಿತದ ವಿಫಲತೆ ಹಾಗೂ ಜನಪ್ರತಿನಿಧಿಗಳು ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸದಿದ್ದುದು, ಕಾರ್ಮಿಕರ ಪರಿಸ್ಥಿತಿ ಸುಧಾರಣೆ ಆಗದಿದ್ದರಿಂದ ಕ್ರಮೇಣ ಹೋರಾಟಗಳು ಆರಂಭವಾಗಲು ಕಾರಣವಾಯಿತು.

**೪.೪.೧. ಸ್ವಾತಂತ್ರ್ಯೋತ್ತರ ಕಾರ್ಮಿಕ ಚಳುವಳಿಗಳು**

೧೯೫೬ರಲ್ಲಿ ಸರಕಾರವು ಇನಾಂ ಭೂಮಿಯನ್ನು ವಶಪಡಿಸಿಕೊಂಡಿದ್ದರಿಂದ ಭೂಮಿ ಕಳೆದುಕೊಂಡ ಕೃಷಿಕರು ಮತ್ತು ಕೃಷಿ ಕಾರ್ಮಿಕರು ಹಾಗೂ ಜಮೀನ್ದಾರಿ ಪದ್ಧತಿಯ ಶೋಷಣೆಗೆ ಒಳಗಾದವರು ಉದ್ಯೋಗ ಅರಸಿ ಗುಲಬರ್ಗಾ ಮತ್ತು ಯಾದಗಿರಿ ನಗರಗಳಿಗೆ ವಲಸೆ ಬರತೊಡಗಿದರು. ಹೀಗೆ ಬಂದವರು ವಸತಿ ಸಮಸ್ಯೆಯಿಂದಾಗಿ ಊರ ಹೊರಗೆ ಅಥವಾ ಕೊಳಚೆ ಪ್ರದೇಶಗಳಲ್ಲಿ ವಾಸ ಮಾಡಬೇಕಾಯಿತು. ಉದ್ಯೋಗ ಅರಸಿ ಬಂದವರು ಮೊದಲು ಕೆಲಸಕ್ಕೆ ಸೇರುತ್ತಿದ್ದುದು ಕಾರ್ಖಾನೆಗಳಲ್ಲಿ ಮತ್ತು ಬಂದವರು ಅನಿವಾರ್ಯತೆಯಿಂದ ಕಡಿಮೆ ಕೂಲಿಗೂ ಕೆಲಸ ಮಾಡಲು ತಯಾರಿದ್ದರು. ಆರಂಭದಲ್ಲಿ ಕಾರ್ಖಾನೆಗಳಿಗೆ ಕಾರ್ಮಿಕರ ಕೊರತೆ ಇದ್ದುದರಿಂದ ಹೆಚ್ಚು ವೇತನ, ಸೌಲಭ್ಯಗಳನ್ನು ಕೊಟ್ಟು ಕೆಲಸಕ್ಕಿಟ್ಟುಕೊಂಡಿದ್ದ ಕಾರ್ಖಾನೆ ಮಾಲೀಕರು, ಕಾರ್ಮಿಕರ ಸಂಖ್ಯೆ ಹೆಚ್ಚಾದಂತೆ ಕಾರ್ಮಿಕರಿಗೆ ವೇತನದಲ್ಲಿ ತಾರತಮ್ಯವನ್ನು ಅನುಸರಿಸತೊಡಗಿದರು. ಇದೇ ಸಮಯದಲ್ಲಿ ದೇಶಾದ್ಯಂತ ಸ್ಥಾಪಿತವಾಗಿದ್ದ ಕಾರ್ಮಿಕ ಸಂಘಟನೆಗಳು ಇವರ ಬೆಂಬಲಕ್ಕೆ ನಿಂತವು. ಹೀಗಾಗಿ ಗುಲಬರ್ಗಾ ಜಿಲ್ಲೆಯಲ್ಲಿ ಕಾರ್ಮಿಕರ ನೇತೃತ್ವವನ್ನು ವಹಿಸಿ ಅನೇಕ ಕಾರ್ಮಿಕ ಸಂಘಟನೆಗಳು ಸ್ಥಾಪಿತವಾಗಿ ಹೋರಾಟವನ್ನು ಆರಂಭಿಸಿದವು.

ಆದರೆ ಇಂತಹ ಹೋರಾಟಗಳು ಅಷ್ಟೊಂದು ಯಶಸ್ವಿಯಾಗಲಿಲ್ಲ. ಇಂತಹ ಸಂದರ್ಭ ಮತ್ತು ಪರಿಸ್ಥಿತಿಯನ್ನು ಕಮ್ಯೂನಿಸ್ಟರು ಉಪಯೋಗಿಸಿಕೊಂಡಿರುವುದು ಕಂಡುಬರುತ್ತದೆ. ಕಮ್ಯೂನಿಸ್ಟ್ ತತ್ವಸಿದ್ಧಾಂತಗಳು ಪ್ರಚಾರವಾಗುತ್ತಾ ಈ ಪ್ರದೇಶದ ಕಾರ್ಮಿಕರು ಮತ್ತು ನಾಯಕರ ಮೇಲೆ ಪ್ರಭಾವ ಬೀರಿದವು. ಪರಿಣಾಮವಾಗಿ ಗುಲಬರ್ಗಾ ಜಿಲ್ಲೆಯಲ್ಲಿ ಎಡಪಂಥೀಯ ಸಂಘಟನೆಗಳು ಹುಟ್ಟಿಕೊಂಡವು. ಅರವಿಂದ ಮಳೆಬೆನ್ನೂರು, ನಾರಾಯಣ, ಶ್ರೀನಿವಾಸಗುಡಿ, ಎಸ್.ಕೆ. ಕಾಂತಾ, ಮಾರುತಿ ಮಾನ್ಪಡೆ, ಆರ್.ಕೆ. ಹುಡುಗಿ, ಮಲ್ಲಿಕಾರ್ಜುನ ಮಸ್ಕಿ ಮುಂತಾದವರ ನಾಯಕತ್ವದಲ್ಲಿ ಆರ್ಥಿಕ ಶೋಷಣೆ, ಸೇವಾಭದ್ರತೆ, ವೇತನ ಪಾವತಿ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿರುವ ಕಾರ್ಮಿಕ ವರ್ಗದವರ ಪರವಾಗಿ ಹೋರಾಟಕ್ಕೆ ಮುಂದಾದರು.

**ಎಂ.ಎಸ್.ಕೆ. ಮಿಲ್ ಕಾರ್ಮಿಕರ ಒಕ್ಕೂಟ**

ಮಿಲ್ ಪ್ರಾರಂಭವಾದಾಗಿನಿಂದ ಕಾರ್ಮಿಕರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದರಾದರೂ, ಮಾಲೀಕರು ಕಾರ್ಮಿಕರ ಎಲ್ಲಾ ಸಮಸ್ಯೆಗಳಿಗೆ ಸರಿಯಾಗಿ ಸ್ಪಂದಿಸುತ್ತಿರಲಿಲ್ಲ. "ಕಾರ್ಮಿಕರು ಕೇವಲ ಕೂಲಿಯಾಳುಗಳ ರೀತಿಯಲ್ಲಿ ದುಡಿಯುತ್ತಿದ್ದರು. ಕ್ರಮೇಣ ಕಾರ್ಮಿಕರ ಸಮಸ್ಯೆಗಳು ಹೆಚ್ಚಾದಾಗ ಇವರ ಸಮಸ್ಯೆಗಳಿಗೆ ಸ್ಪಂದಿಸಲು 'ಎಂ.ಎಸ್.ಕೆ. ಮಿಲ್ ಕಾರ್ಮಿಕರ ಒಕ್ಕೂಟ'ವನ್ನು ೧೯೫೩ರಲ್ಲಿ ಸ್ಥಾಪಿಸಲಾಯಿತು. ಪೀಪಲ್ಸ್ ಡೆಮೋಕ್ರೆಟಿಕ್ ಫ್ರಂಟ್‌ನ ಸದಸ್ಯರಾಗಿದ್ದ ಶ್ರೀ ಗಂಗಾಧರ

ನಮೋಶಿ ಅವರು ಸಂಘಟನೆಯ ಮಹಾಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಇವರ ನೇತೃತ್ವದಲ್ಲಿ ಒಕ್ಕೂಟ ಕಾರ್ಮಿಕರ ಪರವಾಗಿ ಬೃಹತ್ ಹೋರಾಟವನ್ನು ಆರಂಭಿಸಿ ಅನೇಕ ಸೌಲಭ್ಯಗಳನ್ನು ದೊರಕಿಸಿಕೊಡುವಲ್ಲಿ ಯಶಸ್ವಿಯಾಗಿತ್ತು. ಅವುಗಳಲ್ಲಿ ಮುಖ್ಯವಾಗಿ ಕಾರ್ಮಿಕರಿಗೆ ಇದುವರೆಗಿದ್ದ ವೇತನ ೩ ರೂಪಾಯಿಗಳನ್ನು ೭ ರೂಪಾಯಿಗೆ ಏರಿಸಲು ಹೋರಾಟ ಮಾಡಿ ಯಶಸ್ವಿಯಾದರು. ಕಾರ್ಖಾನೆಯು ಆರ್ಥಿಕ ತೊಂದರೆಗೆ ಒಳಗಾದಾಗ ಕಾರ್ಮಿಕರ ಸಂಬಳದಲ್ಲಿ ಶೇ. ೨೫ರಷ್ಟು ವೇತನವನ್ನು ಕಡಿತಗೊಳಿಸಲು ಸರಕಾರ ಆದೇಶ ನೀಡಿತ್ತು. ಆಗ ಕಾರ್ಮಿಕರ ಒಕ್ಕೂಟ ಆ ಆದೇಶದ ವಿರುದ್ಧ ಬೃಹತ್ ಪ್ರತಿಭಟನೆ ಕೈಗೊಂಡು ಆದೇಶ ಜಾರಿಯಾಗದಂತೆ ನೋಡಿಕೊಂಡರು.

ಆರ್ಥಿಕ ಮುಗ್ಗಟ್ಟಿನ ಕಾರಣದಿಂದ ಮಿಲ್ಲನ್ನು ೧೯೬೭ರಲ್ಲಿ ಬಂದ್ ಮಾಡಲಾಯಿತು. ಹೀಗಾಗಿ ಉತ್ಪಾದನೆ ನಿಂತು ಹೋಗಿ ಕಾರ್ಮಿಕರ ವೇತನಕ್ಕೂ ತೊಂದರೆಯಾಗಿತ್ತು. ಆಗ ಶ್ರೀ ಗಂಗಾಧರ ನಮೋಶಿ ಮತ್ತು ಶ್ರೀ ಎಸ್.ಕೆ. ಕಾಂತ ಅವರು ಮಿಲ್‌ನ ಪುನರಾರಂಭಕ್ಕೆ ೭೮ ದಿನಗಳ ಕಾಲ ಮುಷ್ಕರ ಕೈಗೊಂಡು ಸರಕಾರದ ಮೇಲೆ ಒತ್ತಡ ತಂದರು. ಪರಿಣಾಮವಾಗಿ ಕಾರ್ಖಾನೆಯು ಪುನಃ ತನ್ನ ಕಾರ್ಯಾರಂಭ ಮಾಡುವಂತಾಯಿತು. ಇನ್ನು ಮಿಲ್ ಲಾಭದಲ್ಲಿದ್ದಾಗಲೂ ಕಾರ್ಮಿಕರಿಗೆ ಹೆಚ್ಚಿನ ತುಟ್ಟಿಭತ್ಯೆ ನೀಡುತ್ತಿರಲಿಲ್ಲ ಆಗ ಕಾರ್ಮಿಕ ಒಕ್ಕೂಟದ ಮೂಲಕ ಬೇಡಿಕೆ ಸಲ್ಲಿಸಿ, ತುಟ್ಟಿಭತ್ಯೆಯನ್ನು ೧೫ ರೂಪಾಯಿಗಳಿಂದ ೨೪ ರೂಪಾಯಿಗಳಿಗೆ ಹೆಚ್ಚಿಸಲು ಕಾರಣವಾಯಿತು."[೨೯] ಹೀಗೆ ಒಕ್ಕೂಟ ಕಾರ್ಮಿಕರ ಹಿತರಕ್ಷಣೆಯನ್ನು ಗಮನದಲ್ಲಿಟ್ಟುಕೊಂಡು ನ್ಯಾಯಯುತವಾದ ಬೇಡಿಕೆಗಳನ್ನಿಡುತ್ತಾ, ಅನ್ಯಾಯವನ್ನು ಖಂಡಿಸುತ್ತಾ ಕಾರ್ಮಿಕರ ಪರವಾಗಿ ಹೋರಾಟ ಮಾಡುತ್ತಾ ಬಂದಿತು.

"ಎಂ.ಎಸ್.ಕೆ. ಮಿಲ್ ಟೆಕ್ಸ್‌ಟೈಲ್ಸ್ ಲೇಬರ್ ಯೂನಿಯನ್' ಮಾಲೀಕರಿಂದ ಆಗುತ್ತಿದ್ದ ಶೋಷಣೆಯಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಮಿಲ್‌ನ ಕಾರ್ಮಿಕರು ೧೯೮೭ರಲ್ಲಿ ಎಂ.ಎಸ್.ಕೆ. ಮಿಲ್ ಟೆಕ್ಸ್‌ಟೈಲ್ಸ್ ಲೇಬರ್ ಯೂನಿಯನ್‌ನನ್ನು ಸ್ಥಾಪಿಸಿಕೊಂಡರು. ಶ್ರೀ ತುಳಸಿರಾಮ ನಾಯಕ ಅವರು ಇದರ ಅಧ್ಯಕ್ಷರಾಗಿದ್ದರು. ಇದಕ್ಕೂ ಪೂರ್ವದಲ್ಲಿ ಈ ಸಂಘಟನೆ 'ಸಂಯುಕ್ತ ಮಜದೂರು ಸಂಘ' ಎನ್ನುವ ಹೆಸರಿನಿಂದ ಕಾರ್ಯ ನಿರ್ವಹಿಸುತ್ತಿದ್ದು ಶ್ರೀ ಮಲ್ಲಿಕಾರ್ಜುನ ಖರ್ಗೆ ಮುಂತಾದವರು ಇದರ ಮುಖಂಡರಾಗಿದ್ದರು. ಖರ್ಗೆಯವರು ವಿಧಾನಸಭಾ ಸದಸ್ಯರಾದ ನಂತರ ಸಂಘದ ಹೆಸರನ್ನು ಎಂ.ಎಸ್.ಕೆ. ಮಿಲ್ಸ್ ಟೆಕ್ಸ್‌ಟೈಲ್ಸ್ ಲೇಬರ್ ಯೂನಿಯನ್ ಎಂದು ಬದಲಾವಣೆ ಮಾಡಲಾಯಿತು. ಸಂಘಟನೆಯ ಮೂಲಕ ಕಾರ್ಮಿಕರ ವೇತನ ಹೆಚ್ಚಳ, ತುಟ್ಟಿಭತ್ಯೆ ಹೆಚ್ಚಳ ಮುಂತಾದ ಬೇಡಿಕೆಗಳನ್ನಿಟ್ಟು ಹೋರಾಟ ಮಾಡಲಾಯಿತು. ಇವರ ಹೋರಾಟಕ್ಕೆ ಮಣಿದ ಆಗಿನ ಸರಕಾರ, ಕಾರ್ಮಿಕರ ವೇತನವನ್ನು ೨೫ ರೂಪಾಯಿಯಿಂದ ೬೫ ರೂಪಾಯಿಗೆ ಹೆಚ್ಚಿಸಿತು. ತುಟ್ಟಿಭತ್ಯೆಯಲ್ಲಿಯೂ ೨೫ರಿಂದ ೪೦ ರೂಪಾಯಿಗಳಷ್ಟು ಹೆಚ್ಚಾಯಿತು. ನಂತರ ೩೧೯ ಜನ ಕಾರ್ಮಿಕರ ಬಗ್ಗೆ ಆಡಳಿತ ಮಂಡಳಿಯು ಕೈಗೊಂಡ ಮತ್ತೊಂದು ವಿವಾದಿತ ತೀರ್ಮಾನವು ಕಾರ್ಮಿಕರನ್ನು ಇಕ್ಕಟ್ಟಿಗೆ ಸಿಲುಕಿಸಿತು. ಇಂತಹ ಅನ್ಯಾಯವನ್ನು ಶ್ರೀ ತುಳಸಿರಾಮ ನಾಯಕ ಅವರ ನೇತೃತ್ವದಲ್ಲಿ ೭೨ ತಾಸು ಆಮರಣ ಉಪವಾಸ ಸತ್ಯಾಗ್ರಹ ನಡೆಸಲಾಯಿತು.

ಹೋರಾಟದಲ್ಲಿ ಹಿರಿಯ ರಾಜಕಾರಣಿ ಮಾನ್ಯ ಶ್ರೀ ವೀರೇಂದ್ರ ಪಾಟೀಲ್ ಅವರು ಕೂಡ ಭಾಗವಹಿಸಿ ಸಹಕಾರ ನೀಡಿದರು. ಹೋರಾಟ ತೀವ್ರ ಸ್ವರೂಪ ಪಡೆದಾಗ ಮಣಿದ ಆಡಳಿತ ವರ್ಗ ೩೯ ಜನ ಕಾರ್ಮಿಕರ ಬದಲಿ ಸ್ಥಾನವನ್ನು ತೆಗೆದು ಪುನಃ ಖಾಯಂ ಮಾಡುವಲ್ಲಿ ಯಶಸ್ವಿಯಾಯಿತು."[೩೦] ಹಾಗೆಯೇ ಕಾರ್ಮಿಕರ ವೇತನ, ಕೆಲಸದ ಕ್ರಮ, ಬೋನಸ್, ಸ್ವಯಂ ನಿವೃತ್ತಿ ಯೋಜನೆ ಮುಂತಾದ ವಿಷಯಗಳನ್ನು ಮುಂದಿಟ್ಟುಕೊಂಡು ಕಾರ್ಮಿಕರ ಪರವಾಗಿ ಹೋರಾಟ ನಡೆಸಿತು.

**ಎಂ.ಎಸ್.ಕೆ. ಮಿಲ್ ನೌಕರ ಸಭಾ ಕಾರ್ಮಿಕರ ಸಂಘ**

ಎಂ.ಎಸ್.ಕೆ. ಮಿಲ್ಲಿನ ಕಾರ್ಮಿಕ ಚಳವಳಿಗಳಲ್ಲಿ ಅತ್ಯಂತ ಪ್ರಮುಖವಾಗಿ ಕಂಡುಬರುವ ಮುಖಂಡರೆಂದರೆ ಶ್ರೀ ಎಸ್.ಕೆ.ಕಾಂತಾ ಅವರು. "ಪ್ರಾರಂಭದಲ್ಲಿ ಈ ಮಿಲ್‌ನ ನೌಕರರೇ ಆಗಿದ್ದ ಎಸ್.ಕೆ.ಕಾಂತಾ ಅವರಿಗೆ ಕಾರ್ಮಿಕರ ಸಮಸ್ಯೆಗಳು, ಅವಶ್ಯಕತೆಗಳು ಮತ್ತು ಆಗುತ್ತಿದ್ದ ಅನ್ಯಾಯಗಳ ಅರಿವಿತ್ತು. ಹೀಗಾಗಿ ಎಲ್ಲಾ ಕಾರ್ಮಿಕರ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಎಂ.ಎಸ್.ಕೆ. ಮಿಲ್ ನೌಕರ ಸಭಾ ಎನ್ನುವ ಕಾರ್ಮಿಕರ ಸಂಘವನ್ನು ಸ್ಥಾಪಿಸಿ ಸಂಘದ ಅಧ್ಯಕ್ಷರಾದರು. ಶ್ರೀ ದಿಲೀಪ ಡಿ. ಕೌಜಲಗಿಕರ್ ಅವರು ಪ್ರಧಾನ ಕಾರ್ಯದರ್ಶಿಯಾಗಿದ್ದರು. ಸಂಘದ ಮೂಲಕ ಕಾಂತಾ ಅವರು ಕಾರ್ಮಿಕರ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಅನೇಕ ಹೋರಾಟಗಳನ್ನು ಕೈಗೊಂಡರು. ಆರಂಭದಲ್ಲಿ ಕಾರ್ಮಿಕರ ಸಂಬಳ ೫ ರೂ.ಗಳಿತ್ತು. ಆದರೆ, ಜೀವನಮಟ್ಟ ಏರುತ್ತಿದ್ದಾಗ ವೇತನ ಸಾಕಾಗುವುದಿಲ್ಲವೆಂದೂ ಮಿಲ್‌ನ ಲಾಭಾಂಶದಲ್ಲಿ ಕಾರ್ಮಿಕರಿಗೆ ಹೆಚ್ಚಿನ ಬೋನಸ್ ನೀಡಬೇಕೆಂದು ಉಗ್ರ ಹೋರಾಟವನ್ನು ಕೈಗೊಂಡರು. ಇವರ ಹೋರಾಟಕ್ಕೆ ಮಣಿದ ಆಡಳಿತ ವರ್ಗ ವೇತನವನ್ನು ಹೆಚ್ಚಿಸುವುದರ ಜೊತೆಗೆ ಶೇ. ೨೦ರಷ್ಟು ಬೋನಸ್ ನೀಡಿತು.

ನಂತರ ಕಚ್ಚಾವಸ್ತು ಪೂರೈಕೆಯಲ್ಲಿನ ವಿಳಂಬ, ಉತ್ಪಾದನಾ ವೆಚ್ಚದ ಕಾರಣ ನೀಡಿ ೧೯೮೮ರಲ್ಲಿ ಮಿಲ್ಲನ್ನು ಮತ್ತೊಮ್ಮೆ ಮುಚ್ಚಲಾಗಿತ್ತು. ಇದನ್ನು ವಿರೋಧಿಸಿದ ಕಾಂತಾ ಅವರು ಉಪವಾಸ ಸತ್ಯಾಗ್ರಹವನ್ನು ಕೈಗೊಳ್ಳುವುದರ ಮೂಲಕ ಚಳವಳಿ ಆರಂಭಿಸಿದರು. ಇವರ ಒತ್ತಡಕ್ಕೆ ಮಣಿದು ೧೯೮೯ರಲ್ಲಿ ಮಿಲ್ಲನ್ನು ಮತ್ತೆ ಆರಂಭಿಸಲಾಯಿತು. ಆದರೆ ಮಿಲ್ ಮುಚ್ಚಿದಾಗಿನ ೮ ತಿಂಗಳ ವೇತನವನ್ನು ಕಾರ್ಮಿಕರಿಗೆ ನೀಡಲು ನಿರಾಕರಿಸಲಾಗಿತ್ತು. ಆಗ ಕಾಂತ ಅವರು ಲೇಬರ್ ಕೋರ್ಟ್ ಮತ್ತು ಹೈಕೋರ್ಟ್‌ಗಳಲ್ಲಿ ನ್ಯಾಯಾಂಗ ಹೋರಾಟ ಆರಂಭಿಸಿದರು. ಇವರ ಹೋರಾಟದ ಫಲವಾಗಿ ಸುಮಾರು ೨೨೦೦ ಜನ ಕಾರ್ಮಿಕರಿಗೆ ನೇರವಾಗಿ ಒಟ್ಟು ಒಂದು ಕೋಟಿ ರೂಪಾಯಿ ದೊರೆಯುವಂತೆ ಮಾಡಿದರು.

ನಂತರ ಕಾರ್ಮಿಕರು ಕಾರ್ಖಾನೆಗಳಲ್ಲಿ ಹೆಚ್ಚುವರಿ ಕೆಲಸ ಮಾಡಿದಾಗ ಸಿಗುತ್ತಿದ್ದ ಸಿಂಗಲ್ ಓ.ಟಿ. ಸೌಲಭ್ಯವನ್ನು ಖಂಡಿಸಿ ಕಾರ್ಮಿಕರಿಗೆ ಡಬಲ್ ಓ.ಟಿ ಸೌಲಭ್ಯಕ್ಕೆ ಆಗ್ರಹಿಸಿ. ಹೋರಾಟ ಆರಂಭಿಸಿದರು. ಹೋರಾಟಕ್ಕೆ ಮಾಲೀಕರು ಮಣಿಯದಿದ್ದಾಗ ಉಪವಾಸ ಸತ್ಯಾಗ್ರಹದ ಮೂಲಕ ಚಳುವಳಿ ಆರಂಭಿಸಿ, ಸೌಲಭ್ಯವನ್ನು ಕಾರ್ಮಿಕರಿಗೆ ದೊರಕಿಸಿ ಕೊಟ್ಟರು. ಮುಂದೆ ೧೯೯೧ರಲ್ಲಿ ಕಾರ್ಮಿಕರಿಗೆ ಲೇ ಆಫ್ ಸಂಬಳ ವಿಚಾರವಾಗಿ ಉಗ್ರ ಚಳುವಳಿಯನ್ನು ಕೈಗೊಂಡಾಗ ಇವರನ್ನು ೧೫ ದಿನಗಳ ಕಾಲ ಜೈಲಿಗೆ ಹಾಕಲಾಯಿತು ಹಾಗೂ ಒಂದು ತಿಂಗಳ ಕಾಲ

ಮಿಲ್ಲನ್ನು ಬಂದ್ ಮಾಡಲಾಗಿತ್ತು. ಆಗ ಇವರ ಬಂಧನ ವಿರೋಧಿಸಿ ಎಲ್ಲಾ ಕಾರ್ಮಿಕರು ಬೃಹತ್ ಜಾಥಾ ಕೈಗೊಂಡು ಚಳುವಳಿ ಆರಂಭಿಸಿದರು. ಚಳುವಳಿಯಲ್ಲಿ 'ದುನಿಯಾಕೆ ಮುಜ್ದೂರ್ ಏಕ್ ಹೋ', 'ನ್ಯಾಯ ಕೊಡಿ ಇಲ್ಲವೇ ಸೀಟು ಬಿಡಿ' ಎನ್ನುವ ಘೋಷಣೆಗಳೊಂದಿಗೆ ಪ್ರತಿಭಟನೆ ಆರಂಭಿಸಿದರು. ಇವರ ಪ್ರತಿಭಟನೆ ತೀವ್ರವಾದಾಗ, ಕಾಂತಾ ಅವರನ್ನು ಬಿಡುಗಡೆಗೊಳಿಸಲಾಯಿತಲ್ಲದೆ ಕಾರ್ಮಿಕರಿಗೆ ಸಿಗಬೇಕಾಗಿದ್ದ ಎಲ್ಲಾ ಸೌಲಭ್ಯಗಳನ್ನು, ವಸತಿ ಸಮಸ್ಯೆಯನ್ನು ಬಗೆಹರಿಸುವ ಭರವಸೆ ನೀಡಲಾಯಿತು. ಮಿಲ್ ೨೦೦೨ರಲ್ಲಿ ಸಂಪೂರ್ಣವಾಗಿ ಮುಚ್ಚಿ ಹೋದ ನಂತರ ಕಾರ್ಮಿಕರಿಗೆ ಬರಬೇಕಾಗಿದ್ದ ಬಾಕಿ ವೇತನ, ಸೇವಾಭದ್ರತೆ ಪರಿಹಾರಗಳು ಕಾರ್ಮಿಕರಿಗೆ ನಿವೇಶನಗಳ ಹಂಚಿಕೆ, ಮುಂತಾದ ಬೇಡಿಕೆಗಳನ್ನಿಟ್ಟು ಹೋರಾಟವನ್ನು ಆರಂಭಿಸಿದರು."[೩೧] ಇಂದಿಗೂ ಕಾಂತಾ ಅವರು ಕಾರ್ಮಿಕರ, ಬಡವರ, ಶೋಷಿತರ, ಪರವಾಗಿ ಕಾನೂನಾತ್ಮಕ ಹೋರಾಟ ಮಾಡುತ್ತಿದ್ದಾರೆ.

### ಶಹಬಾದ್ ಎ.ಸಿ.ಸಿ. ಸಿಮೆಂಟ್ ಕಾರ್ಖಾನೆ ಕಾರ್ಮಿಕರ ಚಳುವಳಿ

ಗುಲಬರ್ಗಾ ಜಿಲ್ಲೆಯಲ್ಲಿ ನಡೆದಿರುವ ಕಾರ್ಮಿಕ ಹೋರಾಟಗಳಲ್ಲಿ ಗುರುತಿಸಬಹುದಾದ ಇನ್ನೊಂದು ಪ್ರಮುಖವಾದ ಹೋರಾಟವೆಂದರೆ, ಶಹಬಾದ್ ಎ.ಸಿ.ಸಿ. ಸಿಮೆಂಟ್ ಕಾರ್ಖಾನೆ ಕಾರ್ಮಿಕರ ಹೋರಾಟವಾಗಿದೆ. ಗುಲಬರ್ಗಾ ಜಿಲ್ಲೆಯು ಅಪಾರ ನೈಸರ್ಗಿಕ ಸಂಪತ್ತನ್ನು ಹೊಂದಿದೆ. ಅದರಲ್ಲೂ ಸಿಮೆಂಟ್ ತಯಾರಿಕೆಗೆ ಬೇಕಾಗುವ ಮೂಲ ಕಚ್ಚಾವಸ್ತುವಾದ ಸುಣ್ಣದ ಕಲ್ಲು ಈ ಭಾಗದ ಶಹಬಾದ್, ವಾಡಿ, ಸೇಡಂ, ಕುರುಕುಂಟಾಪ್ರದೇಶಗಳಲ್ಲಿ ಅಧಿಕ ಪ್ರಮಾಣದಲ್ಲಿ ದೊರೆಯುತ್ತದೆ. ಹೀಗಾಗಿ ಸ್ವಾತಂತ್ರ್ಯಪೂರ್ವ ಕಾಲದಲ್ಲಿಯೇ ಇಲ್ಲಿ ಸಿಮೆಂಟ್ ಕಾರ್ಖಾನೆಗಳು ಸ್ಥಾಪಿತಗೊಂಡಿದ್ದವು. ಹೀಗೆ ಸ್ಥಾಪನೆಗೊಂಡ ಸಿಮೆಂಟ್ ಕಾರ್ಖಾನೆಯಲ್ಲಿ ಎ.ಸಿ.ಸಿ. ಸಿಮೆಂಟ್ ಕಾರ್ಖಾನೆ ಮೊಟ್ಟಮೊದಲದಾಗಿದೆ. ೧೯೨೪ರಲ್ಲಿ ಎ.ಸಿ.ಸಿ. ಸಿಮೆಂಟ್ ಕಾರ್ಖಾನೆಯನ್ನು ಶಹಬಾದಿನಲ್ಲಿ ಆರಂಭಿಸಲಾಗಿತ್ತು. ಅಂದಿನ ಕಾಲಕ್ಕೆ ದಕ್ಷಿಣ ಭಾರತದಲ್ಲೇ ಮೊಟ್ಟಮೊದಲ ಸಿಮೆಂಟ್ ಕಂಪನಿ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಕಾರ್ಖಾನೆಯ ಉತ್ಪಾದನೆ ಎಷ್ಟೊಂದು ದೊಡ್ಡ ಪ್ರಮಾಣದಲ್ಲಿತ್ತೆಂದರೆ ಇಡೀ ದೇಶದ ಅರ್ಧ ಭಾಗಕ್ಕೆ ಇಲ್ಲಿಯ ಸಿಮೆಂಟ್ ಪೂರೈಕೆಯಾಗುತ್ತಿತ್ತು ಹಾಗೂ ೧೯೯೦ರವರೆಗೆ ಕಾರ್ಖಾನೆಯು ಯಾವ ಸಮಸ್ಯೆಗಳಿಲ್ಲದೆ ಉತ್ಪಾದನೆಯಲ್ಲಿ ತೊಡಗಿತ್ತು. ಆದರೆ ೧೯೯೦ರಲ್ಲಿ ಎ.ಸಿ.ಸಿ. ಕಾರ್ಖಾನೆಯ ಮಾಲೀಕರು ಕಲ್ಕತ್ತ ಮೂಲದ ವಿರಾಲಾಲ್, ಮದನ್ಲಾಲ್ ಪೋದ್ಯಾರ್(ಹೆಚ್.ಎಂ.ಪಿ.) ಎನ್ನುವವರಿಗೆ ಮಾರಾಟ ಮಾಡಿದರು. ಕಾರ್ಖಾನೆಯನ್ನು ಇವರಿಗೆ ಮಾರಾಟ ಮಾಡಲು ಉತ್ಪಾದನಾ ವೆಚ್ಚ ಹೆಚ್ಚಳ ಮುಂತಾದ ಬೇರೆ ಬೇರೆ ಕಾರಣಗಳನ್ನು ನೀಡಿದ್ದರು. ಒಟ್ಟಿನಲ್ಲಿ ಕಾರ್ಖಾನೆ ಹೆಚ್.ಎಂ.ಪಿ. ಎನ್ನುವ ಹೊಸ ಹೆಸರಿನೊಂದಿಗೆ ಉತ್ಪಾದನೆಯನ್ನು ಮುಂದುವರಿಸಿತ್ತು. ಆಗ ಮಾಲೀಕತ್ವದ ಹಸ್ತಾಂತರದ ಸಮಯದಲ್ಲಿ ಕಾರ್ಮಿಕರ ಹಿತ ಕಾಪಾಡುವಂತಹ ಅನೇಕ ಷರತ್ತುಗಳಿಗೆ ಹೊಸ ಆಡಳಿತವರ್ಗ ಒಪ್ಪಿಗೆ ಸೂಚಿಸಿತ್ತು.

ಆದರೆ ಕಾರ್ಖಾನೆಯು ಮೊದಲಿನಂತೆ ಸರಾಗವಾಗಿ ನಡೆಯಲಿಲ್ಲ. ಅದಕ್ಕೆ ಕಾರಣಗಳೇನೆಂದರೆ ಆ ಸಮಯದಲ್ಲಿ ಆ ಭಾಗದ ವಾಡಿ, ಸೇಡಂ, ಮಾಳಖೇಡದಲ್ಲಿ ಅತ್ಯಾಧುನಿಕ ಯಂತ್ರೋಪಕರಣ

ಗಳನ್ನು ಹೊಂದಿದ್ದ, ಅತ್ಯುನ್ನತ ತಂತ್ರಜ್ಞಾನ ಮತ್ತು ತಂತ್ರಜ್ಞರನ್ನೊಳಗೊಂಡ ಬಿರ್ಲಾ ಕಂಪನಿಯ 'ರಾಜಶ್ರೀ' ಮತ್ತು 'ವಾಸವದತ್ತಾ' ಹೆಸರಿನ ಬ್ರಾಂಡ್ ಹೊಂದಿದ್ದ ಸಿಮೆಂಟ್ ಕಾರ್ಖಾನೆಗಳು ಆರಂಭವಾಗಿ ಮಾರುಕಟ್ಟೆಯನ್ನು ಆಕ್ರಮಿಸತೊಡಗಿದ್ದವು. ಆದರೆ ಹೆಚ್.ಎಂ.ಪಿ. ಕಾರ್ಖಾನೆ ಮಾಲೀಕರು ಮಾತ್ರ ಕಾರ್ಖಾನೆಯನ್ನು ಆಧುನೀಕರಣಗೊಳಿಸದೆ, ಹೊಸ ಯಂತ್ರೋಪಕರಣಗಳನ್ನು ಅಳವಡಿಸಿಕೊಳ್ಳದೆ ಹಳೇ ತಂತ್ರಜ್ಞಾನದೊಂದಿಗೆ ಉತ್ಪಾದನೆಯಲ್ಲಿ ತೊಡಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಒಂದು ಕಡೆ ಹೊಸ ಸಿಮೆಂಟ್ ಕಂಪನಿಗಳೊಂದಿಗೆ ಪೈಪೋಟಿ ಮಾಡುವುದು ಕಷ್ಟವಾದರೆ ಇನ್ನೊಂದು ಕಡೆ, ಕಾರ್ಖಾನೆಯಲ್ಲಿ ಉತ್ಪಾದನಾ ವೆಚ್ಚ ಮತ್ತು ಕಾರ್ಮಿಕರ ವೇತನ ಹೆಚ್ಚಾಗತೊಡಗಿತ್ತು. ಇಂತಹ ಬೆಳವಣಿಗೆಯಿಂದಾಗಿ ಕೊನೆಗೆ ತಾಂತ್ರಿಕ ತೊಂದರೆಗಳನ್ನು ಮುಂದೆ ಮಾಡಿ ಕಾರ್ಖಾನೆಯನ್ನು ಏಕಾಏಕಿ ಮುಚ್ಚಲಾಯಿತು. ಇದರಿಂದ ತೊಂದರೆಗೆ ಸಿಲುಕಿದ ಕಾರ್ಮಿಕರು, ಕಾರ್ಖಾನೆ ಮುಚ್ಚಿದ್ದರ ವಿರುದ್ಧ ಹೋರಾಟಕ್ಕಿಳಿದರು.

ಶ್ರೀನಿವಾಸ ಗುಡಿ ಶಹಬಾದ್ ಕಾರ್ಖಾನೆಗಳ ಕಾರ್ಮಿಕರನ್ನು ಸಂಘಟಿಸಿ ಕಮ್ಯೂನಿಸ್ಟ್ ಸಿದ್ಧಾಂತಗಳ ಅಡಿಯಲ್ಲಿ ಕಾರ್ಮಿಕರ ಪರವಾಗಿ ಹೋರಾಟವನ್ನು ಆರಂಭಿಸಿದರು. ಅನೇಕ ತಿಂಗಳುಗಳ ಕಾಲ ನಡೆದ ಕಾರ್ಮಿಕರ ಹೋರಾಟಕ್ಕೆ ಕಾರ್ಖಾನೆ ಮಾಲೀಕರಿಂದ ಸೂಕ್ತ ಪ್ರತಿಕ್ರಿಯೆ ಸಿಗಲಿಲ್ಲ. ನಷ್ಟದ ನೆಪ ಹೇಳಿ ಉತ್ಪಾದನೆಯ ಪುನರ್ ಆರಂಭಕ್ಕೆ ನಿರಾಕರಿಸಿದರಲ್ಲದೇ ಕಾರ್ಮಿಕರಿಗೆ ಕೊಡಬೇಕಾಗಿದ್ದ ಇತರ ಸೌಲಭ್ಯಗಳನ್ನು ನೀಡಲು ಮಾಲೀಕರು ನಿರಾಕರಿಸಿದರು. ಹೀಗಾಗಿ ಕಾರ್ಮಿಕರು ನ್ಯಾಯಾಂಗ ಹೋರಾಟಕ್ಕೆ ಮುಂದಾಗಿ ನ್ಯಾಯಾಲಯದ ಮೊರೆ ಹೋದರು. ಕಾರ್ಮಿಕರು ಹೆಚ್.ಎಂ.ಪಿ. ಮಾಲೀಕರ ವಿರುದ್ಧ ಆಪಾದನೆ ಮಾಡುತ್ತಾ, ಹೆಚ್.ಎಂ.ಪಿ. ಮಾಲೀಕರು ಎ.ಸಿ.ಸಿ. ಮಾಲೀಕತ್ವದಿಂದ ಕಾರ್ಖಾನೆಯನ್ನು ಕೊಳ್ಳುವಾಗ ಮಾಡಿಕೊಂಡಿದ್ದ ಷರತ್ತುಗಳಿಗೆ ಬದ್ಧರಾಗಬೇಕೆಂದು ನ್ಯಾಯಾಲಯದ ಮೊರೆ ಹೋದರು. ಆದರೆ ನ್ಯಾಯಾಲಯದಲ್ಲಿ ಮೊಕದ್ದಮೆಯು ನಿಧಾನಗತಿಯಲ್ಲಿ ಸಾಗಿದ್ದರಿಂದ ಕಾರ್ಮಿಕರ ಸ್ಥಿತಿ ಮಾತ್ರ ಚಿಂತಾಜನಕವಾಯಿತು.

ಕಾರ್ಖಾನೆಯ ಬದುಕನ್ನೇ ನಂಬಿಕೊಂಡಿದ್ದ ಸಾವಿರಾರು ಕಾರ್ಮಿಕರಿಗೆ ವೇತನವಿಲ್ಲದೆ ಜೀವನ ನಿರ್ವಹಣೆ ಕಷ್ಟವಾಯಿತು. ನ್ಯಾಯಾಲಯದಲ್ಲಿ ಖರ್ಚು ವೆಚ್ಚಕ್ಕೆ ತಮ್ಮಲ್ಲಿದ್ದ ಆಸ್ತಿಯನ್ನು ಮಾರಿಕೊಂಡಿದ್ದರು. ಜೀವನಕ್ಕೆ ಮೂಲಾಧಾರವಾದ ಆದಾಯವೇ ನಿಂತು ಹೋಗಿ ತಿಂಗಳುಗಳು ಗತಿಸುತ್ತಿದ್ದಂತೆ ಇವರು ದಾರುಣ ಸ್ಥಿತಿ ತಲುಪಿದರು. ಇವರ ಮಕ್ಕಳ ಶಿಕ್ಷಣಕ್ಕೂ ಹಣ ಹೊಂದಿಸಲಾರದೆ ಎಷ್ಟೋ ಮಕ್ಕಳು ಶಿಕ್ಷಣವನ್ನು ತೊರೆದರು. ಕಾರ್ಮಿಕರು ಹಾಗೂ ಅವರ ಮಕ್ಕಳು ಕೂಲಿಗೆ, ಕಾಯಿಪಲ್ಲೆ ಮಾರಾಟ ಮಾಡುವ ಉದ್ಯೋಗ ಕೈಗೊಂಡರು. ಕಾರ್ಮಿಕರ ಹೆಂಡತಿಯರು, ಶ್ರೀಮಂತರ ಮನೆಯಲ್ಲಿ ಮನೆಗೆಲಸಕ್ಕೆ ಸೇರಿಕೊಂಡರು. ಇನ್ನು ಎಷ್ಟೋ ಜನ ವಯಸ್ಸಾದವರು ತಮ್ಮ ಔಷಧಿಗೂ ಹಣ ಇಲ್ಲದೆ ಸಾವನ್ನಪ್ಪಿದರು. ಕಾರ್ಮಿಕರ ಪರಿಸ್ಥಿತಿ ಚಿಂತಾಜನಕವಾಗಿದ್ದರೂ ಸರಕಾರವಾಗಲಿ ಸ್ಥಳೀಯ ಜನಪ್ರತಿನಿಧಿಗಳಾಗಲಿ ಇವರಿಗೆ ಬೆಂಬಲವನ್ನಾಗಲಿ ಬದಲಿ ವ್ಯವಸ್ಥೆಯನ್ನಾಗಲಿ ಮಾಡಲಿಲ್ಲ. ಹೀಗಾಗಿ ಎಷ್ಟೋ ಕಾರ್ಮಿಕರು ಜೀವನ ನಿರ್ವಹಣೆಗೆ ಬೇರೆ ಊರುಗಳಿಗೆ ಗುಳೆ ಹೊರಟರು. ಇನ್ನೂ, ಇತರ ಎಷ್ಟೋ ಕಾರ್ಮಿಕರು ಮಾನಸಿಕ ತೊಳಲಾಟದಲ್ಲಿದ್ದು ನ್ಯಾಯಾಲಯದ ತೀರ್ಮ ಶೀಘ್ರದಲ್ಲೇ

ಹೊರಬೀಳುತ್ತದೆ, ಕಾರ್ಖಾನೆ ಮತ್ತೆ ಆರಂಭವಾಗುತ್ತದೆ, ಮತ್ತೆ ನಮ್ಮ ಹೊಸ ಜೀವನ ಪ್ರಾರಂಭವಾಗುತ್ತದೆ ಎನ್ನುವ ಭರವಸೆಯಲ್ಲೇ ಕಾಲ ಕಳೆದರು. ಕೊನೆಗೆ ನ್ಯಾಯಾಲಯವು ಕಾರ್ಮಿಕರ ಪರ ತೀರ್ಪು ನೀಡಿ, ಕಾರ್ಮಿಕರಿಗೆ ಬೋನಸ್ ಹಣವನ್ನು, ವೇತನ ಬಾಕಿಯನ್ನು ನೀಡುವಂತೆ ಕಾರ್ಖಾನೆಯನ್ನು ಪುನರ್ ಆರಂಭಿಸುವಂತೆ ತೀರ್ಪು ನೀಡಿತು.

ಆದರೆ ಆ ವೇಳೆಗಾಗಲೇ ಹೆಚ್.ಎಂ.ಪಿ. ಮಾಲೀಕ ಕಾರ್ಖಾನೆಯನ್ನು 'ಜುವಾಹರ್' ಎನ್ನುವ ಕಂಪನಿಗೆ ಮಾರಾಟ ಮಾಡಿದ್ದರು. ನಂತರ ಜುವಾಹರ್ ಸಿಮೆಂಟ್ ಹೆಸರಿನಲ್ಲಿ ಕಾರ್ಖಾನೆ ಆರಂಭವಾಯಿತಾದರೂ, ಆ ಹೊತ್ತಿಗಾಗಲೇ ಅನೇಕ ಕಾರ್ಮಿಕರು ಊರು ತೊರೆದಿದ್ದರು. ಇನ್ನೂ ಕೆಲವರು ವಯಸ್ಸು ಮಿತಿ ದಾಟಿ ಕೆಲಸಕ್ಕೆ ಅನರ್ಹರಾಗಿದ್ದರು. ಇನ್ನು ಕೆಲವರು ಕಾರ್ಖಾನೆಯ ಸಹವಾಸವೇ ಬೇಡ ಎನ್ನುವಂಥ ಸ್ಥಿತಿ ತಲುಪಿದ್ದರು. ಕೊನೆಗೆ ಹೊಸ ಕಾರ್ಖಾನೆಯಲ್ಲಿ ಮತ್ತೆ ಕೆಲಸಕ್ಕೆ ಸೇರಿದ ಕಾರ್ಮಿಕರ ಸಂಖ್ಯೆ ಕೇವಲ ಇನ್ನೂರು ಮಾತ್ರ. ಜೊತೆಗೆ ನ್ಯಾಯಾಲಯದ ತೀರ್ಪಿನ ಅನ್ವಯ ಹಿಂದಿನ ಕಾರ್ಮಿಕರಿಗೆ ಸಲ್ಲಬೇಕಾಗಿದ್ದ ಸೌಲಭ್ಯಗಳು ದೊರೆಯಲಿಲ್ಲ. ಹೀಗೆ ಅನೇಕ ದಶಕಗಳವರೆಗೆ ಇಡೀ ದಕ್ಷಿಣ ಭಾರತದಲ್ಲೇ ಮೊಟ್ಟಮೊದಲ ಬೃಹತ್ ಸಿಮೆಂಟ್ ಕಾರ್ಖಾನೆ ಮುಚ್ಚಿ ಹೋಗುವುದರ ಜೊತೆಗೆ ಇಲ್ಲಿನ ಕಾರ್ಮಿಕರ ಬದುಕು, ಭವಿಷ್ಯ ಕಮರಿ ಹೋಗಿತ್ತು. ಕಾರ್ಮಿಕರು ಎಂಥ ಚಳವಳಿಯನ್ನು ಹಮ್ಮಿಕೊಂಡರೂ ಸಹ ದೀರ್ಘಕಾಲ ಅದನ್ನು ಮುಂದುವರಿಸಲಾರದೆ, ನಿಸ್ವಾರ್ಥ ರಾಜಕಾರಣಿಗಳ ಬೆಂಬಲ ಸಿಗದೆ. ಹೊಟ್ಟೆಪಾಡಿನ ಚಿಂತೆಯಿಂದ ಹೋರಾಟವನ್ನೇ ಕೈಬಿಡುವಂತಾಯಿತು.

### ಗುಲಬರ್ಗಾ ಪೌರಕಾರ್ಮಿಕರ ಹೋರಾಟ

ಗುಲಬರ್ಗಾ ಮಹಾನಗರ ಪಾಲಿಕೆಯಲ್ಲಿ ಗುತ್ತಿಗೆ ಆಧಾರಿತದಲ್ಲಿ ೪೭೦ ಪೌರ ಕಾರ್ಮಿಕರು ಕಳೆದ ೧೫ ವರ್ಷಗಳಿಂದ ನಗರದ ಸ್ವಚ್ಛತಾ ಕೆಲಸ ನಿರ್ವಹಿಸುತ್ತಾ ಬಂದಿದ್ದರು. ಕಳೆದ ಮೂರು ವರ್ಷಗಳವರೆಗೆ ಯಾವುದೇ ಸಮಸ್ಯೆಯಿಲ್ಲದೆ ಪೌರಕಾರ್ಮಿಕರು ತಮ್ಮ ಕರ್ತವ್ಯ ನಿರ್ವಹಿಸುತ್ತಾ ವೇತನ ಪಡೆಯುತ್ತಿದ್ದರು. ಆದರೆ ಇತ್ತೀಚೆಗೆ ದಿನನಿತ್ಯ ಬಳಕೆಯ ವಸ್ತುಗಳ ಬೆಲೆ ಏರುತ್ತಿರುವುದರಿಂದ ಜೀವನ ನಿರ್ವಹಣೆ ಬಹು ಕಷ್ಟಕರವೆನಿಸಿತು. ಇಂತಹ ಕಷ್ಟ ಪರಿಸ್ಥಿತಿ ಎದುರಾದಾಗ ಪೌರಕಾರ್ಮಿಕರು ತಮ್ಮ ವೇತನ ಹೆಚ್ಚಿಸುವಂತೆ ಹಾಗೂ ಸಮಾನ ಕೆಲಸಕ್ಕೆ ಸಮಾನ ವೇತನ ಅಪೇಕ್ಷಿಸಿ ಬೇಡಿಕೆಯನ್ನಿಟ್ಟರು. ಆದರೆ ಮಹಾನಗರ ಪಾಲಿಕೆ ಆಡಳಿತ, ಇವರ ಬೇಡಿಕೆಗಳಿಗೆ ಸ್ಪಂದಿಸಲಿಲ್ಲ. ಇಂತಹ ಸಂದರ್ಭದಲ್ಲಿ ಎಲ್ಲಾ ಪೌರ ಕಾರ್ಮಿಕರು ಒಗ್ಗಟ್ಟಾಗಿ ಒಂದೆಡೆ ಸೇರಿ ತಮ್ಮ ಸಮಸ್ಯೆಗಳ ಬಗ್ಗೆ ಹಾಗೂ ಮುಂದಿನ ಹೆಜ್ಜೆಯ ಬಗ್ಗೆ ಚರ್ಚೆ ಮಾಡ ತೊಡಗಿದರು.

ಆಗ ಕಾರ್ಮಿಕರ ಬೆಂಬಲಕ್ಕೆ ನಿಂತು ಹೋರಾಟದ ನೇತೃತ್ವ ವಹಿಸಿದವರು ಎಸ್.ಕೆ.ಕಾಂತಾ ಅವರು. "ಪೌರಕಾರ್ಮಿಕರು ಗುಲಬರ್ಗಾ ಮಹಾನಗರ ಪಾಲಿಕೆಯ ಆಡಳಿತವರ್ಗದ ಗಮನ ಸೆಳೆಯಲು ವಿವಿಧ ಹಂತದ ಹೋರಾಟಗಳನ್ನು ಆರಂಭಿಸಿದರು. ರಸ್ತೆ ನಿಲುಗಡೆ ಚಳುವಳಿ, ಧರಣಿ ಸತ್ಯಾಗ್ರಹಗಳ ಮೂಲಕ ಹೋರಾಟ ಮಾಡಿದರೂ, ಆಡಳಿತ ವರ್ಗ ಸರಿಯಾಗಿ ಸ್ಪಂದಿಸದಿದ್ದಾಗ, ಕಾಂತಾ ಅವರಿಗೆ ಇನ್ನಷ್ಟು ತೀವ್ರ ಸ್ವರೂಪದ ಹೋರಾಟಗಳನ್ನು ಹಮ್ಮಿಕೊಳ್ಳುವ

ಅನಿವಾರ್ಯತೆ ಎದುರಾಯಿತು. ಆಗ ತಿಂಗಳುಗಟ್ಟಲೆ ಪಾಲಿಕೆ ಎದುರಿನಲ್ಲಿ ಸತ್ಯಾಗ್ರಹ ಆರಂಭಿಸಿದರು. ಆದರೆ ಅನೇಕ ತಿಂಗಳುಗಳು ಕಳೆದರೂ ಪಾಲಿಕೆ ಪ್ರತಿಕ್ರಿಯಿಸದಿದ್ದಾಗ, ಪಾಲಿಕೆಗೆ ಮುತ್ತಿಗೆ ಹಾಕುವ, ಅಧಿಕಾರಿಗಳಿಗೆ ದಿಗ್ಬಂದನ ಹಾಕುವ ಹೋರಾಟಗಳನ್ನು ಆರಂಭಿಸಿದರು. ಆಗ ಪಾಲಿಕೆ ಸದಸ್ಯರು, ಇವರ ಮತ್ತು ಹೋರಾಟದಲ್ಲಿ ನಿರತರಾದವರ ಮೇಲೆ ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸಿದರು. ಅದೇ ಸಮಯದಲ್ಲಿ ಪಾಲಿಕೆ ಆಡಳಿತದಿಂದ ಪೌರಕಾರ್ಮಿಕರಿಗೆ ಬರಬೇಕಾಗಿದ್ದ ೨೫ ತಿಂಗಳ ವೇತನವನ್ನು ತಡೆಹಿಡಿದಿದ್ದರು. ಹೀಗೆ ಹೋರಾಟಗಾರರ ವಿರುದ್ಧ ದೂರು ಮತ್ತು ವೇತನ ತಡೆಹಿಡಿದ ಕ್ರಮ ವಿರೋಧಿಸಿ ಪಂಜಿನ ಮೆರವಣಿಗೆ ನಡೆಸಲು ಮುಂದಾಗಿದ್ದ, ನೇತೃತ್ವ ವಹಿಸಿದ್ದ ಕಾಂತಾ ಅವರನ್ನು ಸೇರಿದಂತೆ, ೩೮೦ ಪೌರಕಾರ್ಮಿಕರನ್ನು ಪೋಲೀಸರು ಬಂಧಿಸಿ ಬಳ್ಳಾರಿ ಕಾರಾಗೃಹದಲ್ಲಿರಿಸಿದರು.

ಅನೇಕ ತಿಂಗಳುಗಳು ಕಳೆದರೂ ಸರಕಾರವಾಗಲಿ, ಗುಲಬರ್ಗಾ ಪಾಲಿಕೆಯಾಗಲಿ ಕಾರ್ಮಿಕರ ಸಮಸ್ಯೆ ಕುರಿತು ಯಾವುದೇ ಚಿಂತನೆಯನ್ನಾಗಲಿ, ಪರಿಹಾರ ಕ್ರಮಗಳನ್ನಾಗಲಿ ಕೈಗೊಳ್ಳಲು ಮುಂದಾಗಲಿಲ್ಲ. ಆಗ ಕಾಂತಾ ಅವರು ಕಾರ್ಮಿಕರ ಸಮಸ್ಯೆ ಬಗ್ಗೆ ಸರಕಾರದ ಗಮನ ಸೆಳೆಯಲು ಹಾಗೂ ಒತ್ತಡ ಹೇರಲು ಉಪವಾಸ ಸತ್ಯಾಗ್ರಹ ಕೈಗೊಂಡು ಪೌರಕಾರ್ಮಿಕರಿಗೆ ೩೫ ತಿಂಗಳಿಂದ ಬಾಕಿ ಇರುವ ವೆತನ ಬಿಡುಗಡೆಗೆ ಆಗ್ರಹಿಸಿದರು. ದೀರ್ಘಾವಧಿಯ ಉಪವಾಸದಿಂದ ತೀವ್ರ ಅಸ್ವಸ್ಥರಾದ ಕಾಂತಾ ಅವರನ್ನು ರಾಯಚೂರಿನ ಒಪೆಕ್ ಆಸ್ಪತ್ರೆಗೆ ದಾಖಲಿಸಲಾಯಿತು. ಆದರೆ ಆಸ್ಪತ್ರೆಗೆ ಸೇರಿದ ನಂತರವೂ ಇವರು ಉಪವಾಸವನ್ನು ನಿಲ್ಲಿಸದೆ ಮುಂದುವರಿಸಿದರು. ಸತತ ೧೦ ದಿನಗಳ ಉಪವಾಸದಿಂದ ಅವರ ಆರೋಗ್ಯ ಹದಗೆಟ್ಟು ಪರಿಸ್ಥಿತಿ ವಿಕೋಪಕ್ಕೆ ಹೋಗುವುದನ್ನು ಅರಿತ ಸರಕಾರ, ಸರಕಾರದ ಪರವಾಗಿ ಸಚಿವ ಸುರೇಶ್‌ಕುಮಾರ್ ಅವರನ್ನು ಕಾಂತಾ ಅವರ ಭೇಟಿಗೆ ಕಳುಹಿಸಿಕೊಟ್ಟಿತು. ಇವರು ಕಾಂತಾ ಅವರೊಂದಿಗೆ ಸಂಧಾನದ ಮಾತುಕತೆ ನಡೆಸಿ ಸರಕಾರದ ನಿಲುವನ್ನು, ಮುಖ್ಯಮಂತ್ರಿಗಳ ಸಂದೇಶವನ್ನು ಮುಟ್ಟಿಸಿ, ಪೌರಕಾರ್ಮಿಕರ ವೇತನ ಸಮಸ್ಯೆ ಬಗ್ಗೆ ಚರ್ಚಿಸಲು ಸರಕಾರ ಸಿದ್ಧವಿದೆ ಹಾಗೂ ಇದಕ್ಕಾಗಿ ಮುಖ್ಯಮಂತ್ರಿಗಳು ಕಾಂತಾ ಅವರನ್ನು ಮೇ ೧೪ (೨೦೧೦)ರಂದು ಸಭೆಗೆ ಆಹ್ವಾನ ನೀಡಿದ್ದಾರೆಂದೂ ಹಾಗೂ ಕಾರ್ಮಿಕರಿಗೆ ಅನ್ಯಾಯವಾಗದ ರೀತಿಯಲ್ಲಿ ಸರಕಾರ ನಿರ್ಧಾರ ಕೈಗೊಳ್ಳಲಿದೆಯೆಂದು, ಹಾಗಾಗಿ ಕಾಂತಾ ಅವರು ಈಗ ಕೈಗೊಂಡಿರುವ ಉಪವಾಸವನ್ನು ದಯವಿಟ್ಟು ಕೈಬಿಡಬೇಕು ಎಂದು ಮನವಿ ಮಾಡಿದರು. ಸಚಿವರ ಮನವಿಯನ್ನು ಒಪ್ಪಿಕೊಂಡ ಕಾಂತಾ ಅವರು ೧೨.೫.೨೦೧೦ರಂದು ಉಪವಾಸ ನಿಲ್ಲಿಸಿ ಸರಕಾರದ ಜೊತೆ ಮಾತುಕತೆಗೆ ಮುಂದಾದರು.

ಇದೇ ಸಮಯದಲ್ಲಿ ಕಾಂತಾ ಅವರ ಉಪವಾಸ ಸತ್ಯಾಗ್ರಹ ಮತ್ತು ಪೌರಕಾರ್ಮಿಕರ ವೇತನ ಸಮಸ್ಯೆ ಕುರಿತಂತೆ, ಗುಲ್ಬರ್ಗಾ ಜಿಲ್ಲೆಯ ವಿವಿಧ ನಗರಗಳಲ್ಲಿ ಕಾರ್ಮಿಕರಿಗೆ ಬೆಂಬಲವಾಗಿ ಪ್ರತಿಭಟನೆಗಳು ಆರಂಭವಾದವು. ಅದರಲ್ಲೂ ಯಾದಗಿರಿ ಜಿಲ್ಲೆಯಲ್ಲಿ ಜಿಲ್ಲಾಧ್ಯಕ್ಷರಾದ ಉಮೇಶ್ ಕೆ. ಮುದ್ನಾಳ್ ಅವರ ನೇತೃತ್ವದಲ್ಲಿ ಹೋರಾಟಕ್ಕಿಳಿದರು. ಕಾರ್ಮಿಕರ ಮೇಲೆ ದೌರ್ಜನ್ಯ ಎಸಗಿ ನಾನಾ ಮೊಕದ್ದಮೆ ಹಾಕುವ ಸರಕಾರದ ಕಾರ್ಮಿಕವಿರೋಧಿ ನೀತಿಯ ವಿರುದ್ಧ

ಹೋರಾಟ ತೀವ್ರಗೊಳಿಸುವ ಎಚ್ಚರಿಕೆ ನೀಡಿದರು. ಅಲ್ಲದೆ ಗುಲಬರ್ಗಾದಲ್ಲಿ ಜರುಗಿದ ಪ್ರತಿಭಟನೆಯಲ್ಲಿ ಮೃತಪಟ್ಟ ಮಹಿಳಾಕಾರ್ಮಿಕರಾದ ಅಂಬೂಬಾಯಿ ಕುಟುಂಬದವರಿಗೆ ೫ ಲಕ್ಷ ರೂ. ಪರಿಹಾರ ನೀಡಬೇಕು, ಕಳೆದ ೩೬ ತಿಂಗಳಿನಿಂದ ಬಾಕಿ ಇರುವ ಪೌರಕಾರ್ಮಿಕರ ಸೇವೆಯನ್ನು ಖಾಯಂಗೊಳಿಸಬೇಕು ಎಂದು ಆಗ್ರಹಿಸಿದರು."[೨]

ನಂತರದ ಬೆಳವಣಿಗೆಯಲ್ಲಿ ಸರಕಾರ ಹಾಗೂ ಕಾಂತಾ ಅವರ ನಡುವೆ ನಡೆದ ಮಾತುಕತೆಯಲ್ಲಿ ಸರಕಾರ ತಾಂತ್ರಿಕ ಸಮಸ್ಯೆ ಮುಂದೊಡ್ಡಿ ಹೀಗಾಗಿ 'ಸ್ವಸಹಾಯ ಗುಂಪು' ರಚನೆ ಮೂಲಕ ವೇತನ ಪಾವತಿಸುವ ಪ್ರಸ್ತಾಪ ಮುಂದಿಟ್ಟಿತು. ಅದಕ್ಕೆ ಪ್ರತಿಕ್ರಿಯೆಯಾಗಿ ಕಾಂತಾ ೩೪ ಸ್ವಸಹಾಯ ಗುಂಪು ರಚನೆ ಮಾಡಿ ಆ ಮೂಲಕ ವೇತನ ಪಾವತಿಸುವ ಸರ್ಕಾರದ ಪ್ರಸ್ತಾಪನೆಯನ್ನು ತಿರಸ್ಕರಿಸಿ, ನೇರವಾಗಿ ಗುಲಬರ್ಗಾ ಮಹಾನಗರ ಪಾಲಿಕೆಯೇ ಪೌರಕಾರ್ಮಿಕರಿಗೆ ವೇತನ ಪಾವತಿಸಬೇಕು ಎಂಬ ಬೇಡಿಕೆ ಇಟ್ಟರು. ಇದಕ್ಕೆ ಸರಕಾರ ಒಪ್ಪದಿದ್ದಾಗ ಮಾತುಕತೆ ವಿಫಲವಾಯಿತು. ಹೀಗಾಗಿ ಕಾಂತಾ ಮತ್ತು ಕಾರ್ಮಿಕರು ನ್ಯಾಯಾಲಯದ ಮೊರೆ ಹೋದರು. ಕಾರ್ಮಿಕರ ನ್ಯಾಯಾಲಯ ಕಾರ್ಮಿಕರ ಪರ ಆದೇಶ ನೀಡಿತು. ಆದರೆ ಇಷ್ಟೆಲ್ಲ ಆದರೂ ಪಾಲಿಕೆ ಆಡಳಿತ ಹಾಗೂ ಸರಕಾರ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಸರಕಾರ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಲು ತಯಾರಿ ಆರಂಭಿಸಿತು.

ಇಂದಿಗೂ, ಪಾಲಿಕೆ ಮತ್ತು ಸರಕಾರದ ನೀತಿಯಿಂದಾಗಿ ೪೭೦ ಕಾರ್ಮಿಕರ ಬದುಕು ಅತಂತ್ರವಾಯಿತು. ಕೆಲಸವಿಲ್ಲದೆ, ಸಂಬಳವಿಲ್ಲದೆ ಇವರ ಬದುಕು ದುಸ್ತರವಾಯಿತು ಇವರ ಅವಲಂಬಿತ ಕುಟುಂಬಗಳು ಬೀದಿಗೆ ಬಿದ್ದಿವೆ. ಜೀವನ ಸಾಗಿಸಲು ಪರ್ಯಾಯ ಕೆಲಸಕ್ಕಾಗಿ ಹೋಗಲೂ ಆಗದೆ ಬಿಡಲೂ ಆಗದೆ ಕಾರ್ಮಿಕರಿಗೆ ಜಿಗುಪ್ಸೆ ಉಂಟಾಗಿದೆ. ಸತತ ಪ್ರಯತ್ನದ ನಂತರವೂ ಜಯ, ನ್ಯಾಯ ಸಿಗದಿದ್ದರಿಂದ ಬೇಸರಗೊಂಡ ಕಾಂತಾ ಅವರು ಮೌನಕ್ಕೆ ಶರಣಾಗಿದ್ದಾರೆ. ಹೀಗೆ ೪೭೦ ಕಾರ್ಮಿಕರ ಭವಿಷ್ಯ ಅತಂತ್ರ ಸ್ಥಿತಿಯಲ್ಲಿ ಸಾಗುತ್ತಿದೆ.

**ಕಾರ್ಮಿಕರ ಚಳುವಳಿಯಲ್ಲಿ ಕಮ್ಯೂನಿಸ್ಟ್ ಪ್ರಭಾವ**

ಯಾದಗಿರಿ ಜಿಲ್ಲೆಯಲ್ಲಿ ನಡೆದ ಹಾಗೂ ಪ್ರಸ್ತುತ ನಡೆಯುತ್ತಿರುವ ಕಮ್ಯೂನಿಸ್ಟ್ ಚಳವಳಿಗಳು ವಿಶೇಷವಾದವುಗಳಾಗಿದ್ದು, ಇವುಗಳ ಮೂಲಕ ಸಾಮಾಜಿಕ ಪರಿವರ್ತನೆಗಳು ಕಂಡುಬರುತ್ತವೆ. "ಸ್ವಾತಂತ್ರ್ಯಪೂರ್ವದಲ್ಲಿ ಕಮ್ಯುನಿಸ್ಟ್ ಸಿದ್ಧಾಂತಗಳ ಪ್ರಭಾವವಾಗಲಿ, ತೀವ್ರತರವಾದ ಹೋರಾಟಗಳಾಗಲಿ ಕಾಣಸಿಗುವುದಿಲ್ಲ. ಆದರೆ ಸ್ವಾಂತಂತ್ರೋತ್ತರ ಕಾಲದಲ್ಲಿ ಕಮ್ಯೂನಿಸ್ಟ್ ತತ್ವಗಳ ಪ್ರಚಾರ ಮತ್ತು ಹೋರಾಟಗಳು ಬಹಳ ಬೇಗ ನೆಲೆ ಕಂಡುಕೊಂಡವು. ಇದಕ್ಕೆ ಕಾರಣವೆಂದರೆ ಸ್ವಾತಂತ್ರ್ಯದ ನಂತರವೂ ಜಮೀನ್ದಾರರ ಹಿಡಿತ ತುಂಬಾ ಇದ್ದ ಈ ಭಾಗದಲ್ಲಿ ಜಮೀನ್ದಾರಿ ಪದ್ಧತಿ ಹಾಗೆಯೇ ಮುಂದುವರಿದಿತ್ತು. ಇಂತಹ ಸಮಯದಲ್ಲಿ ನೆರೆಯ ಆಂಧ್ರದಲ್ಲಿ ನಡೆದಂತಹ ಜಮೀನ್ದಾರಿ ವಿರೋಧಿ ಚಳವಳಿಗಳು ವಿಶೇಷವಾಗಿ ಪ್ರಭಾವ ಬೀರಿದವು. ಹಾಗೆಯೇ ಇಲ್ಲಿ ಸಾಮಾನ್ಯರ ಮೇಲೆ ನಡೆಯುತ್ತಿದ್ದ ದೌರ್ಜನ್ಯ, ದರ್ಪ ಅತ್ಯಂತ ಸಾಮಾನ್ಯವಾಗಿತ್ತು. ಇಂತಹ ಪರಿಸ್ಥಿತಿಯನ್ನು ಎದುರಿಸಲು ಕಮ್ಯೂನಿಸ್ಟ್ ಪಕ್ಷಕ್ಕೆ ಮಾತ್ರ ಸಾಧ್ಯವಿತ್ತು. ಏಕೆಂದರೆ ಶೋಷಣೆಯನ್ನು ವಿರೋಧಿಸುವುದು ಕಮ್ಯೂನಿಸ್ಟ್ ಪಕ್ಷದ ಸಿದ್ಧಾಂತಗಳಲ್ಲಿ ಒಂದಾಗಿತ್ತು. ಹೀಗಾಗಿ

ಇದನ್ನರಿತ ದಲಿತರು, ಕಾರ್ಮಿಕರು, ರೈತರು, ಕೂಲಿಕಾರರು, ಶೋಷಣೆಗೆ ಒಳಗಾದವರು ಬಹುಬೇಗ ಪಕ್ಷದ, ಸಿದ್ಧಾಂತಗಳ ಅನುಯಾಯಿಗಳಾದರು.

ಯಾದಗಿರಿ ಜಿಲ್ಲೆಯಲ್ಲಿ ಕಮ್ಯೂನಿಸ್ಟ್ ಹೋರಾಟಕ್ಕೆ ಮೊದಲು ಚಾಲನೆ ನೀಡಿದವರು ಎಸ್.ಎಲ್. ಉಪಾಧ್ಯಾಯರು. ಮತ್ತು ಅವರಿಗೆ ಬೆಂಬಲವಾಗಿ ಹೋರಾಟ ಕೈಗೊಂಡವರು ಉತ್ಸಾಹಿ ತರುಣರಾದ ಗಂಗಾಧರ ನಮೋಶಿಯವರು ಹಾಗೂ ಶ್ರೀನಿವಾಸ ಗುಡಿ. ಗಂಗಾಧರ ನಮೋಶಿಯವರು ಪಕ್ಷದ ಸಂಘಟನೆ ಮತ್ತು ವ್ಯೂಹ ರಚಿಸುತ್ತಾ ಚಳುವಳಿಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಶ್ರೀನಿವಾಸ ಗುಡಿ ಅವರು ಪಕ್ಷದ ತತ್ವಸಿದ್ಧಾಂತಗಳಲ್ಲಿ ಚಾತುರ್ಯ ಹೊಂದಿದ್ದು, ಸಾಮಾನ್ಯ ಜನತೆಯಲ್ಲಿ ವಿಶೇಷವಾಗಿ ಕಾರ್ಮಿಕ ವರ್ಗಕ್ಕೆ ಭೋಧನೆ ಮೂಲಕ ಕ್ರಾಂತಿಕಾರಕ ವಿಷಯಗಳನ್ನು ಅವರಲ್ಲಿ ತುಂಬಿ ಮನಸ್ಸನ್ನು ಪ್ರಚೋದನೆಗೊಳಿಸುವಲ್ಲಿ ಚತುರತೆ ಹೊಂದಿದ್ದರು. ೧೯೫೦ರಲ್ಲಿ ಕಮ್ಯೂನಿಸ್ಟ್ ತತ್ವಸಿದ್ಧಾಂತಗಳನ್ನು ನಂಬಿದ್ದ ಮಹಮದ್ ಹಸನ್ಖಾನ್ ಎನ್ನುವ ಮತ್ತೊಬ್ಬ ನಾಯಕರು ಇವರ ಜೊತೆಗೂಡಿ ಕಮ್ಯೂನಿಸ್ಟ್ ಕಾರ್ಯಚಟುವಟಿಕೆಯಲ್ಲಿ ತೊಡಗಿದರು. ಹಸನ್‌ಖಾನ್ರು ಪಕ್ಷಕ್ಕೆ ಸೇರಿದ್ದರಿಂದಾಗಿ, ಅನೇಕ ಮುಸ್ಲಿಂ ಯುವಕರು ಪಕ್ಷದೊಂದಿಗೆ ಗುರುತಿಸಿಕೊಳ್ಳಲು ಪ್ರಾರಂಭವಾಯಿತು. ಇಲ್ಲಿ ವಿಶೇಷವಾಗಿ ಗುರುತಿಸುವುದೇನೆಂದರೆ ಕಮ್ಯೂನಿಸ್ಟ್ ಪಕ್ಷದ ಜಾತ್ಯಾತೀತ ತತ್ವವು ಅನೇಕ ಕೆಳವರ್ಗಗಳನ್ನು ಆಕರ್ಷಿಸುವಲ್ಲಿ ಸಫಲವಾಯಿತು. ಕಮ್ಯೂನಿಸ್ಟ್ ನಾಯಕರು ಜನರನ್ನು ಜಾತಿ ಆಧಾರದ ಮೇಲೆ ಸಂಘಟಿಸದೆ ಅವರ ಸಂಘಟನೆ ಜಾತ್ಯಾತೀತವಾಗಿದ್ದು, ಎಲ್ಲಾ ಜಾತಿ ವರ್ಗದ ಜನರನ್ನು ಒಳಗೊಂಡಿದ್ದಿತು. ಇಂತಹ ಜಾತ್ಯಾತೀತ ನೀತಿಯು ಜನರನ್ನು ಬಹಳ ಬೇಗ ಆಕರ್ಷಿಸಿತು."[೩೩] ಇದುವರೆಗೂ ಕೇವಲ ಉನ್ನತ ವರ್ಗದವರ ನಾಯಕತ್ವದಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದು, ಅನಾದರಕ್ಕೆ ಒಳಗಾಗಿದ್ದು ಕೆಳವರ್ಗದ ಜನರಿಗೆ ಇಂತಹ ಜಾತ್ಯಾತೀತ ನೀತಿಯು ಇಷ್ಟವಾಯಿತು. ಅದೇ ರೀತಿ ಬಡ ಮತ್ತು ಕಾರ್ಮಿಕ ವರ್ಗಕ್ಕೆ ಸೇರಿದ ಮುಸ್ಲಿಮರನ್ನು ಸೆಳೆಯುವಲ್ಲಿ ಸಫಲವಾಯಿತು.

### ೪.೪.೨. ಸಮಕಾಲೀನ ಸಂದರ್ಭದಲ್ಲಿ ಕಾರ್ಮಿಕರ ಸಮಸ್ಯೆಗಳು ಮತ್ತು ಸ್ಥಿತಿಗತಿಗಳು

ಜಾಗತೀಕರಣ ಮತ್ತು ಉದಾರೀಕರಣದ ಹಿನ್ನೆಲೆಯಲ್ಲಿ ಇಂದಿನ ಕೈಗಾರಿಕೆಗಳು ಮತ್ತು ಕಾರ್ಮಿಕರ ಸ್ಥಿತಿಗಳನ್ನು ಗಮನಿಸಿದರೆ ಸಮಸ್ಯೆ ಗಂಭೀರವಾಗಿದೆ. ದಿನದಿಂದ ದಿನಕ್ಕೆ ಬದಲಾಗು ತ್ತಿರುವ ಆಧುನೀಕರಣ ಹಿನ್ನೆಲೆಯಲ್ಲಿ ಹೊಸ ಹೊಸ ತಂತ್ರಜ್ಞಾನ ಬಳಕೆ, ವಿವಿಧ ಸಾಧನ ಸಾಮಗ್ರಿಗಳ ಆವಿಷ್ಕಾರ ಹಾಗೂ ಅವುಗಳ ಅಳವಡಿಕೆಯಿಂದಾಗಿ ಕಾರ್ಮಿಕರು ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಜಾಗತೀಕರಣ ಹಿನ್ನೆಲೆಯಲ್ಲಿ ಹಣದುಬ್ಬರ, ಬೆಲೆ ಏರಿಕೆ, ಜನಸಂಖ್ಯಾ ಬೆಳವಣಿಗೆ, ನಿರುದ್ಯೋಗ ಮುಂತಾದ ತೀವ್ರ ಪೈಪೋಟಿಯಿಂದ, ಕಾರ್ಮಿಕರು ಕೇವಲ ತಮ್ಮ ವೃತ್ತಿಯಿಂದ ಬರುವ ಅಲ್ಪ ಗಳಿಕೆಯಲ್ಲಿ ಜೀವನಾವಶ್ಯಕ ವಸ್ತುಗಳನ್ನು ಪಡೆದುಕೊಳ್ಳಲು ಸಾಧ್ಯ ವಾಗುತ್ತಿಲ್ಲ. ಇನ್ನೊಂದು ಕಡೆ ನಗರಗಳಲ್ಲಿ ಕೊಳಚೆ ಪ್ರದೇಶಗಳಲ್ಲಿ ವಾಸವಾಗಿದ್ದ ಹೆಚ್ಚಿನ ಕಾರ್ಮಿಕರಿಗೆ ವಸತಿ, ಆರೋಗ್ಯ, ಕುಡಿಯುವ ನೀರು, ಮಾಲಿನ್ಯಗಳು ಕಾರ್ಮಿಕ ವರ್ಗಗಳ ಬದುಕಿಗೆ ನಿರಾಶೆಯನ್ನು ಉಂಟುಮಾಡುತ್ತಿದ್ದವು. ದುಡಿಮೆಯಿಂದ ಬರುತ್ತಿದ್ದ ಆದಾಯ ಕಡಿಮೆ ಇದ್ದುದರಿಂದ ಪೌಷ್ಟಿಕ ಆಹಾರದ ಕೊರತೆ ಅವರ ಬಡತನವನ್ನು ಹೆಚ್ಚಿಸಿತು. ಹೀಗಾಗಿ

ಕಾರ್ಮಿಕರು ಮುಷ್ಕರ, ಬಂದ್, ಪ್ರತಿಭಟನೆ, ಘೇರಾವ್ ಮುಂತಾದ ಮಾರ್ಗಗಳನ್ನು ಕಂಡುಕೊಂಡರು.

**ಅಸಂಘಟಿತ ಕಾರ್ಮಿಕರ ಸಮಸ್ಯೆಗಳು**

ಸಂಘಟಿತ ವಲಯದ ಕಾರ್ಮಿಕರು ಪಡೆಯುವ ಸೌಲಭ್ಯಗಳು ಇನ್ನೂ ಕೂಡ ಅಸಂಘಟಿತ ವಲಯದ ಕಾರ್ಮಿಕರಿಗೆ ಸಿಗದೆ ಅವರ ಪಾಲಿಗೆ ಕನಸಾಗಿಯೇ ಉಳಿದಿವೆ. ಸರಿಯಾದ ಕೂಲಿ, ರಜೆ, ಸೇವಾಭದ್ರತೆ ಮುಂತಾದ ಯಾವ ಸೌಲಭ್ಯಗಳಿಲ್ಲದೇ ಅಸಂಘಟಿತ ಕಾರ್ಮಿಕರು ಸಂಕಷ್ಟದಲ್ಲಿದ್ದಾರೆ. "ಸರಕಾರಗಳು ಬಂಡವಾಳಶಾಹಿಗಳ ಹಿತಾಸಕ್ತಿಗೆ ಬದ್ಧವಾಗಿದ್ದು, ಕಾರ್ಮಿಕರ ಹಿತಾಸಕ್ತಿಯನ್ನು ನಿರ್ಲಕ್ಷಿಸಿದೆ. ಅಸಂಘಟಿತ ವರ್ಗಗಳ ಕಾರ್ಮಿಕರ ಹಿತ ಕಾಪಾಡಲು ಸರ್ಕಾರ ರೂಪಿಸಿರುವ ಯೋಜನೆಗಳು ಈ ವರ್ಗಗಳ ಹಲವು ಜನರಿಗೆ ಸರಿಯಾದ ನೆಲೆ ಇಲ್ಲದಾಗಿದೆ. ತಾವು ಕೆಲಸ ಮಾಡುವ ಜಾಗದ, ಕಟ್ಟಡಗಳ, ಮರಗಳ ಕೆಳಗೆ, ಪಕ್ಕದಲ್ಲಿಯೇ ಜೋಪಡಿಗಳನ್ನು ಹಾಕಿಕೊಂಡು ವಾಸಿಸುತ್ತಿದ್ದಾರೆ. ಒಂದು ನಿರ್ದಿಷ್ಟ ನೆಲೆ ಇಲ್ಲದ ಇವರಿಗೆ ರಿಯಾಯಿತಿ ದರದಲ್ಲಿ ಆಹಾರ ವಸ್ತುಗಳನ್ನು ಪಡೆಯಲು ರೇಷನ್ ಕಾರ್ಡ್ ಕೂಡ ಲಭ್ಯವಿಲ್ಲ. ವೋಟಿಂಗ್ ಮತದಾರರ ಪಟ್ಟಿಯಲ್ಲಿ ಹೆಸರಿಲ್ಲದಿರುವುದರಿಂದ ಮತದಾನದಿಂದಲೂ ವಂಚಿತರಾಗಿದ್ದಾರೆ. ಹೀಗಾಗಿ ಕುಟುಂಬದ ಸದಸ್ಯರೊಂದಿಗೆ ಕೂಡಿ ಕೆಲಸ ಮಾಡಿದರೆ ದಿನಕ್ಕೆ ೫೦ರಿಂದ ೧೦೦ ರೂ. ಸಂಪಾದನೆ. ಪ್ರತಿದಿನ ದುಡಿದರೆ ಮಾತ್ರ ಹೊಟ್ಟೆಗೆ ಊಟ ಇಲ್ಲದಿದ್ದರೆ ಉಪವಾಸವೇ ಗತಿ.

ಅನೇಕ ವಲಯಗಳಲ್ಲಿ ದುಡಿಯುವ ಅಸಂಘಟಿತ ಕಾರ್ಮಿಕರ ಜೀವನ, ಆರೋಗ್ಯ ಮತ್ತು ಅಂಗವಿಕಲತೆ, ಹೆರಿಗೆ ಹಾಗೂ ವೃದ್ಧಾಪ್ಯಗಳಿಗೆ ಸಂಬಂಧಪಟ್ಟಂತೆ ಕನಿಷ್ಠ ಸಾಮಾಜಿಕ ಭದ್ರತೆಗಳೂ ಇಲ್ಲ. ಇದರ ಜೊತೆಗೆ ಪುರುಷ ಮತ್ತು ಮಹಿಳಾ ಕಾರ್ಮಿಕರ ನಡುವೆ ತಾರತಮ್ಯವಿದೆ. ಜಾಗತೀಕರಣ, ಖಾಸಗೀಕರಣ, ನೀತಿಗಳ ಫಲವಾಗಿ ಗುತ್ತಿಗೆ ಕಾರ್ಮಿಕ ಪದ್ಧತಿ ಇಂದು ಸಾರ್ವತ್ರಿಕವಾಗುತ್ತಿರುವುದು ಮತ್ತಷ್ಟು ಹೆಚ್ಚಿನ ಆತಂಕಕ್ಕೆ ಕಾರಣವಾಗಿದೆ. ಇವುಗಳ ಜೊತೆಗೆ ಬೆಲೆ ಏರಿಕೆ ಬಿಸಿಯಿಂದಾಗಿ ಕಾರ್ಮಿಕರು ತತ್ತರಿಸುತ್ತಿದ್ದಾರೆ. ನಿರುದ್ಯೋಗ, ಬಡತನ, ಅನಾರೋಗ್ಯ ಮುಂತಾದ ಸಮಸ್ಯೆಗಳಿಂದಾಗಿ ಕಾರ್ಮಿಕರು ಆತ್ಮಹತ್ಯೆಗೆ ಮೊರೆ ಹೋಗುತ್ತಿದ್ದಾರೆ. ಸರ್ಕಾರಕ್ಕೆ ಕಾರ್ಮಿಕರ ಸಮಸ್ಯೆಗಳು ಗೊತ್ತಿದ್ದರೂ ಅವರ ಹಿತಾಸಕ್ತಿ ಕಾಪಾಡಲು ಸರಕಾರ ಸೂಕ್ತವಾಗಿ ಸ್ಪಂದಿಸದೇ ಇರುವುದು ಮೇಲ್ನೋಟಕ್ಕೆ ಗೋಚರಿಸುತ್ತಿದೆ. ಅಸಂಘಟಿತ ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡುವ ಅಥವಾ ರೂಪಿಸುವ ಸ್ಥಿತಿಯಲ್ಲಂತೂ ಇಲ್ಲವೇ ಇಲ್ಲ. ಹಾಗೆಯೇ ಕಾರ್ಮಿಕಪರ ಎಂದು ಹೇಳಿಕೊಂಡು ಹೋರಾಟಕ್ಕಿಳಿದು, ತಮ್ಮ ಸ್ವಾರ್ಥಕಾರ್ಯಕ್ಕಾಗಿ ಕಾರ್ಮಿಕರನ್ನು ಉಪಯೋಗಿಸಿಕೊಳ್ಳುವುದು ಪ್ರಸ್ತುತ ಪರಿಸ್ಥಿತಿಯಾಗಿದೆ.

ಕೈಗಾರಿಕಾ ಕಾರ್ಮಿಕರು ಸಂಘಟನೆಗಳನ್ನು ಕಟ್ಟಿ ಹೋರಾಟ ಮಾಡಿ ವೇತನ ಏರಿಕೆ, ಬೋನಸ್ ಇತ್ಯಾದಿ ಸವಲತ್ತುಗಳನ್ನು ಪಡೆದಿದ್ದಾರೆ. ಆದರೆ ಅಸಂಘಟಿತ ವಲಯಗಳಲ್ಲಿ ಕಾರ್ಮಿಕ ಸಂಘಟನೆಗಳು ಹುಟ್ಟಿಕೊಳ್ಳುತ್ತಿಲ್ಲ. ಎಲ್ಲಿಯೋ ಒಂದೊಂದು ಇದ್ದರೆ ಅವು ಲೆಕ್ಕಕ್ಕಿಲ್ಲ. ಅಸಂಘಟಿತ ವಲಯಗಳಲ್ಲಿ ಕಾರ್ಮಿಕ ಸಂಘಟನೆಗಳು ಬೆಳೆಯದೆ ಇರುವುದಕ್ಕೆ ಅನೇಕ

ಕಾರಣಗಳಿವೆ. ಕಾರ್ಮಿಕರು ಒಬ್ಬ ಮಾಲೀಕನ ಅಥವಾ ಒಂದು ಕಾರ್ಖಾನೆಯ ಸೂರಿನಡಿ ಕೆಲಸ ಮಾಡುವವರಲ್ಲ. ಈ ವಲಯದ ಕಾರ್ಮಿಕರಲ್ಲಿ ಅನಕ್ಷರತೆ ಹಾಗೂ ಪರಿಸ್ಥಿತಿಯನ್ನು ಹಣೆಬರಹ ಎಂದು ಒಪ್ಪಿಕೊಂಡು ಪರಿಸ್ಥಿತಿಗೆ ಹೊಂದಿಕೊಂಡು ಬಿಡುವವರೇ ಹೆಚ್ಚು."[೬೪] ಅಲ್ಲದೆ ಕಾರ್ಮಿಕರು ನಿರಂತರವಾಗಿ ಒಂದು ಸೂರಿನಡಿಯಲ್ಲಿ ಕೆಲಸ ಮಾಡದೇ ಕೆಲಸ ಸಿಕ್ಕ ಕಡೆ ದಿನಗೂಲಿ ಕಾರ್ಮಿಕರಾಗಿರುವವರೇ ಹೆಚ್ಚು. ಹೀಗಾಗಿ ಇವರಲ್ಲಿ ಪ್ರಬಲ ಮುಖಂಡರೂ ಬೆಳೆಯಲು ಸಾಧ್ಯವಿಲ್ಲ. ನಗರಗಳಲ್ಲಿ ನಗರಪಾಲಿಕೆಗಳ ಸಫಾಯಿ ಕರ್ಮಚಾರಿಗಳನ್ನು, ಕೆಲವೊಂದು ಹೋಟೆಲ್ ಕಾರ್ಮಿಕರನ್ನು, ಸಿದ್ಧ ಉಡುಪು ಉದ್ಯೋಗಿಗಳನ್ನು, ಪ್ಲಾಂಟೇಶನ್ ಕಾರ್ಯಕರ್ತರನ್ನು ಒಗ್ಗೂಡಿಸಿ ಸಂಘಟಿಸುವ ಕೆಲಸ ಕೆಲಮಟ್ಟಿಗೆ ನಡೆದಿದೆ. ಆದರೆ ಇವರ ಹೋರಾಟ ಮತ್ತು ಫಲ ಮಾತ್ರ ನಿರಿಕ್ಷಿತ ಮಟ್ಟದಲ್ಲಿ ಕಾಣುತ್ತಿಲ್ಲವೆಂದು ಹೇಳಬಹುದು.

**ಬಾಲಕಾರ್ಮಿಕರ ಸಮಸ್ಯೆ**

ಯಾದಗಿರಿ ಜಿಲ್ಲೆಯ ಕಾರ್ಮಿಕರ ಸಮಸ್ಯೆಗಳಲ್ಲಿ ಮತ್ತೊಂದು ಗಮನಾರ್ಹ ಸಮಸ್ಯೆಯೆಂದರೆ ಬಾಲಕಾರ್ಮಿಕ ಸಮಸ್ಯೆ, ಬಾಲಕಾರ್ಮಿಕರೆಂದು ಕಾನೂನಾತ್ಮಕವಾಗಿ ಯಾರನ್ನು ಪರಿಗಣಿಸಲಾಗುತ್ತದೆ ಎಂದರೆ, ೧೪ ವರ್ಷದೊಳಗಿನ ಮಕ್ಕಳು ಶಾಲೆಯಿಂದ ಹೊರಗಿದ್ದು ತನ್ನ ಬೌದ್ಧಿಕ, ಮಾನಸಿಕ, ಶಾರೀರಿಕ ಮತ್ತು ಭಾಷಾ ಬೆಳವಣಿಗೆಗೆ ತೊಡಕಾಗುವ ಯಾವುದೇ ಚಟುವಟಿಕೆಯಲ್ಲಿದ್ದು ತನ್ನ ಮೂಲಭೂತ ಹಕ್ಕುಗಳಿಂದ ವಂಚಿತರಾಗಿದಾರೋ ಅವರೆಲ್ಲರೂ ಬಾಲಕಾರ್ಮಿಕರು ಎಂದೆನಿಸಿ ಕೊಳ್ಳುತ್ತಾರೆ. ೨೦೧೦ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ೧೦,೫೮,೪೧೮ ಬಾಲಕಾರ್ಮಿಕರಿದ್ದಾರೆ. ಅದರಲ್ಲಿ ಹೈದರಾಬಾದ್ ಕರ್ನಾಟಕ ಭಾಗದಲ್ಲೇ ಒಂದು ಲಕ್ಷಕ್ಕಿಂತ ಹೆಚ್ಚು ಬಾಲ ಕಾರ್ಮಿಕರಿದ್ದು ಯಾದಗಿರಿ ಜಿಲ್ಲೆಯಲ್ಲಿ ಅತೀ ಹೆಚ್ಚು ಬಾಲಕಾರ್ಮಿಕರು ಇರುವುದು ವರದಿಯಿಂದ ತಿಳಿದುಬರುತ್ತದೆ. ಬಾಲಕಾರ್ಮಿಕರ ಸಂಖ್ಯೆಹೆಚ್ಚಿರಲು ಕಾರಣಗಳನ್ನು ಅಧ್ಯಯನ ಮಾಡಿದಾಗ, ಇಲ್ಲಿ ಬಡತನ, ಸಾಮಾಜಿಕ ಪರಿಸ್ಥಿತಿ, ಅಜ್ಞಾನ ಮುಂತಾದ ಕಾರಣಗಳಿಂದ ೧೦ರಿಂದ ೧೪ನೇ ವಯಸ್ಸಿನ ಒಳಗಿರುವ ಮಕ್ಕಳು ಶಾಲೆಗಳನ್ನು ಬಿಟ್ಟು ಕಾರ್ಮಿಕರಾಗಿ ದಿನ ಗೂಲಿಗಾಗಿ ಕೆಲಸಕ್ಕೆ ಹೋಗುತ್ತಿರು ವುದು ಕಂಡುಬರುತ್ತದೆ. ಅದರಲ್ಲೂ ರಾಜ್ಯದಲ್ಲೇ ಶಾಲೆ ಓದುತ್ತಿರುವಾಗಲೇ ಮಧ್ಯದಲ್ಲಿ ಶಾಲೆಗಳನ್ನು ಬಿಡುತ್ತಿರುವ ಮಕ್ಕಳಲ್ಲಿ ಯಾದಗಿರಿ ಜಿಲ್ಲೆಯ ಮಕ್ಕಳು ಮೊದಲನೇ ಸಾಲಿನಲ್ಲಿದ್ದಾರೆ. ಬಾಲಕಾರ್ಮಿಕ ಪದ್ಧತಿಯು ಒಂದು ಸಾಮಾಜಿಕ ಸಮಸ್ಯೆ ಮತ್ತು ಪಿಡುಗಾಗಿ ಪರಿಣಮಿಸಿದೆ. ಈ ಬಾಲಕಾರ್ಮಿಕ ತನಕ್ಕೆ ನಿರ್ದಿಷ್ಟ ಕಾರಣಗಳನ್ನು ಅದ್ಯಯನ ಮಾಡಿ ನೋಡಿದಾಗ ಕಂಡುಬರುವ ಕೆಲವು ಮುಖ್ಯ ಅಂಶಗಳೆಂದರೆ, ಬಡತನ, ತಂದೆ ತಾಯಿಗಳ ನಿಷ್ಕಾಳಜಿ, ಚಿಕ್ಕವಯಸ್ಸಿನಲ್ಲಿ ಮಕ್ಕಳು ಅನಾಥರಾಗುವುದು, ಅನಕ್ಷರತೆ, ವಲಸೆ, ಸಣ್ಣ ವಯಸ್ಸಿನಲ್ಲಿ ಜವಾಬ್ದಾರಿ, ಆಸ್ತಿ ಇಲ್ಲದಿರುವುದು, ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿರುವುದು ಮುಂತಾದವುಗಳು ಕಂಡುಬರುತ್ತವೆ. ಕಾನೂನು ಪ್ರಕಾರ ಮಕ್ಕಳನ್ನು ಬಾಲ್ಯದಲ್ಲಿ ದುಡಿಮೆಗೆ ಹಚ್ಚುವುದನ್ನು ನಿಷೇಧಿಸಿದ್ದರೂ ಆ ಸಂಬಂಧವಾಗಿ ಅನೇಕ ಕಾನೂನುಗಳನ್ನು ಜಾರಿ ಮಾಡಿದ್ದರೂ ಸಹ ಬಾಲಕಾರ್ಮಿಕರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಮಕ್ಕಳನ್ನು ಇಂದು ಎಲ್ಲಾ ಕ್ಷೇತ್ರಗಳಲ್ಲಿ ದುಡಿಸಿಕೊಳ್ಳಲಾಗುತ್ತಿದೆ. ಸಾಮಾನ್ಯವಾಗಿ ಇವರು ಕಾರ್ಯ ನಿರ್ವಹಿಸುತ್ತಿರುವ ಪರಿಸ್ಥಿತಿ, ಪರಿಸರಗಳನ್ನು ಗಮನಿಸಿದರೆ ಗಾಳಿ, ಬೆಳಕು ಕಾಣದ, ಹೊಗೆ,

ಧೂಳು, ಅಪಾಯಕಾರಿ ಯಂತ್ರ, ಅನಿಲ ಮುಂತಾದ ಅತಿರೇಕದ ಮಾಲಿನ್ಯದಿಂದ ಹದಗೆಟ್ಟು ಹೋಗಿರುವ ಪರಿಸ್ಥಿತಿಗಳಲ್ಲಿ ರಾತ್ರಿ ಹಗಲು ಎನ್ನದೇ ನಿರಂತರವಾಗಿ ದುಡಿಯಬೇಕಾಗುತ್ತದೆ. ಆದರೆ ಇದಕ್ಕೆ ಸಿಗುವ ಪ್ರತಿಫಲ ಅತ್ಯಲ್ಪವಾಗಿದ್ದು, ಅವರ ದೈಹಿಕ, ಮಾನಸಿಕ ಬೆಳವಣಿಗೆಯನ್ನು ಕಮರಿಸಿಬಿಡುತ್ತದೆ. ಸರಿಯಾದ ಊಟ, ಬಟ್ಟೆ ಇಲ್ಲದೆ ಅನಾರೋಗ್ಯಕ್ಕೆ ಈಡಾಗಿ ಅನೇಕ ಕಾಯಿಲೆಗಳಿಂದ ಬಳಲುತ್ತಿರುವ ಬಾಲಕಾರ್ಮಿಕರ ಬಗ್ಗೆ ದಿನ ಬೆಳಗಾದರೆ ಪತ್ರಿಕೆಗಳು ಹಾಗೂ ಇತರೆ ಮಾಧ್ಯಮಗಳಿಂದ ತಿಳಿದುಬರುತ್ತಿದೆ. ಬಾಲಕಾರ್ಮಿಕತೆಗೀಡಾದ ಮಕ್ಕಳು ದೈಹಿಕ, ಮಾನಸಿಕ, ಲೈಂಗಿಕ ಮತ್ತು ಸಾಮಾಜಿಕ ದೌರ್ಜನ್ಯಕ್ಕೊಳಗಾಗುತ್ತಾರೆ. ಮಾನವನ ಮೂಲಭೂತ ಅವಶ್ಯಕತೆಗಳಾದ ಆಹಾರ, ಬಟ್ಟೆ, ವಸತಿ, ದೈಹಿಕ ಮಾನಸಿಕ ರಕ್ಷಣೆ ಮುಂತಾದವುಗಳಿಂದ ವಂಚಿತರಾಗುತ್ತಾರೆ. ಹೀಗೆ ಪ್ರೀತಿ, ಮಮತೆ, ಬಾಂಧವ್ಯ ಮುಂತಾದವುಗಳಿಂದ ವಂಚಿತರಾಗುವ ಮಕ್ಕಳು, ಅಸಹಾಯಕತೆ, ಶೌರ್ಯ, ಹಿಂಸೆಯಂತಹ ಗುಣಗಳನ್ನು ಬೆಳೆಸಿಕೊಳ್ಳುತ್ತಾರೆ. ಹೀಗಾಗಿ ಮುಂದೆ ಇಂತಹ ಮಕ್ಕಳು ಮಾದಕ ಜಾಲದಲ್ಲಿ ಬಿದ್ದು ಶೋಷಣೆಗೆ ಒಳಗಾಗುತ್ತಾರೆ.

ಸುಪ್ರೀಂ ಕೋರ್ಟ್ ನೀಡಿದ ಮಾರ್ಗದರ್ಶನದಂತೆ ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನೆ ಮಾಡಲು ಕೇಂದ್ರ ಸರಕಾರ ೨೦೦೬ರಲ್ಲಿ ಹೊಸ ಕಾನೂನು ಜಾರಿಗೊಳಿಸಿತು. ಈ ಪದ್ಧತಿಯು ೨೦೦೭ರೊಳಗೆ ಸಂಪೂರ್ಣ ನಿರ್ಮೂಲನೆ ಆಗಬೇಕೆಂದು ರಾಜ್ಯಗಳಿಗೆ ನಿರ್ದೇಶಿಸಲಾಯಿತು. ರಾಜ್ಯ ಸರಕಾರಗಳು ಹಾಗೂ ಎನ್‌ಜಿಓ ಮುಂತಾದ ಸಮಾಜಸೇವಾ ಸಂಸ್ಥೆಗಳು ಬಾಲಕಾರ್ಮಿಕ ಪದ್ಧತಿಯನ್ನು ಸಂಪೂರ್ಣ ನಿರ್ಮೂಲನೆ ಮಾಡಲು ಪ್ರಯತ್ನಿಸುತ್ತಿವೆ. ಸಂವಿಧಾನದ ವಿಧಿ ೨೧ಳರ ಪ್ರಕಾರ ೫ರಿಂದ ೧೪ ವರ್ಷದ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕೆಂದು ನಿರ್ದೇಶಿಸಿದೆ. ಆದರೆ ಇಷ್ಟು ಮಾತ್ರಕ್ಕೆ ಈ ಪದ್ಧತಿಯ ನಿರ್ಮೂಲನೆ ಸಾಧ್ಯವಾಗುತ್ತಿಲ್ಲ ಎನ್ನುವುದು ಪ್ರಸ್ತುತ ಪರಿಸ್ಥಿತಿಗಳಿಂದ ಗೊತ್ತಾಗುತ್ತಿದೆ. ಆದ್ದರಿಂದ ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆಯಲ್ಲಿ ಕಾನೂನಿನ ಸಮರ್ಪಕ ಬಳಕೆಯಾಗಬೇಕಾಗಿದೆ. ಇನ್ನೂ ಹೆಚ್ಚಿನ ರೀತಿಯಲ್ಲಿ ಯೋಜನೆಗಳನ್ನು ರೂಪಿಸಿ, ಸೌಲಭ್ಯಗಳನ್ನು ಒದಗಿಸುವ ಮೂಲಕ ಹಾಗೂ ಸರಕಾರದ ಜೊತೆಗೆ ಸರಕಾರೇತರ ಸಂಸ್ಥೆಗಳು ಇಂತಹ ಕಾರ್ಯದಲ್ಲಿ ತೊಡಗಿಸಿಕೊಳ್ಳುವ ಮೂಲಕ ಯೋಜನೆಯನ್ನು ಯಶಸ್ವಿಗೊಳಿಸಬೇಕಾಗಿದೆ ಹಾಗೂ ತಡೆಗಟ್ಟಬೇಕಾಗಿದೆ.

**ಕಲ್ಲು-ಗಣಿ-ಕೂಲಿ ಕಾರ್ಮಿಕರ ಸಮಸ್ಯೆ**

ಯಾದಗಿರಿ ಜಿಲ್ಲೆಯ ನೈಸರ್ಗಿಕ ಸಂಪತ್ತಿನಲ್ಲಿ ಇನ್ನೊಂದು ಪ್ರಮುಖ ಸಂಪತ್ತೆಂದರೆ ಹೊಳಪು ಕಲ್ಲು. ಕಲ್ಲು ಗಣಿಗಾರಿಕೆ ಯಾದಗಿರಿ ಜಿಲ್ಲೆಯಲ್ಲಿ ಪ್ರಮುಖ ಉದ್ಯಮವಾಗಿ ಬೆಳೆದಿದೆ. ಇಲ್ಲಿನ ಚಿತ್ತಾಪುರ, ಸೇಡಂ, ಚಿಂಚೋಳಿ, ಶಹಬಾದ್ ಮುಂತಾದ ತಾಲೂಕುಗಳಲ್ಲಿ ಅತ್ಯಂತ ಉತ್ತಮ ಗುಣಮಟ್ಟದ ಹೊಳಪು ಕಲ್ಲಿನ ಗಣಿಗಳಿವೆ. ಒಂದು ಅಂದಾಜಿನ ಪ್ರಕಾರ ಈ ಪ್ರದೇಶಗಳಲ್ಲಿ ಸುಮಾರು ೧೭೭ ಕೋಟಿ ಘನ ಮೀಟರುಗಳಷ್ಟು ಹೊಳಪು ಕಲ್ಲು(ಗ್ರಾನೈಟ್) ಸಂಪತ್ತಿದೆ. ಇಲ್ಲಿಯವರೆಗೆ ಇಲ್ಲಿ ಕೇವಲ ೬೦ ಲಕ್ಷ ಚದರ ಅಡಿಯಷ್ಟು ಕಲ್ಲುಗಳನ್ನು ಮಾತ್ರ ಗಣಿಗಳಿಂದ ತೆಗೆಯಲಾಗಿದೆ. ಶಹಬಾದು ಹೊಳಪು ಕಲ್ಲು ಎಂದೇ ಪ್ರಸಿದ್ಧಿ ಪಡೆದ ಕಲ್ಲುಗಳು ಆಂಧ್ರ, ಮಹಾರಾಷ್ಟ್ರ, ಮುಂಬಯಿ, ಗೋವಾಗಳಿಗೆ ರಫ್ತು ಮಾಡಲಾಗುತ್ತದೆ ಹಾಗೂ ಸುತ್ತಮುತ್ತಲಿನ

ಭಾಗದಲ್ಲಿ ಸಾಕಷ್ಟು ಬೇಡಿಕೆಯು ಇದೆ. ಹೀಗಾಗಿ ಕಲಬುರಗಿ ಜಿಲ್ಲೆಯೊಂದರಲ್ಲೇ ಸರಿಸುಮಾರು ೨,೫೦೦ ಕಲ್ಲು ಗಣಿಗಳಿದ್ದು, ಕಲ್ಲುಗಳನ್ನು ಪಾಲಿಶ್ ಮಾಡುವ ನೂರಕ್ಕೂ ಹೆಚ್ಚು ಘಟಕಗಳಿವೆ. ಕಲ್ಲು ಉದ್ಯಮದಿಂದ ಸಾವಿರಾರು ಜನರು ಹಾಗೂ ಕುಟುಂಬಗಳು ಉದ್ಯಮವನ್ನೇ ನಂಬಿ ಜೀವನ ಸಾಗಿಸುತ್ತಿದ್ದಾರೆ. ಆದರೆ ಇತ್ತೀಚಿನ ಬೆಳವಣಿಗೆಗಳಿಂದಾಗಿ ಕಲ್ಲು ಗಣಿ ಉದ್ಯಮ ಮತ್ತು ಇಲ್ಲಿನ ಕಾರ್ಮಿಕರು ತೀವ್ರ ಸಮಸ್ಯೆಗಳಿಗೆ ಈಡಾಗಿದ್ದಾರೆ.

ಇತ್ತೀಚೆಗೆ ರಾಜಸ್ತಾನದಿಂದ ಮಾರ್ಬಲ್ ಹಾಸು ಕಲ್ಲುಗಳು ಈ ಪ್ರದೇಶಕ್ಕೆ ಹೆಚ್ಚು ಸಾಗಾಣಿಕೆ ಆಗುತ್ತಿವೆ. ಅದರಲ್ಲೂ ಕಡಿಮೆ ಬೆಲೆಗೆ ಸಿಗುವ ಹಾಗೂ ಹೆಚ್ಚು ಹೊಳಪುಳ್ಳ ಕಲ್ಲುಗಳಿಗೆ ಜನರು ಆಕರ್ಷಿತರಾಗಿ ಅಲ್ಲಿನ ಕಲ್ಲುಗಳಿಗೆ ಬೇಡಿಕೆ ಹೆಚ್ಚಾಗಿದೆ. ಇಂತಹ ಬದಲಾದ ಮಾರುಕಟ್ಟೆಯಿಂದ ಶಹಬಾದು ಹೊಳಪು ಕಲ್ಲುಗಳಿಗೆ ಬೇಡಿಕೆ ಕಡಿಮೆಯಾಗಿ ಇಲ್ಲಿನ ಉದ್ಯಮಕ್ಕೆ ಹೊಡೆತ ಬಿದ್ದಿದೆ. ಇಂತಹ ಕಾರಣದಿಂದಾಗಿ ಇಲ್ಲಿನ ಕಲ್ಲಿನ ಬೇಡಿಕೆ ಮತ್ತು ಬೆಲೆಯೂ ಕುಸಿದಿದೆ. ಹೀಗಾಗಿ ಇಲ್ಲಿನ ಎಷ್ಟೋ ಗಣಿಗಳು ಹಾಗೂ ಉಪ ಉದ್ಯಮಗಳಾದ ಕಲ್ಲು ಪಾಲಿಶ್ ಮಾಡುವ ಘಟಕಗಳು ಮುಚ್ಚಿವೆ ಮತ್ತು ಕೆಲವು ಮುಚ್ಚುವ ಹಂತದಲ್ಲಿವೆ. ಇದರಿಂದ ಉದ್ಯಮದಲ್ಲಿ ತೊಡಗಿದ್ದ, ಇಲ್ಲಿ ಕೆಲಸ ಮಾಡುತ್ತಿದ್ದ ಸಾವಿರಾರು ಜನರು ಉದ್ಯೋಗ ಕಳೆದುಕೊಂಡಿದ್ದಾರೆ. ಇದಕ್ಕಿಂತ ಮೊದಲು ಇಲ್ಲಿನ ಕಲ್ಲುಗಳನ್ನು ಸಾಗಿಸಲು ಎರಡು ಸಾವಿರ ಲಾರಿಗಳು ಮತ್ತು ಹತ್ತು ಸಾವಿರ ಲಾರಿ ಕಾರ್ಮಿಕರಿದ್ದರು. ಈಗ ಲಾರಿಗಳ ಸಂಖ್ಯೆ ಇನ್ನೂರಕ್ಕೆ ಇಳಿದಿದೆ. ಹೀಗಾಗಿ ಲಾರಿ ಸಾಗಾಣಿಕೆ ಉದ್ಯಮವನ್ನೇ ನಂಬಿಕೊಂಡಿದ್ದ ಚಾಲಕರು, ಕ್ಲೀನರ್‌ಗಳು, ಹಮಾಲರು, ಉದ್ಯೋಗ ಕಳೆದುಕೊಂಡಿದ್ದಾರೆ.

ಇದರ ಜೊತೆಗೆ ಇತ್ತೀಚೆಗೆ ಇಲ್ಲಿನ ಕಾರ್ಮಿಕರನ್ನು ನಿರುದ್ಯೋಗಕ್ಕೆ ತಳ್ಳಿರುವ ಅಂಶವೆಂದರೆ, ಗಣಿಗಾರಿಕೆಗೆ ಆಧುನಿಕ ಯಂತ್ರೋಪಕರಣಗಳನ್ನು ಅಳವಡಿಸಲಾಗುತ್ತಿರುವುದು. ಮೊದಲು ಕಲ್ಲನ್ನು ಸಿಡಿಮದ್ದಿನಿಂದ ಸ್ಫೋಟಿಸಿದ ನಂತರ, ಕಲ್ಲನ್ನು ಒಡೆಯುವ, ಎತ್ತುವ, ಲಾರಿಗಳಿಗೆ ತುಂಬುವ ಕೆಲಸವನ್ನು ಕಾರ್ಮಿಕರೆ ಮಾಡುತ್ತಿದ್ದರು. ಆದರೆ ಈಗ ಎಲ್ಲಾ ಕೆಲಸಗಳಿಗೆ ಬೃಹತ್ ಯಂತ್ರಗಳಾದ ಜೆ.ಸಿ.ಬಿ. ಮತ್ತು ಕ್ರೇನ್ ಮತ್ತು ಲಿಫ್ಟರ್‌ಗಳನ್ನು ಹೆಚ್ಚು ಬಳಸಲಾಗುತ್ತಿದೆ. ಇದರಿಂದಾಗಿ ಒಂದು ಗಣಿಗಾರಿಕೆ ಘಟಕದಲ್ಲಿ ನೂರು ಕಾರ್ಮಿಕರು ಮಾಡುತ್ತಿದ್ದ ಕೆಲಸವನ್ನು ಒಂದು ಜೆ.ಸಿ.ಬಿ. ಮತ್ತು ಲಿಫ್ಟರ್‌ಗಳು ಮಾಡುತ್ತಿವೆ. ಇನ್ನು ಲಾರಿಗೆ ಕಲ್ಲುಗಳನ್ನು ತುಂಬಲು ಮತ್ತು ಇಳಿಸಲು ಯಂತ್ರೋಪ ಕರಣಗಳನ್ನೇ ಬಳಸಲಾಗುತ್ತದೆ. ಹೀಗಾಗಿ ಉದ್ದಿಮೆಯಲ್ಲಿ ಕಾರ್ಮಿಕರ ಅವಶ್ಯಕತೆ ಕಡಿಮೆ ಆಗಿದೆ. ಇದರ ಪರಿಣಾಮವಾಗಿ ನೇರವಾಗಿ ಮತ್ತು ಪರೋಕ್ಷವಾಗಿ ಉದ್ಯಮವನ್ನೇ ನಂಬಿದ್ದ ಸಾವಿರಾರು ಕಾರ್ಮಿಕರು ಉದ್ಯೋಗ ಕಳೆದುಕೊಂಡಿದ್ದಾರೆ.

ಕ್ಷೇತ್ರಕಾರ್ಯ ಕೈಗೊಂಡ ಸಮಯದಲ್ಲಿ ಸುತ್ತಮುತ್ತಲಿನ ಜನರಿಂದ ತಿಳಿದುಬಂದ ವಿಷಯವೇನೆಂದರೆ, ಹಿಂದೆ ಕಲ್ಲು ಗಣಿಗಾರಿಕೆ ಘಟಕಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ಇಲ್ಲಿ ಉದ್ಯೋಗ ಕಳೆದುಕೊಂಡು, ಬೇರೆ ಉದ್ಯೋಗ ಅರಸಿ ಬೆಂಗಳೂರು, ಹೈದರಾಬಾದ್, ಮುಂಬಯಿಯಂತಹ ನಗರಗಳಿಗೆ ಕಟ್ಟಡ ನಿರ್ಮಾಣ, ಕೂಲಿ ಮುಂತಾದ ಕೆಲಸಕ್ಕೆ ವಲಸೆ ಹೋಗುತ್ತಿದ್ದಾರೆನ್ನುವ ಮಾಹಿತಿ ದೊರೆಯಿತು. ಇಲ್ಲಿ ಕೆಲಸ ಕಳೆದುಕೊಂಡ ಇನ್ನು ಕೆಲವು

ಕಾರ್ಮಿಕರು ರಸ್ತೆ ಕಾಮಗಾರಿ, ಕಾಲುವೆ ಕೆಲಸಕ್ಕೆ ಸೇರಿಕೊಂಡು ಅರೆ-ಉದ್ಯೋಗದಲ್ಲಿ ಜೀವನವನ್ನು ನಿರ್ವಹಿಸಬೇಕಾದ ಅನಿವಾರ್ಯತೆಯನ್ನು ಎದುರಿಸುತ್ತಿರುವ ಮಾಹಿತಿ ತಿಳಿದುಬಂದಿದೆ. ವಲಸೆ ಹೋಗುವುದಲ್ಲಿ ಇಡೀ ರಾಜ್ಯದಲ್ಲಿ ಯಾದಗಿರಿ ಜಿಲ್ಲೆಯ ಜನರೇ ಹೆಚ್ಚು.

**ಕಾರ್ಮಿಕರ ಚಳುವಳಿಯ ಸ್ಥಿತಿಗತಿ**

ಪ್ರಸ್ತುತ ಸಮಯದಲ್ಲಿ ಯಾದಗಿರಿ ಜಿಲ್ಲೆಯ ಭಾಗದಲ್ಲಿ ಕಾರ್ಮಿಕ ಚಳುವಳಿಗಳ ಸ್ಥಿತಿಗತಿಯನ್ನು, ಹೋರಾಟದ ಸ್ವರೂಪವನ್ನು, ಅವುಗಳ ಸಫಲತೆ ಮತ್ತು ವಿಫಲತೆಯನ್ನು ವಿಶ್ಲೇಷಣೆ ಮಾಡಿ ನೋಡಿದಾಗ, ಚಳುವಳಿ ತನ್ನ ತೀವ್ರತೆಯನ್ನು ಕಳೆದುಕೊಂಡು ದುರ್ಬಲಗೊಳ್ಳುತ್ತಿದೆ. ಹಾಗೆಯೇ ಚಳುವಳಿ ದುರ್ಬಲವಾಗಲು ಅನೇಕ ಕಾರಣಗಳಿವೆ. ಈ ಭಾಗದಲ್ಲಿ ಕಾರ್ಮಿಕರ ಹೋರಾಟ ನಡೆದುಬಂದ ದಾರಿಯನ್ನು ಅವಲೋಕಿಸಿದರೆ, ಕಾರ್ಮಿಕರಿಗೆ ಬಲ ಬಂದಿದ್ದೇ ಕಮ್ಯೂನಿಸ್ಟರಿಂದ, ಆದರೆ ಕ್ರಮೇಣ ಜಾಗತೀಕರಣದಿಂದ ಕಮ್ಯೂನಿಸ್ಟರ ಶಕ್ತಿ ಕುಂದತೊಡಗಿತು. ಇದರಿಂದಾಗಿ ಕಾರ್ಮಿಕ ವರ್ಗದ ಶಕ್ತಿ ಕುಂದಲು ಕಾರಣವಾಯಿತು. ಇನ್ನು ಜಾಗತೀಕರಣ ನೀತಿಯು, ಶ್ರೀಮಂತ ರಾಷ್ಟ್ರಗಳಿಗೆ ಉದಾರವಾದವಾಗಿ ಹಾಗೂ ಬಡದೇಶಗಳಿಗೆ ನಿಯಂತ್ರಣವಾದವಾಗಿ ಬೆಳೆಯಿತು. ಹೀಗೆ ಬದಲಾದ ಆರ್ಥಿಕ ವ್ಯವಸ್ಥೆಯಲ್ಲಿ ಕೈಗಾರಿಕಾರಂಗ ಮಹತ್ವ ಕಳೆದುಕೊಂಡು ಕಾರ್ಪೋರೇಟ್ ವ್ಯವಸ್ಥೆ ಪ್ರಧಾನಸ್ಥಾನ ಪಡೆಯುತ್ತಿರುವುದನ್ನು ಎಲ್ಲರೂ ಗುರುತಿಸುವಂತಹ ಅಂಶವಾಗಿದೆ. ಆಳವಾಗಿ ಈ ವ್ಯವಸ್ಥೆಯನ್ನು ಅವಲೋಕಿಸಿದಲ್ಲಿ ಕಾರ್ಪೋರೇಟ್ ವ್ಯವಸ್ಥೆಯಲ್ಲಿ ಕಾರ್ಮಿಕ ಚಳುವಳಿಗಳು ದುರ್ಬಲಗೊಳ್ಳುತ್ತಿರುವುದು ಕಂಡುಬರುತ್ತದೆ. ಕಾರಣ ಕೈಗಾರಿಕಾರಂಗದಲ್ಲಿ ಕಾರ್ಮಿಕ ಚಳವಳಿಯಲ್ಲಿ ಇರುವಂತಹ ಹಿನ್ನೆಲೆ ಕಾಪೋರೇಟ್‌ರಂಗದಲ್ಲಿ ಇಲ್ಲ. ಅಲ್ಲದೆ ಕಾರ್ಪೋರೇಟ್‌ರಂಗವು ಮುಖ್ಯವಾಗಿ ಬೌದ್ಧಿಕ ಶ್ರಮವನ್ನು ಆಪೇಕ್ಷಿಸುತ್ತದೆ ಹಾಗೂ ಇಲ್ಲಿ ಕಾರ್ಮಿಕರು ಕೇವಲ ನಿರ್ದಿಷ್ಟ ಉದ್ದೇಶಗಳಿಗಾಗಿಯೇ ಸಂಘಟಿತರಾಗುತ್ತಾರೆ. ಕಾರ್ಮಿಕರಲ್ಲಿ ಸಮೂಹಪ್ರಜ್ಞೆಯನ್ನು ಹುಟ್ಟುಹಾಕುತ್ತಿದ್ದ ಔದ್ಯೋಗಿಕ ವಾತಾವರಣವು ಕಾರ್ಮಿಕರಲ್ಲಿಲ್ಲ.

ಕಾರ್ಮಿಕ ಚಳುವಳಿಯ ಬಲವರ್ಧನೆಗೆ ಕಾರ್ಮಿಕ ಪರವಾದ ರಾಜಕೀಯ ಶಕ್ತಿ ಅತ್ಯವಶ್ಯಕ ಎಂಬುದನ್ನು ಹಿಂದಿನಿಂದಲೂ ಕಂಡುಕೊಂಡಿದ್ದೇವೆ. ಆದರೆ ಇತ್ತೀಚೆಗೆ ಕಾರ್ಮಿಕ ಚಳುವಳಿಯ ಹಿಂದಿನ ರಾಜಕೀಯ ಶಕ್ತಿ ಕುಂದುತ್ತಿದೆ. ಹೀಗಾಗಿ ಚಳವಳಿಯೂ ದುರ್ಬಲವಾಗುತ್ತಿದೆ. "ಇತ್ತೀಚಿನ ರಾಜಕೀಯ ಪಕ್ಷಗಳು ಕಾರ್ಮಿಕರ ಹಿತವನ್ನು ಮೂಲತತ್ವವಾಗಿ ಇಟ್ಟುಕೊಳ್ಳದೆ ಕಾರ್ಮಿಕರ ಹಿತಕ್ಕೋಸ್ಕರ, ಉನ್ನತಿಗೋಸ್ಕರ ಕಾರ್ಮಿಕರ ಪರ ಕೆಲಸ ಮಾಡದೆ ಕಾರ್ಮಿಕರನ್ನು, ಕಾರ್ಮಿಕರ ಸಂಘಟನೆಯನ್ನು ತಮ್ಮ ಹಿತಾಸಕ್ತಿಗೆ ಒಂದು ತಂತ್ರವನ್ನಾಗಿ ಇಟ್ಟುಕೊಂಡಿವೆ. ಇನ್ನು ಕಾರ್ಮಿಕರ ಬೆಂಬಲದಿಂದ ರಾಜಕೀಯದಲ್ಲಿ ನೆಲೆಯನ್ನು ಕಂಡುಕೊಂಡು ಅಧಿಕಾರಕ್ಕೆ ಬಂದಂತಹ ಕಾರ್ಮಿಕ ಮುಖಂಡರು ಕಾರ್ಮಿಕರ ಪರವಾಗಿ ನಿಲ್ಲದೆ, ಪಕ್ಷದ ತತ್ವಗಳ ಪರ ವಾಲುತ್ತಿರುವುದು ಕಂಡುಬರುತ್ತದೆ. ಕಾರ್ಮಿಕ ಸಂಘಟನೆಗಳ ಹಿನ್ನೆಲೆಯಿಂದ ನಾಯಕರಾಗಿ ಬೆಳೆದು ಆ ಬಲದಿಂದಲೇ ಶಾಸಕ, ಮಂತ್ರಿಗಿರಿಯಂತಹ ಸ್ಥಾನಕ್ಕೇರಿದ ಎಷ್ಟೋ ಮುಖಂಡರು ಅಧಿಕಾರಕ್ಕೆ ಬಂದ ಮೇಲೆ ತಾವು ಕಾರ್ಮಿಕ ಹಿನ್ನೆಲೆಯಿಂದ ಬಂದವರೆಂಬುದನ್ನೇ ಮರೆತು ಕಾರ್ಮಿಕರ ಹಿತರಕ್ಷಣೆ ನಿರ್ಲಕ್ಷಿಸಿ ರಾಜಕಾರಣಕ್ಕೆ ಮತ್ತು ಅಧಿಕಾರಕ್ಕೆ ತಮ್ಮ ಹೆಚ್ಚಿನ ಸಮಯವನ್ನು ಮೀಸಲಾಗಿಡುತ್ತಿದ್ದಾರೆ.

ಕಾರ್ಮಿಕರ ಹಿತರಕ್ಷಣೆಗೆ ತಮ್ಮ ಜೀವನವನ್ನು ಮುಡಿಪಾಗಿಟ್ಟಿರುವ ಯಾದಗಿರಿಯ ಜಿಲ್ಲಾಧ್ಯಕ್ಷರಾದಂತಹ ಉಮೇಶ.ಕೆ. ಮುದ್ನಾಳ ಅವರಂತಹ ಕೆಲವು ನಿಸ್ವಾರ್ಥ ಮುಖಂಡರನ್ನು ಹೊರತು ಪಡಿಸಿದರೆ ಉಳಿದ ನಾಯಕರ ಮನಸ್ಥಿತಿ ಹಾಗೆಯೇ ಇದೆ.

ಯಾದಗಿರಿ ಜಿಲ್ಲೆಯಲ್ಲಿ ಕಾರ್ಮಿಕ ಚಳುವಳಿಗಳು ಒಗ್ಗಟ್ಟಿಲ್ಲದೆ ಒಡೆದುಹೋಗಲು ಮತ್ತೊಂದು ಮುಖ್ಯ ಕಾರಣವೆಂದರೆ ಜಾತಿ ಆಧಾರದ ಹೋರಾಟಗಳು. ಸಾಮಾನ್ಯವಾಗಿ ತಾತ್ವಿಕ ಭಿನ್ನಾಭಿಪ್ರಾಯಗಳ ಆಧಾರದ ಮೇಲೆ ಸಂಘಟನೆಗಳು ಒಡೆಯುವುದು ಸಹಜ. ಆದರೆ ಇಲ್ಲಿ ಜಾತಿ, ಧರ್ಮ, ಭಾಷೆಗಳ ಆಧಾರದ ಮೇಲೆ ಕಾರ್ಮಿಕ ಸಂಘಟನೆಗಳು ಒಡೆದು ಬಲಹೀನವಾಗುತ್ತಿರುವುದು ಆತಂಕಕಾರಿಯಾದ ಬೆಳವಣಿಗೆಯಾಗಿದೆ. ಈ ಭಾಗದ ಬಹಳಷ್ಟು ಕಾರ್ಖಾನೆಗಳಲ್ಲಿ ಅಥವಾ ಕಾರ್ಮಿಕರು ಹೆಚ್ಚಾಗಿ ಕೆಲಸ ಮಾಡುವ ಸ್ಥಳಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಧಾರ್ಮಿಕ ಅಲ್ಪಸಂಖ್ಯಾತರ ಗುಂಪುಗಳು ಹುಟ್ಟಿಕೊಂಡಿವೆ. ಪ್ರಾರಂಭದಲ್ಲಿ ಸಾಂಸ್ಕೃತಿಕ ಸಂಘಟನೆಗಳಾಗಿ ಹಬ್ಬ ಹರಿದಿನಗಳನ್ನು ತಮ್ಮ ನಾಯಕರ ಹುಟ್ಟುಹಬ್ಬಗಳನ್ನು ಆಚರಿಸುವ ಮೂಲಕ ಇವು ಹುಟ್ಟಿದರೂ ನಂತರ ಇವುಗಳ ವ್ಯಾಪ್ತಿ ಬೆಳೆಯುತ್ತಾ ಹೋಗುತ್ತದೆ. ಕಾರ್ಮಿಕ ಸಂಘಟನೆಗಳು ಚುನಾವಣೆಗಳ ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ಚುರುಕಾಗುವ ಸಾಂಸ್ಕೃತಿಕ ಸಂಘಟನೆಗಳ ಸದಸ್ಯರು ತಮ್ಮ ಜನ ಹೆಚ್ಚು ಸಂಖ್ಯೆಯಲ್ಲಿ ಕಾರ್ಯಕಾರಿ ಸಮಿತಿಯಲ್ಲಿ ಇರಬೇಕೆಂದು ಪ್ರಯತ್ನಿಸುತ್ತಾರೆ."[೩೫] ಕೆಲವೊಮ್ಮೆ ತಮ್ಮ ಜಾತಿ, ಭಾಷಾ ಪಂಗಡದ ಜನರಿಗೆ ಉದ್ಯೋಗ ಭರ್ತಿ ಮಾಡುವಾಗ ಹಾಗೂ ಬಡ್ತಿ ನೀಡುವಾಗ ಆದ್ಯತೆ ಕೊಡಬೇಕೆಂದು ಆಡಳಿತ ವರ್ಗದ ಮೇಲೆ ಒತ್ತಾಯ ತರುತ್ತಾರೆ. ಇಂತಹ ಬೆಳವಣಿಗೆಗಳು ಕಾರ್ಮಿಕ ಚಳವಳಿಯ ಒಗ್ಗಟ್ಟಿನ ಹಾಗೂ ಜಾತ್ಯಾತೀತತೆಯ ಮೂಲ ಆಶಯಕ್ಕೆ ವಿರೋಧವಾಗಿವೆ.

**ಯಾದಗಿರಿ ಜಿಲ್ಲೆಯ ಪ್ರಮುಖ ಕಾರ್ಮಿಕ ಹೋರಾಟಗಾರರು**

೧. ದಾವಲಸಾಬ ನದಾಫ್

೨. ರಾಜಕುಮಾರ್ ಗಡಪಾರ

೩. ಬಾಬು ದೋಖಾ

೪. ಸೈಸಪ್ಪ ಗುತ್ತೇದಾರ್

೫. ಮಲ್ಲಯ್ಯ ಮೊಲಂಪಲ್ಲಿ

೬. ಕಾಂತಿಲಾಲ್ ದೋಖಾ.

**೪.೫. ಮಹಿಳಾ ಚಳುವಳಿ**

ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳವಳಿಗಳ ಬಗ್ಗೆ ಅಧ್ಯಯನ ಮಾಡುವಾಗ ಕಂಡುಬರುವ ಮತ್ತೊಂದು ವಿಶಿಷ್ಟವಾದ ಹೋರಾಟವೆಂದರೆ ಮಹಿಳಾ ಚಳುವಳಿಗಳು. "ಇಡೀ ಕರ್ನಾಟಕದಲ್ಲಿ ನಡೆದ ಮತ್ತು ನಡೆಯುತ್ತಿರುವ ಮಹಿಳಾ ಚಳುವಳಿಗಳಿಗಿಂತ ಇಲ್ಲಿನ ಚಳವಳಿಗಳು ವಿಭಿನ್ನವಾದ ಸಾಲಿನಲ್ಲಿ ನಿಲ್ಲುತ್ತವೆ. ಏಕೆಂದರೆ ಮಹಿಳೆಯರ ಸಮಸ್ಯೆಗಳು. ಸ್ಥಾನಮಾನಗಳು ಇಲ್ಲಿನ ಭೌಗೋಳಿಕತೆ. ಸಮಾಜ. ಧರ್ಮ ಹಾಗೂ ರಾಜಕೀಯ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಬಹುಸಂಸ್ಕೃತಿಯ ಮತ್ತು

ಸಾಮಾಜಿಕ ನಿರ್ಬಂಧಗಳ ನೆಲೆಗಟ್ಟಿನಲ್ಲಿ ಚಳವಳಿಗಳು ರೂಪುಗೊಳ್ಳುತ್ತಾ ಬಂದಿವೆ. ಹೀಗಾಗಿ ಇಲ್ಲಿನ ಮಹಿಳೆಯರು ತಮ್ಮ ಅಸ್ತಿತ್ವವನ್ನು ಇಂದಿಗೂ ಗುರುತಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಭಾರತದ ಸ್ವಾತಂತ್ರ್ಯ ಚಳವಳಿ ಮತ್ತು ರಜಾಕರರ ವಿರುದ್ಧದ ಹೋರಾಟದಲ್ಲಿ ಯಾದಗಿರಿ ಜಿಲ್ಲೆಯ ಮಹಿಳೆಯರು ಪಾಲ್ಗೊಂಡಿದ್ದರಾದರೂ ಅದು ಸ್ವಾತಂತ್ರ್ಯದ ಕಲ್ಪನೆಯಲ್ಲಿ, ಕೇವಲ ಬೆರಳೆಣಿಕೆಯಷ್ಟು ಮಹಿಳೆಯರು ಮಾತ್ರ, ಆದರೆ ಮಹಿಳೆಯರ ಸಮಸ್ಯೆಗಳನ್ನೇ ಇಟ್ಟುಕೊಂಡು ಚಳವಳಿಗಳಾಗಿದ್ದು ತೀರಾ ಇತ್ತೀಚಿನ ದಶಕಗಳಲ್ಲಿ, ಅದೂ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಆರಂಭವಾದ ಮಹಿಳಾ ಚಳವಳಿಗಳ ಪ್ರಭಾವದಿಂದ. ಭಾರತ ಮತ್ತು ಕರ್ನಾಟಕದ ಇತರ ಪ್ರಾಂತ್ಯಗಳಲ್ಲೂ ಮಹಿಳಾ ಚಳುವಳಿಗಳು ೭೦ರ ದಶಕದ ನಂತರವೇ ಆರಂಭವಾದವು.

ಸ್ವಾತಂತ್ರ್ಯೋತ್ತರ ಕಾಲದ ಆರಂಭದ ದಶಕಗಳು ಕರ್ನಾಟಕದ ಮಹಿಳಾ ಚಳುವಳಿಯ ದೃಷ್ಟಿಯಿಂದ ಸಾಂಘಿಕ ಚಟುವಟಿಕೆಗಳಿಂದ ಹೊರತಾದವು ಎಂಬ ಅಭಿಪ್ರಾಯ ಸಾಮಾನ್ಯವಾಗಿದೆ. ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಹೋರಾಟಗಳಲ್ಲಿ ಪಾಲ್ಗೊಂಡಿದ್ದ ಮಹಿಳಾ ಹೋರಾಟ ಗಾರರು ಇವುಗಳ ಈಡೇರಿಕೆಯ ನಂತರ ಅವರ ಚಟುವಟಿಕೆಗಳನ್ನು ಸ್ವಲ್ಪಮಟ್ಟಿಗೆ ನಿಲ್ಲಿಸಿಬಿಟ್ಟರು. ನಂತರ ೧೯೭೫ರ ಅಂತಾರಾಷ್ಟ್ರೀಯ ಮಹಿಳಾ ವರ್ಷಾಚರಣೆಯು ಮಹಿಳಾ ಚಳುವಳಿಯ ದೃಷ್ಟಿಯಿಂದ ಮತ್ತೊಂದು ಮೈಲುಗಲ್ಲಾಗಿದೆ. ಮಹಿಳೆಯರ ಸ್ಥಿತಿಗತಿಗಳನ್ನು ಸುಧಾರಿಸಲೆಂದೇ ವಿಶ್ವಸಂಸ್ಥೆ ೧೯೭೫ನೇ ವರ್ಷವನ್ನು 'ಮಹಿಳಾ ವರುಷ'ವೆಂದು ಘೋಷಿಸಿತು. ಹೀಗಾಗಿ ೧೯೭೫ರಿಂದ ೮೫ರ ದಶಕವು ಮಹಿಳಾ ದಶಕವೆಂದೇ ಪ್ರಚಾರ ಪಡೆಯಿತು. ಆಗ ಸರಕಾರವು ಅನೇಕ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿತು. ಇಂತಹ ಯೋಜನೆಗಳು ಅನುಷ್ಠಾನ ಗೊಳ್ಳಲು ಹಾಗೂ ಸರಕಾರದಿಂದ ಸಿಗುವ ಸೌಲಭ್ಯಗಳನ್ನು ಮಹಿಳೆಯರಿಗೆ ದೊರೆಯುವಂತೆ ಮಾಡುವ ಉದ್ದೇಶದಿಂದ ಅನೇಕ ಸ್ವಾಯತ್ತ ಮಹಿಳಾ ಸಂಘಟನೆಗಳು ಸ್ಥಾಪಿತವಾಗಿ ಹೋರಾಟ ಕ್ಕಿಳಿದವು. ಕರ್ನಾಟಕದಲ್ಲಿಯೂ ಮಹಿಳೆಯರ ಹೋರಾಟದ ಹೊಸ ಅಲೆಯೊಂದು ಆರಂಭ ವಾಯಿತು.

೧೯೭೫ರಲ್ಲಿ 'ನ್ಯಾಷನಲ್ ಫೆಡರೇಶನ್ ಆಫ್ ಇಂಡಿಯನ್ ವುಮೆನ್'ನ ಕರ್ನಾಟಕ ಶಾಖೆಯಿಂದ ಬೆಂಗಳೂರಿನಲ್ಲಿ ಬೃಹತ್ ಸಮ್ಮೇಳನ ನಡೆಸಲಾಯಿತು. ಮಧ್ಯಮವರ್ಗದ ಉದ್ಯೋಗಸ್ಥ ಮಹಿಳೆಯರನ್ನು ಒಳಗೊಂಡಂತೆ ಕರ್ನಾಟಕದಲ್ಲಿನ ಎಲ್ಲಾ ವರ್ಗದ ದುಡಿಯುವ ಮಹಿಳೆಯರು ಸಮಾವೇಶದಲ್ಲಿ ಪಾಲ್ಗೊಂಡಿದ್ದರು. ನಂತರ ೧೯೮೧ರಲ್ಲಿ ಬೆಂಗಳೂರಿನಲ್ಲಿ 'ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ'ಯ ಮೊದಲ ಸಮ್ಮೇಳನ ನಡೆದು ಮುಂದೆ ಇದು 'ಜನವಾದಿ ಮಹಿಳಾ ಸಂಘಟನೆ, ಎಂದು ಹೆಸರಾಯಿತು."[೨೬] ಕಾಲಕ್ರಮೇಣ ಯಾದಗಿರಿ ಜಿಲ್ಲೆಯಲ್ಲಿಯೂ ವಿಮೋಚನಾ. ಸಮತಾ, ಮಾನಸ, ಮಹಿಳಾ ಜಾಗೃತಿ, ಮಾನಿನಿ, ಮಹಿಳೆಯರ ಹಕ್ಕಿನ ಸಂಘ ಹೀಗೆ ಹಲವಾರು ಸ್ವಾಯತ್ತ ಮಹಿಳಾ ಸಂಘಟನೆಗಳು ತಲೆ ಎತ್ತಲಾರಂಭಿಸಿದವು. ಈ ಸಂಘಟನೆಗಳು ಸ್ಥಳೀಯ ಮಹಿಳಾ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಜನಜಾಗೃತಿ, ಕಾನೂನು ಹೋರಾಟ, ಕೌನ್ಸಿಲಿಂಗ್ ಇತ್ಯಾದಿಗಳ ಮೂಲಕ ಮಹಿಳಾ ಸಮಸ್ಯೆಗಳ ಪರಿಹಾರಕ್ಕೆ ಶ್ರಮಿಸುತ್ತಾ ಬಂದವು. ಇವುಗಳಲ್ಲಿ ಕೆಲವು ಸಂಘಟನೆಗಳು ತಮ್ಮ ಚಟುವಟಿಕೆಯ ಭಾಗವಾಗಿ ವಾರ್ತಾಪತ್ರಗಳನ್ನು, ಮಹಿಳಾ

ಪತ್ರಿಕೆಗಳನ್ನು ಆರಂಭಿಸಿದವು. ಅವುಗಳಲ್ಲಿ ಮುಖ್ಯವಾದವೆಂದರೆ ಸಮತಾ, ಜನವಾದಿ, ಅಚಲ, ಮಾನಸ, ಜಾಗೃತಿ ಮುಂತಾದವುಗಳನ್ನು ಹೆಸರಿಸಬಹುದಾಗಿದೆ.

ಹೈದರಾಬಾದ್ ಕರ್ನಾಟಕದ ಯಾದಗಿರಿ ಜಿಲ್ಲೆಯ ಮಹಿಳಾ ಚಳುವಳಿಗಳಲ್ಲಿ ಎಡಪಂಥೀಯ ತತ್ವಸಿದ್ಧಾಂತಗಳ ಹಿನ್ನೆಲೆ ಕಂಡುಬರುತ್ತದೆ. ಆರಂಭದಲ್ಲಿ ಇಲ್ಲಿ ಮೇಲ್ವರ್ಗದ ಮಹಿಳೆಯರಿಗೆ ಸಂಬಂಧಿಸಿದ ವಿಷಯಗಳನ್ನೇ, ಸಮಸ್ಯೆಗಳನ್ನೇ ಮುಖ್ಯವಾಗಿಟ್ಟುಕೊಂಡು ಹೋರಾಟಗಳಾಗಿದ್ದು, ಕೆಳವರ್ಗದ ಮಹಿಳೆಯರ ತಳಮೂಲ ಸಮಸ್ಯೆಗಳ ಬಗ್ಗೆ ಹೋರಾಟಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಆದರೆ ಕ್ರಮೇಣ ಮಹಿಳಾ ಸಂಘಟನೆಗಳು, ಸಿಪಿಐ, ಸಿಪಿಎಂ, ಜನವಾದಿ, ಸಮತಾ, ಆಶಾ, ಸಮ್ಮುಖ್, ಮುಂತಾದ ವೇದಿಕೆಗಳ ಮೂಲಕ ಹೋರಾಟಕ್ಕೆ ಇಳಿದ ಮೇಲೆ ಇತ್ತೀಚೆಗೆ ಕೃಷಿ ಮಹಿಳೆಯರ, ಕೂಲಿ ಕಾರ್ಮಿಕ ಮಹಿಳೆಯರ, ಕಲ್ಲು ಗಣಿ ಮಹಿಳಾ ಕಾರ್ಮಿಕರ ಹಾಗೂ ದಲಿತ, ನಿರ್ಲಕ್ಷಿತ, ದೌರ್ಜನ್ಯಕ್ಕೆ, ಅನ್ಯಾಯಕ್ಕೆ ಒಳಗಾದ ಮಹಿಳಾಪರ ಹೋರಾಟಗಳು ಆರಂಭವಾದವು. ಇವರು ತಮ್ಮದೇ ಆದ ತತ್ವಸಿದ್ಧಾಂತಗಳ ಮೂಲಕ, ಸಂಘಟನೆ ಮೂಲಕ ಕೆಳವರ್ಗದವರನ್ನು ಪ್ರತಿನಿಧಿಸತೊಡಗಿದರು. ಆದರೆ ಕೆಲವೊಂದು ವಿಚಾರಗಳು ಮೇಲ್ವರ್ಗದ ಮಹಿಳೆಯರು ಮತ್ತು ಕೆಳವರ್ಗದ ಮಹಿಳೆಯರ ನಡುವೆ ಭಿನ್ನವಾದ ಸಮಸ್ಯೆಗಳನ್ನು ತಂದೊಡ್ಡಿವೆ. ಉದಾಹರಣೆಗೆ ಮದ್ಯಪಾನ ಮೇಲ್ವರ್ಗದವರಿಗೆ ನೈತಿಕ ಸಮಸ್ಯೆಯಾದರೆ ಕೆಳವರ್ಗದವರಿಗೆ ಆರ್ಥಿಕ ಸಮಸ್ಯೆಯಾಗಿ ಕಾಣುತ್ತದೆ.

ದಲಿತ ಮತ್ತು ಬಂಡಾಯ ಸಾಹಿತ್ಯ ಕಾಣಿಸಿಕೊಂಡಾಗ ಇಲ್ಲಿನ ಮಹಿಳಾ ಲೇಖಕರು ಮಹಿಳೆಯರ ಸ್ಥಿತಿಗತಿಗಳ ಕುರಿತು ಬರೆಯಲಿಕ್ಕೆ ಆರಂಭಿಸಿದರು. ಮಹಿಳೆಯರ ಮೇಲೆ ಯಾವ ರೀತಿ ಶೋಷಣೆ ಮುಂದುವರಿದಿದೆ ಎನ್ನುವುದರ ಬಗ್ಗೆ ವಿಶೇಷವಾಗಿ ದಲಿತ, ಕೆಳವರ್ಗದವರ ಮೇಲಾಗುತ್ತಿದ್ದ ದೌರ್ಜನ್ಯದ ಬಗ್ಗೆ ಬರೆದರು. ಮೊದಲ ಬಾರಿಗೆ ಮೌಢ್ಯತೆ, ಸಂಪ್ರದಾಯ, ದೇವದಾಸಿ ಕುರಿತು ಧ್ವನಿ ಎತ್ತತೊಡಗಿದರು. ಇತರ ಪ್ರದೇಶಗಳ ಮಹಿಳೆಯರು ಮತ್ತು ಇಲ್ಲಿನ ಮಹಿಳೆಯರ ಸ್ಥಿತಿಗತಿ ಕುರಿತು ತುಲನೆ ಮಾಡಿ ನೋಡುವ ಗುಣ ಬೆಳೆಸಿಕೊಂಡರು. ಈ ದಿಸೆಯಲ್ಲಿ ಸಂಘಟನೆ, ವಿಮೋಚನಾ, ಸಮತಾ, ಮಾನಸ, ಮಹಿಳಾ ಜಾಗೃತಿ, ಮಾನಿನಿ ಮುಂತಾದ ಸಂಘಟನೆಗಳ ಜೊತೆಗೆ ವಿದ್ಯಾವಂತ ಮಹಿಳೆಯರು ಮತ್ತು ಮಹಿಳಾ ಸಂಘಟನೆಗಳು ಆರಂಭದ ಮಹಿಳಾ ಹೋರಾಟಕ್ಕೆ ಕಾರಣವಾದವು. ನಂತರ ಮಹಿಳೆಯರ ಹಕ್ಕುಗಳಿಗಾಗಿ ಹಾಗೂ ಸಾಮಾಜಿಕ ಅನ್ಯಾಯದ ವಿರುದ್ಧ ಹೋರಾಟ ಮಾಡಿದ್ದು, ವಿಶೇಷವಾಗಿ ಗ್ರಾಮೀಣ ರೈತಾಪಿ ಮಹಿಳೆಯರು. ಕ್ರಮೇಣ ಮಹಿಳಾ ಕೂಲಿ ಕಾರ್ಮಿಕರು, ಕೈಗಾರಿಕಾ ಕಾರ್ಮಿಕರು, ದಿನಗೂಲಿ ನೌಕರರು, ಪ್ರಜ್ಞಾವಂತ ಮಹಿಳೆಯರು ಬೆಂಬಲ ವ್ಯಕ್ತಪಡಿಸಿದರು.

**೪.೫.೧. ಸ್ವಾತಂತ್ರ್ಯೋತ್ತರ ಮಹಿಳಾ ಚಳುವಳಿಗಳು**

ಭಾರತಕ್ಕೆ ೧೯೪೭ರಲ್ಲಿ ಸ್ವಾತಂತ್ರ್ಯ ಸಿಕ್ಕರೆ ಹೈದರಾಬಾದ್ ಸಂಸ್ಥಾನಕ್ಕೆ ಒಂದು ವರ್ಷ ಒಂದು ತಿಂಗಳು ತಡವಾಗಿ ದೊರಕಿತು. ಸಂಸ್ಥಾನಿಕರ ಕೈಯಿಂದ ಈ ಪ್ರದೇಶಗಳು ಬಿಡುಗಡೆ ಆಗುವ ಸಂದರ್ಭದಲ್ಲಿ ಮಹಿಳೆಯರ ಹೋರಾಟದ ಪಾತ್ರವನ್ನು ಗುರುತಿಸುವಾಗ ಪ್ರತ್ಯಕ್ಷವಾಗಿ

ಹೋರಾಟದಲ್ಲಿ ಬೆರಳೆಣಿಕೆಯಷ್ಟು ಮಹಿಳೆಯರು ಮಾತ್ರ ಕಂಡುಬಂದರೆ, ಅಪ್ರತ್ಯಕ್ಷವಾಗಿ ಕುಟುಂಬದಲ್ಲಿರುವಂಥ ಬಹುಪಾಲು ಮಹಿಳೆಯರು ಇಂತಹ ಹೋರಾಟಗಳಲ್ಲಿ ಪಾಲ್ಗೊಂಡಿದ್ದಾರೆ.

ಆದರೆ ದುರಂತವೇನೆಂದರೆ ಹೀಗೆ ನೇಪಥ್ಯದಲ್ಲಿ ಇದ್ದುಕೊಂಡು ಚಳುವಳಿಗಾರರಿಗೆ ಸಹಾಯ ಮಾಡಿದಂತಹ ಮಹಿಳೆಯರ ಹೆಸರುಗಳು ಮತ್ತು ಕೊಡುಗೆಗಳು ಹೆಚ್ಚಾಗಿ ಗೋಚರಿಸು ವುದಿಲ್ಲ. ಹೀಗೆ ಚಾರಿತ್ರಿಕ ದಾಖಲೆಗಳಲ್ಲಿ ಮಹಿಳೆಯರ ಹೆಸರು ದಾಖಲಾಗಿಲ್ಲವೆಂದಾಕ್ಷಣ ಆಗಿನ ಹೋರಾಟಗಳಲ್ಲಿ ಮಹಿಳೆಯರ ಪಾತ್ರವೇ ಇಲ್ಲ, ಮಹಿಳೆಯರು ಭಾಗವಹಿಸಿಲ್ಲ ಎನ್ನುವ ಆತುರದ ನಿರ್ಧಾರಕ್ಕೆ ಬರುತ್ತೇವೆ. ಆದರೆ ವಾಸ್ತವದಲ್ಲಿ ನಿಜ ಪರಿಸ್ಥಿತಿ ಹಾಗಿಲ್ಲ. "ನಿಜಾಮರ ಆಳ್ವಿಕೆಯಿಂದ ಬಿಡುಗಡೆ ಸಂದರ್ಭದಲ್ಲಿ ಅನೇಕ ಮಹಿಳೆಯರು ಭಾಗವಹಿಸಿದ್ದರು ಎನ್ನುವುದಕ್ಕೆ ಅನೇಕ ಜನಪದ ಹಾಡುಗಳಲ್ಲಿ ಉಲ್ಲೇಖವಿದೆ ಮತ್ತು ಈ ಹೋರಾಟಗಳಲ್ಲಿ ತೊಡಗಿಸಿಕೊಂಡಿದ್ದ ಮಹಿಳೆಯರನ್ನು ಗುರುತಿಸಿ ನೆನಪಿಸುವ ಮೌಖಿಕ ಕಥನಗಳಿವೆ. ಒಬ್ಬ ಪುರುಷ ರಾಜಕೀಯ ಪ್ರೇರಿತ ಚಳವಳಿಗಳಲ್ಲಿ ಭಾಗವಹಿಸಲು ಹೋಗುತ್ತಾನೆಂದರೆ ಆ ಸಂದರ್ಭದಲ್ಲಿ ಆ ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸುವಂತಹ ಮಹಿಳೆಯ ಕೆಲಸ ಇದೆಯಲ್ಲ, ಅದೂ ಸಹ ಈ ಚಳವಳಿಗೆ ಪೂರಕವಾದಂತಹ ಕೆಲಸ ಎಂದು ನಾವು ಭಾವಿಸಲಿಲ್ಲ."[೩೭] ಹೋರಾಟದಲ್ಲಿ ಭಾಗವಹಿಸಲು ಗಂಡಸರು ಹೊರ ಹೋದಾಗ ಅವನ ಅನುಪಸ್ಥಿತಿಯಲ್ಲಿ ಸಂಸಾರದ ಜವಾಬ್ದಾರಿ ಯನ್ನು ನಿಭಾಯಿಸುವಂಥ ಈ ಮಹಿಳೆಯ ಕೆಲಸ ಇತ್ತಲ್ಲ, ಇದೂ ಸಹ ಚಳವಳಿಯ ಒಂದು ಭಾಗ ಎಂದು ನಾವು ಭಾವಿಸಿದರೆ ಎಲ್ಲಾ ಕಾಲದಲ್ಲೂ ಎಲ್ಲಾ ಚಳುವಳಿಯಲ್ಲೂ ಮಹಿಳೆಯರು ಭಾಗವಹಿಸಿದ್ದಾರೆ ಎಂದು ಹೇಳಲು ಸಾಧ್ಯವಾಗುತ್ತದೆ.

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಯಾದಗಿರಿ ಜಿಲ್ಲೆಯ ಮಹಿಳೆಯರ ಪಾತ್ರ ದಾಖಲಾರ್ಹವಾಗಿದೆ. ನಿಜಾಂ ಮತ್ತು ರಜಾಕಾರರ ದೌರ್ಜನ್ಯವನ್ನು ಪ್ರತಿಭಟಿಸುವಲ್ಲಿ ಮಹಿಳೆಯರು ಪ್ರಮುಖ ಹೋರಾಟ ಮಾಡಿದ್ದಾರೆ. ನಿಜಾಮನ ಸೈನಿಕರು ಗ್ರಾಮಗಳಿಗೆ ಮುತ್ತಿಗೆ ಹಾಕಿ ಹಿಂದೂ ಮಹಿಳೆಯರ ಮೇಲೆ ಅನ್ಯಾಯ, ಅತ್ಯಾಚಾರಗಳನ್ನು ನಡೆಸಿದ ಸಂದರ್ಭದೊಳಗೆ ಸ್ವತಃ ಮುಸ್ಲಿಂ ಮಹಿಳೆಯರು ಹಿಂದೂ ಮಹಿಳೆಯರಿಗೆ ಆಶ್ರಯ ಕೊಟ್ಟಂತಹ ಉದಾಹರಣೆಗಳಿವೆ. ಅದೇ ಸಂದರ್ಭದಲ್ಲಿ ಹಿಂದೂ ಮಹಿಳೆಯರು ಮುಸ್ಲಿಂ ಮಹಿಳೆಯರ ಮೇಲೆ ಮತೀಯವಾದಿಗಳು ಆಕ್ರಮಣ ಮಾಡಿದ ಸಂದರ್ಭದಲ್ಲಿ ಮುಸ್ಲಿಮರಿಗೆ ರಕ್ಷಣೆ ಕೊಟ್ಟಂತಹ ಉದಾಹರಣೆಗಳಿವೆ.

### ಮಹಿಳಾ ಮೀಸಲಾತಿಗಾಗಿ ಚಳುವಳಿ

೧೯೯೨ರಲ್ಲಿ ಭಾರತದ ಸಂವಿಧಾನಕ್ಕೆ ೭೩ ಮತ್ತು ೭೪ರ ತಿದ್ದುಪಡಿಯನ್ನು ತಂದು ಗ್ರಾಮ ಮತ್ತು ಪಟ್ಟಣಗಳಲ್ಲಿರುವ ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ ೩೩ರಷ್ಟು ಸ್ಥಾನವನ್ನು ಮಹಿಳೆಯರಿಗಾಗಿ ಮೀಸಲಾಗಿಡಬೇಕೆಂಬುದನ್ನು ಜಾರಿ ಮಾಡಲಾಯಿತು. ಇದರಿಂದ ಮಹಿಳೆಯರು ರಾಜಕೀಯ ಸ್ಥಾನಮಾನಗಳನ್ನು ಪಡೆದುಕೊಂಡರಲ್ಲದೇ ರಾಜಕೀಯ ಕ್ಷೇತ್ರದಲ್ಲಿ ನೇರವಾಗಿ ಪಾಲ್ಗೊಳ್ಳುವ ಅವಕಾಶಗಳನ್ನು ಪಡೆದರು. ನಂತರ ದೇಶದ ಎಲ್ಲಾ ವಿಧಾನಸಭೆಗಳಲ್ಲಿ ಮತ್ತು ಸಂಸತ್ತಿನಲ್ಲಿ ಶೇಕಡ ೩೩ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಾಗಿಡುವ ಮಸೂದೆಯನ್ನು ೧೯೯೬

ಸೆಪ್ಟೆಂಬರ್ ೪ರಂದು ಲೋಕಸಭೆಯಲ್ಲಿ ಮಂಡಿಸಲಾಯಿತು. ಮಸೂದೆಯನ್ನು ಸಂಸದೆ ಗೀತಾ ಮುಖರ್ಜಿ ಅಧ್ಯಕ್ಷತೆಯ ಜಂಟಿ ಸಂಸದೀಯ ಸಮಿತಿಗೆ ಒಪ್ಪಿಸಲಾಯಿತು. ಜಂಟಿ ಸಂಸದೀಯ ಸಮಿತಿಯು ೧೯೯೬, ಡಿಸೆಂಬರ್ ೯ರಂದು ತನ್ನ ವರದಿಯನ್ನು ಒಪ್ಪಿಸಿತು. ಆದರೆ ಒಪ್ಪಿಗೆ ಸಿಗದೆ ಅದು ನೆನೆಗುದಿಗೆ ಬಿದ್ದಿತು. ಅಷ್ಟೇ ಅಲ್ಲದೆ ಪ್ರತಿ ವರ್ಷ ವಿಧೇಯಕವನ್ನು ಮುಂದೂಡುತ್ತಾ ಬರಲಾಯಿತು.

ಹೀಗಾಗಿ ತ್ವರಿತವಾಗಿ ವಿಧೇಯಕವನ್ನು ಸದನದಲ್ಲಿ ಪಾಸು ಮಾಡುವಂತೆ ದೇಶಾದ್ಯಂತ ಪ್ರಗತಿಪರ ಮಹಿಳೆಯರು ಹಾಗೂ ವಿವಿಧ ಮಹಿಳಾ ಸಂಘಟನೆಗಳು ಬೃಹತ್ ಹೋರಾಟವನ್ನು ಆರಂಭಿಸಿದವು. ಹೀಗೆ ಮಹಿಳಾ ಮೀಸಲಾತಿ ಕಾಯ್ದೆ ಜಾರಿಗಾಗಿ ಯಾದಗಿರಿ ಜಿಲ್ಲೆಯಲ್ಲಿಯೂ ಸಹ ತೀವ್ರವಾದ ಹೋರಾಟ ನಡೆದು ಕಂಡುಬಂದಿದೆ. ತೊಂಬತ್ತರ ದಶಕದೊಳಗೆ ಮಹಿಳಾ ರಾಜಕೀಯ ಮೀಸಲಾತಿಗಾಗಿ ನಡೆದ ಹೋರಾಟದಲ್ಲಿ ಬಲಪಂಥೀಯ ಮತ್ತು ಎಡಪಂಥೀಯ ಗುಂಪಿನ ಮಹಿಳೆಯರು ಒಂದು ಸಮಾನ ವೇದಿಕೆಯನ್ನು ರೂಪಿಸಿಕೊಂಡು ಕಲಬುರಗಿಯಲ್ಲಿ ಒಂದು ದೊಡ್ಡ ಹೋರಾಟ ಮಾಡಿದರು. ಹೀಗೆ ಯಾದಗಿರಿ ಜಿಲ್ಲೆಯಾದ್ಯಂತ ಮಹಿಳಾ ಮೀಸಲಾತಿ ಹೋರಾಟವು ವಿವಿಧ ಮಹಿಳಾ ಸಂಘಟನೆಗಳ ನೇತೃತ್ವದಲ್ಲಿ ನಡೆಯುತ್ತಾ ಬಂದಿದೆ. ಈ ನಿಟ್ಟಿನಲ್ಲಿ ಜನವಾದಿ ಮಹಿಳಾ ಸಂಘಟನೆಯ ನೇತೃತ್ವದಲ್ಲಿ ನಡೆದಿರುವ ಹೋರಾಟಗಳು ಪರಿಣಾಮಕಾರಿ ಹೋರಾಟಗಳೆಂದು ಕಂಡುಬಂದಿವೆ. ಆರಂಭದಲ್ಲಿ ಮಹಿಳಾ ಮೀಸಲಾತಿ ಮಸೂದೆ ಜಾರಿಗಾಗಿ ಒತ್ತಾಯ, ಒತ್ತಡಗಳನ್ನು ಹೇರುವ ಹಿನ್ನೆಲೆಯಲ್ಲಿ ಸರಕಾರದ ಗಮನ ಸೆಳೆಯಲು ಪ್ರತಿಭಟನಾ ಮೆರವಣಿಗೆ, ರಸ್ತೆ ತಡೆ ನಡೆಸಲಾಯಿತು, ಪ್ರತಿಭಟನೆಗಳು ದಿನೇ ದಿನೇ ಹೆಚ್ಚಾದಾಗ ಈ ರೀತಿಯ ಹೋರಾಟಗಳನ್ನು ಕೈಬಿಡುವಂತೆ ಪೋಲೀಸರು ನೀಡಿದ ಎಚ್ಚರಿಕೆಯನ್ನು ನಿರ್ಲಕ್ಷಿಸಿದಾಗ, ಪೋಲೀಸರು ಪ್ರತಿಭಟನಾಕಾರರನ್ನು ತಡೆದು ಅವರನ್ನು ಬಂಧಿಸಲು ಮುಂದಾದರು.

ಇಂತಹ ಸಂದರ್ಭಗಳಲ್ಲಿ ಸುಶಿಕ್ಷಿತ ವರ್ಗದ ಮಹಿಳೆಯರು ಕೆಲವು ಉದ್ಯೋಗಸ್ಥ ಮಹಿಳೆಯರು ಬಂಧನದಿಂದ ಪಾರಾಗಲು ಉದ್ದೇಶಪೂರ್ವಕವಾಗಿ ಹೋರಾಟದಿಂದ ಹಿಂದೆ ಸರಿದಾಗ ಹೋರಾಟ ಮುಂದುವರಿಸಿದ್ದ ಕೆಳವರ್ಗದ, ಬಡ, ಮಹಿಳೆಯರೇ ಹೆಚ್ಚಾಗಿ ಬಂಧನಕ್ಕೆ ಒಳಗಾದರು. ಅಲ್ಲದೇ ಹೀಗೆ ಬಂಧನಕ್ಕೆ ಒಳಗಾದವರಲ್ಲಿ ಜನವಾದಿ ಮಹಿಳಾ ಸಂಘಟನೆಯ ಸದಸ್ಯರೇ ಹೆಚ್ಚಾಗಿದ್ದು ಇವರ ಮೇಲೆ ಮೊಕದ್ದಮೆಯನ್ನು ದಾಖಲಿಸಲಾಯಿತು. ನಂತರ ಜಾಮೀನಿನ ಮೇಲೆ ಬಿಡುಗಡೆ ಹೊಂದಿದ ಇವರು ವಿಚಾರಣಾ ದಿನದಂದು ನ್ಯಾಯಾಲಯಕ್ಕೆ ಹಾಜರಾಗಿ ಬರುತ್ತಿದ್ದರು. ಆರಂಭದಲ್ಲಿ ನ್ಯಾಯಾಲಯಕ್ಕೆ ಹಾಜರಾಗಿ ಬರುತ್ತಿದ್ದವರು ವಿಚಾರಣೆ ದೀರ್ಘ ಅವಧಿಗೆ ಸಾಗುತ್ತಿದ್ದಂತೆ, ನ್ಯಾಯಾಲಯಕ್ಕೆ ಹಾಜರಾಗುವುದನ್ನು ಬಿಟ್ಟರು. ನ್ಯಾಯಾಲಯದ ವಿಚಾರಣೆಗೆ ಗೈರುಹಾಜರಾದ ಇವರಿಗೆ ನ್ಯಾಯಾಲಯದಿಂದ ವಾರೆಂಟ್ ಜಾರಿಯಾದವು. ಎರಡು ಸಲ ವಾರೆಂಟ್ ಜಾರಿಯಾದಾಗಲೂ ಇವರು ನ್ಯಾಯಾಲಯಕ್ಕೆ ಹಾಜರಾಗದಿದ್ದಾಗ ಕೊನೆಗೆ ಮೂರನೇ ಬಾರಿಗೆ ಬಂಧನದ ವಾರೆಂಟ್ ಜಾರಿಯಾಯಿತು.

ನ್ಯಾಯಾಲಯದಿಂದ ಬಂಧನದ ವಾರೆಂಟ್ ಜಾರಿಯಾದಾಗ, ಮೊಕದ್ದಮೆಯಲ್ಲಿ ಹೆಸರಿದ್ದ ಮಹಿಳೆಯರು ಕಲಬುರಗಿಯ ಪಕ್ಕದ ಹಳ್ಳಿಯೊಂದರಲ್ಲಿ ಮಹಿಳಾ ಕಾರ್ಯಕರ್ತರ ಸಭೆಯಲ್ಲಿ ಭಾಗವಹಿಸಿದ್ದರು. ಆಗ ವಾರೆಂಟ್‌ನೊಂದಿಗೆ ಅಲ್ಲಿಗೆ ಬಂದ ಪೊಲೀಸರು ಅ ಮಹಿಳೆಯರನ್ನು ಬಂಧಿಸಲು ಮುಂದಾದರು. ಆಗ ಆ ಮಹಿಳೆಯರಿಗೆ ಹೋರಾಟದ ಮನಸ್ಸು, ಧೈರ್ಯವಿದ್ದರೂ ಬೇರೆ ಊರಿನಲ್ಲಿದ್ದಾಗ ಇದ್ದಕ್ಕಿದ್ದಂತೆ ತಮ್ಮನ್ನು ಬಂಧಿಸಲು ಬಂದ ಪೊಲೀಸರನ್ನು ನೋಡಿ ಗಾಬರಿಗೆ ಒಳಗಾದರು. ಕೊನೆಗೆ ಪೊಲೀಸರು ಇವರನ್ನು ಬಂಧಿಸಿ ಕಲಬುರಗಿಯ ಪೊಲೀಸ್ ಠಾಣೆಗೆ ಕರೆದುಕೊಂಡು ಹೋದರು. ಇಂತಹ ಘಟನೆಯಿಂದ ಮಹಿಳಾ ಹೋರಾಟಗಾರರಿಗೆ ಸ್ವಲ್ಪ ಗಾಬರಿ ಮತ್ತು ಹಿನ್ನಡೆ ಆಯಿತು. ಆಗ ಜನವಾದಿ ಮಹಿಳಾ ಸಂಘಟನೆಯ ಸದಸ್ಯರೆಲ್ಲರೂ ಕಲಬುರಗಿಗೆ ಬಂದು ಬಂಧಿತ ಮಹಿಳೆಯರ ಪರವಾಗಿ ನ್ಯಾಯಾಲಯದಲ್ಲಿ ಜಾಮೀನು ಪಡೆಯಲು ಪ್ರಯತ್ನಿಸಿದರು. ಆದರೆ ಆ ದಿನ ಶನಿವಾರವಾಗಿದ್ದು ಜಾಮೀನು ಪಡೆಯಲು ಕಾನೂನಿನ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಲು ಹೆಚ್ಚು ಸಮಯವಿರಲಿಲ್ಲ. ಆಗ ಆ ಸಂಘಟನೆಯ ಮತ್ತು ಬಂಧಿತ ಮಹಿಳೆಯರ ಮನಸ್ಸಿನಲ್ಲಿ ದುಗುಡವನ್ನು ಅರ್ಥ ಮಾಡಿಕೊಳ್ಳುವುದು ಸಾಧ್ಯವೇ ಇರಲಿಲ್ಲ. ಏಕೆಂದರೆ ಬಂಧಿತರಾಗಿ ಸೆರೆಮನೆಯಲ್ಲಿದ್ದಾರೆಂದರೆ ಅವರನ್ನು ನೋಡಬಹುದಾದ ರೀತಿಯಿಂದ ಗಾಬರಿಗೊಳಗಾಗಿದ್ದರು.

ಇನ್ನೊಂದು ಕಡೆ ಇನ್ನು ಕೆಲವು ಮಹಿಳೆಯರು ತಾವು ಜೈಲಿಗೆ ಹೋಗಿರುವ ವಿಚಾರ ನಮ್ಮ ಮನೆಯವರಿಗೆ ತಿಳಿದರೆ ನಮ್ಮ ಮನೆಯವರು ನಮ್ಮನ್ನು ಮನೆಗೆ ಸೇರಿಸುವುದಿಲ್ಲವೆಂದು ರೋದಿಸುತ್ತಿದ್ದರು. ಇಂತಹ ಸಮಯದಲ್ಲಿ ಅವರ ಪರಿಸ್ಥಿತಿ ಹೇಗಿತ್ತೆಂದರೆ ಹೋರಾಟ, ಚಳುವಳಿ ಎಂಥದ್ದೂ ಬೇಡ ಎನ್ನುವ ಹಾಗಿತ್ತು. ನಂತರ ಬಂಧನದಿಂದ ಜಾಮೀನಿನ ಮೇಲೆ ಹೊರಬಂದ ಮಹಿಳೆಯರು ತಮ್ಮ ಸ್ಥಿತಿ ಅರಿತುಕೊಂಡು, ಮುಂದೆ ನ್ಯಾಯಾಲಯಕ್ಕೆ ಓಡಾಡಬೇಕಾದ ಪರಿಸ್ಥಿತಿ ಅರಿತು ಕೆಲವರು ಹೋರಾಟದಿಂದಲೆ ಹಿಂದೆ ಸರಿಯುವ, ಸಂಘಟನೆಯ ಸದಸ್ಯತ್ವಕ್ಕೆ ರಾಜಿನಾಮೆ ನೀಡುವ ಪರಿಸ್ಥಿತಿ ನಿರ್ಮಾಣವಾಗಿತ್ತು. ಆದರೆ ಇನ್ನು ಕೆಲವರು ಕ್ರಮೇಣ ಸುಧಾರಿಸಿ ಕೊಂಡು ಮತ್ತೆ ಹೋರಾಟದಲ್ಲಿ ಪಾಲ್ಗೊಳ್ಳಲು ಆರಂಭಿಸಿದರು.

ಇಂತಹವರನ್ನು ಕುರಿತು ಬರೆಯಲು, ದಾಖಲು ಮಾಡಲು ಯಾರೂ ಮನಸ್ಸು ಮಾಡುವು ದಿಲ್ಲ. ಆದರೆ ಮಹಿಳಾ ಮೀಸಲಾತಿ ಜಾರಿಯಾದರೆ ಅದರ ಪ್ರಯೋಜನವನ್ನು ತಕ್ಷಣ ಪಡೆಯುವವರು ಸುಶಿಕ್ಷಿತ, ಮೇಲ್ವರ್ಗದ, ವಿದ್ಯಾವಂತ ಮತ್ತು ಉದ್ಯೋಗಸ್ಥ ಮಹಿಳೆಯರಾದರೆ, ನಿಜವಾಗಿಯೂ ಹೋರಾಟದಲ್ಲಿ ಪಾಲ್ಗೊಂಡು ತೀವ್ರವಾಗಿ ಹೋರಾಡಿ ಜೈಲು ಸೇರಿ ನ್ಯಾಯಾಲಯಕ್ಕೆ ಅಲೆದಾಡಿ, ಕಷ್ಟಪಡುವವರು ಇನ್ನೊಂದು ವರ್ಗದ ಮಹಿಳೆಯರು. ಹೀಗಾಗಿ ಚಳುವಳಿಗಳಲ್ಲಿ ಇಂತಹ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನು, ಸಾಧನೆಗಳನ್ನು ಗುರುತಿಸುವ ಕೆಲಸ ಮಾಡಬೇಕಾಗಿದೆ. ಹೀಗೆ ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಯ ಮಹಿಳೆಯರು ಬಹಳ ತೀವ್ರವಾಗಿ ಮಾಡಿದಂತಹ ಚಳುವಳಿ ಎಂದರೆ ಮಹಿಳಾ ಮೀಸಲಾತಿ ಮಸೂದೆ ಜಾರಿಗೆ ಮಾಡಿದ ಚಳುವಳಿಯಾಗಿದೆ. ಇತ್ತೀಚಿನ ದಿನಗಳಲ್ಲಿ ರಾಜಕೀಯ ಅವಕಾಶಕ್ಕಾಗಿ ದೇಶಾದ್ಯಂತ ನಡೆದಂತಹ ಮಹಿಳಾ ಚಳುವಳಿಗಳ ಪ್ರಭಾವದ ಹಿನ್ನೆಲೆಯಲ್ಲಿ, ೯೦ರ ದಶಕದ ನಂತರ ಈ

ಭಾಗದಲ್ಲಿಯೂ, ರಾಜಕೀಯ ಮೀಸಲಾತಿಗೆ ಸಂಬಂಧವಾಗಿ ಎಲ್ಲಾ ನೆಲೆಯ ಸಂಘಟಿತ ಮಹಿಳೆಯರು ಸೇರಿಕೊಂಡು ಬೃಹತ್ ಪ್ರಮಾಣದ ಹೋರಾಟ ಮಾಡಿದ್ದಾರೆ.

ಹೀಗಾಗಿಯೇ ಶೇ. ೩೩ರಷ್ಟು ರಾಜಕೀಯ ಮೀಸಲಾತಿ ಪಂಚಾಯಿತಿ ಮಟ್ಟದೊಳಗೆ ಕೆಳಹಂತದಲ್ಲಿ ಸಿಕ್ಕಿತು. ಇದನ್ನು ಪಾರ್ಲಿಮೆಂಟು ಹಂತದೊಳಗೆ ನೀಡುವಂತೆ ಇವತ್ತಿಗೂ ಮಹಿಳೆಯರು ಹೋರಾಟ ಮಾಡುತ್ತಿದ್ದಾರೆ. ಇದರ ಕುರಿತು ಇವತ್ತಿಗೂ ಚರ್ಚೆಗಳಾಗುತ್ತಿವೆ. ಹಾಗೂ ಮಸೂದೆಯ ಮಂಡನೆಯ ಸಂದರ್ಭದಲ್ಲಿ ಪಕ್ಷಾತೀತವಾಗಿ ಹೆಚ್ಚಿನ ಪುರುಷ ಸದಸ್ಯರು ಅದನ್ನು ವಿರೋಧ ಮಾಡುವಂತದ್ದನ್ನು ನೋಡಬಹುದು. ಆದರೆ ಇವರ ಹೋರಾಟ ರಾಷ್ಟ್ರಮಟ್ಟದಲ್ಲಿ ಪಸರಿಸಿ ಸಂಸತ್ ಸದಸ್ಯರ ಮೇಲೆ ಒತ್ತಡ ತಂದು ಇದನ್ನು ಒಪ್ಪಿಸುವಷ್ಟರ ಮಟ್ಟಿಗೆ ಇವರು ಬಲಿಷ್ಠರಾಗಿಲ್ಲ ಎನ್ನುವುದು ಕಾಣಿಸುತ್ತದೆ. ಹೀಗಾಗಿ ರಾಜಕೀಯ ಪ್ರೇರಿತವಾದಂತಹ ರಾಜಕೀಯ ಉದ್ದೇಶವನ್ನು ಇಟ್ಟುಕೊಂಡು ನಡೆದಿರುವಂತಹ, ಮೊದಲ ಹಂತದ ಅಥವಾ ಮೊದಲ ತಲೆಮಾರಿನ ಚಳುವಳಿಯೊಳಗೆ ಇವರು ಒಂದಿಷ್ಟು ಜಯಶಾಲಿಯಾಗಿದ್ದಾರೆ.

**ಜಾತಿ ಸಾಮರಸ್ಯಕ್ಕಾಗಿ ಚಳುವಳಿ**

ಕಲಬುರಗಿಯ ಎಂ.ಎಸ್.ಕೆ. ಮಿಲ್ ಪ್ರದೇಶದಲ್ಲಿ ಮುಸ್ಲಿಮರ ಮನೆಗಳು ಹೆಚ್ಚಾಗಿದ್ದು ಅಧಿಕ ಸಂಖ್ಯೆಯಲ್ಲಿ ಮುಸ್ಲಿಮರು ವಾಸಿಸುತ್ತಿದ್ದರು. ಇದೇ ಬಡಾವಣೆಗೆ ಹೊಂದಿಕೊಡು ಬ್ರಾಹ್ಮಣರ ಅಗ್ರಹಾರಗಳಿದ್ದವು. ಬ್ರಾಹ್ಮಣರ ಓಣಿಗಳ ಪಕ್ಕದಲ್ಲಿ ಮತ್ತು ಸುತ್ತಮುತ್ತಲು ಹಿಂದುಳಿದ, ದುಡಿಯುವ ಮತ್ತು ಇತರ ವರ್ಗಗಳ ಬಡಾವಣೆಗಳಿವೆ. ಹೀಗೆ ಎಲ್ಲಾ ರೀತಿಯ ವರ್ಗಗಳ ಜನರು ವಾಸಿಸುವ ಪ್ರದೇಶದಲ್ಲಿ ಜಾತಿ ವಿಚಾರಗಳಿಗಾಗಿ ಸಣ್ಣಪುಟ್ಟ ಇತರೆ ವಿಚಾರಗಳಿಗಾಗಿ ಇವರು ಎಂದೂ ಜಗಳ ಮಾಡಿದವರಲ್ಲ. ಆದರೆ ಬಾಬರಿ ಮಸೀದಿ ಘಟನೆಯ ವಿವಾದದ ಸಂದರ್ಭದಲ್ಲಿ ಕೆಲವು ಪುಡಿ ರಾಜಕಾರಣಿಗಳು ಬಿಸಿ ರಕ್ತದ ಯುವಕರು ಅನಾವಶ್ಯಕವಾಗಿ ಮತೀಯ ವಿಷಯಗಳನ್ನು ನೆಪ ಮಾಡಿಕೊಂಡು ಜಗಳಕ್ಕಿಳಿದಿದ್ದರು. ಹಿಂದೂ ಮತ್ತು ಮುಸ್ಲಿಮರು ಪರಸ್ಪರ ನಿಂದನೆಗಿಳಿದು ಒಬ್ಬರ ವಿರುದ್ಧ ಒಬ್ಬರು ಅನಗತ್ಯ ವಿಚಾರಗಳನ್ನು ಎತ್ತಿಕಟ್ಟುತ್ತಾ ಪರಸ್ಪರ ಘೋಷಣೆಗಳನ್ನು ಕೂಗುತ್ತಾ ಮೆರವಣಿಗೆಗಳಲ್ಲಿ, ಪ್ರತಿಭಟನೆಯಲ್ಲಿ ತೊಡಗಿದ್ದರು. ಹಾಗೆಯೇ ದುಡಿಯುವ ವರ್ಗದ ಬೆಂಬಲ ಪಡೆಯಲು ಇವರ ವಿಚಾರಗಳನ್ನು ಘೋಷಣೆಗಳನ್ನು ದುಡಿಯುವ ವರ್ಗದ ಮನೆಗಳಿಗೆ ಜನರಿಗೆ ತಲುಪುವಂತೆ ಮಾಡಿದರು. ಆ ಪ್ರದೇಶದಲ್ಲಿದ್ದ ಅನಕ್ಷರಸ್ಥ ಯುವಕರು ಈ ವಿಚಾರವನ್ನಿಟ್ಟುಕೊಂಡು ಕೆಲವರು ಹಿಂದುಗಳ ಪರ, ಕೆಲವರು ಮುಸ್ಲಿರ ಪರ ಬೆಂಬಲಕ್ಕೆ ನಿಂತಿದ್ದರು.

ಹೀಗಾಗಿ ಹಿಂದೂ ಮಹಿಳೆಯರನ್ನು ಮುಸ್ಲಿಂ ಯುವಕರು ಕೆಣಕುವುದು, ಮುಸ್ಲಿಂ ಮಹಿಳೆಯರನ್ನು ಹಿಂದೂ ಯುವಕರು ಕೆಣಕುವಂತದ್ದು ಹೀಗೆ ಅನಿರೀಕ್ಷಿತ ಭಯಾನಕ ಸನ್ನಿವೇಶ ಉಂಟಾಗಿತ್ತು. ಇಂತಹ ಸೂಕ್ಷ್ಮ ಮತ್ತು ದುಗುಡ ಪರಿಸ್ಥಿತಿಯಲ್ಲಿ ಮನಸ್ತಾಪಗಳಿಗೆ ಈಡಾಗಿದ್ದು ಮಾತ್ರ ಮಹಿಳೆಯರು. ಯಾವುದೇ ತಪ್ಪು ಮಾಡದ ತಮಗೆ ಸಂಬಂಧವೇ ಇಲ್ಲದ ವಿಷಯಕ್ಕೆ ಮಹಿಳೆಯರು ತೊಂದರೆ ಅನುಭವಿಸಬೇಕಾಯಿತು. ಎರಡೂ ವರ್ಗದ ಎಷ್ಟೋ ಬಡ ಕೂಲಿ ಕಾರ್ಮಿಕ ಮಹಿಳೆಯರು ಹೊರಗೆ ಹೋಗಬೇಕಾದರೂ ಯೋಚಿಸಬೇಕಾದ ಪರಿಸ್ಥಿತಿ ಇತ್ತು

ಹಾಗೂ ಏಕಾಂಗಿಯಾಗಿ ಮಹಿಳೆಯರು ಓಡಾಡುವುದೇ ಅಪಾಯ ಎನ್ನುವ ಸ್ಥಿತಿಯಿತ್ತು. ಹೀಗಾಗಿ ಆಗ ಉದ್ಭವಿಸಿದ ವಿಚಿತ್ರವಾದ ಪರಿಸ್ಥಿತಿ ಎಂದರೆ ಹಿಂದೂ, ಮುಸ್ಲಿಮರ ಜಗಳದಲ್ಲಿ ನಿಜವಾಗಿಯೂ ಕಷ್ಟಕ್ಕೀಡಾದವರು ನೋವನ್ನು ಅನುಭವಿಸಿದವರು ಮಾತ್ರ ಅಮಾಯಕ ಮಹಿಳೆಯರು. ಹಿಂದೂ ಮಹಿಳೆಯರೇನಾದರೂ ತಮ್ಮ ಚಿರಪರಿಚಿತ ನೆರೆಹೊರೆಯ ಮುಸ್ಲಿಮರ ಮನೆಗೇನಾದರೂ ಹೋದರೆ ಆ ಮನೆಯ ಪುರುಷರು ತಮ್ಮ ಮನೆಯ ಹೆಣ್ಣುಮಕ್ಕಳನ್ನು ಬೈಯುತ್ತಿದ್ದರು. ಅದೇ ರೀತಿ ಮುಸ್ಲಿಂ ಮಹಿಳೆಯರು ಹಿಂದೂಗಳ ಮನೆಗೆ ಬಂದರೆ ಆ ಮನೆಯ ಗಂಡಸರು ಇವರನ್ನು ಅನುಮಾನದಿಂದ ತಾತ್ಸಾರದಿಂದ ನೋಡುತ್ತಿದ್ದರು. ಹೀಗಾಗಿ ಬಾಬರಿ ಮಸೀದಿಯ ಧ್ವಂಸ ಆದ ನೋವಿಗಿಂತ ಹೆಚ್ಚು ನೋವನ್ನು, ಈ ರೀತಿಯ ಘಟನೆಗಳಿಂದ ಮಹಿಳೆಯರು ಅನುಭವಿಸಿದರು.

ಪರಿಸ್ಥಿತಿ ಎಷ್ಟೊಂದು ವಿಕೋಪಕ್ಕೆ ಹೋಯಿತೆಂದರೆ ಹಿಂದೂ ಅಥವಾ ಮುಸ್ಲಿಮರ ಮನೆಗಳ ಸಮಾರಂಭ, ಕಾರ್ಯಕ್ರಮಗಳಿಗೆ ಮಹಿಳೆಯರು ಪಾಲ್ಗೊಳ್ಳದಂತಹ ಪರಿಸ್ಥಿತಿ ನಿರ್ಮಾಣವಾಗಿತ್ತು. ಇಂತಹ ಪರಿಸ್ಥಿತಿಯನ್ನು ಗಮನಿಸಿದ ಮಹಿಳಾ ಸಂಘಟನೆಗಳು ಎರಡೂ ಸಮುದಾಯದೊಳಗೆ ನೋವನ್ನು ಅನುಭವಿಸುವ ಯಾವುದೇ ತಪ್ಪನ್ನು ಮಾಡದ ಮಹಿಳೆಯರು ಅಪರಾಧಿಗಳ ಸ್ಥಾನದಲ್ಲಿ ನಿಂತು ಅವಮಾನಿತರಾಗಿ ಬಾಳುತ್ತಿದ್ದ ಮನಸ್ಥಿತಿಯನ್ನು ಬಹುಬೇಗ ಗ್ರಹಿಸಿದರು. ಇಂತಹ ಸ್ಥಿತಿಯಿಂದ ಮಹಿಳೆಯರನ್ನು ಹೊರತರಲಾಯಿತು. ಪರಿಸ್ಥಿತಿಗೆ ಬಲಿಪಶು ವಾಗುತ್ತಿದ್ದ ಮಹಿಳೆಯರನ್ನು ರಕ್ಷಿಸಲು ಪರಸ್ಪರ ಸಮಾಲೋಚನೆ, ತಿಳುವಳಿಕೆ, ಜಾಗೃತಿ ಸಭೆಗಳನ್ನು ಏರ್ಪಡಿಸಿ ಹೋರಾಟಕ್ಕಿಳಿದು ದೊಡ್ಡ ಚಳುವಳಿಯನ್ನೇ ಮಾಡಿದರು.

ಕಲಬುರಗಿ ಮತ್ತು ಯಾದಗಿರಿಯಲ್ಲಿ ವಿವಿಧ ಮಹಿಳಾ ಸಂಘಟನೆಗಳ ಸದಸ್ಯರೆಲ್ಲಾ ಒಂದೆಡೆ ಸೇರಿ ಹಿಂದೂ ಮುಸ್ಲಿಮರ ಸ್ಥಿತಿಗತಿ ಕುರಿತು ತಾವು ಮಾಡಬೇಕಾದ ಕಾರ್ಯದ ಕುರಿತು ರೂಪುರೇಷೆಗಳನ್ನು ರಚಿಸಿಕೊಂಡರು ಮತ್ತು ಉದ್ಭವವಾಗಿರುವ ಸಮಸ್ಯೆಯ ಹಿಂದೆ ಬಹುಸೂಕ್ಷ್ಮವಾದ ಮತೀಯವಾದ ಇರುವುದನ್ನು ಅರಿತುಕೊಂಡು ಬಹಳ ಎಚ್ಚರಿಕೆಯಿಂದ ಹೋರಾಟಕ್ಕಿಳಿದರು. ಹಿಂದೂ ಮುಸ್ಲಿಮರಿಗೆ ನೋವಾಗದ ರೀತಿಯಲ್ಲಿ ನೇರವಾಗಿ ಆಪಾದನೆಗಳನ್ನು ಮಾಡದೇ, ಮಹಿಳೆಯರು ಹೇಗೆ ಸಮಸ್ಯೆಗಳಿಗೆ ಬಲಿಯಾಗಿದ್ದಾರೆ ಎನ್ನುವ ಜಾಗೃತಿಯನ್ನು ಎಲ್ಲರಲ್ಲೂ ಮೂಡಿಸಲು ಪ್ರಯತ್ನಿಸಿದರು. ಶಾಲಾ, ಕಾಲೇಜುಗಳಿಗೆ ಭೇಟಿ ನೀಡಿ, ಅಲ್ಲಿದ್ದ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಪರಿಸ್ಥಿತಿಯನ್ನು ತಿಳಿಸುತ್ತಾ, ವಾಸ್ತವವಾಗಿ ಇಲ್ಲಿನ ಹಿಂದೂ ಮಹಿಳೆಯರಿಗೆ ಬಾಬರಿ ಮಸೀದಿ ಧ್ವಂಸ ಆದರೂ ಯಾವುದೇ ಲಾಭ ಇಲ್ಲ, ಹಾಗೆಯೇ ಮುಸ್ಲಿಂ ಮಹಿಳೆಯರಿಗೆ ರಾಮಮಂದಿರ ಕಟ್ಟದಿದ್ದರೂ ಲಾಭ ಆಗುವುದು ಅಷ್ಟರಲ್ಲೇ ಇದೆ. ಇದು ನಮ್ಮ ಜೀವನಕ್ಕೆ, ಮೂಲಭೂತ ಅವಶ್ಯಕತೆಗಳಿಗೆ, ಸಮಸ್ಯೆಗಳಿಗೆ ಸಂಬಂಧಿಸಿಲ್ಲ. ನಿಜ ವಾಗಿಯೂ ಮಂದಿರ ಮತ್ತು ಮಸೀದಿಗಳ ಕಟ್ಟಡಗಳಿಗಿಂತ ಮನುಷ್ಯರ ಸಂಬಂಧ ಮುಖ್ಯ ಎನ್ನುವುದನ್ನು ತಿಳಿಯಪಡಿಸಲಾಯಿತು. ಮಂದಿರ, ಮಸೀದಿಗಳು ಮನುಷ್ಯರ ಜೀವನಕ್ಕೆ, ಏಳಿಗೆಗೆ ಸುಖಕ್ಕೆ, ನೆಮ್ಮದಿಗೆ ಕಾರಣೀಭೂತಗಳಾಗಿರುತ್ತವೆ ಎನ್ನುವ ವಿಚಾರವನ್ನು ತಿಳಿಸಲಾಯಿತು. ಇದಕ್ಕೆ ಉದಾಹರಣೆಯಾಗಿ ಕಲಬುರಗಿ ನಗರದ ಶ್ರೀ ಶರಣಬಸವೇಶ್ವರ ಸಂಸ್ಥಾನ ಮಠ, ಸಂತ ಖ್ವಾಜಾ ಬಂದೇ ನವಾಜರ ದರ್ಗಾವನ್ನು ಉದಾಹರಿಸಲಾಯಿತು.

ಅಂದರೆ ದೇವಾಲಯಕ್ಕೆ ಮುಸ್ಲಿಮರು ಹೋಗುವ, ಉತ್ಸವಗಳಲ್ಲಿ ಪಾಲ್ಗೊಳ್ಳುವ ಅದೇ ರೀತಿ ಹಿಂದೂಗಳು ದರ್ಗಾಗಳಿಗೆ ಬರುತ್ತಿರುವ ಉರುಸ್‌ನಲ್ಲಿ ಪಾಲ್ಗೊಳ್ಳುತ್ತಿರುವುದರ ವಾಸ್ತವ ಚಿತ್ರಣ ನೀಡಿದರು. ವಿದ್ಯಾರ್ಥಿ, ವಿದ್ಯಾರ್ಥಿನಿಯರು ಇದನ್ನು ಬಹುಬೇಗ ಗ್ರಹಿಸಿ, ಮಹಿಳಾ ಸಂಘಟನೆಗಳ ವಿಚಾರಗಳಿಗೆ ಬೆಂಬಲ ವ್ಯಕ್ತಪಡಿಸಿದರಲ್ಲದೆ ಅವರ ಹೋರಾಟಕ್ಕೆ ಸಂಪೂರ್ಣ ಸಹಕರಿಸತೊಡಗಿದರು. ಇದರಿಂದ ಮಹಿಳೆಯರ ಹೋರಾಟಕ್ಕೆ ನಿಜವಾಗಿಯೂ ಆನೆಬಲ ಮತ್ತು ನೈತಿಕ ಬಲವೇ ಬಂದಂತಾಗಿತ್ತು. ನಂತರ ಮಹಿಳಾ ಹೋರಾಟದ ಹಾದಿ ಹೊರಳಿದ್ದು ಅನಕ್ಷರಸ್ಥ, ಬಡ, ಕೂಲಿಕಾರ್ಮಿಕ ಪುರುಷರ ಮತ್ತು ಮಹಿಳೆಯರ ಕಡೆಗೆ. ನಿಜವಾಗಿಯೂ ಪರಿಸ್ಥಿತಿಯ ಅರಿವೇ ಇಲ್ಲದ ಈ ವರ್ಗದ ಜನರು ಹಿಂದೂಗಳು ಅಥವಾ ಮುಸ್ಲಿಮರ ಜೊತೆ ಇರಬೇಕಾದ ಅನಿವಾರ್ಯತೆಯಿಂದಲೋ ಅಥವಾ ತಮ್ಮ ಕೆಲಸಕ್ಕೆ, ಜೀವನಾಧಾರಕ್ಕೆ ಇವರನ್ನೇ ಆಶ್ರಯಿಸಿರುವುದರಿಂದಲೋ ಏನೋ ಇವರು ಅವರಲ್ಲಿ ಯಾರೊಬ್ಬರ ಪರವಾಗಿ ನಿಲ್ಲಲೇಬೇಕಾಗಿತ್ತು ಮತ್ತು ಮಾತನಾಡಲೇ ಬೇಕಾಗಿತ್ತು.

ಅಷ್ಟೇ ಅಲ್ಲ, ಒಂದು ವೇಳೆ ಗಲಭೆಗಳಾದರೆ ಹೆಚ್ಚಾಗಿ ನಷ್ಟ, ನೋವನ್ನು ಅನುಭವಿಸುವವರೂ ಇವರೇ ಆಗಿದ್ದರು. ಹೀಗಾಗಿ ಈ ವರ್ಗದ ಮಹಿಳೆಯರಿಗೆ ಮತ್ತು ಪುರುಷರಿಗೆ ಒಂದು ತಿಳುವಳಿಕೆ ಕೊಡಬೇಕಾಗಿತ್ತು. ಕೆಳವರ್ಗದ ಪುರುಷ ಮತ್ತು ಮಹಿಳೆಯರಿಗೆ ತಿಳುವಳಿಕೆ ನೀಡುವ ಉದ್ದೇಶದಿಂದ ಮಹಿಳಾ ಸಂಘಟನೆಯ ಕಾರ್ಯಕರ್ತರೆಲ್ಲಾ ಹಲವು ಗುಂಪುಗಳಾಗಿ ಪ್ರತಿ ಓಣಿಗಳಿಗೆ ಭೇಟಿ ನೀಡಲು ಆರಂಭಿಸಿದರು. ಆಯಾ ಬೀದಿಯ, ಓಣಿಯ ಮಹಿಳೆಯರನ್ನೆಲ್ಲಾ ಒಂದು ಕಡೆ ಸೇರಿಸಿ ಅವರಿಗೆಲ್ಲಾ ತಿಳುವಳಿಕೆ ಹೇಳುತ್ತಾ, ವಾಸ್ತವವನ್ನು ತಿಳಿಸುತ್ತಾ ಮುಂದಿನ ಜೀವನದ ಅಗತ್ಯತೆಗಳ ಬಗ್ಗೆ ಹೇಳಲಾಯಿತು. ಸುಮಾರು ಇಪ್ಪತ್ತು ದಿನಗಳ ಕಾಲ ಇವರು ಹಗಲು ರಾತ್ರಿಯೆನ್ನದೇ ಅಡ್ಡಾಡಿ ಕಾರ್ಯ ಕೈಗೊಂಡಿದ್ದರು. ನಿಜವಾಗಿಯೂ ಕಾರ್ಯ ನಿರೀಕ್ಷಿತ ಫಲವನ್ನೇ ಕೊಟ್ಟಿತ್ತು. ಏಕೆಂದರೆ ವಾಸ್ತವವನ್ನೇ ಅರಿಯದೆ ಅಥವಾ ತಿಳಿಯಲು ಸಾಧ್ಯವಾಗದೆ, ಬೇರೆಯವರ ಮಾತನ್ನೇ ಪಾಲಿಸುತ್ತಿದ್ದ ವರ್ಗದವರಿಗೆ ನಿಜ ಸ್ಥಿತಿ ಅರಿವಾಯಿತು. ಜೊತೆಗೆ ತಮಗೆ ಸಂಬಂಧವೇ ಇಲ್ಲದ ಇಂತಹ ಕಾರಣಗಳನ್ನು ಧಿಕ್ಕರಿಸಿ, ಎಲ್ಲರ ಜೊತೆ ಬೆರೆಯಲು ಮಹಿಳಾ ಸಂಘಟನೆಗಳ ಕಾರ್ಯಕರ್ತರು ಸ್ಫೂರ್ತಿ ತುಂಬಿದ್ದರು.

ಇದರಿಂದ ಈ ವರ್ಗದ ಜನರ ಮನೋಭಾವನೆಯೇ ಬದಲಾಗಿ ತಾಟಸ್ಥ್ಯ ನೀತಿ ತಾಳಿದರಲ್ಲದೇ, ಬಾಬರಿ ಮಸೀದಿಯ ವಿವಾದಕ್ಕೂ ತಮಗೂ ಸಂಬಂಧವೇ ಇಲ್ಲ ಎನ್ನುವಂತೆ ಅವರ ವರ್ತನೆಯಲ್ಲಿ ಬದಲಾವಣೆಯಾಯಿತು. ಇನ್ನು ಮಸೀದಿ ವಿವಾದದಲ್ಲಿ ಮಹಿಳಾ ಸಂಘಟನೆಗಳಿಗೆ ಬಹುದೊಡ್ಡ ಸವಾಲಾಗಿದ್ದ ಅಂಶವೆಂದರೆ ಹಿಂದೂ ಮತ್ತು ಮುಸ್ಲಿಂ ಧಾರ್ಮಿಕ ಮುಖಂಡರ ಮತ್ತು ರಾಜಕೀಯ ಮುಖಂಡರನ್ನು ಮನವೊಲಿಸುವುದಾಗಿತ್ತು. ಆದರೆ ಇದು ನಾವು ಮೇಲ್ನೋಟಕ್ಕೆ ಅಂದುಕೊಂಡಷ್ಟು ಸರಳವೂ ಸುಲಭವೂ ಆಗಿರಲಿಲ್ಲ. ಏಕೆಂದರೆ ಬಾಬರಿ ಮಸೀದಿ ವಿವಾದವು ದೇಶದ ಎರಡು ಬಲಿಷ್ಠ ಜಾತಿಗಳ, ಪಕ್ಷಗಳ ನಡುವಿನ ವಿವಾದದಂತೆ ರೂಪುಗೊಂಡಿತ್ತು. ಹಾಗಾಗಿ ಇಲ್ಲಿ ಯಾರ ಪರವಾಗಿ ಅಥವಾ ವಿರುದ್ಧವಾಗಿ ಮಾತನಾಡಿದರೂ ಅದಕ್ಕೆ ರಾಜಕೀಯದ, ಮತೀಯದ ಬಣ್ಣ ಬರುವ ಸಂಭವವಿತ್ತು. ಹೀಗಾಗಿ ಇದರ ವಿಷಯದಲ್ಲಿ

ಮಹಿಳಾ ಸಂಘಟನೆಗಳ ಸದಸ್ಯರು ಬಹಳ ಬುದ್ಧಿವಂತಿಕೆಯಿಂದ ಕಾರ್ಯಕ್ಕಿಳಿದರು. ಜನವಾದಿ ಮಹಿಳಾ ಸಂಘಟನೆಯ ನೇತೃತ್ವದಲ್ಲಿ ವಿವಿಧ ಸಂಘಟನೆಗಳು ಸೇರಿ ಸೌಹಾರ್ದ ವೇದಿಕೆಯನ್ನು ಸ್ಥಾಪಿಸಿಕೊಂಡರು. ವೇದಿಕೆಗೆ ಮೊದಲು ಶಿಕ್ಷಣತಜ್ಞರು, ಪತ್ರಕರ್ತರು, ಬುದ್ಧಿಜೀವಿಗಳು, ವಿದ್ಯಾರ್ಥಿಗಳು, ಹಿರಿಯರನ್ನು ಬರಮಾಡಿಕೊಂಡು ಸಾಮರಸ್ಯದ ಕುರಿತು ಉಪನ್ಯಾಸಗಳನ್ನು ಏರ್ಪಡಿಸಲಾಯಿತು. ನಂತರ ಪೊಲೀಸರು ಹಾಗೂ ಇತರ ಅಧಿಕಾರಿಗಳನ್ನು ಕರೆಯಿಸಿ ಪರಿಸ್ಥಿತಿಯ ನಿರ್ವಹಣೆ ಹೇಗೆ ಎನ್ನುವುದರ ಕುರಿತು ಹೇಳಿಕೆಗಳನ್ನು ಮತ್ತು ಮತೀಯ ಸಾಮರಸ್ಯ ಮುಂತಾದ ವಿಚಾರಗಳನ್ನು ಜನರಿಗೆ ತಿಳಿ ಹೇಳಲು ಆರಂಭಿಸಲಾಯಿತು.

### ಹೆಣ್ಣು ಭ್ರೂಣಹತ್ಯೆ ವಿರುದ್ಧ ಹೋರಾಟ

ಹೆಣ್ಣು ಭ್ರೂಣಹತ್ಯೆ ನಮ್ಮ ಸಮಾಜದಲ್ಲಿ ಅನೇಕ ಶತಮಾನಗಳಿಂದ ನಡೆದುಬರುತ್ತಿದೆ. "ಇದು ಇಂದು ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾಗದೆ ಕರ್ನಾಟಕದಾದ್ಯಂತ ವ್ಯಾಪಕವಾಗಿ ಹಬ್ಬುತ್ತಿದೆ. ಅದರಲ್ಲೂ ಯಾದಗಿರಿ ಜಿಲ್ಲೆಯಲ್ಲೂ ಅದು ಸಾಕಷ್ಟು ಪ್ರಮಾಣದಲ್ಲಿ ನಡೆಯುತ್ತಿದೆ. ಯಾದಗಿರಿ ಜಿಲ್ಲೆಯಲ್ಲಿ ಹೆಣ್ಣು ಭ್ರೂಣಹತ್ಯೆಗೆ ಕಂಡುಬರುವ ಕಾರಣಗಳು, ಅದರ ವಿರುದ್ಧ ಆರಂಭವಾಗಿರುವ ಚಳುವಳಿಗಳು ಅವುಗಳ ಸಫಲತೆ ಮತ್ತು ವಿಫಲತೆಗಳನ್ನು ವಿಶ್ಲೇಷಿಸುವುದಕ್ಕಿಂತ ಮುಂಚೆ ಹೆಣ್ಣು ಭ್ರೂಣಹತ್ಯೆ ಎಂದರೆ ಏನು ಎನ್ನುವ ಸಣ್ಣ ವಿವರಣೆ ಅವಶ್ಯಕವಾಗಿದೆ. ಮಗು ಗರ್ಭದಲ್ಲಿರುವಾಗಲೇ ವೈದ್ಯಕೀಯ ಪರೀಕ್ಷೆಯ ಮೂಲಕ ಅದು ಗಂಡೋ ಹೆಣ್ಣೋ ಎಂದು ಗುರುತಿಸಿ ಮಗು ಹೆಣ್ಣಾಗಿದ್ದರೆ ಗರ್ಭವನ್ನು ತೆಗೆಸಿಹಾಕುವುದನ್ನೇ ಸಾಮಾನ್ಯವಾಗಿ ಹೆಣ್ಣು ಭ್ರೂಣಹತ್ಯೆ ಎನಿಸಿಕೊಳ್ಳುತ್ತದೆ. ಇತ್ತೀಚೆಗೆ ಅಲ್ಟ್ರಾಸೌಂಡ್ ಡೈಗ್ನೋಸ್ಟಿಕ್ ವಿಧಾನಗಳಂಥ ನವೀನ ತಾಂತ್ರಿಕತೆಯ ಬೆಳವಣಿಗೆಯಿಂದಾಗಿ ತಾಯಿಯ ಗರ್ಭದಲ್ಲಿ ಭ್ರೂಣಾವಸ್ಥೆಯಲ್ಲಿರುವಾಗಲೇ ಅದರ ಲಿಂಗಪತ್ತೆ ಹಚ್ಚುವ ಸಾಧ್ಯತೆಗಳು ಕೈಗೂಡಿರುವುದರ ಪರಿಣಾಮವಾಗಿ ಬಹುದೊಡ್ಡ ಪ್ರಮಾಣದ ಹೆಣ್ಣು ಭ್ರೂಣಹತ್ಯೆಗೆ ರಾಜಮಾರ್ಗ ತೆರೆದಂತಾಗಿದೆ."[೩೮]

ಯಾದಗಿರಿ ಜಿಲ್ಲೆಯ ಪ್ರದೇಶದಲ್ಲಿ ಹೆಣ್ಣು ಭ್ರೂಣಹತ್ಯೆಗೆ ಕಾರಣಗಳ ಬಗ್ಗೆ ಇಲ್ಲಿನ ಅಧ್ಯಯನದಿಂದ ತಿಳಿದುಬರುವ ಸಂಗತಿಯೆಂದರೆ ಹೆಣ್ಣು ಭ್ರೂಣಹತ್ಯೆಗೆ ನೇರ ಮತ್ತು ಮುಖ್ಯ ಕಾರಣವೆಂದರೆ ಹೆಣ್ಣು ಮಗುವನ್ನು ಕುಟುಂಬದಲ್ಲಿ ಒಂದು ಸಾಮಾಜಿಕ ಹೊರೆಯೆಂದೇ ಪರಿಗಣಿಸಲಾಗುತ್ತಿದೆ. ಹೆಣ್ಣುಮಗು ಹುಟ್ಟಿದರೆ ಕುಟುಂಬದ ಪೋಷಕರಿಗೆ ದೊಡ್ಡ ಸಮಸ್ಯೆ ಎಂದರೆ ಅವಳನ್ನು ಮದುವೆ ಮಾಡಿ ಕೊಡುವುದು ಹಾಗೂ ವರದಕ್ಷಿಣೆ ನೀಡುವುದಾಗಿದೆ. ಹಾಗೆಯೇ ಇನ್ನೊಂದು ಕಡೆ ಹೆಣ್ಣುಮಕ್ಕಳಾದರೆ ಅಭದ್ರತೆಯ ಭಯ, ಅವಳ ಮೇಲಾಗುವ ದೌರ್ಜನ್ಯ ಮುಂತಾದ ಸಂಗತಿಗಳು ಕುಟುಂಬದ ಹಿರಿಯರನ್ನು ಸದಾ ಕಾಡುತ್ತಲೇ ಇರುತ್ತದೆ. ಹೀಗಾಗಿ ಹೆಣ್ಣುಮಗು ಜನಿಸುವುದು ಬೇಡ ಎನ್ನುವ ಮನೋಸ್ಥಿತಿ ಹೊಂದಿರುತ್ತಾರೆ. ಇನ್ನು ಸಮಾಜದಲ್ಲಿ ಗಂಡುಮಗುವಿಗೆ ನೀಡುತ್ತಿರುವ ಪ್ರಾಶಸ್ತ್ಯದಿಂದ ಕುಟುಂಬದಲ್ಲಿ ಒಂದು ಗಂಡು ಮಗು ಜನಿಸಿದರೆ ಅದು ಸುದೈವದ ಸಂಕೇತವೆಂದೇ ಪರಿಗಣಿಸಲಾಗುತ್ತದೆ. ಇನ್ನು ಈ ಭಾಗದ ಬಡತನ, ಹೆಣ್ಣನ್ನು ಕುಟುಂಬಕ್ಕೆ ಹೊರೆ ಎಂದು ಭಾವಿಸಿ ಅದನ್ನು ಹುಟ್ಟುವುದಕ್ಕಿಂತ ಮುಂಚೆ ಇಲ್ಲವಾಗಿಸಿಬಿಟ್ಟರೆ ಒಳಿತಲ್ಲವೆ ಎನ್ನುವ ಆಲೋಚನೆ ಬಹಳ ಪೋಷಕರದ್ದು. ಇಂತಹ

ದುರಾಲೋಚನೆಗೆ ಬೆಂಬಲ ನೀಡುವುದು ಸ್ಕ್ಯಾನಿಂಗ್ ಸೆಂಟರ್‌ಗಳು. ಮೊದಲು ಕೇವಲ ದೊಡ್ಡ ದೊಡ್ಡ ನಗರಗಳಲ್ಲಿ ದೊರೆಯುತ್ತಿದ್ದ ಸೌಲಭ್ಯ ಇಂದು ಸಣ್ಣ ಸಣ್ಣ ನಗರಗಳಲ್ಲಿ ಲಭ್ಯವಿದ್ದು ಕಡಿಮೆ ಆದಾಯ ಪಡೆಯುವವರಿಗೂ ಸುಲಭವಾಗಿ ದೊರೆಯುವ ಮಾರ್ಗವಾಗಿದ್ದು ಹೆಣ್ಣು ಭ್ರೂಣಹತ್ಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ.

ಇಂತಹ ಹೆಣ್ಣು ಭ್ರೂಣಹತ್ಯೆಯ ವಿರುದ್ಧ ಯಾದಗಿರಿ ಜಿಲ್ಲೆಯಲ್ಲಿ ಹೋರಾಟಗಳು ನಡೆದಿವೆ ಮತ್ತು ನಡೆಯುತ್ತಿವೆ. "ಇದನ್ನು ತಡೆಗಟ್ಟಲು ಯಾವ ಸರಕಾರಗಳು, ಸರಕಾರಿ ಅಧಿಕಾರಿಗಳು ಮಾಡಲಾರದ್ದನ್ನು ಇಲ್ಲಿನ ಕೆಲವು ಮಹಿಳಾ ಸಂಘಟನೆಗಳು ಮಾಡುತ್ತಿವೆ. ಅಷ್ಟೇ ಅಲ್ಲ, ಇಲ್ಲಿ ಆರಂಭವಾದ ಚಳುವಳಿ ಇತರ ಭಾಗಗಳಿಗೂ ಹರಡಲು ಕಾರಣವಾಗಿದೆ. ಹೆಣ್ಣು ಭ್ರೂಣಹತ್ಯೆ ತಡೆ ಕುರಿತಂತೆ ಕರ್ನಾಟಕದಾದ್ಯಂತ ಆಂದೋಲನವನ್ನಾಗಿ, ಚಳುವಳಿಯನ್ನಾಗಿ ಮಾಡಿದ್ದು ಜನವಾದಿ ಮಹಿಳಾ ಸಂಘಟನೆ. ಹೆಣ್ಣು ಭ್ರೂಣಹತ್ಯೆಯನ್ನು ತಡೆಯಲು ಅದರ ವಿರುದ್ಧ ಜಾಗೃತಿ ಮೂಡಿಸಲು ಜನಸಾಮಾನ್ಯರು ಎಚ್ಚೆತ್ತುಕೊಳ್ಳುವಂತೆ ಹೋರಾಟ ಆರಂಭವಾಗಿದ್ದು ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಿಂದಲೇ ಎನ್ನುವುದು ಇಲ್ಲಿ ವಿಶೇಷ. ೨೦೦೫ರಿಂದ 'ಹೆಣ್ಣು ಭ್ರೂಣಹತ್ಯೆ ವಿರೋಧಿ ಆಂದೋಲನ' ಎನ್ನುವ ಘೋಷಣೆಯೊಂದಿಗೆ ಹೋರಾಟ ಹೊಸ ಸ್ವರೂಪವನ್ನು ಪಡೆದುಕೊಂಡಿತು. ಆರಂಭದಲ್ಲಿ ಜನವಾದಿ ಮಹಿಳಾ ಸಂಘಟನೆ, ಪ್ರಜ್ಞಾ ಕಾನೂನು ಸಲಹಾ ಸಮಿತಿ, ಕಲಬುರಗಿ ವಿಶ್ವವಿದ್ಯಾಲಯಗಳ ಆಶ್ರಯದಲ್ಲಿ ವಿವಿಧ ಕಾರ್ಯಕ್ರಮ ಗಳನ್ನು ರೂಪಿಸಿಕೊಳ್ಳಲಾಯಿತು. ಜನವಾದಿಯ ಸದಸ್ಯರು ಸೇರಿ ೨೦ ದಿನಗಳ ಕಾಲ ಯಾದಗಿರಿ ಮತ್ತು ಸುತ್ತಮುತ್ತಲಿನ ಸುಮಾರು ೨೦ ಗ್ರಾಮಗಳಿಗೆ ತೆರಳಿ ಅಲ್ಲಿನ ಜನರಲ್ಲಿ ವಿಶೇಷವಾಗಿ, ಮಹಿಳೆಯರಲ್ಲಿ ಜಾಗೃತಿ ಮೂಡಿಸಿದರು.

ಅದೇ ರೀತಿ ಯಾದಗಿರಿ ಜಿಲ್ಲೆಯಾದ್ಯಂತ ಇರುವ ಚಿಕ್ಕಪುಟ್ಟ ಸಂಘಟನೆಗಳ ಸದಸ್ಯರಿಗೂ ಇದರ ಕುರಿತು ಮಾಹಿತಿ ನೀಡಿ ಅವರ ಮೂಲಕ ಹೆಣ್ಣು ಭ್ರೂಣಹತ್ಯೆ ತಡೆ ಮತ್ತು ಜಾಗೃತಿ ಯನ್ನು ಮೂಡಿಸಲು ಪ್ರಯತ್ನಿಸಲಾಯಿತು. ಸುಮಾರು ೫ ಲಕ್ಷ ಕರಪತ್ರಗಳನ್ನು ಮುದ್ರಿಸಿ ಅದರಲ್ಲಿ ಹೆಣ್ಣು ಭ್ರೂಣಹತ್ಯೆಗೆ ಸಂಬಂಧಿಸಿದಂತೆ ಕಾನೂನು ಅರಿವು ಮೂಡಿಸಿ, ಕಾನೂನಿನಲ್ಲಿ ವಿಧಿಸಿದ ಶಿಕ್ಷೆ ಬಗ್ಗೆ ವಿವರಗಳನ್ನು ಕನ್ನಡದಲ್ಲಿ ಮುದ್ರಿಸಿ, ಶಾಲೆಗಳು, ಕಾಲೇಜುಗಳು ಮತ್ತು ಮನೆ ಮನೆಗೆ ಹಂಚಲಾಯಿತು. ಗೋಡೆ ಬರಹಗಳ ಮೂಲಕವೂ ಪ್ರಚಾರ ಕೈಗೊಂಡರು."[೩೯] ಕಾಲೇಜುಗಳ ಮತ್ತು ವಿಶ್ವವಿದ್ಯಾಲಯ ಮಟ್ಟದಲ್ಲಿ ವಿಚಾರ ಸಂಕಿರಣಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರ ಮೂಲಕವೂ ಜಾಗೃತಿಗೆ ಪ್ರಯತ್ನಿಸಲಾಯಿತು.

**ಪಡಿತರ ಚೀಟಿಗಾಗಿ ಹೋರಾಟ**

ಕರ್ನಾಟಕದಲ್ಲಿಯೇ ಅತ್ಯಂತ ಹಿಂದುಳಿದಿರುವ ಬಡತನಕ್ಕೀಡಾಗಿರುವ ಪ್ರದೇಶಗಳಲ್ಲಿ ಯಾದಗಿರಿ ಜಿಲ್ಲೆ ಮೊದಲ ಸ್ಥಾನದಲ್ಲಿದೆ. ಹೀಗಾಗಿ ಇಲ್ಲಿ ಎಷ್ಟೋ ರೈತರು, ದಲಿತರು, ಕೃಷಿ ಕೂಲಿಕಾರರು, ಕಾರ್ಮಿಕರು ದಿನಗೂಲಿಕಾರರು ಬಡತನರೇಖೆಗಿಂತ ಕೆಳಗಿದ್ದಾರೆ ಹಾಗೂ ಇವರಿಗೆ ಸರಿಯಾದ ನಿರಂತರ ಉದ್ಯೋಗ ದೊರಕದೆ ಅರೆ ಉದ್ಯೋಗದಲ್ಲಿ ಅತಿ ಕಡಿಮೆ ಕೂಲಿ

ಆದಾಯ ಹೊಂದಿದ್ದಾರೆ. ಹೀಗಾಗಿ ಬಹಳಷ್ಟು ಹರಿಜನರು ಸರಕಾರದಿಂದ ಸಿಗುವ ಸೌಲಭ್ಯಗಳ ಮೇಲೆಯೇ ಅವಲಂಬಿತರಾಗಿದ್ದಾರೆ. ಅದರಲ್ಲೂ ಪಡಿತರ ಚೀಟಿಯ ಮೇಲೆ ಹೆಚ್ಚು ಅವಲಂಬನೆ ಆಗಿದ್ದಾರೆ. ಆದರೆ ಪಡಿತರ ಚೀಟಿಯ ವಿತರಣೆ ಮತ್ತು ಬಳಕೆಯಲ್ಲಿನ ದುರ್ಬಳಕೆ ಉಂಟಾಗಿತ್ತು. ಒಂದು ಮನೆಯವರು ಒಂದಕ್ಕಿಂತ ಹೆಚ್ಚು ಪಡಿತರ ಚೀಟಿಗಳನ್ನು ಹೊಂದಿದ್ದಾರೆ. ಅರ್ಹರಿಗಿಂತಲೂ ಅನರ್ಹರು ಇದರ ಉಪಯೋಗ ಪಡೆಯುತ್ತಿದ್ದಾರೆ ಎನ್ನುವ ಕಾರಣದಿಂದ ಸರಕಾರ ಎಲ್ಲಾ ವರ್ಗದವರ ಪಡಿತರ ಚೀಟಿಗಳನ್ನು ವಾಪಸ್ ಪಡೆದು ಹೊಸ ಪಡಿತರ ಚೀಟಿಗಳನ್ನು ನೀಡುವ ಘೋಷಣೆ ಮಾಡಿತು. ಆದರೆ ಈ ಕಾರ್ಯ ಬಹಳ ವಿಳಂಬವಾಗಿ ಪಡಿತರ ಚೀಟಿ ಬಳಕೆದಾರರು ಬಹಳ ತೊಂದರೆ ಅನುಭವಿಸಬೇಕಾಯಿತು. ಇದನ್ನು ವಿರೋಧಿಸಿ ಇಲ್ಲಿನ ಮಹಿಳೆಯರು ದೊಡ್ಡ ಹೋರಾಟವನ್ನು ಕೈಗೊಂಡರು.

ಯಾದಗಿರಿ ಜಿಲ್ಲೆಯ ಮಹಿಳೆಯರು ತೀವ್ರವಾಗಿ ಮಾಡಿದಂಥ ಹೋರಾಟವನ್ನು ಬೇರೆ ಇನ್ಯಾವ ಭಾಗದಲ್ಲೂ ಮಾಡಿದ ಮಾಹಿತಿ ಇಲ್ಲ. ಯಾದಗಿರಿ ಜಿಲ್ಲೆಯಲ್ಲಿ ಪಡಿತರ ಚೀಟಿಗಾಗಿ ನಡೆದ ಹೋರಾಟ ಮತ್ತು ಅದರ ಪರಿಣಾಮಗಳನ್ನು ನೋಡುವುದಕ್ಕಿಂತ ಮುಂಚೆ, ಪಡಿತರ ಚೀಟಿ ಎಂದರೇನು, ಅದನ್ನು ಜಾರಿಗೆ ತಂದ ಉದ್ದೇಶ ಅದರ ಸಾಧಕಬಾಧಕಗಳ ಬಗ್ಗೆ ವಿಶ್ಲೇಷಿಸುವುದು ಮುಖ್ಯವಾಗಿದೆ. ಕರ್ನಾಟಕ ಸರಕಾರವು ಕೈಗೊಂಡಿರುವ ಕುಟುಂಬ ಪಡಿತರ ಚೀಟಿಯ ಯೋಜನೆ ಅತ್ಯಂತ ಮಹತ್ತರವಾದ ಒಂದು ಕಾರ್ಯಕ್ರಮವಾಗಿದೆ. ಯೋಜನೆಯಲ್ಲಿ ರಾಜ್ಯದ ಪ್ರತಿಯೊಂದು ಕುಟುಂಬದ ಆದಾಯದ ತಳಹದಿಯ ಮೇಲೆ ಕುಟುಂಬಗಳನ್ನು ಎಪಿಲ್ ಮತ್ತು ಬಿಪಿಎಲ್ ಎನ್ನುವ ಎರಡು ವರ್ಗಗಳನ್ನಾಗಿ ವಿಂಗಡಿಸಿ ಇಬ್ಬರಿಗೂ ವಿಭಿನ್ನ ರೀತಿಯ ಸೌಲಭ್ಯಗಳನ್ನು ಒದಗಿಸುವ ಪಡಿತರ ಚೀಟಿಗಳನ್ನು ವಿತರಿಸಲಾಗಿದೆ. ಈ ಮೂಲಕ ನಾಗರಿಕರಿಗೆ ಅತ್ಯಂತ ಕಡಿಮೆ ದರದಲ್ಲಿ ಆಹಾರಧಾನ್ಯಗಳನ್ನು ಆಯಾ ಊರಿನ ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುವ ಏರ್ಪಾಟನ್ನು ಮಾಡಲಾಗಿದೆ. ಯೋಜನೆಯಿಂದ ಕೆಳವರ್ಗದ, ಬಡವರ್ಗದ, ಕೂಲಿ, ದಿನಗೂಲಿ ಕಾರ್ಮಿಕರಿಗೆ, ಮಧ್ಯಮವರ್ಗದ ನಾಗರಿಕರಿಗೆ ಜೀವನ ನಿರ್ವಹಣೆಗೆ ಅತ್ಯಂತ ಉಪಯೋಗವಾಗಿದೆ.

ಅದರಲ್ಲೂ ಯಾದಗಿರಿ ಜಿಲ್ಲೆಯ ಹಿಂದುಳಿದ ಬರಪೀಡಿತ ಪ್ರದೇಶದ ಜನರಿಗಂತೂ ಯೋಜನೆ ವರವಾಗಿ ಪರಿಣಮಿಸಿದೆ. ಯಾವುದೇ ಬೆಲೆ ಏರಿಕೆಯ ಬಿಸಿ ಆಹಾರ ಧಾನ್ಯಗಳ ಕೊರತೆ ಇವುಗಳ ಪರಿಣಾಮವಿಲ್ಲದೆ ಪ್ರತಿ ತಿಂಗಳು ಸರಕಾರ ನಿಗದಿಪಡಿಸಿದ ದರದಲ್ಲಿ ಮತ್ತು ನಿಗದಿಪಡಿಸಿದಷ್ಟು ಅಕ್ಕಿ, ಗೋಧಿ, ಸಕ್ಕರೆ ಮತ್ತು ಎಣ್ಣೆಯನ್ನು ಸರಬರಾಜು ಮಾಡಲಾಗುತ್ತದೆ. ಯೋಜನೆಯಿಂದ ಅದರಲ್ಲೂ ಬಡ ಮತ್ತು ಕೆಳವರ್ಗದವರಿಗೆ ಜೀವನ ನಿರ್ವಹಣೆಗೆ ಅತ್ಯಗತ್ಯವಾದ ಆಹಾರಧಾನ್ಯಗಳು ಅತಿ ಕಡಿಮೆ ಬೆಲೆಗೆ ಸಿಗುವಂತಾಗಿ, ದಿನನಿತ್ಯದ ಊಟದ ಸಮಸ್ಯೆಯಿರಲಿಲ್ಲ. ಆದರೆ ಕ್ರಮೇಣ ಯೋಜನೆಯ ಜಾರಿಯಲ್ಲಿ ಮತ್ತು ಬಳಕೆಯಲ್ಲಿ ಅನೇಕ ದೋಷಗಳು, ಸಮಸ್ಯೆಗಳು ಉದ್ಭವವಾದವು. ಅಂದರೆ ಕುಟುಂಬಗಳಿಗಿಂತಲೂ ಪಡಿತರ ಚೀಟಿಗಳ ಸಂಖ್ಯೆ ಹೆಚ್ಚಾಗಿ ನಕಲಿ ಪಡಿತರ ಚೀಟಿಗಳು ವಿತರಣೆಯಾದವು. ಮತ್ತೊಂದೆಡೆ ಅರ್ಹರಿಗಿಂತಲೂ ಅನರ್ಹವರ್ಗದವರಿಗೆ ಬಿಪಿಎಲ್ ಕಾರ್ಡುಗಳು ವಿತರಿಸಲ್ಪಟ್ಟವು.

ಹೀಗಾಗಿ ಆಹಾರ ಪೂರೈಕೆ ಮತ್ತು ವಿತರಣೆಯಲ್ಲಿ ತೊಂದರೆ ಉಂಟಾಗಿ ಸಮಸ್ಯೆಗೆ ನಾಂದಿಯಾಯಿತು. ಇದರಿಂದಾಗಿ ಎಸ್.ಎಂ. ಕೃಷ್ಣ ಅವರ ಸರಕಾರ ಸುಮಾರು ೫,೦೦,೦೦೦ ಪಡಿತರ ಚೀಟಿಗಳನ್ನು ವಾಪಸ್ ಪಡೆಯಿತು. ನಂತರ ಬಿಪಿಎಲ್ ಹಾಗೂ ಎಪಿಎಲ್ ಕುಟುಂಬದ ಅಧಿಕೃತ ಸಮೀಕ್ಷೆ ನಂತರ ಕಂಪ್ಯೂಟರ್ ಆಧಾರಿತ ಕಾರ್ಡ್‌ಗಳನ್ನು ವಿತರಿಸುವ ಯೋಜನೆ ರೂಪಿಸಿತು. ರಾಜ್ಯಾದ್ಯಂತ ಪ್ರತಿಯೊಂದು ಕುಟುಂಬದ ಸದಸ್ಯರ ವಾಸ ದೃಢೀಕರಣ, ಇತರ ವಿವರಗಳನ್ನು ಗಣಕಯಂತ್ರದ ಮೂಲಕ ದಾಖಲಿಸಲು ಏಕಾಏಕಿ ಕಾರ್ಯ ಆರಂಭವಾಯಿತು. ಆದರೆ ಒಂದೇ ಸಮಯದಲ್ಲಿ ಈ ರೀತಿಯ ದಾಖಲೀಕರಣ ಕಾರ್ಯ ಕೈಗೊಂಡಿದ್ದು ಕೆಲವು ಗೊಂದಲಗಳಿಗೆ ಕಾರಣವಾಯಿತು. ಏಕೆಂದರೆ ಪ್ರತಿಯೊಂದು ಊರಿನಲ್ಲಿ ದಾಖಲಾತಿಗೆ ಸಮಯಾವಕಾಶ ನೀಡಿದ್ದು ಕೇವಲ ಮೂರರಿಂದ ನಾಲ್ಕು ದಿನ ಮಾತ್ರ, ಆ ಸಮಯದಲ್ಲಿ ಬೇರೆ ಊರಿಗೆ ಹೋದವರು, ಬೇರೆ ಊರಿಗೆ ಉದ್ಯೋಗ ಅರಸಿ ಹೋದವರಿಗೆ ನಿರ್ದಿಷ್ಟ ದಿನ ಬಂದು ತಮ್ಮ ಭಾವಚಿತ್ರ, ವಿವರ ನೀಡಲು ಕಷ್ಟವಾಯಿತು.

ಇನ್ನೊಂದು ಕಡೆ ಕುಟುಂಬದ ಸದಸ್ಯರ ಸೇರ್ಪಡೆ ಬಗ್ಗೆ ಗೊಂದಲ ಸೃಷ್ಟಿಯಾಯಿತು. ಬಡತನರೇಖೆಗಿಂತ ಕೆಳಹಂತದಲ್ಲಿರುವವರು ಬಡತನರೇಖೆಗಿಂತ ಮೇಲಿರುವವರನ್ನು ಗುರುತಿಸುವ ಬಗ್ಗೆ ದಾಖಲು ಅಧಿಕಾರಿಗಳಾಗಲಿ ಅಥವಾ ಸ್ಥಳೀಯ ಪಟ್ಟಣ ಪಂಚಾಯಿತಿಗಳಾಗಲಿ ಯಾವುದೇ ವಿವರ ಮಾಹಿತಿ ಕೊಡಲಿಲ್ಲ. ಹಾಗೆಯೇ ಉದ್ಯೋಗ ನಿಮಿತ್ತ ಬೇರೆ ಊರಿಗೆ ಹೋಗಿ ಅಲ್ಲಿ ನೆಲೆಸಿದವರ, ಹೊಸದಾಗಿ ವಿವಾಹವಾಗಿ ಕುಟುಂಬಕ್ಕೆ ಸೇರ್ಪಡೆ ಆದವರು ಯಾವ ರೀತಿ ದಾಖಲಾತಿ ವಿವರ ನೀಡಬೇಕು ಎನ್ನುವ ಮಾಹಿತಿಯನ್ನೇ ಸ್ಪಷ್ಟವಾಗಿ ನೀಡಲಿಲ್ಲ. ಹೀಗಾಗಿ ಈ ಪ್ರಕ್ರಿಯೆ ಗೊಂದಲಕ್ಕೀಡಾಯಿತು. ಇನ್ನು ಒಂಟಿ ಮಹಿಳೆ ಅಥವಾ ಪುರುಷರು ಇನ್ನೊಂದು ರೀತಿಯ ಸಮಸ್ಯೆಯನ್ನು ಎದುರಿಸಬೇಕಾಗಿತ್ತು. ಮಕ್ಕಳು ದುಡಿಯಲು ಬೇರೆ ಬೇರೆ ಊರಿಗೆ ಹೋಗುವಾಗ ದೊಡ್ಡ ಅಥವಾ ಸಣ್ಣ ಮಗ ತಮ್ಮ ಜೊತೆ ಪಡಿತರ ಚೀಟಿ ತೆಗೆದುಕೊಂಡು ಹೋಗಿದ್ದರು. ಆದರೆ ಈಗ ಇವರಿಗೆ ಪಡಿತರ ಚೀಟಿ ಇಲ್ಲದ ಹಾಗಾಯಿತು. ಇಂತಹ ತೊಂದರೆಗೆ ಈಡಾದವರು ಯಾದಗಿರಿ ಜಿಲ್ಲೆಯಲ್ಲಿಯೇ ಬಹಳ ಸಂಖ್ಯೆಯಲಿದ್ದವರು. ಕೊನೆಗೆ ವರ್ಷಗಳ ನಂತರ ದಾಖಲಾತಿ ಪ್ರಕ್ರಿಯೆ ಮುಗಿದರೂ ಬೇರೆ ಕಾರ್ಡ್‌ಗಳನ್ನು ತ್ವರಿತವಾಗಿ ವಿತರಿಸುವಲ್ಲಿ ಸರಕಾರ ಮತ್ತು ಅಧಿಕಾರಿಗಳು ವಿಫಲರಾದರು. ಇದರಿಂದ ಪಡಿತರ ಚೀಟಿಗಳಿಲ್ಲದೆ ಬಡವರು, ಕೆಳವರ್ಗದವರು ಸಂಕಷ್ಟಕ್ಕೀಡಾದರು. ಯಾವ ಹಳ್ಳಿಗಳಿಗೆ ಹೋದರೂ ಅಲ್ಲಿನ ಮಹಿಳೆಯರು ಒಂದೇ ಒಂದು ಬೇಡಿಕೆ, ಕೂಗು ಎಂದರೆ ಪಡಿತರ ಚೀಟಿಗಳನ್ನು ಬೇಗನೆ ಕೊಡಿ ಎನ್ನುವುದಾಗಿತ್ತು. ಇಂತಹ ಪರಿಸ್ಥಿತಿಯನ್ನು ನೋಡಿದ ಜನವಾದಿ ಮುಂತಾದ ಮಹಿಳಾ ಸಂಘಟನೆಗಳು ಪಡಿತರ ಚೀಟಿಗಳನ್ನು ತ್ವರಿತವಾಗಿ ವಿತರಿಸುವಂತೆ ಅಧಿಕಾರಿಗಳ ಮೇಲೆ ಒತ್ತಡ ಹೇರಿದರು.

ಆದರೆ ಸರಕಾರವಾಗಲಿ, ಜನಪ್ರತಿನಿಧಿಗಳಾಗಲಿ, ಅಧಿಕಾರಿಗಳಾಗಲಿ ಇದರ ಬಗ್ಗೆ ಗಮನ ಹರಿಸದೆ, ಪರಿಹಾರ ದಾರಿಗಳನ್ನು ಹುಡುಕದೆ ಕೇವಲ ಸಮಾಧಾನ ಹೇಳುವುದರಲ್ಲಿ ಕಾಲ

ಕಳೆದರು. ನಂತರ ಪುನಃಸಮೀಕ್ಷೆ ಮಾಡಿ, ಗಣಕೀಕೃತ ಕೇಂದ್ರದ ಮೂಲಕ ಹೊಸ ಪಡಿತರ ಚೀಟಿಗಳನ್ನು ವಿತರಿಸಲು ಆರಂಭವಾಯಿತಾದರೂ ಇಂದಿಗೂ ಎಷ್ಟೋ ಜನರಿಗೆ ಪರಿಷ್ಕೃತ ಮತ್ತು ಕುಟುಂಬದ ನವೀಕೃತ ಪಡಿತರ ಚೀಟಿಗಳು ಸಿಕ್ಕಿಲ್ಲ. ಇನ್ನು ಕೆಲವರಿಗೆ ಸಿಕ್ಕರೂ ಅವರ ಕುಟುಂಬದವರ ಎಲ್ಲಾ ಸದಸ್ಯರ ಹೆಸರುಗಳು ಅದರಲ್ಲಿ ಸೇರ್ಪಡೆ ಆಗಿಲ್ಲ. ಇದಕ್ಕಿಂತಲೂ ವಿಷಾದವೆಂದರೆ ಒಂಟಿ ಮಹಿಳೆಯರು ಪುರುಷರು, ವೃದ್ಧರು, ಅನಕ್ಷರಸ್ಥರು, ಮಾಹಿತಿಯ ಕೊರತೆ ಅಥವಾ ನಿರ್ದಿಷ್ಟ ದಿನಾಂಕದಂದು ಗಣಕೀಕೃತ ಕೇಂದ್ರಗಳಿಗೆ ಹಾಜರಾಗದವರು ಪಡಿತರ ಚೀಟಿಗಳನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಇನ್ನೂ ಕೂಡ ಪ್ರಕ್ರಿಯೆ ಕುಂಟುತ್ತಾ ಸಾಗುತ್ತಲೇ ಇದೆ. ಪ್ರಸ್ತುತ ಸಮಸ್ಯೆಯ ಹಾಗೆ ಇದ್ದು ಹೋರಾಟವು ನಡೆಯುತ್ತಲೇ ಇದೆ.

## ರೈತ ಚಳುವಳಿ ಮತ್ತು ಮಹಿಳೆ

ರೈತ ಚಳುವಳಿ ಮತ್ತು ಮಹಿಳೆಯರ ನಡುವಿನ ಸಂಬಂಧದ ಸ್ವರೂಪ ಬಹಳ ವಿಶಿಷ್ಟ ವಾದುದಾಗಿದೆ. ಕುಟುಂಬವನ್ನು ಪ್ರಧಾನವಾಗಿ ಹೊಂದಿದ ಹಾಗೂ ನಂಬಿದ ಸಮಾಜದಲ್ಲಿ ಮಹಿಳೆ ತನ್ನ ಪುರುಷನ ದಾರಿಯನ್ನು ಅನುಸರಿಸುವುದು ಅತ್ಯಂತ ಸಹಜ ಲಕ್ಷಣ. ಜೊತೆಗೆ ಕೃಷಿ ಕ್ಷೇತ್ರದಲ್ಲೂ ಮಹಿಳೆಯರ ಪಾಲ್ಗೊಳುವಿಕೆ ಹೆಚ್ಚಿರುವುದರಿಂದ ಕೃಷಿ ಕುಟುಂಬದ ಮಹಿಳೆಯನ್ನು ರೈತ ಮಹಿಳೆ ಎಂದೇ ಗುರುತಿಸಲಾಗುತ್ತದೆ. “ರೈತ ಸಮುದಾಯದಲ್ಲಿನ ಮಹಿಳೆಯರ ಪಾಲ್ಗೊಳ್ಳು ವಿಕೆಯು ಕುಟುಂಬದ ದುಡಿಮೆಯ ವ್ಯಾಪ್ತಿಯಲ್ಲಿ ಬರುವುದರಿಂದ ಸಹಜವಾಗಿಯೇ ಅಲ್ಲಿ ಅವಳ ಪಾಲ್ಗೊಳ್ಳುವಿಕೆ ಅನಿವಾರ್ಯವಾಗಿರುತ್ತದೆ. ಹೀಗಾಗಿ ತನ್ನ ಕುಟುಂಬದ ಸ್ಥಿತಿಗತಿಗಳು ಸುಧಾರಿಸಬಹುದೆಂಬ ಉದ್ದೇಶವನ್ನಿಟ್ಟುಕೊಂಡು ಆಕೆ ರೈತ ಹೋರಾಟಗಳಲ್ಲಿ ಪಾಲ್ಗೊಳ್ಳುತ್ತಾಳೆ.

ಹಾಗೆಯೇ ರೈತ ಮಹಿಳೆಯರು ತಮ್ಮ ಸಮಾನತೆಯ ಬೇಡಿಕೆಯನ್ನು ಸರಕಾರದ ನೀತಿ ಗಳನ್ನು ಪ್ರತಿಭಟಿಸಿದ್ದು, ರೈತ ಚಳುವಳಿಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ, ಹೋರಾಟವನ್ನು ಮಹಿಳಾ ಚಳುವಳಿಯ ಭಾಗವೆಂದು ಪರಿಗಣಿಸಿಕೊಳ್ಳಬೇಕಾಗುತ್ತದೆ. ಹಾಗೆಯೇ ಈ ಭಾಗದಲ್ಲಿ ನಡೆದ ತೊಗರಿ ಬೆಳೆಗಾರರ ಹೋರಾಟದಲ್ಲಿ ಮಹಿಳೆಯರ ಪಾತ್ರವಂತೂ ಅವಿಸ್ಮರಣೀಯವಾಗಿದೆ. ಗುಲಬರ್ಗಾ ಜಿಲ್ಲೆಯ ತೊಗರಿ ಬೆಳೆಯ ಕಣಜವೆಂದೇ ಪ್ರಸಿದ್ಧಗೊಂಡಿದೆ. ಅಂತೆಯೇ ಜಿಲ್ಲೆಯ ಮುಖ್ಯ ಆರ್ಥಿಕ ಸಂಪನ್ಮೂಲವೂ ತೊಗರಿ ಬೆಳೆಯೇ ಆಗಿದೆ. ಆದರೆ ತೊಗರಿ ಬೆಳೆಗೆ ಸೂಕ್ತ ಬೆಲೆ ಸಿಗದೆ ನಷ್ಟಕ್ಕೊಳಗಾದ, ಸಾಲಬಾಧೆಗೊಳಗಾದ ರೈತರು ಆತ್ಮಹತ್ಯೆಯ ಹಾದಿ ತುಳಿಯ ತೊಡಗಿದ್ದರು. ಆಗ ಕರ್ನಾಟಕ ಪ್ರಾಂತ ರೈತ ಸಂಘವು ತೊಗರಿ ಬೆಳೆಗಾರರ ರಕ್ಷಣೆಗೆ ಮುಂದಾಯಿತು. ಬೆಂಬಲ ಬೆಲೆಗಾಗಿ ಮತ್ತು ‘ತೊಗರಿ ಬೋರ್ಡ್’ ರಚನೆಗೆ ಒತ್ತಾಯಿಸಿ ಸುದೀರ್ಘ ಹೋರಾಟವನ್ನು ಹಮ್ಮಿಕೊಂಡಿತ್ತು. ಇದೇ ಸಂದರ್ಭದಲ್ಲಿ ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯು ರೈತ ಚಳುವಳಿಗೆ ಬೆಂಬಲಿಸಿ ಸಾವಿರಾರು ಮಹಿಳೆಯರು ಹೋರಾಟದ ಕಣಕ್ಕೆ ಧುಮುಕಿದರು. ಆ ಹೋರಾಟದಲ್ಲಿ ಪಾಲ್ಗೊಂಡ ಅನೇಕ ಮಹಿಳೆಯರು ಲಾಠಿ ಜಾರ್ಜ್ ಎದುರಿಸಿ ಜೈಲು ವಾಸವನ್ನು ಅನುಭವಿಸಿದರು.”[೮] ಅದರಲ್ಲಿ ಜನವಾದಿ ಮಹಿಳಾ ಸಂಘಟನೆಯ ಕೆ.ನೀಲಾ ಮತ್ತು ಗಂಗಮ್ಮ ಬಿರಾದಾರ ಇವರು ಬಂಧಿಸಲ್ಪಟ್ಟ ಮಹಿಳೆಯರಲ್ಲಿ ಪ್ರಮುಖರಾಗಿದ್ದರು.

ಇವರನ್ನು ೧೧ ದಿನಗಳ ಕಾಲ ಜೈಲಿನಲ್ಲಿ ಇರಿಸಲಾಗಿತ್ತು. ನಂತರ ಬಿಡುಗಡೆ ಮಾಡಿದರೂ ಇವರ ಹೋರಾಟ ಮುಂದುವರಿದಿತ್ತು. ಇಂದಿಗೂ ಇಲ್ಲಿ ತೊಗರಿಗೆ ಬೆಂಬಲ ಬೆಲೆ ಕುರಿತು ಪುರುಷ ಮತ್ತು ರೈತ ಮಹಿಳೆಯರು ಆಗಾಗ ಹೋರಾಟ ಮಾಡುತ್ತಲೇ ಇದ್ದಾರೆ.

**ಮಹಿಳಾ ಚಳುವಳಿಯ ಸಫಲತೆ ಮತ್ತು ವಿಫಲತೆ**

ಪ್ರಸ್ತುತ ಸಂದರ್ಭದಲ್ಲಿ ಮಹಿಳಾ ಚಳುವಳಿಯ ಬಗ್ಗೆ ಅವಲೋಕಿಸಿದಾಗ ಯಾದಗಿರಿ ಜಿಲ್ಲೆಯ ಮಹಿಳೆಯರು ಹತ್ತಾರು ಆಯಾಮಗಳಲ್ಲಿ ಹೋರಾಟವನ್ನು ಮಾಡುತ್ತಾ ಬಂದಿದ್ದಾರೆ. ಸಮಯ ಬಂದಾಗ ಬೀದಿಗಿಳಿದು ಹೋರಾಡಿದ್ದಾರೆ. ಹೋರಾಟಗಳ ಮೂಲಕ ನಾಯಕತ್ವ ಮೆರೆದಿದ್ದಾರೆ ತಮ್ಮ ಬದುಕು ಮತ್ತು ಜೀವ ಎರಡನ್ನೂ ಪಣಕ್ಕಿಟ್ಟು ಹೊಡೆತ, ಹಲ್ಲೆ, ಸೆರೆಮನೆ ವಾಸ, ಕೊಲೆ ಬೆದರಿಕೆ ಹೀಗೆ ಎಲ್ಲವನ್ನು ಎದುರಿಸಿ ನಿಂತಿದ್ದಾರೆ. ಇದರೊಟ್ಟಿಗೆ ಶೈಕ್ಷಣಿಕ ವಲಯದಲ್ಲೂ ಮುನ್ನುಗ್ಗಿ ಚಿಂತನೆ ರೂಪದಲ್ಲೂ ತೊಡಗಿಸಿಕೊಂಡಿದ್ದಾರೆ.

ಹೀಗೆ ಒಂದಲ್ಲಾ ಒಂದು ರೀತಿಯಲ್ಲಿ ಮಹಿಳೆಯರ ಹೋರಾಟಗಳು ನಡೆದಿವೆ ಮತ್ತು ಇನ್ನೂ ನಡೆಯುತ್ತಿವೆ. ಆದರೆ ಹೋರಾಟಗಳ ಸ್ವರೂಪವನ್ನು ಗಮನಿಸಿದರೆ ಹೋರಾಟಗಳು ತಕ್ಷಣಕ್ಕೆ ಯಾವುದೋ ಒಂದು ಸಮಸ್ಯೆ ಉದ್ಭವಿಸಿದಾಗ ಹೋರಾಟ ಮಾಡಿ ಮತ್ತೆ ಚೆದುರಿ ಹೋಗುವ ಕೆಲಸ ಆಗುತ್ತಿದೆ. ಅದು ಸಂಘಟಿತ ರೂಪದಲ್ಲಿ ಹಾಗೂ ನಿರಂತರವಾಗಿ ಮುಂದುವರಿಯುತ್ತಿಲ್ಲ. ಈ ದಿಸೆಯಲ್ಲಿ ಹೋರಾಟಗಳು, ಪರಿಣಾಮಕಾರಿ ಆಗದೇ ಇರಲು ಕಾರಣವೆಂದರೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು. ಮಹಿಳೆಯರ ಸಮಸ್ಯೆಗಳು ಎಡಪಂಥೀಯ ಚಳುವಳಿಗಾರರಿಗೆ ಎಷ್ಟು ಮುಖ್ಯವೋ ಹಾಗೆಯೇ ಬಲಪಂಥೀಯ ಚಳುವಳಿಗಾರರಿಗೂ ಅಷ್ಟೇ ಮುಖ್ಯವಾಗಿದೆ. ಆದರೆ ದುರಂತವೆಂದರೆ ಇವರಲ್ಲಿರುವ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿಂದಾಗಿ ಎಲ್ಲರಿಗೂ ಸಂಬಂಧಪಟ್ಟಂತಹ ಸಮಸ್ಯೆಗಳ ಬಗ್ಗೆ ಹೋರಾಟ ಮಾಡಲಿಕ್ಕೆ ಸಮಾನಾಂತರವಾದ ವೇದಿಕೆಯನ್ನು ಸಜ್ಜುಗೊಳಿಸಿ ಹೋರಾಟ ಮಾಡಲು ಸಾಧ್ಯವಾಗುತ್ತಿಲ್ಲ.

ಯಾದಗಿರಿ ಜಿಲ್ಲೆಯಲ್ಲಿ ದಲಿತ ಚಳುವಳಿ ಇನ್ನೂ ಜೀವಂತವಾಗಿದೆ. ಆದರೆ ದಲಿತ ನಾಯಕರು ಮತ್ತು ಸಂಘಟನೆಗಳು ತಮ್ಮ ಜೊತೆಗಿರುವಂತಹ ದಲಿತ ಮಹಿಳೆಯರನ್ನು ತೊಡಗಿಸಿಕೊಂಡು ಹೋಗಲು ದಲಿತ ನಾಯಕರಿಗೆ ಸಾಧ್ಯವಾಗುತ್ತಿಲ್ಲ. ದಲಿತ ಸಂಘಟನೆಗಳಲ್ಲಿ ಮಹಿಳಾ ವಿಭಾಗಗಳೇ ಕಾಣಬರುತ್ತಿಲ್ಲ. ಹೀಗಾಗಿ ದಲಿತ ಮಹಿಳೆಯರು ಕೈಗೊಂಡ ಪ್ರತ್ಯೇಕ ಚಳುವಳಿಗಳು ಕಂಡುಬರುತ್ತಿಲ್ಲ. ಇನ್ನು ದಲಿತರ ನಾಯಕತ್ವದಡಿಯಲ್ಲಿ ಇಡಿಯಾಗಿ ಎಲ್ಲಾ ಮಹಿಳೆಯರು ತೊಡಗಿಸಿಕೊಳ್ಳಲಿಕ್ಕೆ ಜಾತಿ ಅಡ್ಡ ಬರುತ್ತಿದೆ. ಮೇಲ್ಜಾತಿಯಲ್ಲಿರುವ ಮಹಿಳೆಯರು ದಲಿತ ಮುಖಂಡರನ್ನು ನಂಬುತ್ತಿಲ್ಲ. ಹಾಗೆಯೇ ಕೆಳವರ್ಗದಲ್ಲಿರುವ ಮಹಿಳೆಯರು ಮೇಲ್ವರ್ಗದ ನಾಯಕರನ್ನು ನಂಬುತ್ತಿಲ್ಲ. ಇದರಿಂದಾಗಿ ಮಹಿಳಾ ಹೋರಾಟವೇ ವಿಫಲವಾಗುತ್ತಿದೆಯೇನೋ ಎನಿಸುತ್ತಿದೆ.

ಭಾರತದ ಇತರ ರಾಜ್ಯಗಳಲ್ಲಿ ಆದರಲ್ಲೂ ಸಾಕ್ಷರತಾ ಪ್ರಮಾಣ ಜಾಸ್ತಿ ಇರುವಂತಹ ಕೇರಳ, ಮಹಾರಾಷ್ಟ್ರ ಮುಂತಾದ ಕಡೆ ಸಾರ್ವಜನಿಕವಾಗಿ ಕೆಲವು ಸಮಸ್ಯೆಗಳ ಬಗ್ಗೆ ಅರಿವಿದೆ. ಆದರೆ ಸಾಕ್ಷರತೆ ಕಡಿಮೆಯಿರುವಂತಹ ಇಂತಹ ಪ್ರದೇಶದಲ್ಲಿ ತಮ್ಮ ಸಮಸ್ಯೆಗಳ ಬಗ್ಗೆ ಅರಿವು

ಇಲ್ಲಿನವರೆಗೆ ಮೂಡುತ್ತಿಲ್ಲ. ಇಲ್ಲಿ ಎಲ್ಲಾ ವರ್ಗದವರನ್ನೊಳಗೊಂಡು ಮಹಿಳೆಯರನ್ನು ಸಂಘಟಿಸುವಂತಹ, ಸಮಗ್ರ ಹೋರಾಟವನ್ನು ರೂಪಿಸುವಂತಹ ಪ್ರಯತ್ನಗಳು ಆಗುತ್ತಿಲ್ಲ. ಹೀಗಾಗಿ ಅಲ್ಲಲ್ಲಿ ನಡೆಯುವ ಹೋರಾಟಗಳು ಹೆಚ್ಚು ಗಮನ ಸೆಳೆಯುತ್ತಿಲ್ಲ. ಸರಕಾರ ಹಾಗೂ ಇಡೀ ಸಮಾಜ ಗಮನಿಸುವ ಹಾಗೆ, ಅವರ ಗಮನವನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಹಾಗೆ ಸಂಘಟಿತ ರೂಪದ ಚಳುವಳಿಗಳು ಇತ್ತೀಚೆಗೆ ಕಾಣುತ್ತಿಲ್ಲ. ಇತ್ತೀಚಿನ ದಶಕಗಳಲ್ಲಿ ಅಸ್ತಿತ್ವಕ್ಕೆ ಬಂದ ಸ್ತ್ರೀ ಸ್ವಸಹಾಯ, ಸ್ತ್ರೀ–ಶಕ್ತಿ ಸಂಘಗಳು, ಮಹಿಳೆಯರ ಸಂಘಟನಾ ದೃಷ್ಟಿಯಾದ ಆರಂಭದಲ್ಲಿ ಭಾರಿ ಭರವಸೆ ಹುಟ್ಟಿಸಿದ್ದವು. ಪ್ರತಿ ಗ್ರಾಮಗಳಲ್ಲಿ ಮಹಿಳೆಯರು ಸಂಘಟನೆ ಆದಂತಹ ರೀತಿ ಎಲ್ಲರನ್ನು ಬೆರಗಾಗುವಂತೆ ಮಾಡಿತ್ತು. ಮುಂಚೆ ಗೃಹಕೃತ್ಯದಲ್ಲೇ ಇದ್ದು ಮನೆಯ ಹೊಸಲನ್ನೇ ದಾಟದ ಎಷ್ಟೋ ಮಹಿಳೆಯರು ಮೊದಲ ಬಾರಿಗೆ ಹೊರಜಗತ್ತಿಗೆ ಬಂದು ಸಂಘಟನೆ, ಸಹಕಾರ, ಗೃಹ ಕೈಗಾರಿಕೆ, ಬ್ಯಾಂಕ್ ವ್ಯವಹಾರ, ಉಳಿತಾಯ, ಮಾರಾಟ ವ್ಯವಹಾರ ಮುಂತಾದ ಚಟುವಟಿಕೆಯಲ್ಲಿ ತೊಡಗಿಕೊಂಡರು.

ಆರಂಭದಲ್ಲಿ ಕೆಲವು ಸಾಮಾಜಿಕ ಹೋರಾಟಗಳಲ್ಲಿ ಸ್ವಸಹಾಯ ಗುಂಪುಗಳು ಬಹುದೊಡ್ಡ ಬಲವನ್ನೇ ಒದಗಿಸಿದ್ದವು. ಆದರೆ ಕಾಲಕ್ರಮೇಣ ಸ್ವಸಹಾಯ ಗುಂಪುಗಳು, ಸದಸ್ಯರು ರಾಜಕೀಯ ಪಕ್ಷಗಳ ಕಾರ್ಯಕರ್ತರಾಗಿ ಮಾರ್ಪಾಡಾಗಿದ್ದು, ಸಾಮಾಜಿಕ ಪರಿವರ್ತನೆಯ ಹಾದಿಯಲ್ಲಿ ಆದ ದುರಂತವೇ ಎನ್ನಬಹುದು. ಪರಿಸ್ಥಿತಿ ಹೇಗಿದೆಯೆಂದರೆ, ಯಾವುದೇ ಸಾಮಾಜಿಕ ಅಥವಾ ಮಹಿಳೆಯರ ಸಮಸ್ಯೆ ತಲೆದೋರಿದಾಗ, ಹೋರಾಟದಲ್ಲಿ ಪಾಲ್ಗೊಳ್ಳಲು ಕರೆಕೊಟ್ಟರೆ ಮಹಿಳೆಯ ರ್‍ಯಾರೂ ಸ್ವಯಂಪ್ರೇರಿತರಾಗಿ ಸ್ಪಂದಿಸುವುದಿಲ್ಲ. ಪ್ರತಿಭಟನೆ, ಸತ್ಯಾಗ್ರಹ ಮುಂತಾದವುಗಳಿಗೆ ಕರೆದರೆ ದಿನಕ್ಕೆ ಎಷ್ಟು ದುಡ್ಡು ಕೊಡುತ್ತೀರಿ ಎಂದು ಕೇಳುವವರಿದ್ದಾರೆ. ಇಂತಹ ಕಾರಣಗಳಿಂದ, ಮಹಿಳೆಯರ ಹೋರಾಟಗಳು ಒಂದು ಚಳುವಳಿಯ ರೂಪದಲ್ಲಿ ಅಥವಾ ಇಡೀ ವ್ಯವಸ್ಥೆಯನ್ನೇ ಬದಲಾಯಿಸುವ ಪರಿಣಾಮಗಳನ್ನು ಉಂಟು ಮಾಡಿರುವುದು ಬಹು ಕಡಿಮೆ.

### ೪.೫.೨. ಸಮಕಾಲೀನ ಸಂದರ್ಭದಲ್ಲಿ ಮಹಿಳೆಯರ ಸಮಸ್ಯೆಗಳು ಮತ್ತು ಸ್ಥಿತಿಗತಿಗಳು

ಕರ್ನಾಟಕದ ಇತರ ಭಾಗಗಳ ಮಹಿಳೆಯರ ಸಮಸ್ಯೆಗಳಿಗೂ ಯಾದಗಿರಿ ಜಿಲ್ಲೆಯ ಮಹಿಳೆಯರ ಸಮಸ್ಯೆಗಳಿಗೂ ಭಿನ್ನತೆಯಿದೆ. ಬೇರೆ ಭಾಗದ ಮಹಿಳೆಯರೊಂದಿಗೆ ತುಲನೆ ಮಾಡಿ ನೋಡಿದಾಗ ಯಾದಗಿರಿ ಜಿಲ್ಲೆಯ ಮಹಿಳೆಯರ ಸ್ಥಿತಿಗತಿ ಬಹಳ ಕೆಳಮಟ್ಟದಲ್ಲಿದೆ. ಬೇರೆ ಭಾಗದ ಮಹಿಳೆಯರಿಗೆ ಶಿಕ್ಷಣ ದೊರೆತು, ಸ್ಥಾನಮಾನ ದೊರೆತು ಸಮಾಜದ ಮುಖ್ಯವಾಹಿನಿಗೆ ಬಂದರು. ಆದರೆ ಇಲ್ಲಿನ ಮಹಿಳೆಯರು ಎಲ್ಲಾ ಅವಕಾಶಗಳಿಂದ ವಂಚಿತರಾಗಿ ಸಮಾಜಕ್ಕೆ ಒಡ್ಡಿಕೊಳ್ಳಲಾಗಲಿಲ್ಲ. ಇದಕ್ಕೆ ರಾಜಕೀಯ, ಆರ್ಥಿಕ, ಸಾಮಾಜಿಕ ಕಾರಣಗಳಿವೆ. ಮೊದಲಿನಿಂದಲೂ ಜಮೀನ್ದಾರಿ, ನಿಜಾಮರ ಆಡಳಿತದಲ್ಲಿ ಹೆಣ್ಣನ್ನು ಸಮಾನ ಎಂದು ಪರಿಗಣಿಸಲಿಲ್ಲ. ಹೆಣ್ಣನ್ನು ತನ್ನ ಅಧೀನವೆಂದೇ ಪರಿಗಣಿಸಿ ಅವಳನ್ನು ಕೌಟುಂಬಿಕ ವ್ಯವಹಾರದಿಂದ, ಯಜಮಾನಿಕೆಯಿಂದ ದೂರ ಇಡಲಾಗಿತ್ತು. ಹೀಗಾಗಿ ಶಿಕ್ಷಣ, ಉದ್ಯೋಗ ಅವಕಾಶಗಳಿಂದ ವಂಚಿತರಾಗಿ ಆಧುನೀಕರಣದ ಸೌಲಭ್ಯಗಳು ಸಿಗದೆ ಆಧುನಿಕತೆಗೆ ಒಳಗಾಗದೆ ತಮ್ಮನ್ನು ತಾವು ಗುರುತಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹೀಗಾಗಿ

ಇಲ್ಲಿನ ಮಹಿಳೆಯರು ದುಪ್ಪಟ್ಟು ಶೋಷಣೆಗೆ ಅನಕ್ಷರತೆಗೆ ಮತ್ತು ಮೌಢ್ಯಕ್ಕೆ ಬಲಿಯಾದರು. ಸ್ವಾತಂತ್ರ್ಯೋತ್ತರ ಕಾಲದಲ್ಲೂ ಮಹಿಳೆಯರ ಸ್ಥಾನಮಾನದಲ್ಲಿ ದೊಡ್ಡ ಬದಲಾವಣೆಯೇನೂ ಆಗಿಲ್ಲ. ಇಂದಿಗೂ ಇಲ್ಲಿ ಭಾನಾಮತಿ, ಮಾಟಮಂತ್ರದ ಹೆಸರಿನಲ್ಲಿ ಮಹಿಳೆಯರ ಬಲಿ, ಶೋಷಣೆ ನಡೆಯುತ್ತಲೇ ಇದೆ.

ಯಾದಗಿರಿ ಜಿಲ್ಲೆಯಲ್ಲಿ ಸಮಸ್ಯೆಗಳು ಎಲ್ಲಾ ವರ್ಗದ ಮಹಿಳೆಯರಿಗೆ ಇವೆಯಾದರೂ ಅದರಲ್ಲಿ ತೀವ್ರವಾಗಿ ಬಲಿಯಾಗುತ್ತಿರುವವರು ಮುಸ್ಲಿಂ, ದಲಿತ, ಹಿಂದುಳಿದ ವರ್ಗದ ಮಹಿಳೆಯರಾಗಿದ್ದಾರೆ. ಮುಸ್ಲಿಂ ಮಹಿಳೆ ಮೇಲೆ ಇಂದಿಗೂ ತಲಾಖ್‌ನ ತೂಗು ಕತ್ತಿಯಿದೆ. ಅವಳ ಮೇಲೆ ಅನೇಕ ರೀತಿಯ ನಿಯಂತ್ರಣಗಳಿವೆ. ಆರ್ಥಿಕವಾಗಿ ಅಸಮರ್ಥಳಾಗಿದ್ದಾಳೆ. ಇದೇ ರೀತಿ ದಲಿತ, ಕೆಳವರ್ಗದ ಹಿಂದುಳಿದ ಮಹಿಳೆಯರು ಅನಕ್ಷರತೆ, ಬಡತನ ಹಾಗೂ ಆರ್ಥಿಕ ಬಿಕ್ಕಟ್ಟುಗಳಿಗೆ ಬಲಿಯಾಗಿದ್ದಾರೆ. ಹೀಗಾಗಿ ಇಲ್ಲಿನ ಅನೇಕ ಸಮಸ್ಯೆಗಳು ಕೆಳವರ್ಗದ ಜನರನ್ನು ಮೊದಲು ನುಂಗುತ್ತಾ ಆಮೇಲೆ ಹಂತಹಂತವಾಗಿ ಮೇಲಿನ ಜನರನ್ನು ತಬ್ಬಿಕೊಳ್ಳುತ್ತಿವೆ.

**ಕೃಷಿ-ಕೂಲಿ ಕಾರ್ಮಿಕ ಮಹಿಳೆಯರ ಸಮಸ್ಯೆಗಳು ಮತ್ತು ಸ್ಥಿತಿಗತಿಗಳು**

ಭಾರತವು ಕೃಷಿಪ್ರಧಾನವಾದ ರಾಷ್ಟ್ರವಾಗಿದೆ. ಅದೇ ರೀತಿ ಯಾದಗಿರಿ ಜಿಲ್ಲೆಯ ಜನತೆಯ ಮುಖ್ಯ ಉದ್ಯೋಗ ಕೃಷಿಯಾಗಿದೆ. ಅಧಿಕ ಜನರು ತಮ್ಮ ಜೀವನಕ್ಕಾಗಿ ವ್ಯವಸಾಯವನ್ನೇ ಅವಲಂಬಿಸಿದ್ದಾರೆ. ಕರ್ನಾಟಕದ ಒಟ್ಟು ದುಡಿಮೆಗಾರರಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇ. ೨೮ನ್ನು ಮೀರಿಲ್ಲ. ಆದರೆ ಯಾದಗಿರಿ ಜಿಲ್ಲೆಯಲ್ಲಿ ಅದು ಶೇ. ೪೦ಕ್ಕಿಂತ ಅಧಿಕವಾಗಿದೆ. ಇಲ್ಲಿ ಗಮನಿಸ ಬಹುದಾದ ಬಹುಮುಖ್ಯ ಸಂಗತಿಯೆಂದರೆ ಕೃಷಿ ಕೂಲಿ ಕಾರ್ಮಿಕರಲ್ಲಿ ಅಧಿಕ ಪ್ರಮಾಣದಲ್ಲಿ ಇರುವವರು ಮಹಿಳೆಯರು. ಒಟ್ಟು ಕೃಷಿ ಕಾರ್ಮಿಕರಲ್ಲಿ ಶೇ. ೬೦ರಷ್ಟು ಕಾರ್ಮಿಕರು ಮಹಿಳೆ ಯರಾಗಿದ್ದಾರೆ. ಈ ಪ್ರಮಾಣ ಇತರ ಯಾವುದೇ ಭಾಗದಲ್ಲೂ ಕಾಣಬರುವುದಿಲ್ಲ.

ಒಟ್ಟಾರೆಯಾಗಿ ನೋಡಿದಾಗ ಒಂದು ದಶಕದ ಅವಧಿಯಲ್ಲಿ ಪ್ರದೇಶದ ದುಡಿಮೆಗಾರ ವರ್ಗವು ಕ್ರಮೇಣ ಕೃಷಿಯಿಂದ ಕೃಷಿಯೇತರ ಚಟುವಟಿಕೆಗೆ ವರ್ಗಾಂತರವಾಗಿರುವುದನ್ನು ಗಮನಿಸಬಹುದು. ಆದರೆ ಮಹಿಳೆಯರಿಗೆ ಸಂಬಂಧಿಸಿದಂತೆ ವಾಸ್ತವ ಪರಿಸ್ಥಿತಿ ಭಿನ್ನವಾಗಿದೆ. ಈ ಪ್ರದೇಶದ ಕೃಷಿ ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣ ಅಧಿಕ ಇರುವುದಲ್ಲದೇ ಅದು ೧೯೯೧-೨೦೦೧ರ ಅವಧಿಯಲ್ಲಿ ಇನ್ನಷ್ಟು ಅಧಿಕಗೊಂಡಿದೆ. ಒಟ್ಟು ಕೃಷಿ ಕಾರ್ಮಿಕರಲ್ಲಿ ಮಹಿಳಾ ಕೃಷಿ ಕಾರ್ಮಿಕರ ಪ್ರಮಾಣ ಶೇ. ೫೫.೬೫ರಷ್ಟು ಇದ್ದದ್ದು ೨೦೦೧ಕ್ಕೆ ಶೇ. ೬೫ಕ್ಕೆ ಏರಿಕೆಯಾಗಿದೆ. ಏರಿಕೆ ಪ್ರಮಾಣವನ್ನು ಗಮನಿಸಿದಾಗ ಯಾದಗಿರಿ ಜಿಲ್ಲೆಯಲ್ಲಿ ಪ್ರದೇಶದಲ್ಲಿ ಕೃಷಿಯೇತರ ಚಟುವಟಿಕೆಗಳಲ್ಲಿ ಮಹಿಳೆಯರಿಗೆ ದೊರೆಯುತ್ತಿರುವ ಪಾಲು ಅತ್ಯಂತ ನಿಕೃಷ್ಟವಾಗಿದೆ ಎಂಬುದನ್ನು ಸೂಚಿಸುತ್ತದೆ.

ಇಲ್ಲಿ ಮಹಿಳೆಯರಿಗೆ ದುಡಿಮೆಯು ಆಯ್ಕೆಯಾಗಿರದೆ ಅನಿವಾರ್ಯದ್ದಾಗಿದೆ. ನಾನಾ ರೀತಿಯ ಅಧ್ಯಯನಗಳಿಂದ ತಿಳಿದುಬರುವಂತೆ, ಕುಟುಂಬದಲ್ಲಿಯ ವರಮಾನ ಅಧಿಕವಾದಂತೆ ಮಹಿಳೆಯ ದುಡಿಮೆಯ ಪಾಲ್ಗೊಳ್ಳುವಿಕೆ ಕಡಿಮೆಯಾಗುತ್ತದೆ. ಬಡತನ, ಆದಾಯದ ಪ್ರಮಾಣ

ಕಡಿಮೆಯಾದಂತೆಲ್ಲ ಸಂಸಾರದ ಹೊಣೆ, ಹೊರೆ ಮಹಿಳೆಯರ ಮೇಲೆ ನೇರ ಪರಿಣಾಮ ಬೀರುತ್ತದೆ. ಇಂದು ಕೃಷಿ ಕ್ಷೇತ್ರದಲ್ಲಿ ಆಗಿರುವ ಕ್ರಾಂತಿಕಾರಕ ಬದಲಾವಣೆಯಿಂದಾಗಿ ಕೃಷಿ ಹೆಚ್ಚು ಹೆಚ್ಚು ಯಾಂತ್ರೀಕರಣಗೊಳ್ಳುತ್ತಿದೆ. ಹೀಗಾಗಿ ಮಹಿಳೆಯರಿಗೆ ಕೃಷಿ ಚಟುವಟಿಕೆಗಳಲ್ಲಿ ದೊರೆಯಬಹುದಾದ ಕೆಲಸ ಕಾರ್ಯಗಳ ಪ್ರಮಾಣವು ಕಡಿಮೆಯಾಗುತ್ತಾ ಹೋಗುತ್ತದೆ. ಇನ್ನು ಇಲ್ಲಿ ಮಳೆ ಆಧಾರಿತ ಬೇಸಾಯ ಹೆಚ್ಚಿರುವುದರಿಂದ ಅವರ ಜೀವನವು ಏರುಪೇರುಗಳನ್ನು ಆಧರಿಸಿ ಮುಂದುವರಿಯುತ್ತದೆ. ಅಂಕಿ ಅಂಶಗಳ ಆಧಾರದ ಮೇಲೆ ಹೇಳುವುದಾದರೆ ಮಳೆ ಆಧಾರಿತ ಬೇಸಾಯದಲ್ಲಿ ಉದ್ಯೋಗದ ಪ್ರಮಾಣವು ತೀರ ಕಡಿಮೆ ಇದೆ, ಇಲ್ಲಿ ಉದ್ದಿಮೆಗಳ ಬೆಳವಣಿಗೆ ಸಮರ್ಪಕವಾಗಿಲ್ಲ ಹಾಗೂ ಇದಕ್ಕೆ ಬೇಕಾಗುವ ಉದ್ಯಮಶೀಲತೆ, ಇಲ್ಲಿನ ಜನರಲ್ಲಿ ಕಡಿಮೆ ಇದೆ. ಯಾದಗಿರಿಯ ಹಲವಾರು ಉದ್ದಿಮೆಗಳು, ಗುಲಬರ್ಗಾದ ಹತ್ತಿ ಬಟ್ಟೆಯ ಗಿರಣಿ, ಮಿನಿ ಸಿಮೆಂಟ್ ಪ್ಲಾಂಟ್‌ಗಳು ಇಂದು ಮಾರುಕಟ್ಟೆಯ ಸ್ಪರ್ಧೆಯನ್ನು ಎದುರಿಸಲಾರದೆ ನಷ್ಟಕ್ಕೊಳಗಾಗಿ ಮುಚ್ಚಿಹೋಗಿವೆ. ಜಾಗತೀಕರಣ ಹಾಗೂ ಉದಾರೀಕರಣದ ನೀತಿಗಳು ಮುಂದುವರಿ ದಂತೆ ಇವರ ಮತ್ತು ಈ ಉದ್ಯೋಗವನ್ನೇ ನಂಬಿಕೊಂಡಿರುವವರ ಪರಿಸ್ಥಿತಿ ಇನ್ನು ಗಂಭೀರ ವಾಗುತ್ತಿದೆ.

ಹೀಗೆ ಮಳೆಯ ಅಭಾವ, ಬಂಡವಾಳದ ಅಭಾವ, ಮೂಲ ಸೌಕರ್ಯಗಳ ಅಲಭ್ಯತೆ, ಮುಂತಾದವು ಮಹಿಳೆಯರ ಅಭಿವೃದ್ಧಿಯನ್ನು ಕುಂಠಿತಗೊಳಿಸಿವೆ. ಈ ಭಾಗದಲ್ಲಿ ತೋಟಗಾರಿಕೆ, ಹೈನುಗಾರಿಕೆ, ಕೃಷಿ ಸಂಸ್ಕರಣ ಉದ್ದಿಮೆಗಳು ಬಹಳ ಬೆಳೆದಿಲ್ಲ. ಇಲ್ಲಿರುವ ಅವಕಾಶಗಳನ್ನು ಹೊರರಾಜ್ಯದ ಉದ್ಯಮಿಗಳು ಬಳಸಿಕೊಳ್ಳುತ್ತಿದ್ದಾರೆ. ಇಲ್ಲೂ ಮಹಿಳೆಯರು ದುಡಿಮೆಯಲ್ಲಿ ತಾರತಮ್ಯಕ್ಕೆ ಒಳಗಾಗಿದ್ದಾರೆ. ಅವರಿಗೆ ಕೂಲಿ ಕಡಿಮೆ, ದುಡಿತ ಅಧಿಕವಾಗಿದೆ. ಇಂತಹ ಅಂಶ ವನ್ನು ಗಮನದಲ್ಲಿಟ್ಟುಕೊಂಡು ಯಾದಗರಿ ಜಿಲ್ಲೆಯ ಪರಿಸ್ಥಿತಿಯನ್ನು ಅವಲೋಕಿಸಿದಾಗ ಇಲ್ಲಿಯ ಮಹಿಳಾ ಕೃಷಿ ಕಾರ್ಮಿಕರು ಮುಂದಿನ ದಿನಗಳಲ್ಲಿ ಕಷ್ಟಕರವಾದ ದಿನಗಳನ್ನು ಎದುರಿಸಬೇಕಾದ ಪರಿಸ್ಥಿತಿ ಉದ್ಭವಿಸುತ್ತಿರುವುದನ್ನು ನಿರೀಕ್ಷಿಸಬಹುದಾಗಿದೆ. ಒಂದೆಡೆ ಕೃಷಿಯಲ್ಲಿಯ ತಾಂತ್ರಿಕತೆ ಯಿಂದಾಗಿ ಕೃಷಿಯಲ್ಲಿ ಮಹಿಳೆಯರಿಗೆ ದೊರೆಯಬಹುದಾದ ಕೆಲಸ ಕಾರ್ಯಗಳು ಕಡಿಮೆಯಾಗುತ್ತಾ ಹೋಗುತ್ತಿದ್ದರೆ, ಮತ್ತೊಂದೆಡೆ, ಕೃಷಿಯೇತರ ಚಟುವಟಿಕೆಗಳಲ್ಲಿ ಕೆಲಸ ನಿರ್ವಹಿಸಲು ಅಗತ್ಯವಾದ ಅವಕಾಶ, ಸೌಲಭ್ಯ, ಕೌಶಲ್ಯವಿಲ್ಲದೆ ಸಮಸ್ಯೆ ಎದುರಿಸುತ್ತಿದ್ದಾರೆ.

**ಹಿಂದುಳಿದ, ಅಲ್ಪಸಂಖ್ಯಾತ ಮಹಿಳೆಯರ ಸಮಸ್ಯೆಗಳು**

ಯಾದಗಿರಿ ಜಿಲ್ಲೆಯಲ್ಲಿ ಹಿಂದುಳಿದ, ಅಲ್ಪಸಂಖ್ಯಾತ ಮಹಿಳೆಯ ಸ್ಥಿತಿಗತಿ, ಉದ್ಯೋಗ ಅವಕಾಶಗಳ ಬಗ್ಗೆ ಅಧ್ಯಯನ ಮಾಡಿದಾಗ ಇಲ್ಲಿ ಪುರುಷರಿಗೆ ನಿರಂತರ ಉದ್ಯೋಗ ಅವಕಾಶ ಸಿಗುವುದೇ ಕಷ್ಟವಿರುವಾಗ ಇನ್ನು ಮಹಿಳೆಯರಿಗೆ ಉದ್ಯೋಗ ಅವಕಾಶಗಳು ವಿರಳ ವೆಂದೇ ಕಂಡುಬರುತ್ತದೆ. ಅದರಲ್ಲೂ ಅಲ್ಪಸಂಖ್ಯಾತರ, ಹಿಂದುಳಿದ, ದಲಿತ, ಕೃಷಿ ಕಾರ್ಮಿಕ ಮಹಿಳೆಯರಂತೂ ಉದ್ಯೋಗ ಅವಕಾಶವಿಲ್ಲದೆ ಸಂಕಷ್ಟದಲ್ಲಿದ್ದು ಅನೇಕ ಸಮಸ್ಯೆಗಳನ್ನು ಎದುರಿಸು ತ್ತಿದ್ದಾರೆ. ಶತಮಾನಗಳಿಂದಲೂ ಈ ವರ್ಗದ ಜನರು ಹೊಲಿಗೆ, ನೂಲು, ನೇಯ್ಗೆ, ಬಿದರಿ

ಕಲೆ, ಎಂಬ್ರಾಯ್‌ಡರಿ, ಬಟ್ಟೆಗೆ ಬಣ್ಣ ಹಾಕುವಿಕೆ, ಮುಂತಾದ ದೇಶೀಯ ಗುಡಿಕೈಗಾರಿಕೆಗಳನ್ನು ತಮ್ಮ ತಮ್ಮ ಮನೆಯಲ್ಲಿದ್ದುಕೊಂಡೇ ಮಾಡುತ್ತಿದ್ದರು.

ಆದರೆ ಕಾಲಕ್ರಮೇಣ ಬೃಹತ್ ಕಾರ್ಖಾನೆಗಳ ಸ್ಥಾಪನೆ ಹಾಗೂ ಉತ್ಪಾದನೆಗಳಲ್ಲಿ ಯಂತ್ರಗಳ ಬಳಕೆಯಿಂದಾಗಿ ಗುಡಿಕೈಗಾರಿಕೆಗಳು ಮುಚ್ಚಲ್ಪಟ್ಟು ಪುರುಷರಿಗೆ ಉದ್ಯೋಗವಿಲ್ಲದಂತಾಯಿತು. ಇಂತಹ ಪರಿಸ್ಥಿತಿಯಲ್ಲಿ ಹೆಣ್ಣುಮಕ್ಕಳಿಗೂ ನಿರುದ್ಯೋಗದ ಸಮಸ್ಯೆ ಉಂಟಾದವು. ಆರ್ಥಿಕ ಪರಿಸ್ಥಿತಿಯ ದೃಷ್ಟಿಯಿಂದ ನೋಡಿದಾಗ ಇಲ್ಲಿನ ಕೃಷಿ ಮತ್ತು ಇತರ ದಿನಕೂಲಿ ಕಾರ್ಮಿಕರಿಗೆ ಅತಿ ಕಡಿಮೆ ಕೂಲಿ ಸಿಗುತ್ತಿದ್ದು, ಕುಟುಂಬದಲ್ಲಿ ಒಬ್ಬರ ದುಡಿಮೆ ಸಾಲದೆ ಸಂಸಾರ ಸಾಗಿಸಲು ಪುರುಷರು ಮಹಿಳೆಯರಿಬ್ಬರೂ ದುಡಿಯಲೇಬೇಕಾದ ಅನಿವಾರ್ಯತೆ ಇದೆ. ಬೆಲೆಗಳ ಹೆಚ್ಚಳದಿಂದಾಗಿ ಜೀವನ ನಿರ್ವಹಣೆ ವೆಚ್ಚ ಏರುತ್ತಿದ್ದು, ಆ ಮಟ್ಟದಲ್ಲಿ ಕೂಲಿ ದರದಲ್ಲಿ ಮಾತ್ರ ಹೆಚ್ಚಳವಾಗಿಲ್ಲ. ಇದರ ಪರಿಣಾಮ ನೇರವಾಗಿ ಮಹಿಳೆಯರ ಮೇಲೆ ಬೀಳುತ್ತದೆ. ಸ್ಥಳೀಯವಾಗಿ ಉದ್ಯೋಗ ಸಿಗದಿದ್ದಾಗ ಜೀವನ ನಿರ್ವಹಣೆಗೆ ಪುರುಷರು ಮನೆ ಬಿಟ್ಟು ದುಡಿಯಲು ತಿಂಗಳುಗಟ್ಟಲೇ ಪರ ಊರಿಗೆ ಹೋದಾಗ ಇಲ್ಲಿ ಮಹಿಳೆಯರು ಮನೆ, ಮಕ್ಕಳು ಜೀವನ ನಿರ್ವಹಣೆ, ಸಾಲಸೋಲ ಸಂಕಷ್ಟದಲ್ಲಿ ಸಿಲುಕಿ ಸಂಸಾರ ನಿಭಾಯಿಸುವ ಒತ್ತಡದಲ್ಲಿ ಬದುಕಬೇಕಾಗುತ್ತದೆ.

ಇನ್ನು ಸರಕಾರದ ಮೇಲ್ನೋಟದ ಗ್ರಹಿಕೆಗಳೇನೆಂದರೆ, ಸರಕಾರ ಇವರಿಗೆ ಬಹಳ ಸೌಲಭ್ಯಗಳನ್ನು ಕೊಟ್ಟಿದೆ. ವಿಶೇಷ ಯೋಜನೆಗಳನ್ನು ರೂಪಿಸಿದ್ದೇವೆ ಎನ್ನುವ ವಾದ ಮಂಡಿಸುತ್ತವೆ. ಆದರೆ ನಿಜವಾಗಿಯೂ ಇವರ ಸ್ಥಿತಿಗತಿ ಏನು, ಸಮಸ್ಯೆ ಏನು ಎನ್ನುವುದರ ಗ್ರಹಿಕೆಯೇ ಇರುವುದಿಲ್ಲ. ಇನ್ನೊಂದು ಕಡೆ ಇಲ್ಲಿನ ಹಿಂದುಳಿದ, ಅಲ್ಪಸಂಖ್ಯಾತ ಮಹಿಳೆಯರ ಶೈಕ್ಷಣಿಕ, ಸ್ಥಿತಿಗಳನ್ನು ನೋಡಿದರೆ ಇವರ ವಾಸ್ತವ ಬದುಕಿನ ಚಿತ್ರ ದೊರೆಯುತ್ತದೆ. ಮಹಿಳೆಯರು ಅದರಲ್ಲೂ ಗ್ರಾಮೀಣ ಭಾಗದ ಮಹಿಳೆಯರಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದ್ದು ಅದರಲ್ಲಿ ಹೆಚ್ಚೆಚ್ಚು ಓದಬೇಕು, ಬರೆಯಬೇಕು, ಉದ್ಯೋಗಕ್ಕೆ ಸೇರಬೇಕು ಎನ್ನುವ ಆಸೆ ಇತ್ತೀಚೆಗೆ ಹೆಚ್ಚಾಗಿ ಕಂಡುಬರುತ್ತಿದೆ. ಗ್ರಾಮೀಣ ಭಾಗದ ಹೆಚ್ಚಿನ ವಿದ್ಯಾರ್ಥಿನಿಯರು ಶಿಕ್ಷಕಿಯರಾಗುವ ಕನಸಿನೊಂದಿಗೆ ಡಿ.ಎಡ್., ಬಿ.ಎಡ್. ಓದುವುದು ಅವರ ಮೊದಲ ಆಯ್ಕೆ. ಆದರೆ ಸರಕಾರದ ಕೋಟಾದಲ್ಲಿ ಸಿಗುವ ಸೀಟುಗಳು ಕಡಿಮೆ ಇರುವುದರಿಂದ ದುಬಾರಿ ಶುಲ್ಕ ತೆತ್ತು ಖಾಸಗಿ ಸಂಸ್ಥೆಗಳಲ್ಲಿ ಸೇರಲು ಇವರಿಗೆ ಆರ್ಥಿಕ ಸಮಸ್ಯೆ ಅಡ್ಡ ಬರುತ್ತಿದೆ. ಸರಕಾರಿ ಕಾಲೇಜುಗಳ ಸೀಟುಗಳಿಗಿಂತ ನಾಲ್ಕುಪಟ್ಟು ಹೆಚ್ಚು ಖಾಸಗಿ ಕಾಲೇಜಿನ ಸೀಟುಗಳಿವೆ. ಅದರಲ್ಲೂ ಪೋಷಕರಿಗೆ ಹುಡುಗ ಮತ್ತು ಹುಡುಗಿಯರಿಗೆ ವಿದ್ಯೆ ಕೊಡಿಸುವ ಆಯ್ಕೆಯ ಪ್ರಶ್ನೆ ಬಂದಾಗ, ಇಲ್ಲಿ ಹುಡುಗರಿಗೆ ಪ್ರಾಧ್ಯಾನತೆ ಕೊಟ್ಟು ಶಿಕ್ಷಣ ಕೊಡಿಸುತ್ತಾರೆ. ಇನ್ನು ಈ ವರ್ಗದವರಿಗೆ ಉನ್ನತ ವ್ಯಾಸಂಗ ಮಾಡುವ ಮತ್ತು ಮೆಡಿಕಲ್ ಹಾಗೂ ಇಂಜಿನಿಯರಿಂಗ್ ಶಿಕ್ಷಣ ಪಡೆಯುವುದಂತೂ ಕನಸಿನ ಮಾತು. ಏಕೆಂದರೆ ಲಕ್ಷಾಂತರ ರೂ. ಹಣ ಕೊಟ್ಟು ಸೀಟು ಕೊಡಿಸುವ, ನಾಲ್ಕಾರು ವರ್ಷ ಓದಿಸುವ ಸಾಮರ್ಥ್ಯ ಇವರ ಪೋಷಕರಿಗೆ ಇಲ್ಲ. ಇತ್ತೀಚೆಗೆ ವಿವಿಧ ಸಂಘಸಂಸ್ಥೆಗಳ

ಸಹಕಾರದಿಂದ ಕೆಲವರು ಉನ್ನತ ಶಿಕ್ಷಣ ಪಡೆಯುತ್ತಿರುವುದು ಕಂಡುಬರುತ್ತಿದೆಯಾದರೂ ಅವರ ಸಂಖ್ಯೆ ಬೆರಳಣಿಕೆಯಷ್ಟಿದೆ. ಯಾದಗಿರಿ ಜಿಲ್ಲೆಯಾಗಿ ಎಂಟು ವರ್ಷಗಳು ಕಳೆದರೂ ಈ ಜಿಲ್ಲೆಯಲ್ಲಿ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳು ಇಲ್ಲದಿರುವುದು ದುರಂತವೇ ಸರಿ.

ಹೀಗೆ ಶಿಕ್ಷಣ, ಉದ್ಯೋಗದಿಂದ ವಂಚಿತರಾಗಿ ಬಡತನದಲ್ಲೇ ಉಳಿಯುವ ಈ ವರ್ಗದ ಮಹಿಳೆಯರು ಮತ್ತೆ ಅದೇ ಕೂಲಿ, ಕಾಮಗಾರಿ ಕೆಲಸಗಳಿಗೆ ಹೋಗುತ್ತಾರೆ. ಜೀವನೋಪಾಯಕ್ಕಾಗಿ ಯಾವ ಕೆಲಸವಾದರೂ ಸರಿ ಎನ್ನುವ ಸ್ಥಿತಿಗೆ ಬಂದಿರುತ್ತಾರೆ. ಸ್ಥಳೀಯವಾಗಿ ಅವಕಾಶಗಳಿಲ್ಲದಿದ್ದಾಗ, ಉದ್ಯೋಗ ಅರಸಿ ವಲಸೆ ಹೋಗುವುದು ಸಾಮಾನ್ಯವಾಗಿದೆ. ಹೀಗೆ ವಲಸೆ ಹೋದವರಿಗೆ ಪಟ್ಟಣಗಳಲ್ಲಿ ನಿರಂತರ ಕೂಲಿ ಕೆಲಸ ಸಿಗದಿದ್ದಾಗ ಜೀವನ ಸಾಗಿಸುವ ಸಂಕಷ್ಟಕ್ಕೀಡಾಗುತ್ತಾರೆ. ಆಗ ಅವರು ಅನಿವಾರ್ಯವಾಗಿ ದೇಹ ವ್ಯಾಪಾರಕ್ಕೆ ಬಲಿಯಾಗುತ್ತಾರೆ. ಕ್ರಮೇಣ ಇಂತಹ ದಂಧೆಗೆ ತಮ್ಮನ್ನು ಒಡ್ಡಿಕೊಳ್ಳುವಂತಹ ಅನಿವಾರ್ಯತೆಗೆ ಒಳಗಾಗುತ್ತಾರೆ. ಹೀಗಾಗಿ ಮುಂಬೈ, ಪೂನಾ, ಹೈದರಾಬಾದ್, ಬೆಂಗಳೂರು ಮುಂತಾದ ನಗರಗಳಲ್ಲಿ ವೇಶ್ಯಾವಾಟಿಕೆಗಳಲ್ಲಿ ಕಂಡುಬರುವ ಮಹಿಳೆಯರಲ್ಲಿ ಇಲ್ಲಿಂದ ಹೋದ ಮಹಿಳೆಯರೆ ಹೆಚ್ಚಾಗಿ ಕಂಡು ಬರುತ್ತಾರೆ. ನಂತರ ಅನೇಕ ರೋಗಗಳಿಗೆ ಬಲಿಯಾಗಿ ಮಧ್ಯ ವಯಸ್ಸಿನಲ್ಲಿಯೇ ಸಾವಿಗೀಡಾಗುತ್ತಾರೆ. ಹೀಗೆ ಇಲ್ಲಿನ ಹಿಂದುಳಿದ ಅಲ್ಪಸಂಖ್ಯಾತ ಮಹಿಳೆಯರ ಸಮಸ್ಯೆಗಳು ಬೇರೆ ಭಾಗದ ಸಮಸ್ಯೆಗಳಿಗಿಂತ ಬಹಳ ವಿಭಿನ್ನವಾಗಿದೆ.

**ಗಣಿಗಾರಿಕೆಯಲ್ಲಿ ಅಸಂಘಟಿತ ವಲಯದ ಮಹಿಳಾ ಕಾರ್ಮಿಕರು**

ಇನ್ನು ಗಣಿಗಾರಿಕೆ ನಡೆಯುವ ಪ್ರದೇಶಗಳಲ್ಲಿ ಗಣಿ ಮಾಲೀಕರಿಗೂ ಹಾಗೂ ಕೂಲಿ ಕಾರ್ಮಿಕರಿಗೂ ಯಾವುದೇ ನೇರ ಸಂಬಂಧವಿರುವುದಿಲ್ಲ. "ಮಾಲೀಕರಿಗೆ ದಿನನಿತ್ಯ ಬೇಕಾಗುವ ಸರಬರಾಜು ಮಾಡುವ ಮೇಸ್ತ್ರಿಗಳು, ಲೇಬರ್ ಕಾಂಟ್ರ್ಯಾಕ್ಟರ್ ಎನ್ನುವ ಒಂದು ವರ್ಗ ಸೃಷ್ಟಿ ಯಾಗಿದ್ದು ಕೂಲಿ ಕಾರ್ಮಿಕರು ಅವರವರ ಮೇಸ್ತ್ರಿಗಳ, ಗುತ್ತಿಗೆದಾರರ ಹಿಡಿತದಲ್ಲಿರುತ್ತಾರೆ. ಹೀಗಾಗಿ ಮೇಸ್ತ್ರಿಗಳು ಹೇಳುವಂತಹ ಎಂತಹ ಶ್ರಮದಾಯಕ ಕೆಲಸವಾದರೂ ಹೊಟ್ಟೆಪಾಡಿನ ಕಾರಣಕ್ಕಾಗಿ ಎಂತಹ ನೋವನ್ನಾದರೂ ಸಹಿಸಿಕೊಂಡು ಮಾಡುತ್ತಾರೆ. ಇವರು ಕೆಲಸ ಮಾಡುವ ಪರಿಸರ ಕಲುಷಿತ ಧೂಳಿನಿಂದ ಕೂಡಿರುವುದರಿಂದ ಕಣ್ಣಿನ ಮತ್ತು ಚರ್ಮ ಸಂಬಂಧಿ ಕಾಯಿಲೆಗಳು ಬರುವುದು ಸಾಮಾನ್ಯ."[೧೯] ಪ್ರಸ್ತುತ ಅಧ್ಯಯನದಲ್ಲಿ ಕೈಗೊಂಡ ಕ್ಷೇತ್ರಕಾರ್ಯ ಪ್ರಕಾರ ಇಲ್ಲಿನ ಗಣಿ ಭಾಗಗಳಲ್ಲಿ ಬಹುಸಂಖ್ಯಾತ ಅಸಂಘಟಿತ ಗಣಿ ಕಾರ್ಮಿಕರಲ್ಲಿ ಕಾಣಿಸುವ ಕಾಯಿಲೆ ಎಂದರೆ ಕ್ಷಯ, ಶ್ವಾಸಕೋಶ ಸಂಬಂಧಿ ಕಾಯಿಲೆ, ಕ್ಯಾನ್ಸರ್, ಎದೆನೋವು, ಅಲರ್ಜಿ ಗಳಾಗಿವೆ. ದುರಂತವೆಂದರೆ ಗಣಿ ಕೂಲಿಯಾಳುಗಳಿಗೆ ಗಣಿ ಮಾಲೀಕರಿಂದಾಗಲಿ, ಸರಕಾರ ದಿಂದಾಗಲಿ ಯಾವುದೇ ವೈದ್ಯಕೀಯ ಸೌಲಭ್ಯಗಳು ಸರಿಯಾಗಿ ದೊರೆಯುತ್ತಿಲ್ಲ. ಇಂದಿನವರೆಗೆ ಮಹಿಳಾ ಕಾರ್ಮಿಕರ ಸಂಘಟನೆಗಳು ಬಲಗೊಳ್ಳದಂತೆ ಇಲ್ಲಿನ ಬಂಡವಾಳಶಾಹಿ ವರ್ಗ ನಿಗಾ ವಹಿಸಿಕೊಂಡು ಬಂದಿದೆ. ಮಹಿಳಾ ಕೂಲಿಗಳು ಅಸಂಘಟಿತರಾಗಿರುವುದು ಇನ್ನೊಂದು ಬಹುದೊಡ್ಡ ಸಮಸ್ಯೆಯಾಗಿದೆ.

ಇದರಿಂದ ಮಹಿಳಾ ಕಾರ್ಮಿಕರಿಗೆ ಗಣಿಯಲ್ಲೂ ಕೆಲಸವಿಲ್ಲದೆ, ಕೃಷಿಕೂಲಿಯೂ ಸಿಗದೇ, ಬೇರೆ ಉದ್ಯೋಗವಕಾಶಗಳು ಸಿಗದೆ ಬಡತನದಲ್ಲಿ ಬೇಯುತ್ತಿದ್ದಾರೆ. ಕೆಲವರು ಉದ್ಯೋಗ ಅರಸಿ ಬೇರೆ ಪ್ರದೇಶಕ್ಕೆ ವಲಸೆ ಹೋಗತೊಡಗಿದ್ದಾರೆ. ಗಣಿಗಾರಿಕೆಯ ವೈಭವದ ಕಾಲದಲ್ಲಿ ಹೇಗೋ ನಡೆಸಿದ್ದ ಇವರಿಗೆ ಈಗ ಒಂದು ಹೊತ್ತಿನ ಊಟಕ್ಕೂ ಪರದಾಡಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ. ಮಹಿಳೆಯರು ಮನೆಗೆಲಸ ಅರಸಿ ಮನೆ ಕೆಲಸಕ್ಕೆ ಇಟ್ಟುಕೊಳ್ಳಿ ಎಂದು ಅಂಗಲಾಚುವ ಸ್ಥಿತಿ ಬಂದಿದೆ. ಒಟ್ಟಿನಲ್ಲಿ ಗಣಿಗಾರಿಕೆಯ ವೈಭವದ ಕಾಲದಲ್ಲೂ ಇವರ ಸ್ಥಿತಿ ಸುಧಾರಿಸಿರಲಿಲ್ಲ. ಗಣಿಗಾರಿಕೆಯ ಸ್ಥಗಿತ ಕಾಲದಲ್ಲೂ ಇವರ ಸ್ಥಿತಿ ಸುಧಾರಿಸಿಲ್ಲ. ಒಟ್ಟಿನಲ್ಲಿ ಸಮಸ್ಯೆಗಳ ಸುಳಿಯಲ್ಲಿ ಜೀವನ ನಿರ್ವಹಿಸಬೇಕಾದ ಸ್ಥಿತಿ ಅಸಂಘಟಿತ ಕೂಲಿ ಕಾರ್ಮಿಕರ ಸ್ಥಿತಿಯಾಗಿದೆ.

### ಹೆಣ್ಣು ಶಿಶುಹತ್ಯೆ ಹಾಗೂ ಮಾರಾಟ

ಯಾದಗಿರಿ ಜಿಲ್ಲೆಯ ಭಾಗದಲ್ಲಿ ಕಂಡುಬರುವ ಮತ್ತೊಂದು ಸಾಮಾಜಿಕ ಪಿಡುಗು ಹೆಣ್ಣು ಶಿಶುಹತ್ಯೆಯ ಪ್ರಕರಣಗಳು. ಇಡೀ ಮಾನವ ಕುಲವೇ ಬೆಚ್ಚಿಬೀಳುವಂತೆ ಅನಾವರಣ ಗೊಳ್ಳುತ್ತಿವೆ. ಈ ಭಾಗದಲ್ಲಿ ನಡೆಯುವಂತಹ ಹೆಣ್ಣು ಶಿಶುವಿನ ಹತ್ಯೆ, ಹೆಣ್ಣು ಶಿಶುವಿನ ಮಾರಾಟ, ಹೆಣ್ಣು ಶಿಶುಮರಣ ಪ್ರಮಾಣ ಕರ್ನಾಟಕದ ಬೇರೆಲ್ಲೂ ಕಂಡುಬರುವುದಿಲ್ಲ. ಈಗಾಗಲೇ ಅನಕ್ಷರತೆ, ಬಡತನ, ಮೂಢನಂಬಿಕೆಗಳಿಂದ ತುಂಬಿರುವ ಈ ಪ್ರದೇಶದಲ್ಲಿ ಹುಟ್ಟಿದ ಹೆಣ್ಣುಮಗುವನ್ನು ಆ ಕುಟುಂಬದವರೇ ಹತ್ಯೆಗೈಯುವ ಬರ್ಬರತೆ ಇಲ್ಲಿನ ಸಾಮಾಜಿಕ ಸ್ಥಿತಿಯನ್ನು ಮತ್ತಷ್ಟು ಅಂಧಕಾರದಲ್ಲಿ ಮುಳುಗಿಸಿದೆ. ತಮ್ಮ ಕುಟುಂಬದಲ್ಲಿ ಹುಟ್ಟಿದ ಶಿಶು ಹೆಣ್ಣಾಗಿದ್ದರೆ, ಹೆಣ್ಣು ಸಂತಾನ ಬೇಡವಾಗದ ಕಾರಣಕ್ಕಾಗಿ ಅದನ್ನು ಉಸಿರುಕಟ್ಟಿಸಿಯೋ, ಹಾಲನ್ನು ಕೊಡಲು ನಿರಾಕರಿಸಿಯೋ, ವಿಷಪೂರಿತವಾದ ಆಹಾರವನ್ನು ನೀಡಿಯೋ, ಹತ್ಯೆ ಮಾಡುವುದನ್ನು ಹೆಣ್ಣು ಶಿಶುಹತ್ಯೆ ಎನ್ನಲಾಗುವುದು. ಇಡೀ ರಾಷ್ಟ್ರವು ಪ್ರಗತಿ ಪಥದಲ್ಲಿದೆ. ವೈಜ್ಞಾನಿಕ ಕ್ರಾಂತಿ ಆಗಿದೆ, ಅಧುನಿಕತೆಯ ತುತ್ತತುದಿಗೆ ಏರುತ್ತಿದ್ದೇವೆ, ಭಾರತ ಹೊಳೆಯುತ್ತಿದೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಿರುವ ಇಂದಿನ ಕಾಲದಲ್ಲಿಯೂ ಹೆಣ್ಣು ಶಿಶುಗಳನ್ನು ಹುಟ್ಟಿದ ತಕ್ಷಣ ಹತ್ಯೆ ಮಾಡಲಾಗುತ್ತಿದೆ ಎಂದರೆ ಬಹುಜನ ನಂಬಲಾರರು.

ಪುರುಷಪ್ರಧಾನ ಮೌಲ್ಯಗಳು ಹಾಗೂ ಆಚರಣೆಗಳಿಂದ ತುಂಬಿರುವ ಸಮಾಜದಲ್ಲಿ ಹೆಣ್ಣು ಶಿಶುಹತ್ಯೆಗೆ ಒಂದು ಇತಿಹಾಸವೇ ಇದೆ. ಆದರೆ ಇಂದಿನ ವೈಜ್ಞಾನಿಕತೆಯ ಯುಗದಲ್ಲಿ ಇಂತಹ ಪದ್ಧತಿ ದಿನೇ ದಿನೇ ಇನ್ನೂ ಹೆಚ್ಚಾಗುತ್ತಿರುವುದು ಅಂತಕಕ್ಕೀಡು ಮಾಡಿದೆ. ಇಲ್ಲಿನ ಜನರಲ್ಲಿ ಕಂಡುಬರುವ ಮೌಢ್ಯತೆ, ಅಸಹಾಯಕತೆಯಿಂದಲೋ, ಆರ್ಥಿಕ, ಸಾಮಾಜಿಕ ಕಾರಣದ ಒತ್ತಡದಿಂದಲೋ, ಇಂತಹ ಕೃತ್ಯ ಎಸಗುತ್ತಿರುವ ಪೋಷಕರು ಸಾಕಷ್ಟು ಸಂಖ್ಯೆಯಲ್ಲಿದ್ದರೂ, ಇವು ಗುಪ್ತವಾಗಿ ನಡೆದು ಹೆಚ್ಚಾಗಿ ಬೆಳಕಿಗೆ ಬಾರದೇ ಹೋಗುತ್ತವೆ. ವಿಶೇಷವಾಗಿ ಯಾದಗಿರಿ ಜಿಲ್ಲೆಯಲ್ಲಿ ಹೆಣ್ಣು ಶಿಶುಹತ್ಯೆಗೆ ಕಾರಣಗಳನ್ನು ಹುಡುಕುತ್ತಾ ಹೋದರೆ ಬೇರೆ ಪ್ರದೇಶದಲ್ಲಿದ್ದಂತಹ ಕಾರಣಗಳ ಜೊತೆಗೆ ಕೆಲವು ವಿಭಿನ್ನವಾದ ಕಾರಣಗಳು ಗೋಚರಿಸುತ್ತವೆ. ಗಂಡುಮಗು ಹುಟ್ಟಿದರೆ ವಂಶೋದ್ಧಾರವಾಗುವುದರ ಜೊತೆಗೆ ತಂದೆ ತಾಯಿಗಳಿಗೆ ಮೋಕ್ಷ ದೊರೆಯುತ್ತದೆ

ಎನ್ನುವ ಗಾಢನಂಬಿಕೆ ಇನ್ನೂ ಇಲ್ಲಿ ಗಟ್ಟಿಯಾಗಿ ಉಳಿದುಕೊಂಡು ಬಂದಿದೆ. ಎಲ್ಲದಕ್ಕಿಂತಲೂ ಮುಖ್ಯವಾಗಿ ಇಲ್ಲಿನ ಬಡತನವು ಹೆಣ್ಣು ಭ್ರೂಣಹತ್ಯೆಗೆ ಒಂದು ರೀತಿಯಲ್ಲಿ ನೇರ ಕಾರಣವಾಗುತ್ತಿದೆ.

ಇಲ್ಲಿನ ಬಹುತೇಕ ಬಡ ಮತ್ತು ಕೆಳವರ್ಗದವರ ಮನಸ್ಥಿತಿ ಹೇಗಿದೆಯೆಂದರೆ ಹೆಣ್ಣು ಮಗುವಾದರೆ ಅವಳು ಪ್ರಾಪ್ತಳಾಗುವವರೆಗೆ ಅವಳನ್ನು ಸಾಕಬೇಕು. ವರದಕ್ಷಿಣೆಯನ್ನು ಕೊಟ್ಟು ವಿವಾಹ ಮಾಡಬೇಕು. ಇದಕ್ಕೆಲ್ಲಾ ದುಡಿದ ಹಣ ಸಾಕಾಗದೆ ಸಾಲ ಮಾಡಬೇಕು, ಇಲ್ಲವೇ ಇರುವ ಭೂಮಿ, ಮನೆ, ಒಡವೆಗಳನ್ನು ಮಾರಬೇಕು. ಹೀಗಾಗಿ ಹೆಣ್ಣು ನಮಗೆ ಆರ್ಥಿಕ ಹೊರೆ ಎಂಬ ಭಾವನೆ ಜನರಲ್ಲಿ ಗಟ್ಟಿಯಾಗಿ ಬೇರೂರಿದೆ. ಕಾರಣವನ್ನು ಮುಂದಿಟ್ಟುಕೊಂಡು ಹೆಣ್ಣು ಶಿಶುಹತ್ಯೆಯಲ್ಲಿ ತೊಡಗಿದ್ದಾರೆ ಎನ್ನುವುದು ತಿಳಿದುಬರುತ್ತದೆ. ಹೆಣ್ಣು ಶಿಶುಹತ್ಯೆ ಬಗ್ಗೆ ಸಾಕಷ್ಟು ವಿರೋಧಗಳು, ಕಾನೂನುಗಳು ಉದ್ಭವವಾದ ಹಿನ್ನೆಲೆಯಲ್ಲಿ ಹೆಣ್ಣು ಶಿಶುಹತ್ಯೆ, ಮಾರಾಟದಂತಹ ಹೊಸ ರೂಪ ಪಡೆಯುತ್ತಿದೆ. ಪೋಷಕರು ಪಕ್ಕದ ಆಂಧ್ರಪ್ರದೇಶ, ಮಹಾರಾಷ್ಟ್ರಗಳ ಜನರಿಗೆ ಹಣಕ್ಕಾಗಿ ಹೆಣ್ಣು ಶಿಶುವನ್ನು ಮಾರಾಟ ಮಾಡುವ ಮಾರ್ಗವನ್ನು ಕಂಡುಕೊಂಡಿದ್ದಾರೆ. ಇಲ್ಲಿನ ಜನರ ಬಡತನವನ್ನು ದುರುಪಯೋಗಪಡಿಸಿಕೊಂಡು ಸಾವಿರಾರು ರೂಪಾಯಿ ಕೊಟ್ಟು ತಮ್ಮ ಲಾಭದಾಯಕ ದೃಷ್ಟಿಯಿಂದ, ಹೆಣ್ಣು ಶಿಶುವನ್ನು ತೆಗೆದುಕೊಳ್ಳುವ ಪ್ರಕರಣಗಳು ನಡೆಯುತ್ತಿವೆ. ಇತ್ತೀಚೆಗೆ ಶಿಶು ಮಾರಾಟದ ದೊಡ್ಡ ಜಾಲವೇ ಇಲ್ಲಿ ಹರಡಿಕೊಂಡಿರುವುದರ ಬಗ್ಗೆ ಸಾಕಷ್ಟು ಮಾಹಿತಿ ಸರಕಾರಕ್ಕೆ ಬಂದಿದೆ. ದುರಂತವೆಂದರೆ ಸರಕಾರಗಳು ಇಲ್ಲಿಯವರೆಗೆ ಈ ಭಾಗದ ಜನರಿಗೆ ಕೊಡಬೇಕಾಗಿದ್ದ ವಿಶೇಷ ಸವಲತ್ತುಗಳನ್ನು ಕೊಡದೇ ಅಗತ್ಯ ಆರ್ಥಿಕ ಮತ್ತು ಸಾಮಾಜಿಕ ಸುಧಾರಣಾ ಕ್ರಮಗಳನ್ನು ಕೈಗೊಳ್ಳುವಲ್ಲಿ ವಿಫಲವಾಗಿವೆ.

ಇದಕ್ಕೆ ಉದಾಹರಣೆ ಎಂದರೆ, "ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕೊಂಚಾವರಂ ಪ್ರದೇಶದ ತಾಂಡಾಗಳಲ್ಲಿ ಹೆಣ್ಣುಕೂಸುಗಳ ಮಾರಾಟದ ಪ್ರಕರಣಗಳು ನಡೆದಾಗ, ಮಹಿಳಾ ಕ್ಷೇಮಾಭಿವೃದ್ಧಿಗಾಗಿ ಶ್ರಮಿಸುತ್ತಿರುವ ಜನವಾದಿ ಮತ್ತು ಪ್ರಜ್ಞಾ ಸಂಘಟನೆಗಳಿಂದ ಇದರ ಬಗ್ಗೆ ಸಮೀಕ್ಷೆ ನಡೆಸಲಾಗಿತ್ತು. ಆಗ ಮಾರಾಟಕ್ಕೆ ಕಾರಣವೇನು ಎಂಬುದರ ಬಗ್ಗೆ ತಿಳಿದುಬಂದಿದ್ದೇನೆಂದರೆ, ಗಂಡುಮಕ್ಕಳ ಆಪೇಕ್ಷೆ, ಹೆಣ್ಣಿನ ಬಗ್ಗೆ ತಿರಸ್ಕೃತ ಭಾವನೆ, ಬಡತನ, ವರದಕ್ಷಿಣೆ, ಇಂತಹ ಕಾರಣದಿಂದ ಬಡಜನತೆಯು ತಮ್ಮ ಕರುಳ ಕುಡಿಗಳನ್ನು ಮಾರಾಟ ಮಾಡಿಕೊಂಡ ಸತ್ಯವು ವ್ಯಕ್ತವಾಗಿದೆ."[೮೨] ಹೆಣ್ಣು ಶಿಶುಹತ್ಯೆಯ ಬಗ್ಗೆ ನಿಖರವಾದಂತಹ ಅಂಕಿ ಅಂಶಗಳನ್ನು ಒದಗಿಸುವುದು ಕಷ್ಟಕರವಾದ ಕೆಲಸ, ಏಕೆಂದರೆ ಒಂದು ಬಗೆಯ ನಿಗೂಢತೆ ಕೃತ್ಯವನ್ನು ಸುತ್ತುವರಿದಿದೆ. ದಿನನಿತ್ಯವೂ ನಡೆಯುವ ಘಟನೆಗಳಿಗೆ ಸಾರ್ವಜನಿಕರು, ವೈದ್ಯಕೀಯ ಸಿಬ್ಬಂದಿ, ಪೋಲೀಸರು, ಮೌನ ಪ್ರೇಕ್ಷಕರಾಗಿದ್ದಾರೆ. ಜೊತೆಗೆ ಒಂದು ರೀತಿಯಲ್ಲಿ ಇವರೆಲ್ಲರೂ ಆ ಕಾರ್ಯದಲ್ಲಿ ಭಾಗಿಗಳೂ ಹೌದು ಎನ್ನುವ ಅಭಿಪ್ರಾಯಗಳು ಹೆಚ್ಚಾಗಿ ಕೇಳಿಬರುತ್ತದೆ. ಇದಕ್ಕೆ ಪುಷ್ಟಿ ನೀಡುವಂತೆ ಇದುವರೆಗೂ ಹೆಣ್ಣು ಶಿಶುಹತ್ಯೆಗೆ ಮತ್ತು ಮಾರಾಟಕ್ಕೆ ಕಾರಣರಾದವರಿಗೆ ವಿಧಿಸಿರುವ ಶಿಕ್ಷೆಯ ಬಗ್ಗೆ ವಿಚಾರಿಸಿದಾಗ ಸಿಗುವ ಉತ್ತರಗಳು ಸಮಾಧಾನಕರವಾಗಿಲ್ಲ ಹಾಗೂ ಕಾನೂನಿನಡಿಯಲ್ಲಿ ಕ್ರಮಗಳು ಜರುಗಿರುವುದು ವಿರಳ.

ಹೆಣ್ಣು ಶಿಶುಹತ್ಯೆಯಂತಹ ಅಮಾನವೀಯ ಪದ್ಧತಿಯನ್ನು ತಡೆಗಟ್ಟಲು ಅನೇಕ ಕ್ರಮಗಳನ್ನು ಏಕಕಾಲದಲ್ಲಿ ಜರುಗಿಸಬೇಕಾಗುತ್ತದೆ. ಮೊದಲಿಗೆ ಆಗಬೇಕಾಗಿರುವುದು ಈ ಪ್ರಕರಣಗಳಲ್ಲಿ ಭಾಗಿಗಳಾದವರಿಗೆ ಕಠಿಣ ಶಿಕ್ಷೆಯನ್ನು ವಿಧಿಸುವಂತಹದ್ದು, ಇನ್ನೊಂದೆಡೆ ಜನ ಜಾಗೃತಿಯನ್ನು ಮೂಡಿಸುವ ಪ್ರಯತ್ನ ಸಮಾರೋಪಾದಿಯಲ್ಲಿ ನಡೆಯಬೇಕು. ಆಸಕ್ತ ಹಾಗೂ ಸಶಕ್ತ ಕಾರ್ಯಕರ್ತರು ಹೆಣ್ಣು ಶಿಶುಹತ್ಯೆ ತಡೆ ಕುರಿತು ಸಂತತಿಯ ರಕ್ಷಣೆಯ ಕುರಿತು ಅರಿವು ಮೂಡಿಸುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಬೇಕು. ಇಲ್ಲದಿದ್ದರೆ ಮುಂದೊಂದು ದಿನ ಹೆಣ್ಣುಮಕ್ಕಳ ಸಂಖ್ಯೆಯೇ ಇಳಿಮುಖವಾಗಿ ಗಂಡಿನ ಸಂಖ್ಯೆ ಹೆಚ್ಚಾಗಿ ಲಿಂಗ ಪ್ರಮಾಣದಲ್ಲಿ ಏರುಪೇರು ಉಂಟಾಗಿ ವಿಭಿನ್ನವಾದ ಹೊಸ ಸಮಸ್ಯೆಗಳನ್ನು ಸೃಷ್ಟಿಸಬಹುದಾದ ಅಪಾಯವಿದೆ.

**ಬಾಲ್ಯವಿವಾಹ**

ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಅನೇಕ ಸಾಮಾಜಿಕ ಸಮಸ್ಯೆಗಳಲ್ಲಿ ಬಾಲ್ಯವಿವಾಹ ದೊಡ್ಡ ಸಮಸ್ಯೆಯಾಗಿದೆ. ಕರ್ನಾಟಕದಲ್ಲಿಯೇ ಅತಿ ಹೆಚ್ಚು ಬಾಲ್ಯವಿವಾಹಗಳು ಜರುಗುವುದು ಯಾದಗಿರಿ ಜಿಲ್ಲೆಯಲ್ಲಿ. ಇಲ್ಲಿನ ವಾಸ್ತವಿಕ ಪರಿಸ್ಥಿತಿಯನ್ನು ಅವಲೋಕಿಸಿದಾಗ ಯಾದಗಿರಿ ಜಿಲ್ಲೆಯಲ್ಲಿ ಅನೇಕ ಕುಟುಂಬದಲ್ಲಿ ಬಾಲ್ಯವಿವಾಹಗಳು ಇನ್ನೂ ಜರುಗುತ್ತಲೇ ಇರುವುದು ಕಂಡುಬರುತ್ತದೆ. ಆದರೆ ಇದರ ಕಡೆ ಗಮನ ಹರಿಸದೆ ಸಾಮೂಹಿಕ ವಿವಾಹಗಳಲ್ಲಿ ಒಂದೊಂದು ಅಪ್ರಾಪ್ತರನ್ನು ಹಿಡಿದು ಅದನ್ನು ಸರಕಾರಕ್ಕೆ, ಸಮಾಜಕ್ಕೆ ತೋರಿಸುವುದಷ್ಟೆ ನಡೆದಿದೆ. ಆದರೆ ಹೆಚ್ಚು ಕುಟುಂಬದಲ್ಲಿ ಬಾಲ್ಯವಿವಾಹಗಳಾಗುತ್ತಿದ್ದರೂ, ಅದನ್ನು ನಿಲ್ಲಿಸಲು ಯಾರಿಗೂ ಸಾಧ್ಯವಾಗುತ್ತಿಲ್ಲ. ಈ ಜಿಲ್ಲೆಯ ಶಹಪುರ, ಸುರಪುರಗಳನ್ನು ಮೊದಲುಗೊಂಡು ಗುರುಮಠಕಲ್ ತುದಿಯವರೆಗೆ ಕಂಡುಬರುವ ಸ್ಥಿತಿ ಎಂಥವರನ್ನು ಬೆಚ್ಚಿ ಬೀಳಿಸುತ್ತದೆ. ಅದರಲ್ಲೂ ಹಳ್ಳಿಗಳಿಗೆ ಹೋಗಿ ನೋಡಿದ್ದಾದರೆ ಎಂಟು, ಹತ್ತು ವರ್ಷದ ಹೆಚ್ಚಿನ ಹೆಣ್ಣುಮಕ್ಕಳ ಕುತ್ತಿಗೆಯಲ್ಲಿ ತಾಳಿ ಇರುತ್ತದೆ.

ಸುಮಾರು ೧೦೦ಕ್ಕೆ ೪೦ ಮಕ್ಕಳಲ್ಲಿ ತಾಳಿಗಳು ಕಂಡುಬರುತ್ತದೆ. ಮೇಲ್ಜಾತಿಯಲ್ಲಿರುವ ಅಥವಾ ಸ್ವಲ್ಪ ಸುಶಿಕ್ಷಿತರನ್ನು ಹೊರತುಪಡಿಸಿದರೆ ಹೆಚ್ಚು ಕಡಿಮೆ ಎಲ್ಲಾ ಬಡವರ ಮಕ್ಕಳ ಹೆಣ್ಣು ಶಿಶುವಿನ ಕೊರಳಲ್ಲಿ ತಾಳಿ ಇರುವುದನ್ನು ನೋಡುತ್ತೇವೆ. ಹೀಗೆ ಸಾಮೂಹಿವಾಗಿ ಆ ಸಮಸ್ಯೆಗೆ ನಮ್ಮ ಸರಕಾರಗಳಿಂದ ಪರಿಹಾರಗಳನ್ನು ರೂಪಿಸಲು ಸಾಧ್ಯವಾಗುತ್ತಿಲ್ಲ. ಇದನ್ನು ಹೋರಾಟದ ರೂಪದಲ್ಲಿ ನಿಲ್ಲಿಸಲು ಹೊರಟರೆ ಆ ತಂದೆ ತಾಯಿಗಳು ಹಾಕುವ ಪ್ರಶ್ನೆಗಳಿಗೆ ಉತ್ತರವಿರುವುದಿಲ್ಲ. ನಮ್ಮ ಮಗಳನ್ನು ಪ್ರಾಪ್ತವಯಸ್ಸಿಗೆ ಬಂದ ನಂತರ ಮದುವೆ ಮಾಡಿ ಅಂತ ನೀವೇನೋ ಹೇಳುತ್ತಿರಿ, ಆದರೆ ಈಗ ಬಾಲ್ಯದೊಳಗೆ ಏನೂ ವರದಕ್ಷಿಣೆ ಇಲ್ಲದೆ ಹೆಚ್ಚು ಆಡಂಬರವಿಲ್ಲದೆ, ಹೆಚ್ಚು ಖರ್ಚಿಲ್ಲದೆ, ಹೇಗೋ ಮದುವೆ ನಡೆದು ಹೋಗುತ್ತದೆ. ಆದರೆ ದೊಡ್ಡವರಾದ ಮೇಲೆ ವರದಕ್ಷಿಣೆ ಅಂತ ಕೊಡಬೇಕು. ಖರ್ಚು ಮಾಡಿ ಮದುವೆ ಮಾಡಬೇಕು. ಅದಕ್ಕಿಂತ ಹೆಚ್ಚಾಗಿ ಅವರು ಹದಿನೆಂಟು ವರ್ಷದವರಾಗುವವರೆಗೂ ಅವರನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯಬೇಕು. ಇದು ನಮ್ಮ ಕಡೆಯಿಂದ ಸಾಧ್ಯವಿಲ್ಲ. ಹಾಗಾಗಿ ಈಗಲೇ ನಾವು ಬಾಲ್ಯವಿವಾಹ

ಮಾಡಿ ಮುಗಿಸುತ್ತೇವೆ ಎನ್ನುವ ವಿಚಾರಧಾರೆ ಕೆಳವರ್ಗದವರಲ್ಲಿ ಭಯಾನಕವಾಗಿ ಬೇರೂರಿದೆ. ಒಂದು ಕಡೆ ಮೇಲ್ಜಾತಿಯವರು ಹೆಣ್ಣಿನ ಭದ್ರತೆ ಬಗ್ಗೆ ಅಷ್ಟಾಗಿ ಚಿಂತಿತರಾಗಿಲ್ಲ. ಅವರು ಹುಡುಗಿಯರನ್ನು ಕಾಯುವುದಲ್ಲ, ಅವರನ್ನು ಜಗತ್ತಿಗೆ ಮುಖಾಮುಖಿಯಾಗುವ ರೀತಿಯೊಳಗೆ ಬೆಳೆಸುತ್ತಿದ್ದಾರೆ.

ತಮ್ಮ ಹುಡುಗಿಯರನ್ನು ವಿಶ್ವಸುಂದರಿಯರನ್ನಾಗಿ, ನಟಿಯರನ್ನಾಗಿ, ವೈದ್ಯರು, ಇಂಜಿನಿಯರ್ ಗಳನ್ನಾಗಿ ಮಾಡಬೇಕು ಎನ್ನುವಂತಹ ರೀತಿಯಲ್ಲಿ ಅವರಿಗೆ ತರಬೇತಿಯನ್ನು ಕೊಡಿಸುತ್ತಿದ್ದಾರೆ. ಇದು ಮೇಲ್ವರ್ಗದ ಮತ್ತು ಕೆಳವರ್ಗದ ಕುಟುಂಬದ ವಿಚಾರಗಲ್ಲಿರುವ ದ್ವಂದಗಳಾಗಿವೆ. ಇನ್ನು ಹೆಣ್ಣನ್ನು ಬಾಲ್ಯದಲ್ಲೆ ವಿವಾಹಕ್ಕೆ ತಳ್ಳುವುದರಿಂದ ಅವಳಿಗೆ ಜೀವನದಲ್ಲಿ ತನ್ನ ಆಯ್ಕೆಯ, ತನ್ನ ಇಚ್ಚೆಯ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾಳೆ. ತನಗೆ ಬುದ್ಧಿ, ಅರಿವು ಬರುವ ಮುಂಚೆಯೇ ಬೇರೊಬ್ಬನನ್ನು, ಬೇರೊಂದು ಕುಟುಂಬವನ್ನು ತನ್ನ ಸರ್ವಸ್ವವನ್ನಾಗಿ ಸೀಕರಿಸಬೇಕಾದ ಅನಿವಾರ್ಯತೆಗಿಳಿಯುತ್ತಾಳೆ. ಇನ್ನು ಚಿಕ್ಕಂದಿನಿಂದಲೇ ವಿವಾಹದ ಬಂಧನಕ್ಕೆ ಒಳಗಾಗುವುದರಿಂದ ಇತ್ತ ಹೆಣ್ಣುಮಕ್ಕಳಂತೆ ತನ್ನ ಬಾಲ್ಯವನ್ನು ಅನುಭವಿಸುವ, ತನ್ನಿಷ್ಟದಂತೆ ಬದುಕುವ, ಭವಿಷ್ಯದ ಜೀವನವನ್ನು ರೂಪಿಸಿಕೊಳ್ಳುವ ಅವಕಾಶದಿಂದ ವಂಚಿತಳಾಗುತ್ತಿದ್ದಾಳೆ. ಇವಳಿಗೆ ಈಗಾಗಲೇ ವಿವಾಹವಾಗಿದೆ ಎನ್ನುವ ಕಾರಣದಿಂದ ಸರಿಯಾದ ಶಿಕ್ಷಣವನ್ನು ನೀಡದೆ ಶಾಲೆಗೆ ಕಳುಹಿಸದೆ ಅವಳನ್ನು ಅನಕ್ಷರತೆಗೆ, ಮೌಢ್ಯಕ್ಕೆ ತಳ್ಳಲಾಗುತ್ತದೆ. ಇನ್ನು ಮುಂದೆ ವಯಸ್ಸಿನಲ್ಲಿ ವಿವಾಹವಾಗುವ ಇವಳು ಪ್ರಾಪ್ತಳಾದ ನಂತರ ಒಂದು ವೇಳೆ ಪತಿಯನ್ನು ಕಳೆದುಕೊಂಡಳೆಂದರೆ ಅವಳ ಜೀವನ ನರಕಯಾತನೆಯಾಗುತ್ತದೆ. ಒಂದು ಕಡೆ ಅವಳ ಪುನರ್‌ವಿವಾಹಕ್ಕೆ ನಮ್ಮ ಸಮಾಜ ಅಷ್ಟು ಸುಲಭವಾಗಿ ಸಮ್ಮತಿ ನೀಡುವುದಿಲ್ಲ. ಇನ್ನು ಸ್ವತಂತ್ರಳಾಗಿ ಬದುಕುವ ವಿದ್ಯೆ. ಬುದ್ಧಿ, ಸಾಮರ್ಥ್ಯ ಅವಳಿಗಿರುವುದಿಲ್ಲ.

ಹಾಗಾಗಿ ಅವಳು ಸಾಮಾಜಿಕ ಸ್ಥಾನಮಾನ, ಆರ್ಥಿಕ ಅಭದ್ರತೆಯ ಜೊತೆಗೆ ಲೈಂಗಿಕ ಶೋಷಣೆಗಳಿಗೂ ಒಳಪಡಬಹುದಾದ ಸಂಗತಿಗೆ ಬರುತ್ತಾಳೆ. ವಿವಾಹ ಬಂಧನದಲ್ಲಿ ಗಂಡನ ಅಧೀನದಲ್ಲಿದ್ದವಳು ನೇರವಾಗಿ ಕುಟುಂಬದ ಅಥವಾ ಸಮಾಜದ ಅಧೀನಕ್ಕೆ ಒಳಪಡುತ್ತಾಳೆ. ಕೆಲವೊಮ್ಮೆ ಸುತ್ತಮುತ್ತಲಿನ ಕೆಲವರು ಆಕೆಯ ಮೇಲೆ ಒಡೆತನವನ್ನು ಹೊಂದಲು ಹವಣಿಸುತ್ತಾರೆ. ಅಂತಿಮವಾಗಿ ಇದು ಅವಳ ಆತ್ಮಹತ್ಯೆಗೂ ಕಾರಣವಾಗುತ್ತದೆ. ಹೀಗಾಗಿ ಬಾಲ್ಯವಿವಾಹ ಎನ್ನುವುದು ಒಂದೆಡೆ ಪಾವಿತ್ರ್ಯವನ್ನು ಅವಳ ಮೇಲೆ ಹೇರುತ್ತಲೇ, ಜೊತೆ ಜೊತೆಗೆ ಅದನ್ನು ಕಳೆದುಕೊಳ್ಳುವ ಭಯ, ಅಸಹಾಯಕತೆಯನ್ನು ಏರ್ಪಡಿಸುತ್ತದೆ. ಸ್ವಾತಂತ್ರ್ಯದ ನಂತರದ ಹಲವು ದಶಕಗಳವರೆಗೂ ಬಾಲ್ಯವಿವಾಹವನ್ನು ತಡೆಗಟ್ಟುವ ಯಾವ ಪರಿಣಾಮಕಾರಿ ಕಾನೂನುಗಳು ಪ್ರಯತ್ನಗಳು ನಡೆಯಲಿಲ್ಲ. ಬಾಲ್ಯವಿವಾಹ ನಿಷೇಧ ಕಾಯ್ದೆ ಜಾರಿಯಲಿದ್ದರೂ ಅದು ಕಾನೂನಿನ ಪುಸ್ತಕಕ್ಕೆ, ಹೇಳಿಕೆಗೆ ಮಾತ್ರ ಸೀಮಿತವಾಗಿತ್ತು. ಅದರಲ್ಲೂ ವಿವಾಹವೆಂಬುದು ಕೌಟುಂಬಿಕ ಧಾರ್ಮಿಕ ಆಚರಣೆಯ ಸಮರೂಪವಾದ್ದರಿಂದ ಅದನ್ನು ಕಾನೂನಿನ ಮೂಲಕ, ನಿಷೇಧದ ಮೂಲಕ ಹಿಡಿತವನ್ನು ಹೊಂದುವುದು ಸುಲಭದ್ದಾಗಿರಲಿಲ್ಲ.

೧೯೭೮ರಲ್ಲಿ ಸರಕಾರ ಕಾನೂನಿಗೆ ತಿದ್ದುಪಡಿ ತಂದು ಮದುವೆಯಾಗುವ ಹೆಣ್ಣು ಗಂಡಿನ ವಯಸ್ಸು ೧೮-೨೧ ಎಂದು ನಿರ್ಧರಿಸಿದೆ. ಅದರಲ್ಲೂ ಬಾಲ್ಯವಿವಾಹ ನಿಷೇಧವು, ಮಹಿಳಾ ಸುಧಾರಣೆಯೊಂದಿಗೆ ಹಲವಾರು ಭಿನ್ನ ಸಾಮಾಜಿಕ ಸಮಸ್ಯೆಗಳಿಂದ ಬಿಡುಗಡೆ ನೀಡುವ ಅಂಶವಾಗಿರುವುದರಿಂದ ಸರಕಾರ ಹಲವಾರು ಪ್ರಯತ್ನಗಳನ್ನು ಕೈಗೊಂಡಿದೆ. ಹಲವಾರು ಮಹಿಳಾ ಸಂಘಟನೆಗಳು, ಸಾಮೂಹಿಕ ವಿವಾಹಗಳ ಮೇಲೆ ಹದ್ದಿನ ಕಣ್ಣಿಟ್ಟಿವೆ. ಬಾಲ್ಯವಿವಾಹ ಸಮಾಜಕ್ಕೆ ಅಂಟಿಕೊಂಡಿರುವ ಅನಿಷ್ಟ ಪದ್ಧತಿ. ಇದರ ನಿರ್ಮೂಲನೆಗೆ ಪಾಲಕರು, ಪೋಷಕರು, ಪ್ರಜ್ಞಾವಂತ ಯುವಕರು, ನಾಗರಿಕರು ಮುಂದಾಗಬೇಕು. ಗ್ರಾಮೀಣ ಭಾಗದಲ್ಲಿ ಮೂಢನಂಬಿಕೆಯೇ ಬಾಲ್ಯವಿವಾಹಕ್ಕೆ ಕಾರಣವಾಗಿದೆ. ಹೀಗಾಗಿ ಇವರು ಮಕ್ಕಳಿಗೆ ಮೊದಲು ಶಿಕ್ಷಣ ನೀಡಬೇಕು. ಸರಕಾರಗಳು ಅಗತ್ಯ ಯೋಜನೆಗಳನ್ನು ರೂಪಿಸಿ ಅವರ ಮುಂದಿನ ಉತ್ತಮ ಭವಿಷ್ಯಕ್ಕೆ ದಾರಿ ಮಾಡಿ ಕೊಡಬೇಕು. ಈ ಪದ್ಧತಿ ಆಚರಿಸುವವರಿಗೆ ಕಠಿಣ ಶಿಕ್ಷೆ ವಿಧಿಸಬೇಕು. ಮಹಿಳಾ ಸಂಘಟನೆಗಳು, ಸಂಘಸಂಸ್ಥೆಗಳು ಗ್ರಾಮೀಣ ಪ್ರದೇಶದ ಜನರಿಗೆ ಇದರ ಬಗ್ಗೆ ತಿಳುವಳಿಕೆ ನೀಡಬೇಕು. ಆಗ ಮಾತ್ರ ಪದ್ಧತಿ ನಿಯಂತ್ರಣಕ್ಕೆ ಬರಲು, ನಿರ್ಮೂಲನೆ ಆಗಲು ಸಾಧ್ಯವಾಗುತ್ತದೆ. ಇತ್ತೀಚೆಗೆ ಸರಕಾರ ಮತ್ತು ಸಂಘಸಂಸ್ಥೆಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸಹಯೋಗದಲ್ಲಿ ಬಾಲ್ಯವಿವಾಹ ನಿಷೇಧ ಅರಿವು ಆಂದೋಲನಗಳು, ಬಾಲ್ಯವಿವಾಹ ನಿಷೇಧ ಲಾಂಛನಗಳ ಬಿಡುಗಡೆಯೊಂದಿಗೆ ಆರಂಭವಾಗಿರುವುದು ಉತ್ತಮ ಬೆಳವಣಿಗೆಯಾಗಿದೆ.

**ದೇವದಾಸಿ ಪದ್ಧತಿ**

ಯಾದಗಿರಿ ಜಿಲ್ಲೆಯಲ್ಲಿ ರೂಢಿಯಲ್ಲಿರುವ ಮತ್ತೊಂದು ಸಾಮಾಜಿಕ ಪಿಡುಗು ಎಂದರೆ ದೇವದಾಸಿ ಪದ್ಧತಿ. ಇತಿಹಾಸವನ್ನು ಅವಲೋಕಿಸಿದಾಗ ದೇವದಾಸಿ ಪದ್ಧತಿಯು ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ರೂಪದಲ್ಲಿ ರೂಢಿಯಲ್ಲಿದ್ದುದನ್ನು ಗುರುತಿಸಬಹುದು. ಆದರೆ ಒಂದು ಕಾಲದಲ್ಲಿ ಸಾಂಸ್ಕೃತಿಕ ಕೇಂದ್ರಗಳಾಗಿದ್ದ ದೇವದಾಸಿ ವಠಾರಗಳು ಕಾಲಕ್ರಮೇಣ ವೇಶ್ಯಾವಾಟಿಕೆಯ ಕೇಂದ್ರಗಳಾಗಿ ಮಾರ್ಪಾಟಾಗಿದ್ದು, ಸಮಾಜಕ್ಕೆ ಎದುರಾದ ಬೃಹತ್ ಸಮಸ್ಯೆಯಾಗಿದೆ. ಸ್ವಾತಂತ್ರ್ಯ ನಂತರದಲ್ಲೂ ದೇವದಾಸಿ ಪದ್ಧತಿ ಇಲ್ಲಿ ರೂಢಿಯಲ್ಲಿದ್ದು ಕೆಳವರ್ಗದ ಮತ್ತು ಬಡ ಮಹಿಳೆಯರ ಮೇಲೆ ದೌರ್ಜನ್ಯ, ಶೋಷಣೆಗೆ ದಾರಿಯಾಗಿದೆ. ಒಂದು ರೀತಿಯಲ್ಲಿ ಬಡತನ ಮತ್ತು ದೇವದಾಸಿ ಒಂದಕ್ಕೊಂದು ತಳಕು ಹಾಕಿಕೊಂಡಿದೆ ಎನ್ನಬಹುದು. ದೇವದಾಸಿ ಪದ್ಧತಿಯ ಮೂಲವನ್ನು ನೋಡಿದಾಗ ಇದು ದ್ರಾವಿಡ ಸಂಸ್ಕೃತಿಯ ಹಿನ್ನೆಲೆಯಿಂದ ಬಂದಿದ್ದಾಗಿದೆ. ಸಮಾಜದ ಮಹಿಳೆಯರು ಮಾತೃಪೂಜೆ ಅಥವಾ ಮಂತ್ರವಿದ್ಯೆಯಿಂದ ಪ್ರಭಾವಿತರಾಗಿ ಆದಿಶಕ್ತಿಯಾದ ಪಾರ್ವತಿಯ ಅಂಶವಾದ ರೇಣುಕಾ ಅಥವಾ ಯಲ್ಲಮ್ಮನೊಂದಿಗೆ ತಮ್ಮನ್ನು ಗುರುತಿಸಿಕೊಂಡರು. ಯಾದಗಿರಿ ಜಿಲ್ಲೆಯಲ್ಲಿ ದೇವಿಯ ದೇವಾಲಯಗಳು ಹೆಚ್ಚೆಚ್ಚು ಸ್ಥಾಪನೆಯಾಗುತ್ತಾ ಹೋದಂತೆ ಧರ್ಮ ಹಾಗೂ ದೇವದಾಸಿ ಪದ್ಧತಿ ಮಧ್ಯೆ ಸಂಪರ್ಕ ಬೆಳೆದು ಇವರು ಗಣನೀಯ ಪ್ರಮಾಣದಲ್ಲಿ ಹೆಚ್ಚಾದರು. ಹೀಗಾಗಿ ದೇವದಾಸಿ ಪದ್ಧತಿಯನ್ನು ತಮ್ಮ ಸಮಾಜದ ಸಂಸ್ಕೃತಿಯ ಭಾಗವಾಗಿ ನಾವು ಒಪ್ಪಿಕೊಂಡೆವು.

ಹೀಗೆ ಆಧುನಿಕ ಪರಿಕಲ್ಪನೆಯಲ್ಲಿ ದೇವದಾಸಿಯರೆಂದರೆ ವೇಶ್ಯೆಯರು ಎನ್ನುವ ಹಂತಕ್ಕೆ ಬಂದು ತಲುಪಿದೆ. ಸರಕಾರದ ಸಮೀಕ್ಷೆ ಪ್ರಕಾರ ಸುಮಾರು ೬೦,೦೦೦ಕ್ಕಿಂತ ಹೆಚ್ಚು ದೇವದಾಸಿಯರು ಕರ್ನಾಟಕವೊಂದರಲ್ಲೇ ಇದ್ದಾರೆ. ಅದರಲ್ಲಿ ಯಾದಗಿರಿ ಜಿಲ್ಲೆಯಲ್ಲಿ ಇವರ ಸಂಖ್ಯೆ ಹೆಚ್ಚಾಗಿದೆ. ಈ ಪದ್ಧತಿಯನ್ನು ಅನುಸರಿಸುವ ಮಹಿಳೆಯರಲ್ಲಿ ಕೃಷಿ ಕೂಲಿ ಕಾರ್ಮಿಕರು, ಭೂಹೀನರು, ಅನಕ್ಷರಸ್ಥರು, ದಲಿತರು ಹೆಚ್ಚಿನವರಾಗಿದ್ದಾರೆ. ದೇವದಾಸಿ ಪದ್ಧತಿಗೆ ಒಳಪಡುವ ಹೆಣ್ಣಿಗೆ ಮುತ್ತುಕಟ್ಟಿ, ಗೆಜ್ಜೆಪೂಜೆ ಮಾಡಿ ದೇವರ ಜೊತೆ ಮದುವೆ ಶಾಸ್ತ್ರ ಮಾಡುತ್ತಾರೆ. ಈ ವರ್ಗದ ಕುಟುಂಬದಲ್ಲಿ ಹುಟ್ಟಿದ ಹೆಣ್ಣನ್ನು ದೇವರಿಗೆ ಮೀಸಲು ಬಿಡದೆ ಇದ್ದರೆ, ಆ ಸಂಪ್ರದಾಯ ಮುರಿದರೆ ಆ ಕುಟುಂಬವೇ ಸರ್ವನಾಶವಾಗುತ್ತದೆ ಎನ್ನುವ ಧಾರ್ಮಿಕ ನಂಬಿಕೆಯನ್ನು ಅವರ ಮನದಲ್ಲಿ ತುಂಬಿರುತ್ತಾರೆ.

ದೇವದಾಸಿ ಪದ್ಧತಿಗೆ ಒಳಗಾಗುವರಲ್ಲಿ ಹೆಚ್ಚಿನವರು ಸ್ವಯಿಚ್ಛೆಯಿಂದ ಆದವರಲ್ಲ. ಆ ಹೆಣ್ಣಿಗೆ ತಿಳುವಳಿಕೆ ಬರುವ ಪೂರ್ವದಲ್ಲಿಯೇ ಇವರನ್ನು ಪದ್ಧತಿಗೆ ನೂಕಲಾಗುತ್ತದೆ. ಸಂಪ್ರದಾಯ, ಧಾರ್ಮಿಕ ನಂಬಿಕೆಯಿಂದ ದೇವದಾಸಿಯರಾದ ಇವರನ್ನು ಕ್ರಮೇಣ ದುಡಿಮೆಯ ಸರಕನ್ನಾಗಿ ಬಳಸಿಕೊಳ್ಳುತ್ತಾರೆ. ಗುಲಬರ್ಗಾ ಹಾಗೂ ಯಾದಗಿರಿ ಜಿಲ್ಲೆಯ ಕೆಲವು ಹೆಣ್ಣುದೇವತೆಗಳ ದೇವಾಲಯಗಳು ದೇವದಾಸಿ ಪದ್ಧತಿಯ ದೀಕ್ಷೆಯ ಕೇಂದ್ರಗಳಾಗಿವೆ. ಗುಲಬರ್ಗಾ ಜಿಲ್ಲೆಯ ಚಿಂಚೋಳಿ ಹತ್ತಿರದ 'ಮಾಪುರ ತಾಯಿ' ಎನ್ನುವ ಹೆಣ್ಣುದೇವತೆ, ಯಾದಗಿರಿ ಜಿಲ್ಲೆಯ ದೇವರಹಳ್ಳಿ 'ರೇಣುಕಾ ಯಲ್ಲಮ್ಮ' ದೇವಾಲಯದಲ್ಲಿ. ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ದೇವದಾಸಿ ಪದ್ಧತಿಗೆ ಒಳಪಡಿಸುವ ವಿಧಿ-ವಿಧಾನಗಳು ನಡೆಯುತ್ತವೆ.

ಅದರಲ್ಲೂ ಯಾದಗಿರಿ ಜಿಲ್ಲೆಯ ದೇವರಹಳ್ಳಿ ಎಂಬ ಹಳ್ಳಿಯಲ್ಲಿ 'ರೇಣುಕಾ ಯಲ್ಲಮ್ಮ' ಎನ್ನುವ ದೇವರ ಹೆಸರಿನಲ್ಲಿ ಹೆಚ್ಚಾಗಿ ಕೆಳಜಾತಿಯವರ ಎಲ್ಲಾ ಹೆಣ್ಣು ಮಕ್ಕಳನ್ನು ಒಂದು ರೀತಿಯಾಗಿ ಬೆತ್ತಲೆ ಮೆರವಣಿಗೆ ಮಾಡಿ, ಅವರನ್ನು ಈ ಪದ್ಧತಿಗೆ ಒಳಪಡಿಸಿ ಕೆಲವು ಅವಧಿಯ ನಂತರ ಅವರನ್ನು ಮುಂಬಯಿನಂತಹ ದೊಡ್ಡ ಪಟ್ಟಣಗಳಿಗೆ ರವಾನೆ ಮಾಡುವ ದಂಧೆ ಇಲ್ಲಿ ಜೀವಂತವಾಗಿ ಇರುವಂತಹ ಸಂಗತಿಯಾಗಿದೆ. ಇಂದು ಯಾದಗಿರಿ ಜಿಲ್ಲೆಯಲ್ಲಿ ಇರುವ ಒಂದಲ್ಲಾ ಒಂದು ಹೆಣ್ಣುದೇವತೆಗಳಿಗೆ ಸಂಬಂಧಪಟ್ಟಂತೆ, ನಿಷ್ಠೆಯಿಂದ ನಡೆದುಕೊಳ್ಳುತ್ತಿರುವುದರಿಂದ ತಮ್ಮ ಮನೆಯಲ್ಲಿ ಹಿರಿಯವಳಾಗಿ ಹುಟ್ಟಿದ ಮಗುವನ್ನು ದೇವರಿಗೆ ಬಿಡಬೇಕು. ಎನ್ನುವಂಥ ನಂಬಿಕೆಯನ್ನು ಇಟ್ಟುಕೊಂಡು ಬಂದಿದ್ದಾರೆ. ತಮ್ಮ ಹಿರಿಯ ಹೆಣ್ಣುಮಗಳನ್ನು ದೇವರಿಗೆ ಬಿಡಬೇಕು. ಬಿಡದೆ ಇದ್ದರೆ ತಮಗೆ ಕೆಟ್ಟದ್ದಾಗುತ್ತದೆ ಅಥವಾ ಕುಟುಂಬಕ್ಕೆ ಸಂಬಂಧ ಪಟ್ಟಂತೆ ಅವಗಡ ಸಂಭವಿಸುತ್ತದೆ ಎನ್ನುವ ಮೂಢನಂಬಿಕೆ ಬೆಳೆದುಬಿಟ್ಟಿದೆ. ಇವರಿಗೆ ಏನಾದರೂ ಆದರೆ ನಾವು ನಮ್ಮ ಮಕ್ಕಳನ್ನು ದೇವರಿಗೆ ಬಿಟ್ಟಿಲ್ಲ ಅದಕ್ಕೆ ಹೀಗಾಗುತ್ತಿದೆ ಎನ್ನುವ ಮೌಢ್ಯ ಅವರಲ್ಲಿ ಆವರಿಸಿ ಬಿಟ್ಟಿದೆ.

ಹೀಗಾಗಿಯೇ ಈ ಪದ್ಧತಿ ಇನ್ನೂ ಜೀವಂತವಾಗಿರಲು ಕಾರಣವಾಗಿದೆ. ದೇವದಾಸಿ ಪದ್ಧತಿಯ ಬಗ್ಗೆ ವಿಶ್ಲೇಷಣೆ ಮಾಡಿದಾಗ ಈ ಪದ್ಧತಿಗೆ ಒಳಪಡುವವರ ಮನಸ್ಥಿತಿಯ

ಸ್ವರೂಪವನ್ನು ಗಮನಿಸಿದರೆ ದೇವದಾಸಿಯರು ತಾವು ಮಾಡುತ್ತಿರುವ ಕೆಲಸದ ಸ್ವರೂಪದ ಬಗ್ಗೆ ಸ್ವಲ್ಪವೂ ಅಳುಕಿಲ್ಲದೆ ಅದನ್ನು ದೇವಿ ಯಲ್ಲಮ್ಮನ ಪೂಜೆಯೆಂದೇ ಭಾವಿಸಿದ್ದಾರೆ. ಹೀಗಾಗಿ ಈ ವರ್ತನೆ ಅವರಿಗೆ ಯಾವ ರೀತಿಯ ಸಾಮಾಜಿಕ ಕಳಂಕವನ್ನು ತಂದಿಲ್ಲ. ಹಳ್ಳಿಯ ಎಲ್ಲಾ ಶುಭ ಸಮಾರಂಭಗಳಿಗೆ ಇವರಿಗೆ ಅವಕಾಶವಿರುವುದಲ್ಲದೆ ಇವರ ಭಾಗವಹಿಸುವಿಕೆಯು ಶುಭದ ಸಂಕೇತವೆಂದು ಪರಿಗಣಿಸಲಾಗುತ್ತದೆ. ಯಾದಗಿರಿ ಜಿಲ್ಲೆಯಲ್ಲಿ ದೇವದಾಸಿ ಪದ್ಧತಿ ಹೆಚ್ಚಾಗಿ ಕಂಡುಬರಲು ಕಾರಣಗಳನ್ನು ಅಧ್ಯಯನ ಮಾಡಿದಾಗ ತಿಳಿದು ಬರುವುದೇನೆಂದರೆ, ಇಲ್ಲಿನ ಭೌಗೋಳಿಕ ಪರಿಸ್ಥಿತಿ, ಪ್ರಕೃತಿ ವಿಕೋಪ, ಬರಗಾಲ, ಬಡತನ, ಅಜ್ಞಾನ, ಮೂಢನಂಬಿಕೆ, ಬಂಡವಾಳಶಾಹಿಗಳ ಪ್ರಭಾವ, ಅವಿಭಕ್ತ ಕುಟುಂಬ ಹೀಗೆ ಅನೇಕ ಕಾರಣಗಳು ಕಂಡುಬರುತ್ತವೆ. ಅತ್ಯಂತ ಹಿಂದುಳಿದಿರುವ, ನಿರ್ಲಕ್ಷ್ಯಕ್ಕೆ ಒಳಗಾಗಿರುವ ಇಲ್ಲಿ ಕೃಷಿ ಉದ್ಯೋಗವು ಅವರಿಗೆ ಭದ್ರತೆಯನ್ನು ಒದಗಿಸಿಲ್ಲ ಹಾಗೂ ಬೇರೆ ಉದ್ಯೋಗಾವಕಾಶಗಳು ಕಡಿಮೆ ಇವೆ.

ಇನ್ನು ಹಲವರು ತಮ್ಮ ಆರ್ಥಿಕ ಪರಿಸ್ಥಿತಿಗಳಿಂದ ಇದಕ್ಕೆ ಬಲಿಯಾಗಿದ್ದಾರೆ. ದೇವದಾಸಿ ಪದ್ಧತಿಯನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರಕಾರ ಅನೇಕ ಕಾನೂನುಗಳನ್ನು ಜಾರಿಗೆ ತಂದಿದೆ. ದೇವದಾಸಿ ಪದ್ಧತಿ ನಿರ್ಮೂಲನೆಗೆ, ಪುನರ್ವಸತಿಗೆ ಸರಕಾರ ಮತ್ತು ಸಂಘಸಂಸ್ಥೆಗಳು ಅನೇಕ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ೧೯೮೫ರಲ್ಲಿ ಅಥಣಿಯಲ್ಲಿ ದೇವದಾಸಿ ಪುನರ್ವಸತಿ ಸಂಘ ಈ ಪದ್ಧತಿಯ ನಿರ್ಮೂಲನೆಗೆ ಅರ್ಥಪೂರ್ಣ ಕಾರ್ಯಕ್ರಮಗಳನ್ನು ಹಾಕಿಕೊಂಡು ದೊಡ್ಡ ಹೋರಾಟ ಆರಂಭಿಸಿದೆ. ದೇವದಾಸಿಯೊಬ್ಬಳಿಂದಲೇ ಈ ಕಾರ್ಯಕ್ರಮ ಆರಂಭವಾಗಿರುವುದು ಹಾಗೂ ಇದರ ಹೋರಾಟಗಳನ್ನು ಮತ್ತು ಸಂಘಟನೆಯ ಕಾರ್ಯವನ್ನು ಮೆಚ್ಚಿ ಕರ್ನಾಟಕ ಸರಕಾರ ೧೯೯೦ರಲ್ಲಿ ಅದಕ್ಕೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿದೆ. ಹಾಗೆಯೇ ಇತ್ತೀಚೆಗೆ ದೇವದಾಸಿಯವರಿಗೆ ಮಾಸಿಕ ಪಿಂಚಣಿಯನ್ನು ನೀಡಬೇಕು. ದೇವದಾಸಿಯರ ಮಕ್ಕಳಿಗೆ ಪರಿಶಿಷ್ಟ ಜಾತಿ ಮತ್ತು ಮತ್ತು ಪಂಗಡದಲ್ಲಿ ಒಳಮೀಸಲು ಸೌಲಭ್ಯ ಕಲ್ಪಿಸುವಂತೆ ದೇವದಾಸಿ ವಿಮೋಚನೆ ಸಂಘದ ನೇತೃತ್ವದಲ್ಲಿ ಹೋರಾಟ ನಡೆಯುತ್ತಿದೆ.

ಯಾದಗಿರಿ ಜಿಲ್ಲೆಯ ಧಾರ್ಮಿಕ ನಂಬಿಕೆಗೆ, ಮೌಢ್ಯಕ್ಕೆ, ಪಾಳೇಗಾರಿಕೆ ವ್ಯವಸ್ಥೆಗೆ ಬಲಿಯಾಗಿ ತಳ ಸಮುದಾಯದ ಜನತೆ ಈ ಪದ್ಧತಿಯನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಇಂಥ ಅನಿಷ್ಟಕಾರಿ ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ಕ್ರಿಯಾಶೀಲ ಸಂಘಟನೆಗಳು ಕೆಲವು ಅರ್ಥಪೂರ್ಣ ಕಾರ್ಯಕ್ರಮಗಳನ್ನು ನಡೆಸುತ್ತಿವೆ. ದೇವದಾಸಿ ಮಹಿಳೆಯರನ್ನು ಪ್ರಮುಖವಾಹಿನಿಗೆ ತರುವ ಪ್ರಯತ್ನ ಮಾಡುತ್ತಿದೆ. ಗುಲಬರ್ಗಾ ಜಿಲ್ಲೆಯ ಚಿಂಚನೂರಿನಲ್ಲಿ ದೇವದಾಸಿ ಮಹಿಳೆಯರ ಅಭಿವೃದ್ಧಿಗಾಗಿ ಜನವಾದಿ ಮಹಿಳಾ ಸಂಘಟನೆ ಸಹ ಕೆಲಸ ಮಾಡುತ್ತಿದೆ. ಆದರೆ ಎಲ್ಲ ಚಟುವಟಿಕೆಗಳು ದೇವದಾಸಿ ಪದ್ಧತಿಯನ್ನು ಹಿಮ್ಮೆಟ್ಟಿಸುವಿಕೆ ಏನೇನೂ ಸಾಕಾಗುತ್ತಿಲ್ಲ ಎಂಬುದೇ ನವೀನ ಸಂಗತಿ. ಎಲ್ಲಾ ಸಮಸ್ಯೆಗಳ ಜೊತೆಗೆ ಇತರ ಸಾಮಾಜಿಕ ಪಿಡುಗುಗಳಾದ ವರದಕ್ಷಿಣೆ. ಅನಕ್ಷರತೆ. ಜಾತೀಯತೆ. ಅತ್ಯಾಚಾರ. ಮಹಿಳೆಯ ಮೇಲೆ ದೌರ್ಜನ್ಯ. ಲಿಂಗ ಅಸಮಾನತೆ. ವೇತನ ತಾರತಮ್ಯ. ಹೀಗೆ ಅನೇಕ ರೀತಿಯಲ್ಲಿ ಈ ಭಾಗದ ಮಹಿಳೆ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಹಾಗೆಯೇ ಮಹಿಳೆಯರ ಇಂತಹ ಸಮಸ್ಯೆಗಳನ್ನು ಅರಿತುಕೊಂಡು ಅವುಗಳಿಗೆ

ಪರಿಹಾರ ಕಂಡುಕೊಳ್ಳುವಲ್ಲಿ, ನಿವಾರಿಸುವಲ್ಲಿ ಅನೇಕ ಮಹಿಳಾ ಸಂಘಟನೆಗಳು ಕಾರ್ಯ ನಿರ್ವಹಿಸುತ್ತಿವೆ.

**ಯಾದಗಿರಿ ಜಿಲ್ಲೆಯ ಮಹಿಳಾ ಹೋರಾಟಗಾರರು**

೧. ನಾಗರತ್ನಮ್ಮ ವಿ. ಪಾಟೀಲ್

೨. ಮಹಾದೇವಿ ಬೇವಿನಾಳಮಠ

೩. ಸತ್ಯಮ್ಮ ಗಾಜರಕೋಟ್

೪. ಸುನಂದಮ್ಮ ಕೊಂಗಂಡಿ

೫. ಶರಣಮ್ಮ ಹುಣಸಗಿ

೬. ಬಸವಲಿಂಗಮ್ಮ ನಾಟೇಕಾರ

೭. ಸುರೇಖಾ ಕುಲಕರ್ಣಿ

**ಕೊನೆ ಟಿಪ್ಪಣಿಗಳು**

೧. ಯಶವಂತ ಡೋಂಗೆ(ಸಂ), ಅರಿವು ಬರಹ, ಸಂಚಿಕೆ, ೧೯೮೮. ಪುಟ ೨೬.

೨. ವಿಜಯ್ ಪೂಣಚ್ಚ ತಂಬಂಡ, ಚರಿತ್ರೆ ವಿಶ್ವಕೋಶ-೪, ಪುಟ ೮೫೪.

೩. ಚೆನ್ನಬಸವಪ್ಪ ಬೆಟ್ಟದೂರು, ನನ್ನ ಜೀವನಾನುಭವಗಳು, ಪುಟ ೧೧೮ ಮತ್ತು ೧೧೯.

೪. ಕಲುಬುರ್ಗಿವಾಣಿ ಪತ್ರಿಕೆ, ೧.೧.೨೦೦೪, ಪುಟ ೭.

೫. ಹಣಮಂತ್ರಾಯ, ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು, ಅಪ್ರಕಟಿತ ಎಂ.ಫಿಲ್ ನಿಬಂಧ, ಪುಟ೪೬.

೬. ನಾಗರಾಜ್ ಎಂ.ಜಿ., ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು, ಸಂ.೨. ಪುಟ ೧೯೦, ೧೯೧.

೭. ವಿಜಯ್ ಪೂಣಚ್ಚ ತಂಬಂಡ, ರೈತ ಚಳವಳಿಗಳು, ಪುಟ ೬೧.

೮. ತುರುವೀರಾಳ ಚಂದ್ರು, ವಿಜಯ ಕರ್ನಾಟಕ ೨೫.೧೨.೨೦೦೯.

೯. ಮಾಹಿತಿ: ನಿರ್ದೇಶಕರು, ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ, ಗುಲಬರ್ಗಾ

೧೦. ಗೋಪಾಲಕೃಷ್ಣ, ಹೊಸತು ವಿಶೇಷ ಸಂಚಿಕೆ, ೨೦೦೭, ಜನವರಿ, ಪುಟ ೧೨೩.

೧೧. ಸಂದರ್ಶನ: ಉಮೇಶ್ ಕೆ. ಮುದ್ನಾಳ್, ೧೦.೭.೨೦೧೪

೧೨. ವಿನಾಯಕ ಭಟ್, ವಿಜಯ ಕರ್ನಾಟಕ, ೫.೮.೨೦೦೯.

೧೩. ಮುನಿವೆಂಕಟಪ್ಪ ವಿ.(ಸಂ). ದಲಿತ ಚಳವಳಿ ಚರಿತ್ರೆ, ಪುಟ ೫೪೭.

೧೪ ಅರವಿಂದ ಮಾಲಗತ್ತಿ(ಸಂ), ದಲಿತ ಮಾರ್ಗ, ಪುಟ ೬.

೧೫. ಮುನಿವೆಂಕಟಪ್ಪ ವಿ. ದಲಿತ ಚಳವಳಿ ಮತ್ತು ಸಾಹಿತ್ಯ, ಪುಟ ೨೩.

೧೬. ಜಗನ್ನಾಥ ಸಿಂಧೆ, ದಲಿತ ಚಿಂತಕ ಬಿ. ಶ್ಯಾಮಸುಂದರ, ಪುಟ ೩.

೧೭. ಕವಿತಾ ಮಲ್ಲಪ್ಪ, ಬಿ. ಶ್ಯಾಮಸುಂದರ, ಪುಟ ೩೧.

೧೮. ಜಗನ್ನಾಥ ಸಿಂಧೆ, ದಲಿತ ಚಿಂತಕ ಬಿ. ಶ್ಯಾಮಸುಂದರ, ಪುಟ ೫೮.

೧೯. ಪೋತೆ ಹೆಚ್.ಟಿ., ಜಗನ್ನಾಥ ಸಿಂಧೆ, ಬಿ. ಶ್ಯಾಮಸುಂದರ, ಪುಟ ೫೭.

೨೦. ಚಾಂಡಾಳ, ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್. ಅಂಬೇಡ್ಕರ್ ಪ್ರಭಾವ, ಪುಟ ೮೦.

೨೧. ವಿಜಯ್ ಪೂಣಚ್ಚ ತಂಬಂಡ, (ಪ್ರ.ಸಂ.) ಚಿನ್ನಸ್ವಾಮಿ ಸೋಸಲೆ ಎನ್. (ಸಂ.ಸಂ.) ಸಮಕಾಲೀನ ಕರ್ನಾಟಕ, ಪುಟ ೩೫೦.

೨೨. ನಾಗೇಶ್ ಹೆಚ್.ವಿ, ಸಾಮಾಜಿಕ ಚಳವಳಿಗಳು, ಪುಟ ೫೮.

೨೩. ನಾಗರಾಜು ಟಿ., ಸಾಮಾಜಿಕ ಚಳವಳಿಗಳು, ಪುಟ ೧೧೮.

೨೪. ಸೂರ್ಯನಾಥ ಯು. ಕಾಮತ್(ಮು.ಸಂ.)ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ–೩, ಪುಟ ೨೦೫.

೨೫. ವಿಜಯ್ ಪೂಣಚ್ಚ ತಂಬಂಡ (ಪ್ರಸ.ಸಂ). ಚಿನ್ನಸ್ವಾಮಿ ಶೋಸಲೆ ಎನ್. (ಸಂ.ಸಂ). ಸಮಕಾಲೀನ ಕರ್ನಾಟಕ, ಪುಟ ೩೨೮ ಮತ್ತು ೩೨೯.

೨೬. ವಿಷ್ಣುವರ್ಧನ, ದ ರೋಲ್ ಆಫ್ ಡಿ.ಎಸ್.ಎಸ್. ಇನ್ ಕರ್ನಾಟಕ ಅಂಡರ್ ದಿ ಲೀಡರ್‌ಶಿಪ್ ಆಫ್ ಶ್ರೀ ಡಿ.ಜಿ. ಸಾಗರ್, ಅಪ್ರಕಟಿತ ಎಂ.ಫಿಲ್ ನಿಬಂಧ, ಪುಟ ೭೭.

೨೭. ಲಕ್ಷ್ಮಣ್ ತೆಲಗಾವಿ, ಹಿಂದುಳಿದ ವರ್ಗಗಳು ಮತ್ತು ದಲಿತ ಚಳವಳಿಗಳು, ಪುಟ ೧೨೬.

೨೮. ವಿಜಯ ಕರ್ನಾಟಕ, ದಿನಪತ್ರಿಕೆ, ದಿನಾಂಕ ೧೭.೧೦.೨೦೧೧, ಪುಟ ೨.

೨೯. ಎಂ.ಎಸ್.ಕೆ. ಮಿಲ್., ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಪುಟ ೬.

೩೦. ಮಹೇಶ್‌ಕುಮಾರ್ ಎಸ್. ಸಂಕನೂರು, ಗುಲ್ಬರ್ಗಾ ಎಂ.ಎಸ್.ಕೆ. ಮಿಲ್: ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ ನಿಬಂಧ, ಪುಟ ೬೧.

೩೧. ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ(ಸಂ), ರಾಯಚೂರು ಜಿಲ್ಲಾ ದರ್ಶನ, ಪುಟ ೪೧.

೩೨. ವಿಜಯಕರ್ನಾಟಕ, ದಿನಾಂಕ ೨೦.೬.೨೦೧೦, ಪುಟ ೨.

೩೩. ಗೀತಾ ಅಣ್ಣೆಪ್ಪ, ಕಮ್ಯೂನಿಸ್ಟ್ ಮೂಮೆಂಟ್ ಇನ್ ಗುಲಬರ್ಗಾ ಡಿಸ್ಟ್ರಿಕ್ಟ್, ಅಪ್ರಕಟಿತ ಎಂ.ಫಿಲ್ ನಿಬಂಧ, ಪುಟ ೧೧೯.

೩೪. ವಿಜಯ್ ಪೂಣಚ್ಚ ತಂಬಂಡ, (ಸಂ) ಚರಿತ್ರೆ ವಿಶ್ವಕೋಶ ೪, ಪುಟ ೮೪೮.

೩೫. ವಿಜಯ್ ಪೂಣಚ್ಚ ತಂಬಂಡ, (ಪ್ರ.ಸಂ.), ಚಿನ್ನಸ್ವಾಮಿ ಸೋಸಲೆ ಎನ್. (ಸಂ.ಸಂ) ಸಮಕಾಲೀನ ಕರ್ನಾಟಕ ಸಂಪುಟ ೬, ಪುಟ ೩೯೩.

೩೬. ಚಿನ್ನಸ್ವಾಮಿ ಸೋಸಲೆ ಎನ್.(ಸಂ.ಸಂ).. ಸಮಕಾಲೀನ ಕರ್ನಾಟಕ, ಪುಟ ೬೩೧.

೩೭. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪುಟ ೨೭೫.

೩೮. ಮೀನಾಕ್ಷಿ ಬಾಳಿ: 'ಚಿವುಟದಿರಿ'(ಹೆಣ್ಣು ಭ್ರೂಣ ಹತ್ಯೆ ಕುರಿತು ಲೇಖನಗಳು), ಪುಟ ೧.

೩೯. ವಿಜಯಕುಮಾರಿ ಎಸ್. ಕರಿಕಲ್, ಮಹಿಳೆ ಮತ್ತು ಸಮಾಜ, ಪುಟ ೩.

೪೦. ರಂಗರಾಜ ವನದುರ್ಗ(ಸಂ), ಕನ್ನಡ ಸಾಹಿತ್ಯ ಮತ್ತು ಜನಪರ ಚಳವಳಿ, ಪುಟ ೧೪೦.

೪೧. ವೆಂಕಟೇಶ್ ಕೆ., ಸರೋಜಾ ಬಿ., ಹೈದರಾಬಾದ್ ಕರ್ನಾಟಕದ ವರ್ತಮಾನದ ತಲ್ಲಣಗಳು, ಪುಟ ೫೯.

೪೨. ಮೀನಾಕ್ಷಿ ಬಾಳಿ(ಸಂ),ಚಿವುಟದಿರಿ ಚಿಗುರ(ಹೆಣ್ಣು ಭ್ರೂಣಹತ್ಯೆ ಕುರಿತು ಲೇಖನಗಳು), ಪುಟ ೪೧.

# ಅಧ್ಯಾಯ : ಐದು

# ಸಾಮಾಜಿಕ ಚಳುವಳಿಗಳಲ್ಲಿ ಧರ್ಮ ಮತ್ತು ಸರ್ಕಾರಗಳ ಪಾತ್ರ

ಅಧ್ಯಾಯ : ಐದು

# ಸಾಮಾಜಿಕ ಚಳುವಳಿಗಳಲ್ಲಿ ಧರ್ಮ ಮತ್ತು ಸರ್ಕಾರಗಳ ಪಾತ್ರ

ಯಾದಗಿರಿ ಜಿಲ್ಲೆಯ ಅಭಿವೃದ್ಧಿಗಾಗಿ ಅಥವಾ ಸಮಾಜ ಪರಿವರ್ತನೆಗಾಗಿ ನಡೆದುಬಂದಿರುವ ಮತ್ತು ಪ್ರಸ್ತುತ ನಡೆಯುತ್ತಿರುವ ಸಾಮಾಜಿಕ ಚಳುವಳಿಗಳನ್ನು ಅಧ್ಯಯನ ಮಾಡುತ್ತಾ ಹಾಗೂ ವಿಶ್ಲೇಷಣೆಗೆ ಒಳಪಡಿಸುತ್ತಾ ಹೋದಾಗ ಮುಖ್ಯವಾಗಿ ನಮ್ಮ ಗಮನಕ್ಕೆ ಬರುವ ಅಂಶವೆಂದರೆ ಸಾಮಾಜಿಕ ಚಳುವಳಿಗಳಲ್ಲಿ ಮಠ ಮಾನ್ಯಗಳು, ಮಸೀದಿಗಳು, ಚರ್ಚ್‌ಗಳು ಅಪಾರ ಕೊಡುಗೆಯನ್ನು ನೀಡಿರುವುದು. ಅದರಲ್ಲೂ ವಿಶೇಷವಾಗಿ ಮಠಮಾನ್ಯಗಳು ಜಾತ್ಯತೀತವಾಗಿ ಸಮಾಜದ ಪರಿವರ್ತನೆಯಲ್ಲಿ ತೊಡಗಿಸಿಕೊಂಡಿರುವುದು ಗಮನಾರ್ಹವಾಗಿದೆ. ಯಾದಗಿರಿ ಜಿಲ್ಲೆಯು ಅನೇಕ ಧರ್ಮಗಳ ನೆಲೆವೀಡಾಗಿದೆ. ಇಲ್ಲಿ ಹಿಂದೂಗಳು, ಮುಸ್ಲಿಮರು, ಕ್ರೈಸ್ತರು ಧಾರ್ಮಿಕ ಕ್ಷೇತ್ರಕ್ಕೆ, ಸಮಾಜಕ್ಕೆ ಅಪಾರ ಕೊಡುಗೆ ಸಲ್ಲಿಸಿದ್ದಾರೆ. ಹಾಗೆಯೇ ಇಲ್ಲಿನ ಜನರ ಬದುಕನ್ನು ರೂಪಿಸುವಲ್ಲಿ, ಚಟುವಟಿಕೆಗಳನ್ನು ಸಂಘಟಿಸುವಲ್ಲಿ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೆಚ್ಚಿಸುವಲ್ಲಿ ಸಾಮಾಜಿಕ ಸುಧಾರಣೆಯಲ್ಲಿ ಮತೀಯ ಸಾಮರಸ್ಯ ಕಾಪಾಡುವಲ್ಲಿ ಪ್ರತಿಯೊಂದು ಧರ್ಮವು ಸಮಾಜದ ಸುಧಾರಣೆಯಲ್ಲಿ ಬೆಳವಣಿಗೆಯ ನೆರವು ನೀಡಿದೆ ಮತ್ತು ನೀಡುತ್ತಿದೆ.

### ೫.೧. ಸಾಮಾಜಿಕ ಚಳುವಳಿಗಳಲ್ಲಿ ಮಠ, ಮಸೀದಿ ಹಾಗೂ ಚರ್ಚ್‌ಗಳ ಪಾತ್ರ

ಸರಕಾರಗಳು ಮಾಡಲಾರದಂತಹ ಅಥವಾ ಸುಲಭಸಾಧ್ಯವಾಗದಂತಹ ಎಷ್ಟೋ ಸಾಮಾಜಿಕ ಸುಧಾರಣೆಗಳನ್ನು ಮಠಗಳು, ಮಸೀದಿಗಳು, ಚರ್ಚ್‌ಗಳು ಕೈಗೊಂಡಿವೆ. ಇವು "ಹಿಂದಿನಿಂದಲೂ ಸಾಮಾಜಿಕವಾಗಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ತಮ್ಮನ್ನು ವಿಭಿನ್ನ ರೀತಿಯಲ್ಲಿ ತೊಡಗಿಸಿಕೊಂಡು ಇಂದಿಗೂ ಸಮಾಜದ ಏಳಿಗೆಯ ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಇಂದಿನ ಪರಿಸ್ಥಿತಿಯಲ್ಲಿ ಇದು ಅವಶ್ಯಕವೂ ಆಗಿದೆ. ಏಕೆಂದರೆ ಪ್ರತಿಯೊಂದು ಸಮಾಜವು ಸಹ ತನ್ನದೇ ಆದ ಸಾಮಾಜಿಕ ಸಮಸ್ಯೆಗಳನ್ನು ಹೊಂದಿರುತ್ತದೆ. ಸಮಸ್ಯೆಗಳಿಲ್ಲದ ಸಮಾಜವಿಲ್ಲ. ಹೀಗಾಗಿ ಮನುಷ್ಯರು ಸಮಾಜ ಉದಯವಾದಾಗಿನಿಂದಲೂ ಹಲವಾರು ಬಗೆಯ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಾ ಬಂದಿದ್ದಾರೆ. ಅದರಲ್ಲೂ ಆಧುನಿಕ ಸಮಾಜವು ವಿಘಟನೆಗೆ ಗುರಿಯಾಗಿರುವ ಸಂದರ್ಭದಲ್ಲಿ ಅದು ಎಷ್ಟರಮಟ್ಟಿಗೆ ವಿಘಟನೆಗೊಂಡಿರುವುದೋ ಅಷ್ಟೇ ಪ್ರಮಾಣದಲ್ಲಿ ಸಾಮಾಜಿಕ

ಪ್ರಮಾಣದಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಾ ನಡೆದಿದ್ದಾರೆ. ಹಾಗೆಯೇ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಮಸ್ಯೆಗಳ ಕುರಿತು, ಅದರ ಪರಿಹಾರೋಪಾಯಗಳನ್ನು ಕುರಿತು ವಿವಿಧ ರೀತಿಯಲ್ಲಿ ಅಭಿಪ್ರಾಯಗಳು ವ್ಯಕ್ತವಾಗುತ್ತವೆ."[1] ಈ ದಿಸೆಯಲ್ಲಿ ಕೆಲವು ವ್ಯಕ್ತಿಗಳು, ಸಂಘಟನೆಗಳು, ಸರಕಾರಗಳು ಪರಿಹಾರೋಪಾಯಗಳನ್ನು ಕಂಡುಕೊಳ್ಳುವಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿವೆ. ಆದರೆ ಇಷ್ಟರಿಂದಲೇ ಸಮಾಜದ ಸುಧಾರಣೆ ಆದದ್ದು ಬಹಳ ಕಡಿಮೆ. ಇಂತಹ ಪ್ರಯತ್ನಗಳ ಜೊತೆಗೆ ಸಮಾಜದ ಭಾಗವಾಗಿರುವ ಮಠಗಳ, ಮಸೀದಿಗಳ, ಚರ್ಚ್‌ಗಳ ಪಾತ್ರ ಬಹಳ ದೊಡ್ಡದು.

### ಮಠಗಳ ಪಾತ್ರ

ಹೈದರಾಬಾದ್ ಕರ್ನಾಟಕವು ಶತಶತಮಾನಗಳಿಂದಲೂ ಸಾಮಾಜಿಕವಾಗಿ ಮತ್ತು ಧಾರ್ಮಿಕ ವಾಗಿ ಮಹತ್ವದ ಸ್ಥಾನಮಾನವನ್ನು ಪಡೆದಿದೆ. ಹನ್ನೆರಡನೆಯ ಶತಮಾನದಲ್ಲಿ ಬಾಳಿ ಬದುಕಿದ ಬಸವಾದಿ ಶಿವಶರಣರ ಕರ್ಮಭೂಮಿಯಾಗಿದೆ. ವಚನ ಸಾಹಿತ್ಯದ ಜನ್ಮಭೂಮಿಯಾಗಿ ಸಾಮಾಜಿಕ, ಆರ್ಥಿಕ, ಧಾರ್ಮಿಕ ಕ್ರಾಂತಿಯ ಯಶೋಭೂಮಿಯಾಗಿ ವಿಶಿಷ್ಟವಾದ ಮಹಾನ್ ಪರಂಪರೆಯನ್ನು ನಡೆಸಿಕೊಂಡು ಬಂದಿರುವ ಪ್ರದೇಶವಾಗಿದೆ. ೧೨ನೇ ಶತಮಾನದ ಶಿವಶರಣರು ಅನೇಕ ಕ್ರಾಂತಿ ಕಾರಕ ಬದಲಾವಣೆಗಳನ್ನು ಮಾಡಿದ ನಂತರ ಅವರ ಪ್ರಭಾವ ಇಂದಿಗೂ ಈ ಭಾಗದ ಜನಜೀವನದ ಮೇಲೆ ಸಾಕಷ್ಟು ಪ್ರಭಾವ ಬೀರುತ್ತಿದೆ. ಇಂತಹ ಬಸವಾದಿ ಶರಣರ ಪರಂಪರೆಯನ್ನು ತಮ್ಮ ಜೀವನದುದ್ದಕ್ಕೂ ನಡೆನುಡಿಗಳಲ್ಲಿ ಅಳವಡಿಸಿಕೊಂಡು ಸಮಾಜದ ಸುಧಾರಣೆಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಂತಹ ಮಹಾನ್ ಸುಧಾರಕರು ಇಲ್ಲಿ ಬಾಳಿ ಬದುಕಿದ್ದಾರೆ ಮತ್ತು ಈಗಲೂ ಆ ಪರಂಪರೆಯನ್ನು ಮುಂದುವರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದಾಗಿದೆ.

### ಶ್ರೀ ಶರಣಬಸವೇಶ್ವರ ಸಂಸ್ಥಾನ–ಕಲಬುರಗಿ

ಈ ಭಾಗದ ಸಮಾಜ ಸುಧಾರಣೆಯಲ್ಲಿ ಕಲಬುರ್ಗಿಯ ಶ್ರೀ ಶರಣಬಸವೇಶ್ವರ ಸಂಸ್ಥಾನ ಮಠದ ಪಾತ್ರವು ಬಹುಮುಖ್ಯ ಪಾತ್ರ ವಹಿಸಿದೆ. ಮಠವು ಜಾತ್ಯತೀತ ಸಿದ್ಧಾಂತವನ್ನಿಟ್ಟುಕೊಂಡು, ಸೌಜನ್ಯತೆ, ಭ್ರಾತೃತ್ವ ತತ್ವಕ್ಕೆ ಒತ್ತುಕೊಟ್ಟು ಆದರ್ಶ ತತ್ವ ಸಿದ್ಧಾಂತಕ್ಕೆ ಅನುಗುಣವಾಗಿ ಧರ್ಮ, ಸಮಾಜ ಸುಧಾರಣೆಯ ಕಾರ್ಯದಲ್ಲಿ ತೊಡಗಿಸಿಕೊಂಡಿದೆ. "ಮಹಾದಾಸೋಹಿ ಶರಣಬಸವರು ೧೮೨೨ರಲ್ಲಿ ಲಿಂಗೈಕ್ಯರಾದ ನಂತರ ಅವರ ಸಮಾಧಿಯ ಮೇಲೆ ಪ್ರಸ್ತುತ ದೇವಾಲಯವು ನಿರ್ಮಾಣವಾಯಿತು. ಇದು ಈ ಭಾಗದ ಜನರ ಭಕ್ತಿ ಮತ್ತು ನಂಬಿಕೆಗೆ ಪಾತ್ರವಾಗಿದ್ದು ಎಲ್ಲಾ ವರ್ಗದ ಜನರಿಗೆ ಆಶ್ರಯ ನೀಡುತ್ತಾ, ಜನರನ್ನು ಆಕರ್ಷಿಸುತ್ತಾ ಜಾಗೃತ ಕೇಂದ್ರವಾಗಿದೆ. ಅಲ್ಲಿಂದ ಇಲ್ಲಿಯವರೆಗೆ ೮ ಜನ ಮಹಾದಾಸೋಹ ಪೀಠಾಧಿಪತಿಗಳಾಗಿ ಇಲ್ಲಿನ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಸುಧಾರಣೆಯಲ್ಲಿ ನಿರತರಾಗಿದ್ದಾರೆ. ಸುಮಾರು ೨ ಶತಮಾನಗಳಿಂದ ಇಲ್ಲಿ ಅನ್ನ ದಾಸೋಹವನ್ನು ಪ್ರಾರಂಭಿಸಿ ಅನಾಥರ, ಬಡವರ ಪಾಲಿಗೆ ಆಶ್ರಯದಾತರಾಗಿದ್ದಾರೆ. ಇಂದಿಗೂ ಸಾವಿರಾರು ವಿದ್ಯಾರ್ಥಿಗಳು ಪ್ರಸಾದ ನಿಲಯದಲ್ಲಿ ಆಶ್ರಯ ಪಡೆದು ಉಚಿತ ಊಟ, ವಸತಿ, ಶಿಕ್ಷಣ ಪಡೆಯುತ್ತಿದ್ದಾರೆ.

ಶೈಕ್ಷಣಿಕವಾಗಿ ಅತಿ ಹಿಂದುಳಿದಿದ್ದ ಈ ಭಾಗದಲ್ಲಿ ಕ್ರಿ.ಶ. ೧೯೦೩ರಲ್ಲಿ ಕನ್ನಡ ಶಾಲೆಯನ್ನು ಆರಂಭಿಸುವುದರ ಮೂಲಕ ಶರಣಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಗೆ ಅಸ್ತಿಭಾರ ಹಾಕಲಾಯಿತು.

ಕ್ರಿ.ಶ. ೧೯೧೮ರಲ್ಲಿ ಪೂಜ್ಯಶ್ರೀ ದೊಡ್ಡಪ್ಪ ಅಪ್ಪ, ಶರಣಬಸವೇಶ್ವರ ವಿದ್ಯಾವರ್ಧಕ ಸಂಘ ಸ್ಥಾಪಿಸಿ, ಆ ಮೂಲಕ ಹಲವಾರು ವಿದ್ಯಾಸಂಸ್ಥೆಗಳನ್ನು ಪ್ರಾರಂಭಿಸುವುದರ ಜೊತೆಗೆ, ಇಂಗ್ಲಿಷ್ ಹಾಗೂ ಉರ್ದು ಭಾಷೆಗಳ ಆಡಳಿತ ಮತ್ತು ಶಿಕ್ಷಣ ಮಾಧ್ಯಮಗಳಾಗಿದ್ದ ಕಾಲದಲ್ಲಿ, ಪುರುಷರಿಗೆ ಶಿಕ್ಷಣ ಸಿಗುವುದು ದುರ್ಬಲವಾಗಿದ್ದ ಆ ಕಾಲದಲ್ಲಿ ಮಹಿಳೆಯರು ಪರದೆಯ ಹಿಂದೆ ಇರುತ್ತಿದ್ದ ಆ ಸಂದರ್ಭದಲ್ಲಿ, ಸ್ತ್ರೀಯರನ್ನು ಸುಶಿಕ್ಷಿತರನ್ನಾಗಿಸಲು ೧೯೩೪ರಲ್ಲಿ ಪ್ರಪ್ರಥಮವಾಗಿ ಹೆಣ್ಣುಮಕ್ಕಳ ಕನ್ನಡ ಶಾಲೆಯನ್ನು ತೆರೆದು ಅವರಿಗೆಲ್ಲ ಉಚಿತ ಶಿಕ್ಷಣ ನೀಡಿದರು."[೨] ಇಂದು ಈ ಸಂಸ್ಥೆಯು ಬೆಳೆದು ಈ ಭಾಗದ ಪ್ರತಿಷ್ಠಿತ ಸಂಸ್ಥೆಯಾಗಿ ಸುಮಾರು ೪೨ ಶೈಕ್ಷಣಿಕ ಸಂಸ್ಥೆಗಳನ್ನು ಹಾಗೂ ೧೬,೦೦೦ ವಿದ್ಯಾರ್ಥಿಗಳನ್ನು ಹೊಂದಿದೆ.

"೧೯೮೩ರಲ್ಲಿ ೮ನೇ ಮಹಾದಾಸೋಹ ಪೀಠಾಧಿಪತಿಗಳಾಗಿ ಪೀಠ ಅಲಂಕರಿಸಿರುವ ಪೂಜ್ಯ ಡಾ. ಶರಣಬಸವಪ್ಪ ಅಪ್ಪ ಅವರು ಅನೇಕ ಶಾಲೆ, ಕಾಲೇಜುಗಳ ಜೊತೆಗೆ ಉನ್ನತವಾದ ತಾಂತ್ರಿಕ ಶಿಕ್ಷಣ ಸಂಸ್ಥೆಗಳು ಸೇರಿದಂತೆ ಅನೇಕ ಶಿಕ್ಷಣ ಸಂಸ್ಥೆಗಳ ಮೂಲಕ ಗುಣಮಟ್ಟದ ಶಿಕ್ಷಣ ನೀಡುವ ಮೂಲಕ ಇಲ್ಲಿನ ಜನರ ಜ್ಞಾನದ ಹಸಿವು ನೀಗಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಸಂಸ್ಥೆಯ ಶಿಕ್ಷಣ ಸೌಲಭ್ಯಗಳು ಜನರ ಸಾಮಾಜಿಕ ಪರಿವರ್ತನೆಗೆ ದಾರಿ ಮಾಡಿಕೊಟ್ಟಿವೆ. ಇದರ ಜೊತೆಗೆ ವಿಜ್ಞಾನ ದಾಸೋಹ, ಜ್ಞಾನ ದಾಸೋಹ, ಕಲಾ ದಾಸೋಹ ಎಂಬಂತಹ ಹೊಸ ತತ್ವಗಳ ದರ್ಶನ ಮಾಡಿಸುತ್ತಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಶರಣಬಸವೇಶ್ವರ ಶಿಕ್ಷಣ ಸಂಸ್ಥೆಗಳು ಇಂದಿನ ಜನತೆಗೆ ಏನು ಬೇಕು ಹಾಗೂ ಮುಂದಿನ ಕಾಲಮಾನವನ್ನು ಕಟ್ಟಲು ಏನು ಮಾಡಬೇಕಾಗಿದೆ ಎಂಬುದರತ್ತ ತಮ್ಮ ಗಮನವನ್ನು ಕೇಂದ್ರೀಕರಿಸುತ್ತಾ ಮುಂದುವರಿದಿವೆ."[೩] "ದಾಸೋಹ ಧರ್ಮವನ್ನು ಎಲ್ಲ ವರ್ಗದ ಜನಾಂಗಕ್ಕೆ ಶರಣಬಸವಪ್ಪ ಅಪ್ಪ ಅವರು ಸಾರ್ವತ್ರಿಕಗೊಳಿಸಿದ್ದಾರೆ. ಇದು ವೀರಶೈವರಿಗಷ್ಟೇ ಆಗಿರದೆ ವಿಶ್ವಮಾನವೀಯ ವೈಶಾಲ್ಯವನ್ನು ಪಡೆದಿದೆ."[೪] ಮತೀಯ ಭಾವೈಕ್ಯ ರೂಪಿಸುವಲ್ಲಿ ಮಹತ್ವದ ಪವಿತ್ರ ತಾಣವಾಗಿರುವ ಶರಣ ಬಸವೇಶ್ವರ ಮಹಾದಾಸೋಹ ಸಂಸ್ಥಾನದಲ್ಲಿ ಮುಸ್ಲಿಮರನ್ನೊಳಗೊಂಡು ಎಲ್ಲ ಜನಾಂಗದವರ ದರ್ಶನಕ್ಕೆ, ಪ್ರಸಾದಕ್ಕೆ, ಶಿಕ್ಷಣಕ್ಕೆ ಮುಕ್ತ ಅವಕಾಶವಿದೆ.

### ಮಸೀದಿಗಳ ಪಾತ್ರ

ಬಹುಹಿಂದಿನಿಂದಲೂ ಮಸೀದಿಗಳು ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಇದರಿಂದಾಗಿ ಇಂದಿಗೂ ಮುಸ್ಲಿಂ ಸಮುದಾಯದ ಮೇಲೆ ಸಾಕಷ್ಟು ನಿಯಂತ್ರಣ ಇಟ್ಟುಕೊಂಡಿರುವ ಸಂಸ್ಥೆ ಎಂದರೆ ಮಸೀದಿಗಳು. ಇವು ಸಮಾಜದ ಸುಧಾರಣೆಯಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತಾ ಬಂದಿವೆ. ಮಸೀದಿಗಳಲ್ಲಿ ಮೂರು ವಾಸ್ತು ರಚನೆಗಳಿವೆ. ದಿನನಿತ್ಯ ನಮಾಜು ಮಾಡುವ ಸ್ಥಳವೇ ಮಸೀದಿ. ಅಲ್ಲದೆ ವರ್ಷದಲ್ಲಿ ರಂಜಾನ್ ಮತ್ತು ಬಕ್ರೀದ್ ಹಬ್ಬಗಳಲ್ಲಿ ಇಡೀ ಊರಿನ ಮುಸ್ಲಿಮರು ಸೇರಿ ನಮಾಜು ಮಾಡುವ ಸ್ಥಳ ಈದ್ಗಾ. ಇವು ಸಾಮಾನ್ಯವಾಗಿ ಊರ ಹೊರಗಿರುತ್ತವೆ. ಇನ್ನು ಸೂಫಿ ಸಂತರ ಸಮಾಧಿಗಳಿರುವ ಸ್ಥಳಗಳನ್ನೇ ದರ್ಗಾಗಳು ಎನ್ನಲಾಗುತ್ತದೆ. ಹೀಗೆ ಮಸೀದಿಗಳು ಮೂಲಭೂತ ಇಸ್ಲಾಮಿನ ನಮಾಜು ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ.

ಕೆಲವು ಮಸೀದಿಗಳು ಧಾರ್ಮಿಕ ಕೇಂದ್ರಗಳಾಗಿರುವುದರ ಜೊತೆಗೆ ಶೈಕ್ಷಣಿಕ ಕೇಂದ್ರಗಳೂ ಆಗಿವೆ. ಮಸೀದಿಗಳಲ್ಲಿ ಉರ್ದು, ಪರ್ಶಿಯನ್, ಅರೇಬಿಕ್ ಭಾಷೆಯ ಶಿಕ್ಷಣವನ್ನು ನೀಡುತ್ತಾ ಬಡ ಮತ್ತು ಅನಾಥ ಮಕ್ಕಳಿಗೆ ದಾರಿ ದೀಪಗಳಾಗಿವೆ. ಮಸೀದಿಗಳಲ್ಲಿ ಉಚಿತ ವಸತಿ, ಊಟ, ಬಟ್ಟೆ ನೀಡಿ ಆಶ್ರಯ ಕೊಟ್ಟು ಮಕ್ಕಳು ದಾರಿ ತಪ್ಪಿ ಹೋಗದಂತೆ ನೋಡಿಕೊಳ್ಳುತ್ತಾರೆ. ಇನ್ನು ಮುಸ್ಲಿಂ ವಿದ್ಯಾರ್ಥಿಗಳು ಬೇರೆ ರೀತಿಯ ಶಿಕ್ಷಣದಲ್ಲಿ ಆಸಕ್ತಿ ಇದ್ದು ವಿದ್ಯಾಭ್ಯಾಸ ಕೈಗೊಂಡರೆ ಬಾಲಕ ಮತ್ತು ಬಾಲಕಿಯರಿಬ್ಬರಿಗೂ ವಿದ್ಯಾರ್ಥಿವೇತನ ನೀಡಿ ಪ್ರೋತ್ಸಾಹಿಸುತ್ತಿವೆ. ಮಸೀದಿಗಳು ನೀಡುವ ಸಹಾಯಧನದಿಂದ ಇಂದು ಎಷ್ಟೋ ಬಡ ಮತ್ತು ಅನಾಥ ಮಕ್ಕಳು ಶಾಲಾಕಾಲೇಜುಗಳಿಗೆ ಸೇರಿಕೊಂಡು ವಿದ್ಯಾಭ್ಯಾಸ ಮಾಡಿ ಉನ್ನತ ಅಧಿಕಾರದಲ್ಲಿದ್ದಾರೆ. ಇಂದು ವಿದ್ಯಾಭ್ಯಾಸ ಮಾಡುತ್ತಿರುವ ಮುಸ್ಲಿಂ ವಿದ್ಯಾರ್ಥಿಗಳನ್ನು ನೋಡಿದರೆ ಶ್ರೀಮಂತ ಕುಟುಂಬದಿಂದ ಬಂದ ಮುಸ್ಲಿಂ ವಿದ್ಯಾರ್ಥಿಗಳಿಗಿಂತ ಮಸೀದಿಗಳಿಂದ ಸಹಾಯಧನ ಪಡೆದು ಬದುಕುತ್ತಿರುವ ವಿದ್ಯಾರ್ಥಿಗಳೇ ಹೆಚ್ಚಾಗಿ ಕಂಡುಬರುತ್ತಾರೆ.

ಈ ಜಿಲ್ಲೆಯ ಶೈಕ್ಷಣಿಕ ಕ್ಷೇತ್ರಕ್ಕೆ ಅಲ್ಪಸಂಖ್ಯಾತ ಸಮುದಾಯಗಳೂ ಕೂಡ ತಮ್ಮ ಕೊಡುಗೆ ಸಲ್ಲಿಸುತ್ತಿವೆ. ಈ ಭಾಗದಲ್ಲಿ ಅನೇಕ ಮುಸ್ಲಿಂ ಶಿಕ್ಷಣ ಸಂಸ್ಥೆಗಳ ಸ್ಥಾಪನೆಯಿಂದಾಗಿ ಇಲ್ಲಿನ ಮುಸ್ಲಿಮರ ಜೊತೆಗೆ ಇತರ ವರ್ಗಗಳ ಶೈಕ್ಷಣಿಕ ಬೆಳವಣಿಗೆಗೂ ಪ್ರಮುಖ ಪಾತ್ರವಹಿಸುತ್ತಾ ಬಂದಿವೆ. ಗುಲಬರ್ಗಾ ಜಿಲ್ಲೆಯ ದೊಡ್ಡ ಶಿಕ್ಷಣ ಸಂಸ್ಥೆ ಎಂದರೆ 'ಖಾಜಾ ಎಜ್ಯುಕೇಷನ್ ಸೊಸೈಟಿ.' ೧೯೬೦ರ ಸುಮಾರಿನಲ್ಲಿ ಸ್ಥಾಪನೆಯಾದ ಸಂಸ್ಥೆಯು ಕೆ.ಬಿ.ಎನ್. ಇಂಜಿನಿಯರಿಂಗ್ ಕಾಲೇಜ್, ಕೆ.ಬಿ.ಎನ್. ಆಸ್ಪತ್ರೆಗಳನ್ನು ನಡೆಸುತ್ತಿದೆ. ಹಾಗೆಯೇ ಮಹಿಳೆಯರಿಗಾಗಿ ಉನ್ನತ ಶಿಕ್ಷಣ ಒದಗಿಸಲು ಬೀಬಿ ಈರುಾ ಪದವಿಪೂರ್ವ ಮತ್ತು ಪದವಿ ಮಹಾವಿದ್ಯಾಲಯ ದೊಡ್ಡದಾಗಿ ಬೆಳೆದಿವೆ. ಗುಲಬರ್ಗಾ ಅಲ್ಲದೇ ಇತರ ಜಿಲ್ಲೆ ಹಾಗೂ ಸ್ಥಳಗಳಲ್ಲಿ ಶಿಕ್ಷಣ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ಹೀಗೆ ಮುಸ್ಲಿಂ ಶಿಕ್ಷಣ ಸಂಸ್ಥೆಗಳು ಪ್ರಾರಂಭಗೊಂಡಿದ್ದರಿಂದಾಗಿ ಆ ಸಮುದಾಯ ದವರಿಗೆ ಜಾಗೃತಿಯುಂಟಾಗಿ ಅವರಿಗೆ ಪ್ರೇರಣೆ ಮತ್ತು ಪ್ರೋತ್ಸಾಹದ ಜೊತೆಗೆ ಸಹಾಯ ಸೌಲಭ್ಯಗಳು ದೊರೆತು ಶಿಕ್ಷಣ ಪ್ರಸಾರವಾಗಿ ಸಮಾಜವು ಅಭಿವೃದ್ಧಿಯಾಗಲು ಕಾರಣವಾಗಿದೆ.

ಆದರೆ ಜನ ಸಂಸ್ಕೃತಿಗೆ ಸಂಬಂಧಿಸಿದಂತೆ, ಸಾಮಾಜಿಕ ಕೊಡುಗೆಗೆ ಸಂಬಂಧಿಸಿದಂತೆ ಧರ್ಮವನ್ನು ಹೊರತುಪಡಿಸಿ ಸಾಮಾಜಿಕ ಕಳಕಳಿಯ ಮೇಲೆ ಸಮಾಜದಲ್ಲಿ ಮೇಲು, ಕೀಳು ಇಕ್ಕಟ್ಟುಗಳ ನಡುವೆ ಮಸೀದಿಗಳು ತಮ್ಮನ್ನು ತೊಡಗಿಸಿಕೊಂಡಿದ್ದು ಕಡಿಮೆ ಎನ್ನುವುದು ಪ್ರಸ್ತುತ ಅಧ್ಯಯನದ ಮಿತಿಯಲ್ಲಿ ಕಂಡುಬರುತ್ತದೆ. ಹಾಗೆಯೇ ಭಾರತೀಯ ಶಿಕ್ಷಣ ವ್ಯವಸ್ಥೆಗೆ ಹೋಲಿಸಿದರೆ ಬೇರೆ ಧರ್ಮಗಳು, ಮಠಗಳು ಸಾರ್ವತ್ರಿಕ ಶಿಕ್ಷಣಕ್ಕೆ ನೀಡುವ ಪ್ರಾಮುಖ್ಯತೆಗೆ ಹೋಲಿಸಿಕೊಂಡರೆ ಇಲ್ಲಿ ಅಂದರೆ ಮಸೀದಿ ಮತ್ತು ಮದರಸಗಳಲ್ಲಿ ಶಿಕ್ಷಣಕ್ಕೆ ಪ್ರಾಮುಖ್ಯತೆ ಹೆಚ್ಚಾಗಿ ಕಂಡುಬರುತ್ತದೆ. ಒಟ್ಟಿನಲ್ಲಿ ಮುಸ್ಲಿಂ ಎನ್ನುವ ಸಮುದಾಯವನ್ನು ನಮ್ಮ ಸಮಾಜದೊಳಗೆ ಸೇರಿಸಿಕೊಂಡು ಮಸೀದಿಗಳನ್ನು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಸುಧಾರಣೆಯ ತಾಣಗಳಾಗಿ ಒಪ್ಪಿಕೊಳ್ಳಬೇಕು. ಇಂದು ಮಸೀದಿಗಳಿಂದಲೇ ಅಲ್ಲಿನ ಧಾರ್ಮಿಕ ಗುರುಗಳ ಉಪದೇಶದಿಂದಲೇ ಸಹಬಾಳ್ವೆ, ಸಹಕಾರ, ಪರೋಪಕಾರದ ತತ್ವಗಳ ಮೇಲೆ ಸಾಮರಸ್ಯದ ಜೀವನಕ್ಕೆ ದಾರಿಯಾಗುತ್ತಿದೆ.

**ದರ್ಗಾಗಳು**

ಸೂಫಿ ಪಂಥದ ಅನುಯಾಯಿಗಳ ಪ್ರಕಾರ ಸೂಫಿಗಳು ದೇವದೂತರಾಗಿದ್ದು, ದೇವರ ಪ್ರತಿನಿಧಿಗಳಾಗಿದ್ದು ಇವರ ಮೂಲಕವೇ ದೇವರನ್ನು ಕಾಣಲು ಸಾಧ್ಯವೆಂದು ನಂಬಿಕೆಯುಳ್ಳವರಾಗಿದ್ದಾರೆ. ಸೂಫಿಗಳು ದೇಹ ತ್ಯಾಗ ಮಾಡಿದರು ಎಂಬ ನಂಬಿಕೆಯಿದೆ. ಅವರ ದೇಹ ಮಾತ್ರ ನಾಶವಾಗಿ ಆತ್ಮವೂ ಹಾಗೆಯೇ ಇರುತ್ತದೆ. ಹೀಗಾಗಿ ನಮ್ಮ ಕಷ್ಟ ನೋವುಗಳನ್ನು ಕೇಳಿಸಿಕೊಂಡು ಅವರು ದೇವರಿಗೆ ತಿಳಿಸುತ್ತಾರೆ. ಇವರ ಮೂಲಕವೇ ದೇವರು ತಮ್ಮ ಬೇಡಿಕೆಗಳನ್ನು ಈಡೇರಿಸುತ್ತಾನೆ ಹಾಗೂ ಕಷ್ಟಗಳನ್ನು ಪರಿಹರಿಸುತ್ತಾನೆ ಎನ್ನುವ ನಂಬಿಕೆಯಿಂದ ದರ್ಗಾಕ್ಕೆ ಭೇಟಿ ನೀಡುತ್ತಾರೆ. ದರ್ಗಾಗಳ ವಿಶೇಷತೆ ಕಾಣುವುದು ಪ್ರತಿ ವರ್ಷ ಆಚರಿಸುವ ದರ್ಗಾದ ಉರುಸ್ ಉತ್ಸವದಲ್ಲಿ. ಉರುಸ್‌ಗಳಲ್ಲಿ ಎಲ್ಲಾ ವರ್ಗದ ಎಲ್ಲಾ ಜಾತಿಯ ಜನರು ಭಾಗವಹಿಸುವುದು ಭಾವೈಕ್ಯತೆಗೆ ವಿಶೇಷವಾಗಿದೆ.

ಈ ಭಾಗದ ದರ್ಗಾಗಳಲ್ಲಿ ಗುಲಬರ್ಗಾದ ಖಾಜಾ ಬಂದೇ ನವಾಜ್‌ರ ದರ್ಗಾ, ಯಾದಗಿರಿ ಜಿಲ್ಲೆಯ ಗಾಜರಕೋಟದ ಕತಲಸಾಹೇಬ ದರ್ಗಾ, ಮೋಟ್ನಳ್ಳಿಯ ವಸ್ತಾದೆಪ್ಪ ದರ್ಗಾ, ಮುಂತಾದ ದರ್ಗಾಗಳು ವಿಶೇಷವಾಗಿ ನಮ್ಮ ಗಮನ ಸೆಳೆಯುತ್ತವೆ. ದರ್ಗಾಗಳ ಪ್ರಭಾವದಿಂದಾಗಿ ಇಂದು ಗುಲಬರ್ಗಾ, ಯಾದಗಿರಿ ಜಿಲ್ಲೆಗಳು ಸೇರಿದಂತೆ ಇಲ್ಲಿನ ಕೆಲವು ಹಬ್ಬಗಳು, ಧಾರ್ಮಿಕ ಆಚರಣೆಗಳು ಒಂದು ಧರ್ಮಕ್ಕೆ ಸೀಮಿತವಾಗಿರದೆ ಎಲ್ಲಾ ಜನ ಸಮುದಾಯಕ್ಕೆ ವಿಸ್ತರಿಸಿಕೊಂಡಿವೆ ಹಾಗೂ ಕೂಡಿಬಾಳುವುದನ್ನು ಕಲಿಸಿವೆ. ಇಲ್ಲಿನ ಮುಸ್ಲಿಮರು ಲಕ್ಷ್ಮೀಪೂಜೆಯಲ್ಲಿ ಹಾಗೂ ಗಣಪತಿ ಪೂಜೆಯಲ್ಲಿ ಪಾಲ್ಗೊಳ್ಳುವುದನ್ನು ಕಾಣಬಹುದಾಗಿದೆ. ಹಬ್ಬದ ದಿನಗಳಲ್ಲಿ ಹಿಂದುಗಳು ಪೂಜೆ ಮಾಡುವ ಗಣಪತಿ, ಲಕ್ಷ್ಮಿ, ಶಿವ ಮುಂತಾದ ಮೂರ್ತಿಗಳನ್ನು ತಯಾರಿಸುವವರು ಮುಸ್ಲಿಮರಾಗಿದ್ದಾರೆ. ಅದೇ ರೀತಿ ಮುಸ್ಲಿಮರು ಆಚರಿಸುವ ಮೊಹರಂ ಹಬ್ಬದಲ್ಲಿ ಹಿಂದುಗಳು ಭಾಗವಹಿಸುತ್ತಾರೆ. ಬಂದೇ ನವಾಜರ ಉರುಸನ್ನು ಎಲ್ಲರೂ ಹಬ್ಬದಂತೆಯೇ ಆಚರಿಸುತ್ತಾರೆ. ಗುಲಬರ್ಗಾದಲ್ಲಿರುವ ಬಂದೇ ನವಾಜರ ದರ್ಗಾದ ಸುತ್ತಮುತ್ತಲಿನ ಪರಿಸರ, ಸಮುದಾಯವನ್ನು ನೋಡಿದರೆ ಅಲ್ಲಿನ ಗಲ್ಲಿಗಳಲ್ಲಿ ಮುಸ್ಲಿಮರೇ ಹೆಚ್ಚಾಗಿ ವಾಸಿಸುತ್ತಿದ್ದರೂ ಜೊತೆ ಜೊತೆಗೆ ಹಿಂದು ಕುಟುಂಬಗಳು ನೆಲೆಸಿವೆ. ಈ ಭಾಗದ ಕೆಲವು ಜನರ ಹೆಸರುಗಳಲ್ಲಿಯೂ ಹಿಂದು ಮುಸ್ಲಿಂ ಎಂಬ ಭೇದವನ್ನು ಗುರುತಿಸಲು ಸಾಧ್ಯವಿಲ್ಲ. ಮಸ್ತಾನಪ್ಪ, ಹುಸೇನಪ್ಪ, ಲಾಲಪ್ಪ, ಲಾಲ್‌ಸಾಬ್, ಪೀರಪ್ಪ ದಾವಲಪ್ಪ ಹೀಗೆ ಹೆಸರುಗಳಿವೆ.

**ಚರ್ಚ್‌ಗಳ ಪಾತ್ರ**

ಪ್ರಪಂಚದ ಪ್ರಾಚೀನ ಧರ್ಮಗಳಲ್ಲಿ ಕ್ರೈಸ್ತಧರ್ಮವೂ ಒಂದಾಗಿದೆ. ಧರ್ಮದ ವೈಶಿಷ್ಟ್ಯತೆ ಹಾಗೂ ಸರಳ ತತ್ವಗಳಿಂದಾಗಿ ಬಹುಬೇಗ ಇದು ಪ್ರಪಂಚದಾದ್ಯಂತ ಹರಡಿ ವಿಶ್ವದ ಅತಿ ಹೆಚ್ಚು ಅನುಯಾಯಿಗಳನ್ನು ಪಡೆದ ಧರ್ಮಗಳಲ್ಲಿ ಒಂದಾಗಿದೆ. ವಿಶ್ವದ ಧಾರ್ಮಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿದೆ. ಹಾಗೆಯೇ ಕ್ರೈಸ್ತ ಧಾರ್ಮಿಕ ಕೇಂದ್ರಗಳಾದ ಚರ್ಚ್‌ಗಳಿಂದ ಭಾರತೀಯ ಸಮಾಜಕ್ಕೆ ಹಲವಾರು ಬಗೆಯ ಪ್ರಯೋಜನಗಳು ದೊರೆತಿವೆ ಎಂಬುದನ್ನು ಯಾರೂ ಮರೆಯುವಂತಿಲ್ಲ. ಶಿಕ್ಷಣ, ಸಾಹಿತ್ಯ,

ವೈದ್ಯಕೀಯ ತಂತ್ರಜ್ಞಾನ, ಹೀಗೆ ಹಲವಾರು ರಂಗಗಳಲ್ಲಿ ಕ್ರೈಸ್ತ ಧರ್ಮೀಯರ ಕೊಡುಗೆ ಅಪಾರ. ಈ ನಿಟ್ಟಿನಲ್ಲಿ ಯಾದಗಿರಿ ಜಿಲ್ಲೆಯಲ್ಲೂ ಕೂಡ ಚರ್ಚ್‌ಗಳು ಧಾರ್ಮಿಕವಾಗಿ, ಶೈಕ್ಷಣಿಕ ವಾಗಿ, ಸಾಂಸ್ಕೃತಿಕವಾಗಿ ಕೆಳವರ್ಗದವರ ಹಾಗೂ ಬಡವರ್ಗದವರ ಬದುಕಿನಲ್ಲಿ ಬದಲಾವಣೆ ತರುವಲ್ಲಿ ಪ್ರಯತ್ನಿಸುತ್ತಿವೆ.

ಚರ್ಚ್‌ಗಳು ಪ್ರಾರ್ಥನಾ ಸ್ಥಳಗಳಾಗಿದ್ದು, ಅಲ್ಲಿ ಪಾದ್ರಿಗಳು ಧರ್ಮ ಉಪದೇಶ ಹಾಗೂ ಸಮಾಜ ಸೇವಾ ಕಾರ್ಯದ ಜೊತೆಗೆ ಧರ್ಮ ಪ್ರಸಾರದಲ್ಲಿಯೂ ತೊಡಗಿದ್ದಾರೆ. ಚರ್ಚ್‌ಗಳ ಆಶ್ರಯದಲ್ಲಿ ನಡೆಸುತ್ತಿರುವ ಆಸ್ಪತ್ರೆಗಳು, ವಸತಿ ನಿಲಯಗಳು ಹಾಗೂ ಶಿಕ್ಷಣ ಸಂಸ್ಥೆಗಳು ಸಾಕಷ್ಟು ಸೇವೆ ಮಾಡುತ್ತಿವೆ. ಅವರ ಕಾನ್ವೆಂಟ್‌ಗಳು, ಶಾಲಾ, ಕಾಲೇಜುಗಳು, ಗುಣಮಟ್ಟದ ಹಾಗೂ ಸೇವಾ ಮನೋಭಾವವುಳ್ಳ ಆಸ್ಪತ್ರೆಗಳು, ವಸತಿ ನಿಲಯಗಳು, ಅನಾಥಾಶ್ರಮಗಳು ಮುಂತಾದ ಸಂಸ್ಥೆಗಳ ಮೂಲಕ ಸಮಾಜ ಸೇವೆಯಲ್ಲಿ ತೊಡಗಿದ್ದಾರೆ. ಈ ಭಾಗದ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಜೀವನ ಶೈಲಿಯಲ್ಲಿ ಹಾಗೂ ಇತರ ಸಮಾಜದಲ್ಲಿ ಎಲ್ಲರಿಂದ ತ್ಯಜಿಸಲ್ಪಟ್ಟ, ನಿರ್ಲಕ್ಷಿಸಲ್ಪಟ್ಟ ಅನಾಥರು, ನಿರ್ಗತಿಕರು, ಅಲೆಮಾರಿಗಳು, ದಲಿತರು, ಸ್ತ್ರೀಯರು, ರೋಗಿಗಳು ಮುಂತಾದವರಿಗೆ ಅನ್ನ, ಆರೋಗ್ಯ, ಸ್ಥಾನಮಾನ ನೀಡುವ ಕಾರ್ಯದಲ್ಲೂ ತೊಡಗಿವೆ.

ಚರ್ಚ್‌ಗಳು ಶಿಕ್ಷಣ ಕ್ಷೇತ್ರವಲ್ಲದೆ ತನ್ನ ಎಲ್ಲೆಯನ್ನು ಕೈಗಾರಿಕಾ ಕ್ಷೇತ್ರಕ್ಕೂ ವಿಸ್ತರಿಸಿಕೊಂಡಿವೆ. ಬಡವರ ಜೀವನೋಪಾಯಕ್ಕಾಗಿ ಸ್ವ-ಉದ್ಯೋಗಗಳಾದ ಕಮ್ಮಾರಿಕೆ, ಚಾಪೆ ಹೆಣೆಯುವುದು ಮುಂತಾದ ಗೃಹ ಕೈಗಾರಿಕೆ ಕಾರ್ಖಾನೆಗಳನ್ನು ಆರಂಭಿಸಿ ಉದ್ಯೋಗ ಒದಗಿಸಿವೆ. ಈ ಭಾಗದ ಕೆಲವು ಸ್ಥಳಗಳಲ್ಲಿ ಹೆಚ್ಚಿನ ಜನರಿಗೆ ಉದ್ಯೋಗ ಸಿಗದಿರುವ ಪ್ರದೇಶಗಳನ್ನು ಗುರುತಿಸಿ ಅಲ್ಲಿ ಚರ್ಚ್‌ಗಳ ಸಹಯೋಗ ಮತ್ತು ಪ್ರೇರಣೆಯಿಂದ ನೇಕಾರಿಕೆ, ಕುಶಲ ಕೈಗಾರಿಕೆಯಂತಹ ಅನೇಕ ಉಪಕಸುಬುಗಳಿಗೆ ಅವಕಾಶ ಒದಗಿಸಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರಿಗೆ, ಕೆಳವರ್ಗದವರಿಗೆ ವೈದ್ಯಕೀಯ ಸೌಲಭ್ಯಗಳನ್ನು ನೀಡಲು ಆರೋಗ್ಯ ಸೇವಾ ಕೇಂದ್ರಗಳನ್ನು ಆರಂಭಿಸಿವೆ. ೨೧ನೇ ಶತಮಾನದಲ್ಲಿ ಸರಕಾರಗಳು ಮಾಡದಂತಹ ಕಾರ್ಯವನ್ನು ಚರ್ಚ್‌ಗಳು ಮತ್ತು ಮಿಶನರಿಗಳು ಮಾಡುತ್ತಿವೆ. ಯಾದಗಿರಿ ಜಿಲ್ಲೆಯ ಬಹುತೇಕ ಕಡೆ ಮಹಿಳೆಯರಿಗೆ ಆರೋಗ್ಯ ಸೇವೆಗಳನ್ನು ಆರಂಭಿಸಿದ ಕೀರ್ತಿ ಕ್ರೈಸ್ತ ಮಿಶನರಿಗಳು ಮತ್ತು ಚರ್ಚ್‌ಗಳದ್ದಾಗಿದೆ. ಆಸ್ಪತ್ರೆಗಳ ಜೊತೆಗೆ ವೈದ್ಯಕೀಯ ನರ್ಸ್ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಿ ಈ ಭಾಗದ ಅನೇಕ ಹೆಣ್ಣುಮಕ್ಕಳಿಗೆ ನರ್ಸ್‌ಗಳಾಗುವ ಅವಕಾಶವನ್ನು ಮಾಡಿಕೊಟ್ಟಿವೆ.

ಈ ಜಿಲ್ಲೆಯಲ್ಲಿ ಚರ್ಚ್‌ಗಳು ಸ್ಥಾಪನೆಯಾದ ನಂತರ ಸಮಾಜದಲ್ಲಿರುವ ಎಷ್ಟೋ ಮೂಢ ನಂಬಿಕೆಗಳು, ಅಮಾನವೀಯ ಸಂಪ್ರದಾಯಗಳನ್ನು ತೊಡೆದು ಹಾಕಿ ಸಮಾಜ ಪರಿವರ್ತನೆ ಯಾಗಿರುವುದನ್ನು ಗುರುತಿಸಬಹುದಾಗಿದೆ. ಚರ್ಚ್‌ಗಳ ಬೋಧನೆಯಿಂದಾಗಿ ಜನರ ಬೌದ್ಧಿಕ ವಿಕಾಸವಾಗಿ ಜನರು ಹೊಸ ಜಾಡಿನತ್ತ ಸಾಗುತ್ತಿರುವುದು ಹಾಗೂ ಅವರ ರಾಜಕಿಯ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಕೋನಗಳಲ್ಲಿ ಪರಿವರ್ತನೆಗಳಾಗಿರುವುದನ್ನು ಸ್ಪಷ್ಟವಾಗಿ ಗುರುತಿಸ ಬಹುದಾಗಿದೆ. ಚರ್ಚ್‌ನ ನೀತಿಯಿಂದ ಅಸಮಾನತೆಗೆ ಜಾತಿಯತೆಗೆ ಒಳಗಾದ ಹಾಗೂ ಈ

ಪ್ರದೇಶದಲ್ಲಿ ನಿರ್ಲಕ್ಷತೆಗೆ ಒಳಗಾದ ಅನೇಕ ಜನಾಂಗಗಳು ಅದರಲ್ಲೂ ಹೆಚ್ಚಾಗಿ ಮಾದಿಗರು, ಕೊರಚರು, ವಡ್ಡರು ಕ್ರೈಸ್ತಧರ್ಮಕ್ಕೆ ಮತಾಂತರವಾಗುತ್ತಿದ್ದಾರೆ. ಇವರ ಸಂಖ್ಯೆ ಇಂದು ಎಷ್ಟು ಹೆಚ್ಚಾಗಿದೆ ಅಂದರೆ, ಹೀಗೆ ಮತಾಂತರವಾದ ಇವರನ್ನು ದಲಿತ ಕ್ರೈಸ್ತ ಎಂದೇ ಗುರುತಿಸುವಂತಾಗಿದೆ.

ಸಾಮಾಜಿಕ ಚಳುವಳಿಗಳಲ್ಲಿ ಚರ್ಚಿನ ಪಾತ್ರ ಕುರಿತು ಅಧ್ಯಯನ ಹಾಗೂ ಚರ್ಚೆ ಮಾಡುವಾಗ ಎದುರಾಗುವ ಬಹುಮುಖ್ಯವಾದ ಅಂಶವೆಂದರೆ ಪ್ರಸ್ತುತ ಸಂದರ್ಭದಲ್ಲಿ ನಡೆಯುತ್ತಿರುವ ಮತಾಂತರ ಪ್ರಕ್ರಿಯೆಗಳು, "ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ವರ್ಗಗಳು ಮತಾಂತರ ಪ್ರಕ್ರಿಯೆಗೆ ಹೆಚ್ಚಾಗಿ ಸ್ಪಂದಿಸಿ ಆಮಿಷಗಳಿಗೆ ಒಳಗಾಗುತ್ತಿರುವುದು ಕಂಡುಬರುತ್ತದೆ. ಚರ್ಚ್‌ಗಳು ಹಳ್ಳಿಗಳಲ್ಲಿ ನಿರುದ್ಯೋಗಿಗಳಿಗೆ, ಬಡವರಿಗೆ, ನಿರ್ಲಕ್ಷಿತರಿಗೆ ಅನ್ನದ, ಹಣದ ಉದ್ಯೋಗದ ಸ್ಥಾನಮಾನದ ಸಹಾಯದ ಆಮಿಷ ಒಡ್ಡಿ ಕ್ರೈಸ್ತಧರ್ಮದ ಮತಾಂತರಕ್ಕೆ ಪ್ರೋತ್ಸಾಹ ನೀಡುತ್ತಿದ್ದಾರೆ ಎನ್ನುವ ದೂರುಗಳು ಮೇಲಿಂದ ಮೇಲೆ ಕೇಳಿ ಬರುತ್ತಿವೆ. ಇದು ಸರಿ ಅಥವಾ ತಪ್ಪು ಎನ್ನುವುದಕ್ಕಿಂತ ಮೊದಲು ಇಂದಿನ ಸಮಾಜದ ಸಾಮಾಜಿಕ ರಚನೆಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಸೂಕ್ತ ಎನಿಸುತ್ತಿದೆ. ಸಮಾಜದಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿ, ಬಹಿಷ್ಕೃತಗೊಂಡು ಸಮಾನ ಸ್ಥಾನಮಾನ ಊಟ, ಉದ್ಯೋಗ ಶಿಕ್ಷಣದಿಂದ ವಂಚಿತರಾದ ವರ್ಗದವರಿಗೆ ಎಲ್ಲಾ ಸೌಲಭ್ಯಗಳನ್ನು ಒದಗಿಸಿಕೊಡುವ ಚರ್ಚ್‌ಗಳು, ಮಿಶನರಿಗಳು ಆಶಾಕಿರಣವಾಗಿ ಕಂಡು ಬರುತ್ತಿರುವುದರಲ್ಲಿ ಆಶ್ಚರ್ಯವಿಲ್ಲ. ಅಲ್ಲದೆ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಸ್ಥಳೀಯರು ಶಿಕ್ಷಣ, ಆರೋಗ್ಯ, ಉದ್ಯೋಗ ಸ್ಥಾನಮಾನದ ಸೌಲಭ್ಯಗಳನ್ನು ಪಡೆದು ಅವರ ಜೀವನದಲ್ಲಿ ಬದಲಾವಣೆಯನ್ನು ತಂದುಕೊಳ್ಳುತ್ತಿದ್ದಾರೆ. ದಲಿತ ಎನ್ನುವುದಕ್ಕಿಂತ ಕ್ರೈಸ್ತ ಎಂದು ಹೇಳಿಕೊಳ್ಳುವ ಇವರಿಗೆ ಸಮಾಜದಲ್ಲೂ ಸ್ಥಾನಮಾನ ಹೆಚ್ಚಾಗಿರುವುದು ಮತಾಂತರ ಹೆಚ್ಚಳಕ್ಕೆ ಕಾರಣವಾಗುತ್ತಿದೆ."[೫] ಒಟ್ಟಿನಲ್ಲಿ ಚರ್ಚ್‌ಗಳು ಮತ್ತು ಮಿಶನರಿಗಳು ಈ ಭಾಗದ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯನ್ನು ಬಡತನವನ್ನು ತಮ್ಮ ಚಟುವಟಿಕೆಗಳ ವೇದಿಕೆಯನ್ನಾಗಿ ಬಳಸಿಕೊಳ್ಳುತ್ತಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಒಟ್ಟಿನಲ್ಲಿ ಸಮಾಜ ಸುಧಾರಣೆ ದೃಷ್ಟಿಯಿಂದ ನೋಡುವುದಾದರೆ ಚರ್ಚ್‌ಗಳು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಪ್ರಯತ್ನಿಸುತ್ತಿವೆ.

ಯಾದಗಿರಿ ಮಿಷನ್ ಚರ್ಚ್

ತಿಂತಣಿ ಮೋನಪಯ್ಯ ಮಂದಿರ-ಮಸೀದಿ

ಕೊಡೇಕಲ್ ಬಸವಣ್ಣ ಹಾಗೂ ಯಾನಗುಂದಿ ಮಾತಾ ಮಾಣಿಕೇಶ್ವರಿ ಮಠ

ಇನ್ನೂ ಹಲವಾರು ಮಠಗಳು, ಮಸೀದಿಗಳು, ಚರ್ಚ್‌ಗಳು ಇವೆ

ಇಲ್ಲಿ ಮಠ, ಮಸೀದಿಗಳು ಮತ್ತು ಹಿಂದೂ ಮುಸ್ಲಿಮರ ನಡುವೆ ಎಂತಹ ಅನೋನ್ಯತೆ ಸಂಬಧಗಳು ಬೆಳೆದು ಬಂದಿವೆಯೆಂದರೆ ಗುಲಬರ್ಗಾ, ಯಾದಗಿರಿ ಮಠಗಳಲ್ಲಿ ಪೂಜೆಗೆ ಬಳಸುವ ಗಂಧ ಬರುವುದು ದರ್ಗಾಗಳಿಂದ. ಹಾಗೆಯೇ ದರ್ಗಾಗಳಿಗೆ ನೈವೇದ್ಯ ಹೋಗುವುದು ಹಿಂದೂ ದೇವಾಲಯಗಳಿಂದ. ಇಲ್ಲಿ ಮಠವಾಗಲಿ, ದೇವಾಲಯವಾಗಲೀ, ದರ್ಗಾ ಮಸೀದಿ

ಗಳಾಗಲಿ ಎಲ್ಲ ಧರ್ಮದವರ ಭಕ್ತಿಯ ಕೇಂದ್ರಗಳಾಗಿವೆ. ಬಾಬ್ರಿ ಮಸೀದಿ ಧ್ವಂಸವಾದಾಗ ರಾಷ್ಟ್ರಾದ್ಯಂತ ಹಿಂದು ಮುಸ್ಲಿಂ ನಡುವಣ ಕೋಮು ಸಾಮರಸ್ಯ ಕದಡಿದ ದಿನಗಳಲ್ಲಿಯೂ ಇಲ್ಲಿ ಧರ್ಮ ಕಾರಣದಿಂದ ಜನ ಬಡಿದಾಡಲಿಲ್ಲ. ಮನೆಗಳಿಗೆ ಬೆಂಕಿಯನ್ನು ಹಚ್ಚಲಿಲ್ಲ. ಬದಲಾಗಿ ಹಿಂದೂಗಳ ರಕ್ಷಣೆಯಲ್ಲಿ ಮುಸ್ಲಿಮರು, ಮುಸ್ಲಿಮರ ರಕ್ಷಣೆಯಲ್ಲಿ ಹಿಂದುಗಳು ಬದುಕಿದರು. ಈ ಭಾಗದ ವೈಶಿಷ್ಟ್ಯದ ಜೊತೆಗೆ ತಮ್ಮ ಪರಂಪರೆಯನ್ನು ಕಾಯ್ದುಕೊಂಡರು. ಹೀಗೆ ಯಾದಗಿರಿ ಭಾಗದ ಸಾಮಾಜಿಕ ಸುಧಾರಣೆಯಲ್ಲಿ ಮಠ, ಮಸೀದಿ, ಚರ್ಚ್‌ಗಳು ತಮ್ಮದೇ ಆದ ಭಾವೈಕ್ಯತೆ ಪಾತ್ರವನ್ನು ವಹಿಸುತ್ತಿವೆ.

ಪ್ರಸ್ತುತ ಮಠ ಮಾನ್ಯಗಳ ಬಗ್ಗೆ ರಾಜಕೀಯ ಪಕ್ಷಗಳ ಮತ್ತು ನಾಯಕರ ದೃಷ್ಟಿಕೋನವನ್ನು ನೋಡಿದರೆ, ಧಾರ್ಮಿಕ ಕೇಂದ್ರಗಳನ್ನು, ಶಕ್ತಿಗಳನ್ನು ಓಲೈಸುವುದರಿಂದಲೇ ಇಡೀ ಸಮುದಾಯದ ವಿಶ್ವಾಸ ಬೆಂಬಲ ಗಳಿಸಬಹುದು ಎಂಬ ಭ್ರಮೆ ಹೆಚ್ಚಾಗುತ್ತಿದೆ. ಹೀಗಾಗಿ ರಾಜಕೀಯ ಪಕ್ಷಗಳು ಮಠಮಾನ್ಯಗಳಿಗೆ ಅತಿಹೆಚ್ಚು ಹಣವನ್ನು ದೇಣಿಗೆ ರೂಪದಲ್ಲಿ ನೀಡುತ್ತಿದ್ದಾರೆ. ಎಲ್ಲಾ ರಾಜಕೀಯ ಪಕ್ಷದವರು ಮಠಮಾನ್ಯಗಳನ್ನು ಓಲೈಸಿ ತಮ್ಮ ಮತ ಬ್ಯಾಂಕ್‌ಗಳನ್ನಾಗಿ ಮಾಡಿಕೊಳ್ಳುವ ಹುನ್ನಾರ ನಡೆಸಿದ್ದಾರೆ. ಅದಕ್ಕಾಗಿ ಮಠ ಮಾನ್ಯಗಳಿಗೆ ಉದಾರವಾಗಿ ದೊಡ್ಡ ಮೊತ್ತದ ಹಣವನ್ನು, ಭೂಮಿಯನ್ನು ದೇಣಿಗೆ ರೂಪದಲ್ಲಿ ನೀಡುವುದು ಕಂಡುಬರುತ್ತಿದೆ. ಮಠಮಾನ್ಯಗಳ ಮುಖ್ಯಸ್ಥರು ಕೂಡ ಪರೋಕ್ಷವಾಗಿ ರಾಜಕೀಯ ಒಲವು ನಿಲುವುಗಳನ್ನು ವ್ಯಕ್ತಪಡಿಸುತ್ತಿರುವುದು ಕಂಡುಬರುತ್ತಿದೆ. ಹೀಗಾಗಿ ಎಲ್ಲೋ ಒಂದು ಕಡೆ ರಾಜಕೀಯ ಅಪಮೈತ್ರಿ ಎಂದೆನಿಸಿಕೊಳ್ಳುವಂತಾಗಿದೆ. ಹೀಗಾಗಿ ಕೆಲವು ಮಸೀದಿಗಳು ಚರ್ಚ್‌ಗಳು ರಾಜಕೀಯ ಭ್ರಷ್ಟತೆಯನ್ನು ನೇರವಾಗಿ ವಿರೋಧ ಮಾಡುವುದು ಕಂಡುಬರುತ್ತದೆ.

**೫.೨. ಸಾಮಾಜಿಕ ಚಳುವಳಿಗಳು ಮತ್ತು ಸರ್ಕಾರ**

ಸ್ವಾತಂತ್ರ್ಯದ ನಂತರ ಆಡಳಿತ ಮಾಡಿದ ಸರಕಾರಗಳು ೮೦ರ ದಶಕದವರೆಗೂ ಪ್ರತ್ಯೇಕವಾಗಿ ಹೈದರಾಬಾದ್ ಕರ್ನಾಟಕ ಭಾಗದ ಅಭಿವೃದ್ಧಿಗಾಗಿ ಯಾವುದೇ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಲಿಲ್ಲ ಅಥವಾ ಈ ಪ್ರದೇಶದ ಅಭಿವೃದ್ಧಿಗೆ, ಅಸಮಾನತೆಯ ನಿವಾರಣೆಗೆ ವಿಶೇಷ ಯೋಜನೆಗಳನ್ನು ರೂಪಿಸಿರಲಿಲ್ಲ. ಆದರೆ ಕ್ರಮೇಣ ಇಲ್ಲಿನ ಜನರಿಗೆ ತಾವು ಇದುವರೆಗೆ ಆಳಿದ ಎಲ್ಲಾ ಸರಕಾರ ಗಳ ಯೋಜನೆಗಳು, ಶಿಕ್ಷಣ, ಉದ್ಯೋಗ ಮುಂತಾದವುಗಳಿಂದ ವಂಚಿತರಾಗುತ್ತಿದ್ದೇವೆ ಎನ್ನುವ ಅರಿವು ಮೂಡತೊಡಗಿದೆ. ಈಗ ಇದರ ವಿರುದ್ಧ ಪ್ರತಿಭಟನೆಗಳು ಆರಂಭವಾದವು. ಆಗ ಎಚ್ಚೆತ್ತುಕೊಂಡ ಸರಕಾರ ೯೦ರ ದಶಕದ ಆರಂಭದಲ್ಲಿ ಹೈದರಾಬಾದ್ ಕರ್ನಾಟಕದ ಅಭಿವೃದ್ಧಿಗಾಗಿ ಪ್ರತ್ಯೇಕವಾಗಿ ಯೋಜನೆಗಳನ್ನು ರೂಪಿಸಿ ಹೆಚ್ಚಿನ ಹಣಕಾಸಿನ ನೆರವನ್ನು ನೀಡಲು ಆರಂಭಿಸಿತು. ಇದರ ಫಲವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಸ್ಥಾಪನೆ ಮಾಡಿತು. ನಂತರ ಪ್ರಾದೇಶಿಕ ಅಸಮಾನತೆಯನ್ನು ಅಧ್ಯಯನ ಮಾಡಲು ಮತ್ತು ಅದರ ನಿವಾರಣೆಗೆ ಪರಿಹಾರೋಪಾಯಗಳನ್ನು ಸೂಚಿಸಲು ಡಾ. ಡಿ.ಎಂ. ನಂಜುಂಡಪ್ಪ ಅವರ ಅಧ್ಯಕ್ಷತೆಯಲ್ಲಿ 'ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿಗಳ ಸಮಿತಿ'ಯ ರಚನೆಯಾಯಿತು.

### ೫.೨.೧. ಡಾ. ಡಿ. ಎಂ. ನಂಜುಂಡಪ್ಪ ವರದಿ

ಯಾವುದನ್ನು ಹೈದರಾಬಾದ್ ಕರ್ನಾಟಕ ಪ್ರದೇಶವೆಂದು ಕರೆಯಲಾಗುತ್ತದೆಯೋ ಅದರಲ್ಲಿ ಗುಲಬರ್ಗಾ, ಯಾದಗಿರಿ, ಬೀದರ್, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು ಮಾತ್ರ ಸೇರುತ್ತವೆ. ಆಡಳಿತದ ಅನುಕೂಲಕ್ಕೆ ಏಕೀಕರಣದ ಸಂದರ್ಭದಲ್ಲಿ ಮದರಾಸು ಪ್ರಾಂತದಿಂದ ವರ್ಗಾವಣೆಯಾಗಿ ಕರ್ನಾಟಕಕ್ಕೆ ಸೇರಿದ ಬಳ್ಳಾರಿ ಜಿಲ್ಲೆಯನ್ನು ಗುಲಬರ್ಗಾ ವಿಭಾಗಕ್ಕೆ ಸೇರಿಸಲಾಯಿತು. ಹೈದರಾಬಾದ್ ನಿಜಾಮನ ಪ್ರಾಂತದಿಂದ ಕರ್ನಾಟಕಕ್ಕೆ ವರ್ಗಾವಣೆಯಾದ ಬೀದರ್, ಗುಲಬರ್ಗಾ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು, ಹಿಂದುಳಿದ ಪ್ರದೇಶಗಳಾಗಿದ್ದವು. ಏಕೀಕರಣದ ನಂತರವೂ ಆಳುವ ಸರಕಾರಗಳು, ನಾಯಕರು ಈ ಪ್ರದೇಶವನ್ನು ನಿರ್ಲಕ್ಷಿಸುತ್ತಾ ಬಂದಿವೆ ಎನ್ನುವ ಕೂಗನ್ನು ಎಬ್ಬಿಸಿದ ನಂತರ 'ಪ್ರತ್ಯೇಕ ರಾಜ್ಯದ' ಬೇಡಿಕೆಯ ಧ್ವನಿಗೆ ನಾಂದಿಯಾಯಿತು. ಹಾಗಾಗಿ "ಸರಕಾರವು ಪ್ರಾದೇಶಿಕ ಅಸಮಾನತೆಯನ್ನು ಸರಿಪಡಿಸಲು 'ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ'(೧೯೯೧)ಯನ್ನು ಸ್ಥಾಪಿಸಿತು. ನಂತರ ಅಸಮಾನತೆಯ ಅಧ್ಯಯನಕ್ಕಾಗಿ ಎಸ್.ಎಂ.ಕೃಷ್ಣ ಅವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ೨೦೦೦ರಲ್ಲಿ 'ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿಗಳ ಸಮಿತಿ'ಯನ್ನು ರಚಿಸಿ, ಡಾ. ಡಿ.ಎಂ.ನಂಜುಂಡಪ್ಪ ಅವರನ್ನು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿತು. ಸಮಿತಿಯು ಎರಡು ವರ್ಷಗಳ ಕಾಲ ಅಭಿವೃದ್ಧಿ ಸಂಬಂಧ ಪ್ರಾದೇಶಿಕ ಅಸಮಾನತೆ ಸಮಸ್ಯೆಯನ್ನು ಅಧ್ಯಯನ ಮಾಡಿ ೨೦೦೨ರಲ್ಲಿ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ವರದಿಯು ಏಳು ಭಾಗಗಳನ್ನು ಹೊಂದಿದ್ದು, ಮೂವತ್ತಾಲ್ಕು ಅಧ್ಯಾಯಗಳಲ್ಲಿ, ಸಾವಿರ ಪುಟಗಳಲ್ಲಿ ಇದೆ."[೬] 'ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿಗಳ ಸಮಿತಿ' ರಾಜ್ಯದಲ್ಲಿ ಒಂದು ಜಿಲ್ಲೆಯಿಂದ ಮತ್ತೊಂದು ಜಿಲ್ಲೆಗೆ, ಜಿಲ್ಲೆಯೊಳಗೆ, ಪ್ರದೇಶದೊಳಗೆ ಹಾಗೂ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ನಡುವೆ ಇರುವ ಅಸಮತೋಲನವನ್ನು ಪರಿಹರಿಸುವುದಕ್ಕೆ ಹಲವಾರು ಶಿಫಾರಸ್ಸುಗಳನ್ನು ಮಾಡಿದೆ.

"ಡಾ. ಡಿ.ಎಂ. ನಂಜುಂಡಪ್ಪ ಸಮಿತಿ ವರದಿಯ ಬಹುಮುಖ್ಯ ಶಿಫಾರಸ್ಸೆಂದರೆ ರಾಜ್ಯದಲ್ಲಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಾದೇಶಿಕ ಅಸಮಾನತೆಯನ್ನು ಮಾಪನ ಮಾಡಲು ಸಮಿತಿಯು ರೂಪಿಸಿದ್ದು, ಐದು ವಲಯಗಳನ್ನು ಒಳಗೊಂಡ ೩೫ ಸೂಚಿಗಳ 'ಸಂಯುಕ್ತ ಸಮಗ್ರ ಅಭಿವೃದ್ಧಿ ಸೂಚ್ಯಂಕ'. ಈ ಸೂಚ್ಯಂಕ ಮಾಪನವನ್ನು ಬಳಸಿಕೊಂಡು ತನ್ನ ವರದಿಯಲ್ಲಿ ರಾಜ್ಯದಲ್ಲಿರುವ ೧೭೬ ತಾಲೂಕುಗಳಲ್ಲಿ ೩೯ ಅತ್ಯಂತ ಹಿಂದುಳಿದ, ೪೦ ಅತಿ ಹಿಂದುಳಿದ ಮತ್ತು ೩೫ ಹಿಂದುಳಿದ ತಾಲೂಕುಗಳೆಂದು ವರ್ಗೀಕರಿಸಿತು. ೧೧೪ ತಾಲೂಕುಗಳಲ್ಲಿ ೩೫ ದಕ್ಷಿಣ ಕರ್ನಾಟಕ ಪ್ರದೇಶಕ್ಕೆ ಸೇರಿದ್ದರೆ, ೭೯ ಉತ್ತರ ಕರ್ನಾಟಕಕ್ಕೆ ಸೇರಿದ್ದವು."[೭] ವರದಿಯು ಗುಲಬರ್ಗಾ ವಿಭಾಗದ ಜಿಲ್ಲೆಗಳು ಹಾಗೂ ತಾಲೂಕುಗಳಲ್ಲಿನ ಅಸಮಾನತೆಯನ್ನು ಎತ್ತಿಹಿಡಿಯಿತು. ಗುಲಬರ್ಗಾ ವಿಭಾಗದ ಎಲ್ಲಾ ತಾಲೂಕುಗಳು ಹಿಂದುಳಿದವಾಗಿದ್ದವು. ವಿಭಾಗದಲ್ಲಿನ ಒಟ್ಟು ತಾಲೂಕುಗಳ ಪೈಕಿ ೩೧

ತಾಲ್ಲೂಕುಗಳ ಪೈಕಿ ೨೮ ಹಿಂದುಳಿದ ತಾಲ್ಲೂಕುಗಳಾಗಿದ್ದವು. ಅಂದರೆ ವಿಭಾಗದಲ್ಲಿನ ಒಟ್ಟು ತಾಲ್ಲೂಕುಗಳಲ್ಲಿ ಶೇ. ೯೦.೩ ತಾಲ್ಲೂಕುಗಳು ಅತಿ ಹಿಂದುಳಿದಿದ್ದವೆಂದು ಅದೇ ಮೈಸೂರು ವಿಭಾಗದಲ್ಲಿನ ಒಟ್ಟು ತಾಲ್ಲೂಕುಗಳಲ್ಲಿ. ಶೇ. ೯೦.೩ ತಾಲ್ಲೂಕುಗಳು ಹಿಂದುಳಿದಿವೆ ಎಂದು ತಿಳಿಸಿತು. ವರದಿಯ ಪ್ರಕಾರ, ಅಭಿವೃದ್ಧಿಯು ದಕ್ಷಿಣ ಕರ್ನಾಟಕ ಪ್ರದೇಶದಲ್ಲಿ ನೆಲೆಗೊಂಡಿದ್ದರೆ ದುಃಸ್ಥಿತಿಯು ಉತ್ತರ ಕರ್ನಾಟಕದಲ್ಲಿ ಮಡುಗಟ್ಟಿಕೊಂಡಿರುವುದನ್ನು ವರದಿಯು ಸ್ಪಷ್ಟವಾಗಿ ಎತ್ತಿ ತೋರಿಸಿತು.

ಪ್ರಾದೇಶಿಕ ಅಸಮತೋಲನ ನಿವಾರಣೆಯ ಶಿಫಾರಸ್ಸುಗಳಲ್ಲಿ 'ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ'ಯು ವರದಿಯ ಮುಖ್ಯ ಶಿಫಾರಸ್ಸಾಗಿದೆ. ಇದು ರಾಜ್ಯದ ೧೧೪ ಹಿಂದುಳಿದ ತಾಲ್ಲೂಕುಗಳನ್ನು ಅಭಿವೃದ್ಧಿ ಯೋಜನೆಯಲ್ಲಿ ರಾಜ್ಯಮಟ್ಟದ ಸರಾಸರಿಗೆ ಒಯ್ಯುವ ಗುರಿ ಹೊಂದಿರುವ ವಿಶೇಷ ಯೋಜನೆಯಾಗಿದೆ. "ಯೋಜನೆ ಅಡಿಯಲ್ಲಿ ರಾಜ್ಯದ ಹಿಂದುಳಿದ ೧೧೪ ತಾಲ್ಲೂಕುಗಳ ಅಭಿವೃದ್ಧಿಗಾಗಿ ವಿಶೇಷವಾಗಿ ರೂ. ೧೬,೦೦೦ ಕೋಟಿ ಹಣವನ್ನು ನಿಯೋಜನೆ ಮಾಡಬೇಕಾಗುತ್ತದೆ. ಅನುದಾನವನ್ನು ತಾಲ್ಲೂಕುಗಳ ಹಿಂದುಳಿದಿರುವಿಕೆಗೆ ಅನುಗುಣವಾಗಿ ಹಂಚಬೇಕು ಎಂಬುದಾಗಿದೆ. ಇಲ್ಲಿ ಅತ್ಯಂತ ಹಿಂದುಳಿದ ತಾಲ್ಲೂಕು ಅತ್ಯಂತ ಅಧಿಕ ಅನುದಾನವನ್ನು ಮತ್ತು ಹಿಂದುಳಿದ ತಾಲ್ಲೂಕು ಕಡಿಮೆ ಅನುದಾನವನ್ನು ಪಡೆಯುತ್ತವೆ. ಅನುದಾನ ಹಂಚಿಕೆಗೂ ಸಮಿತಿಯು 'ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕ' ಮಾಪನವನ್ನು ಸೂಚಿಸಿತು. ಈ ಮಾಪನವನ್ನು ಬಳಸಿಕೊಂಡು ರಾಜ್ಯದ ತಾಲ್ಲೂಕು ಅಭಿವೃದ್ಧಿ ಮಟ್ಟವನ್ನು ಆಧರಿಸಿ ೨ ಗುಂಪುಗಳಾಗಿ ವರ್ಗೀಕರಿಸಿದೆ. ಅಭಿವೃದ್ಧಿ ಹೊಂದಿದ ತಾಲ್ಲೂಕುಗಳನ್ನು ೧೬ ಮತ್ತು ಅಭಿವೃದ್ಧಿ ಹೊಂದದ ತಾಲ್ಲೂಕುಗಳು ೧೧೪. ಅಭಿವೃದ್ಧಿ ಹೊಂದದ ತಾಲ್ಲೂಕುಗಳನ್ನು ಮತ್ತೆ ಮೂರು ಗುಂಪುಗಳನ್ನಾಗಿ ವರ್ಗೀಕರಿಸಿದೆ. ಅದು ೩೯ ಅತ್ಯಂತ ಹಿಂದುಳಿದ ತಾಲ್ಲೂಕುಗಳು, ೪೦ ಅತಿ ಹಿಂದುಳಿದ ತಾಲ್ಲೂಕುಗಳು, ೩೫ ಹಿಂದುಳಿದ ತಾಲ್ಲೂಕುಗಳು.

ಸಮಿತಿಯ ವರದಿಯ ಪ್ರಕಾರ ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನವನ್ನು ವಿಭಾಗಗಳ ನಡುವೆ ಅವುಗಳ ದುಸ್ಥಿತಿಗೆ ಅನುಗುಣವಾಗಿ ಹಂಚಬೇಕು. ಅಂದರೆ, ರಾಜ್ಯ ಸರಕಾರವು ೨೦೦೭–೦೮ರಲ್ಲಿ ಈ ಯೋಜನೆಗಾಗಿ ಮೀಸಲಾಗಿಟ್ಟ ರೂ. ೧೫೭೧.೫೦ ಕೋಟಿಯನ್ನು ನಾಲ್ಕು ವಿಭಾಗಗಳಿಗೆ ಹಂಚಿದರೆ ಗುಲಬರ್ಗಾ ವಿಭಾಗಕ್ಕೆ ರೂ. ೬೨೮.೬೦ ಕೋಟಿ, ಬೆಳಗಾವಿ ವಿಭಾಗಕ್ಕೆ ರೂ. ೩೧೪.೩೦ ಕೋಟಿ, ಬೆಂಗಳೂರು ವಿಭಾಗಕ್ಕೆ ರೂ. ೩೯೨.೮೭ ಕೋಟಿ, ಮೈಸೂರು ವಿಭಾಗಕ್ಕೆ ರೂ.೨೩೫.೭೩ ಕೋಟಿ ದೊರೆಯುತ್ತದೆ. ಸಮಿತಿಯು ಅನುದಾನ ಹಂಚಿಕೆಯ ಸೂತ್ರವನ್ನು ವಿಭಾಗಗಳ ಮಟ್ಟಕ್ಕೆ ಮಾತ್ರ ನಿಲ್ಲಿಸಿಲ್ಲ. ವಿಭಾಗಗಳೊಳಗೆ ಜಿಲ್ಲೆಗಳ ನಡುವೆ ಹಾಗೂ ಜಿಲ್ಲೆಗಳೊಳಗೆ ತಾಲ್ಲೂಕುಗಳ ನಡುವೆ ಅನುದಾನ ಹಂಚಿಕೆಯನ್ನು ತಿಳಿಸಿದೆ. ಉದಾಹರಣೆಗೆ ಗುಲಬರ್ಗಾ ವಿಭಾಗದ ಅನುದಾನದ ಮೊತ್ತ ರೂ. ೬೨೮.೬೦ ಕೋಟಿಯಲ್ಲಿ ಕೊಪ್ಪಳ ಜಿಲ್ಲೆಯ ಪಾಲು ರೂ. ೭೭.೧೯ ಕೋಟಿ. ಕೊಪ್ಪಳ ಜಿಲ್ಲೆಯ ಪಾಲಾದ ರೂ. ೭೭.೧೯ ಕೋಟಿಯಲ್ಲಿ ಯಲಬರ್ಗಾ ತಾಲ್ಲೂಕಿನ ಪಾಲು ರೂ. ೨೮.೮೪ ಕೋಟಿ."[೮]

**ಇತರ ಶಿಫಾರಸ್ಸುಗಳು**

೧. "ರಾಜ್ಯದಲ್ಲಿ ಅತ್ಯಧಿಕ ಅಭಿವೃದ್ಧಿಯ ಪ್ರಮಾಣವನ್ನು ಸಾಧಿಸಬೇಕಾದರೆ ಮತ್ತು ಉಳಿಸಿಕೊಂಡು ಬರಬೇಕಾದರೆ, ಸಾಮಾಜಿಕ ನ್ಯಾಯ ಸಮ್ಮತಿಯೊಂದಿಗಿನ ಬೆಳವಣಿಗೆಗೆ ಹಾಗೂ ಸಮತೋಲನ ಬೆಳವಣಿಗೆಯನ್ನು ಯಾವ ರೀತಿಯಲ್ಲಿಯೂ ಕಡೆಗಣಿಸಬಾರದು.

೨. ಯೋಜನೆಗಳನ್ನು ಸಿದ್ಧಗೊಳಿಸುವಾಗ ಪ್ರಸ್ತಾವನೆಗಳ ಪರಿಕಲ್ಪನೆ ಹಾಗೂ ಸುಧಾರಣೆ ಎರಡರ ದೃಷ್ಟಿಯಿಂದಲೂ ಪ್ರಾದೇಶಿಕ ಅಸಮತೋಲನವನ್ನು ಕಡಿಮೆ ಮಾಡುವ ಬಗ್ಗೆ ಸೂಕ್ತ ಗಮನ ನೀಡಬೇಕು.

೩. ಉತ್ತರ ಕರ್ನಾಟಕ ಪ್ರದೇಶದ ಪರವಾಗಿ ಅತ್ಯಂತ ಸೂಕ್ತವಾದ ೬೦.೪೦ ಪ್ರಮಾಣವನ್ನು ಸಂಪನ್ಮೂಲ ಹಂಚಿಕೆಯ ಆಧಾರವಾಗಿ ಅನುಷ್ಠಾನಗೊಳಿಸಬೇಕು.

೪. ಉದ್ಯೋಗ ಖಾತರಿ ಯೋಜನೆಗಳು ಮತ್ತು ಶಿಕ್ಷಣ ಖಾತರಿ ಯೋಜನೆಯನ್ನು ಎಲ್ಲಾ ೧೧೪ ಹಿಂದುಳಿದ ತಾಲೂಕುಗಳಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕು.

೫. ಗುಲಬರ್ಗಾದಲ್ಲಿ ಕೇಂದ್ರ ಸ್ಥಾನವಿರುವಂತೆ ಉತ್ತರ ಕರ್ನಾಟಕದಲ್ಲಿ ಒಂದು ಪ್ರತ್ಯೇಕ ಹಣಕಾಸು ಮತ್ತು ಅಭಿವೃದ್ಧಿ ಕಂಪನಿಯನ್ನು ಸ್ಥಾಪಿಸಬೇಕು.

೬. ಪ್ರಾಥಮಿಕ ಶಿಕ್ಷಣ ವಿಷಯದಲ್ಲಿ ಪ್ರಾಥಮಿಕ ಶಾಲೆಯಿಲ್ಲದ ಯಾವುದೇ ಹಳ್ಳಿ ಇರಬಾರದು.

೭. ಉತ್ತರ ಕರ್ನಾಟಕ ಪ್ರದೇಶದಲ್ಲಿ ಸರಕಾರಿ ಪಾಲಿಟೆಕ್ನಿಕ್, ಐ.ಟಿ.ಐ. ಕಾಲೇಜು ಮುಂತಾದವುಗಳನ್ನು ಪ್ರಾರಂಭಿಸಬೇಕು. ಹೊಸ ಸಂಸ್ಥೆಗಳನ್ನು ಪ್ರಾರಂಭಿಸಲು ಖಾಸಗಿ ಆಡಳಿತ ಮಂಡಳಿಗಳಿಗೆ ಅನುದಾನದ ಸೌಲಭ್ಯ ವಿತರಿಸಬೇಕು."[೯]

### ೫.೨.೨. ಯಾದಗಿರಿ ಜಿಲ್ಲೆ ಮತ್ತು ಸಂವಿಧಾನದ ೩೭೧ನೇ ಕಲಂ

ಪ್ರಾದೇಶಿಕ ಅಸಮಾನತೆಯಿಂದ, ಹಿಂದುಳಿದಿರುವಿಕೆಯಿಂದ ತನ್ನ ಅಸ್ತಿತ್ವವನ್ನೇ ವಿಭಿನ್ನವಾಗಿ ಗುರುತಿಸಿಕೊಂಡಿರುವಂತಹ ಕರ್ನಾಟಕದ ಒಂದು ಭಾಗವೇ ಹೈದರಾಬಾದ್ ಕರ್ನಾಟಕ. ಹೈದರಾಬಾದ್ ನಿಜಾಮರ ಪ್ರಭುತ್ವದಿಂದ ಪ್ರಜಾಪ್ರಭುತ್ವದ ಜನಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರಗೊಂಡಾಗ ಅಖಂಡ ಕರ್ನಾಟಕ ಮತ್ತು ಅದರ ಸಮೃದ್ಧಿಯ ಕನಸು ಕಂಡ ಈ ಭಾಗದ ಜನರಿಗೆ ಬದಲಾವಣೆಯ ಬದುಕು ಸುಧಾರಣೆ ತರಲಿಲ್ಲ. ನಿಜಾಮರ ಪ್ರಭುತ್ವದಿಂದ ಪ್ರಜಾಪ್ರಭುತ್ವದವರೆಗೆ ನಡೆದುಬಂದ ದಾರಿ ಅಸಮಾನತೆಯ ದಾರಿಯಾಯಿತು. ಇಲ್ಲಿಯ ಜನರ ಬದುಕು ಅಭಿವೃದ್ಧಿಯ ಚಲನೆಗೆ ಒಳಪಡದೆ ನಿಂತ ನೀರಾಯಿತು. ನಿಜಾಮರ ಆಳ್ವಿಕೆಗೆ ಒಳಪಟ್ಟಾಗಲೇ ನಿರ್ಲಕ್ಷ್ಯಕ್ಕೆ, ಅಸಮಾನತೆಗೆ ಈಡಾಗಿದ್ದ ಪ್ರದೇಶ ಸ್ವಾತಂತ್ರ್ಯದ ನಂತರ ಆಳಿದ ಸರಕಾರಗಳ, ಜನಪ್ರತಿನಿಧಿಗಳ ಪ್ರಾಮಾಣಿಕ ಕಾಳಜಿ ಹಾಗೂ ಸಂಕಲ್ಪದ ಕೊರತೆಯಿಂದ ಸಂವಿಧಾನಬದ್ಧವಾಗಿ ದೊರಕಬಹುದಾದ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲವಾಯಿತು. ಇಂತಹ ವಿಫಲತೆಯ ಗಂಭೀರ ಪರಿಣಾಮವೇ 'ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಗಾಗಿ ನಡೆಯುತ್ತಿರುವ ಹೋರಾಟವಾಗಿದೆ. ಆ ಹೋರಾಟದಿಂದ ೩೭೧ನೇ ಕಲಮ್ಮನ್ನು ದಕ್ಕಿಸಿಕೊಂಡಿದ್ದಾರೆ.

ಹೈದರಾಬಾದ್ ಕರ್ನಾಟಕ ಭಾಗಗಳು ನಿಜಾಮರ ಆಳ್ವಿಕೆಗೆ ಒಳಪಟ್ಟಾಗಿನಿಂದಲೂ ಅತ್ಯಂತ ಹಿಂದುಳಿದ ಭಾಗಗಳಾಗಿದ್ದವು. ಅಭಿವೃದ್ಧಿಯಲ್ಲಿ ತೀರಾ ಹಿಂದುಳಿದಿದ್ದವು. ದುರ್ದೈವದ ಸಂಗತಿ ಎಂದರೆ ಸ್ವಾತಂತ್ರ್ಯದ ನಂತರವೂ ಈ ಪ್ರದೇಶಗಳ ಸ್ಥಿತಿಗತಿ ಹಾಗೆಯೇ ಮುಂದುವರಿದಿದೆ. ಡಾ. ಡಿ.ಎಂ. ನಂಜುಂಡಪ್ಪ ವರದಿಯು ಇದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. ಆದರೆ ನೆರೆಯ 'ತೆಲಂಗಾಣ' ಮತ್ತು 'ವಿದರ್ಭ' ಪ್ರಾಂತ್ಯಗಳು ಆಡಳಿತಾರೂಢ ಸರಕಾರಗಳ ಪ್ರಯತ್ನದಿಂದ ಸಂವಿಧಾನದ ೩೭೧ನೇ ಕಲಂನ ಪ್ರಯೋಜನ ಪಡೆದು, ಶಿಕ್ಷಣ ಹಾಗೂ ಉದ್ಯೋಗದಲ್ಲಿ ಸ್ಥಳೀಯರಿಗೆ ಮೀಸಲಾತಿಯನ್ನು ಹಾಗೂ ಕೇಂದ್ರದ ಹಣಕಾಸಿನ ನೆರವನ್ನು ಪಡೆದು ಅಭಿವೃದ್ಧಿ ಪಥದಲ್ಲಿ ಸಾಗಿದ್ದವು. ಆದರೆ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಇಂತಹ ಸೌಲಭ್ಯ ಲಭ್ಯವಾಗಲಿಲ್ಲ. ಯಾವ ಸರಕಾರಗಳು ಹಾಗೂ ರಾಜಕೀಯ ಮುಖಂಡರು ಇದರ ಬಗ್ಗೆ ಹೆಚ್ಚಿನ ಕಾಳಜಿ ವಹಿಸಲಿಲ್ಲ. ೨೦೦೨ರಲ್ಲಿ ಸೌಲಭ್ಯ ಪಡೆಯಲು ಜನತೆಯ ಒತ್ತಾಯಕ್ಕೆ ಮಣಿದ ಸರಕಾರ ಪ್ರಯತ್ನಿಸಿದರೂ ಕೇಂದ್ರ ಸರಕಾರ ಇದನ್ನು ತಿರಸ್ಕರಿಸಿತು. ತಮ್ಮ ಹಕ್ಕೊತ್ತಾಯ ಮಾಡಿ ಅಗತ್ಯವಾದದ್ದನ್ನು ಪಡೆಯುವ ಅರಿವು ಇಲ್ಲಿನ ಜನಸಮುದಾಯಗಳಲ್ಲಿ ಬೇಗ ಬರಲಿಲ್ಲ. ಆದರೆ ಇತ್ತೀಚೆಗೆ ಮೂಲಭೂತ ಅವಕಾಶಗಳಿಂದ ವಂಚಿತರಾದ, ತಮ್ಮ ಸ್ಥಿತಿಗತಿಯ ಬಗ್ಗೆ ಅರಿವು ಪಡೆದ, ವಿದ್ಯಾರ್ಥಿಗಳು, ಮುಖಂಡರು, ಸುಧಾರಕರ ಚಿಂತನೆಯ ಫಲವಾಗಿ, ಸಂವಿಧಾನದ ೨೭೧ನೇ ಕಲಂಗೆ ತಿದ್ದುಪಡಿ ಮಾಡಿ ಹೈದರಾಬಾದ್ ಕರ್ನಾಟಕ ಭಾಗಕ್ಕೆ ವಿಶೇಷ ಸ್ಥಾನಮಾನ ಕಲ್ಪಿಸಿ ಎನ್ನುವ ಹೋರಾಟಕ್ಕೆ ಇದೀಗ ಪ್ರತಿಫಲ ದೊರೆತಿದೆ.

**ಸಂವಿಧಾನದ ೩೭೧ನೇ ಕಲಂ**

"ಭಾರತದ ಒಕ್ಕೂಟ ವ್ಯವಸ್ಥೆಯಲ್ಲಿ ರಾಜ್ಯಗಳ ವಿಭಿನ್ನ ಸ್ಥಿತಿಗತಿಗಳನ್ನು ಅರಿತ ಸಂವಿಧಾನದ ಕರ್ತೃಗಳು, ಒಕ್ಕೂಟ ವ್ಯವಸ್ಥೆಯಲ್ಲಿ ಸರ್ವರಿಗೂ ಸಮಪಾಲು, ಸಮಬಾಳು ನೀಡುವ ಆಶಯದೊಂದಿಗೆ, ಯಾವುದೇ ರಾಜ್ಯದ ಭೂಭಾಗವು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಹಿಂದುಳಿದ ಭಾಗಗಳಿಗೆ ನ್ಯಾಯ ದೊರಕಿಸಲು ಮತ್ತು ದೇಶದಲ್ಲಿನ ಬುಡಕಟ್ಟು ಹಾಗೂ ಗುಡ್ಡಗಾಡು ಪ್ರದೇಶ ಮತ್ತು ಬೇರೆ ಬೇರೆ ಕಾರಣಗಳಿಂದ ಹಿಂದುಳಿದಿರುವ ಪ್ರದೇಶಗಳನ್ನು ಪ್ರಗತಿಯ ವಾಹಿನಿಗೆ ತರುವ ನಿಟ್ಟಿನಲ್ಲಿ, ಅಸಮಾನತೆಯ ನಿವಾರಣೆಗಾಗಿ ಸಂವಿಧಾನದಲ್ಲಿ ವಿಶೇಷ ಸವಲತ್ತುಗಳನ್ನು ನೀಡುವ ಕಲಮುಗಳನ್ನು ಅಳವಡಿಸಿದ್ದಾರೆ."[೧೦] ಒಕ್ಕೂಟ ವ್ಯವಸ್ಥೆಯಲ್ಲಿ ಅಭಿವೃದ್ಧಿಯ ಗತಿ ಪ್ರದೇಶದಿಂದ ಪ್ರದೇಶಕ್ಕೆ ತಾರತಮ್ಯದಿಂದ ಕೂಡಿರಬಾರದು. ಒಂದು ಪ್ರದೇಶ ಸಮೃದ್ಧಿಯಿಂದ ಕೂಡಿದ್ದು ಮತ್ತೊಂದು ತೀರಾ ಹಿಂದುಳಿದು ಅಲ್ಲಿನ ಜನ ಹಲವು ಸೌಲಭ್ಯಗಳಿಂದ ವಂಚಿತರಾಗಿರಬಾರದು ಎನ್ನುವ ಸದುದ್ದೇಶದಿಂದ ಅಸಮಾನತೆ ನಿವಾರಣೆಗೆ ವಿಶೇಷ ಸವಲತ್ತುಗಳನ್ನು ನೀಡಲು ಸಂವಿಧಾನದಲ್ಲಿ ಅವಕಾಶ ಕಲ್ಪಿಸಿದ್ದಾರೆ. ಈ ಪ್ರಕಾರ ಸಂವಿಧಾನದ ೩೭೧ನೇ ಕಲಂ ಒಕ್ಕೂಟ ವ್ಯವಸ್ಥೆಯಲ್ಲಿ ಹಿಂದುಳಿದ ಮತ್ತು ಅಸಮಾನತೆಗೆ ಒಳಗಾದ ರಾಜ್ಯಗಳಿಗೆ ವಿಶೇಷ ಸ್ಥಾನಮಾನ ನೀಡುವ ಮೂಲಕ ಅಲ್ಲಿನ ಪ್ರದೇಶಗಳ ಅಭಿವೃದ್ಧಿಗೆ ಪೂರಕವಾಗುವಂತೆ ಮಾಡಿದರು.

"೩೭೧ನೇ ಕಲಂ ಅನ್ವಯ ಭಾರತದ ಬೇರೆ ಬೇರೆ ರಾಜ್ಯಗಳ ವಿಭಿನ್ನ ಪ್ರದೇಶಗಳ ಧಾರ್ಮಿಕ ಕಟ್ಟಳೆ ಮತ್ತು ವಿಶಿಷ್ಟ ಸಂಪ್ರದಾಯಗಳ ರಕ್ಷಣೆ ಹಾಗೂ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಯಲ್ಲಿ ಯಾವುದೇ ರೀತಿಯ ವಿಶಿಷ್ಟ ಕಾನೂನು, ಸವಲತ್ತು, ವಿಶೇಷ ಅನುದಾನ ನೀಡಿದರೆ ಅದನ್ನು ದೇಶದ ಪ್ರಜೆಗಳು ನ್ಯಾಯಾಲಯದಲ್ಲಿ ಪ್ರಶ್ನಿಸಲು ಬರುವುದಿಲ್ಲ. ಇದರ ಅನ್ವಯ ಸಂವಿಧಾನದ ತಿದ್ದುಪಡಿಯ ಮೂಲಕ ಕೇಂದ್ರ ಸರಕಾರ ಈಗಾಗಲೇ ಅರುಣಾಚಲ ಪ್ರದೇಶ, ಆಂಧ್ರ, ಅಸ್ಸಾಂ, ಗುಜರಾತ್, ಗೋವಾ, ನಾಗಾಲ್ಯಾಂಡ್, ಮಣಿಪುರ, ಮಹಾರಾಷ್ಟ್ರ, ಮಿಜೋರಾಂ, ಸಿಕ್ಕಿಂ ಕೊನೆಗೆ ಹೈದರಾಬಾದ್ ಕರ್ನಾಟಕ ಪ್ರದೇಶಗಳಿಗೆ ೩೭೧ನೇ ಕಲಂನಡಿ ವಿವಿಧ ಉಪಬಂಧಗಳಿಂದ ವಿಶೇಷ ಸೌಲಭ್ಯ ನೀಡಿದೆ."[೧೧]

**ಸಂವಿಧಾನದ ೩೭೧ನೇ ಕಲಂನ ಉಪಬಂಧಗಳು**

"೩೭೧ನೇ ಕಲಂನ 'ಎ' ಉಪಬಂಧವು, ತೆಲಂಗಾಣ, ವಿದರ್ಭ, ಮರಾಠವಾಡ, ಸೌರಾಷ್ಟ್ರ, ಕಚ್ ಮತ್ತು ಅಗತ್ಯವೆನಿಸಿದರೆ, ಉಳಿದ ಭಾಗಗಳ ಅಭಿವೃದ್ಧಿಗೆ ಪ್ರತ್ಯೇಕ ಮಂಡಳಿಗಳನ್ನು ರಚಿಸಬೇಕು, ಅವುಗಳ ಪ್ರತಿಯೊಂದು ಕಾರ್ಯವೈಖರಿ ಕುರಿತು ಪ್ರತಿ ವರ್ಷ ವಿಧಾನಸಭೆ ಮುಂದೆ ವರದಿ ಮಂಡಿಸಬೇಕು ಎನ್ನುವ ವಿವರ ಒಳಗೊಂಡಿದೆ. ೩೭೧ನೇ ಕಲಂನ 'ಬಿ' ಉಪಬಂಧವು, ಇಡೀ ರಾಜ್ಯದ ಅವಶ್ಯಕತೆ ಗಮನಿಸಿ, ಸೂಚಿತ ಪ್ರದೇಶಗಳ ಅಭಿವೃದ್ಧಿಗಾಗಿ ನ್ಯಾಯಸಮ್ಮತ ನಿಧಿ ಹಂಚಬೇಕು ಎಂದು ಹೇಳುತ್ತದೆ. ೩೭೧ನೇ ಕಲಂನ 'ಸಿ' ಉಪಬಂಧವು, ರಾಜ್ಯದ ಅಗತ್ಯಕ್ಕೆ ಎಲ್ಲ ಸೂಚಿತ ಪ್ರದೇಶಗಳಲ್ಲಿ ತಾಂತ್ರಿಕ ಶಿಕ್ಷಣ ಹಾಗೂ ವೃತ್ತಿ ತರಬೇತಿಗಾಗಿ ವಿಶೇಷ ಸೌಲಭ್ಯ ನೀಡಬೇಕು ಮತ್ತು ರಾಜ್ಯ ಸರಕಾರಿ ಅಧೀನದ ಸೇವೆಗಳಲ್ಲಿ ಸ್ಥಳೀಯರಿಗೆ ಉದ್ಯೋಗಾವಕಾಶ ನೀಡುವ ನ್ಯಾಯಸಮ್ಮತ ವ್ಯವಸ್ಥೆಯನ್ನು ಮಾಡಬೇಕು ಎಂದು ಹೇಳುತ್ತದೆ. ೩೭೧ನೇ ಕಲಂನ 'ಡಿ' ಉಪಬಂಧವು ಆಂಧ್ರಪ್ರದೇಶಕ್ಕೆ ಸಂಬಂಧಪಟ್ಟಂತೆ ಇಡೀ ರಾಜ್ಯದ ಅಗತ್ಯತೆಗಳನ್ನು ಗಮನದಲ್ಲಿರಿಸಿ ಸರ್ಕಾರಿ ಉದ್ಯೋಗದ ವಿಷಯದಲ್ಲಿ ಮತ್ತು ಶಿಕ್ಷಣದ ವಿಷಯದಲ್ಲಿ ಆ ರಾಜ್ಯದ ವಿಭಿನ್ನ ಭಾಗಗಳಿಗೆ ಸೇರಿದ ಜನರಿಗೆ ನ್ಯಾಯಸಮ್ಮತವಾದ ಅವಕಾಶಗಳು ಹಾಗೂ ಸೌಲಭ್ಯಗಳು ದೊರೆಯುವಂತೆ ಆದೇಶದ ಮೂಲಕ ಉಪಬಂಧಿಸಿದೆ."[೧೨] ೩೭೧(೨) ಆ ಉಪಬಂಧವು ವಿದರ್ಭ ಮಾದರಿಯಲ್ಲಿ ನೀಡಿರುವ ಸೌಲಭ್ಯವೆಂದರೆ ಕೇಂದ್ರದಿಂದ ನಿರ್ದಿಷ್ಟ ಪ್ರದೇಶಕ್ಕೆ ಅಭಿವೃದ್ಧಿ ಪ್ರಾಧಿಕಾರ ರಚನೆ, ಸುಮಾರು ೧೦೦೦ ಕೋಟಿ ರೂಪಾಯಿ ಪ್ಯಾಕೇಜ್, ಕೇಂದ್ರದಿಂದ ಪ್ರಾಧಿಕಾರದ ಕೆಲಸಕ್ಕೆ ಶೇ. ೪೦ರಿಂದ ೬೦ರಷ್ಟು ಅನುದಾನ ನೀಡುವುದಾಗಿದೆ.

**ಸಂವಿಧಾನದ ೩೭೧ನೇ ಕಲಂಗೆ ತಿದ್ದುಪಡಿಗಳು**

ಇದುವರೆಗೆ ಸಂವಿಧಾನದ ೩೭೧ನೇ ಕಲಂಗೆ ಒಟ್ಟು ಎಂಟು ಬಾರಿ ತಿದ್ದುಪಡಿಗಳಾಗಿವೆ. ಹೈದರಾಬಾದ್ ಕರ್ನಾಟಕಕ್ಕೆ ಮಾಡುವುದು ೯ನೇ ತಿದ್ದುಪಡಿಯಾಗಿದೆ. ೧೯೫೬ ಏಪ್ರಿಲ್ ೧೪ರಂದು ಕೇಂದ್ರ ಗೃಹಸಚಿವ ಗೋವಿಂದ ವಲ್ಲಭಪಂತ್ ಅವರು ಸಂವಿಧಾನದ ೭ನೇ ತಿದ್ದುಪಡಿ ವಿಧೇಯಕವನ್ನು ಸಂಸತ್ತಿನಲ್ಲಿ ಮಂಡಿಸಿದ್ದರು. ಇದರಲ್ಲಿ ಸಂವಿಧಾನದ ವಿವಿಧ ಕಲಂಗಳ ತಿದ್ದುಪಡಿ ಜೊತೆಗೆ ಕಲಂ ೩೭೧ಕ್ಕೆ ತಿದ್ದುಪಡಿ ಮಾಡಿ ಆಗಿನ ಮುಂಬೈ ರಾಜ್ಯ

ಹಾಗೂ ಹೊಸದಾಗಿ ಅಸ್ತಿತ್ವಕ್ಕೆ ಬರುವ ಆಂಧ್ರಪ್ರದೇಶ ರಾಜ್ಯಕ್ಕೆ ವಿಶೇಷ ಸ್ಥಾನಮಾನ ಕಲ್ಪಿಸುವ ವಿಷಯವೂ ಸೇರಿತ್ತು.

"೧೯೭೯ರಲ್ಲಿ ಅಸ್ಸಾಂಗಾಗಿ 'ಬಿ'–(೨೨ನೇ ತಿದ್ದುಪಡಿ)

೧೯೭೨ರಲ್ಲಿ ಮಿಜೋರಾಂಗಾಗಿ 'ಸಿ'–(೨೭ನೇ ತಿದ್ದುಪಡಿ)

೧೯೭೪ರಲ್ಲಿ ತೆಲಂಗಾಣ ಮತ್ತು ಆಂಧ್ರಪ್ರದೇಶಕ್ಕಾಗಿ 'ಡಿ' ಮತ್ತು 'ಇ'–(೩೩ನೇ ತಿದ್ದುಪಡಿ)

೧೯೭೫ರಲ್ಲಿ ಸಿಕ್ಕಿಂಗಾಗಿ 'ಎಫ್'–(೩೭ನೇ ತಿದ್ದುಪಡಿ)

೧೯೮೭ರಲ್ಲಿ ಮಿಜೋರಾಂಗಾಗಿ 'ಜಿ'(೫೪ನೇ ತಿದ್ದುಪಡಿ)

೧೯೮೭ರಲ್ಲಿ ಅರುಣಾಚಲ ಪ್ರದೇಶಕ್ಕಾಗಿ 'ಎಚ್'–(೫೬ನೇ ತಿದ್ದುಪಡಿ)

೧೯೮೭ರಲ್ಲಿ ಗೋವಾ ರಾಜ್ಯಕ್ಕಾಗಿ 'ಐ'–(೫೭ನೇ ತಿದ್ದುಪಡಿ) ಮಾಡಲಾಗಿದೆ.

೨೦೧೨ರಲ್ಲಿ ಕರ್ನಾಟಕ ರಾಜ್ಯದ ಹೈದರಾಬಾದ್ ಕರ್ನಾಟಕಕ್ಕಾಗಿ 'ಜೆ'(೮೧ನೇ ತದ್ದುಪಡಿ) ಮಾಡಲಾಗಿದೆ.

**ಆಂಧ್ರಪ್ರದೇಶಕ್ಕೆ ನೀಡಿದ ವಿಶೇಷ ಸ್ಥಾನಮಾನ**

ಸಂವಿಧಾನದ ೩೭೧ನೇ 'ಡಿ' ಉಪಬಂಧವು ತುಂಬಾ ಗಮನಾರ್ಹ ಅಂಶವಾಗಿದೆ. ಕಲಂನಡಿಯಲ್ಲಿ ಆಂಧ್ರಪ್ರದೇಶವು ವಿಶೇಷ ಸವಲತ್ತು ಪಡೆದುಕೊಂಡಿದೆ. ವಿಶೇಷವಾಗಿ ಆಂಧ್ರಪ್ರದೇಶ ವನ್ನೇ ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದ 'ಡಿ' ಉಪಬಂಧವು ಸಂವಿಧಾನದ ೩೭೧ನೇ ಕಲಂನಲ್ಲಿ ಸೇರಬೇಕಾದ ಹಿನ್ನೆಲೆ ಏನೆಂಬುದು ಇಲ್ಲಿ ತುಂಬಾ ಮಹತ್ವವಾಗಿದೆ. ೩೭೧ನೇ 'ಎ' ಉಪಬಂಧ ಪ್ರಕಾರ ೧೯೫೬ರಲ್ಲಿ ಆಂಧ್ರಪ್ರದೇಶಕ್ಕೆ ಸೇರಿದ ತೆಲಂಗಾಣದ ಪ್ರದೇಶಕ್ಕೆ ವಿಶೇಷ ಸ್ಥಾನಮಾನದ ಸೌಲಭ್ಯ ಸಿಗುತ್ತಿದ್ದಂತೆಯೇ ಉಳಿದ ಭಾಗಗಳಲ್ಲಿ ಅತೃಪ್ತಿಯ ಅಲೆಗಳೆದ್ದವು.

ತೆಲಂಗಾಣ ಪ್ರದೇಶಕ್ಕೆ ಸಿಕ್ಕಂತಹ ವಿಶೇಷ ಸ್ಥಾನಮಾನ ಇಡೀ ಆಂಧ್ರಪ್ರದೇಶಕ್ಕೆ ಜಾರಿಯಾಗ ಬೇಕು ಎನ್ನುವ ಬೇಡಿಕೆಯನ್ನಿಟ್ಟು ದೆಹಲಿ ರಾಜಕೀಯ ವಲಯದಲ್ಲಿ ತುಂಬಾ ಪ್ರಭಾವಿತರಾಗಿದ್ದ ಮತ್ತು ರಾಜಕೀಯ ಮುತ್ಸದ್ದಿಗಳಾಗಿದ್ದ ನೀಲಂ ಸಂಜೀವರೆಡ್ಡಿ, ಪಿ.ವಿ. ನರಸಿಂಹರಾವ್, ಚೆನ್ನಾ ರೆಡ್ಡಿ, ರಂಗಾರೆಡ್ಡಿ ಮುಂತಾದವರು ಹೋರಾಟಕ್ಕಿಳಿದರು. ಅದರಲ್ಲೂ ಚೆನ್ನಾರೆಡ್ಡಿ ನೇತೃತ್ವದ 'ಪ್ರಜಾ ಪರಿಷತ್' ಹೋರಾಟವು ೧೯೭೦ರ ದಶಕದಲ್ಲಿ ಆಂಧ್ರದಾದ್ಯಂತ ಬಿರುಗಾಳಿ ಎಬ್ಬಿಸಿತು. ತೆಲಂಗಾಣಕ್ಕೆ ನೀಡಿದ ೩೭೧ನೇ ಕಲಮಿನ ವಿಶೇಷ ಸ್ಥಾನಮಾನವನ್ನು ಸಂಪೂರ್ಣವಾಗಿ ಆಂಧ್ರಪ್ರದೇಶಕ್ಕೆ ನೀಡಬೇಕು ಎಂಬುದೇ ಪ್ರಜಾಪರಿಷತ್ತಿನ ಆಂದೋಲನದ ಬೇಡಿಕೆಯಾಗಿತ್ತು. ಹೋರಾಟ ಹಿಂಸಾರೂಪಕ್ಕೆ ತಿರುಗಿದಾಗ ಪರಿಸ್ಥಿತಿಯ ಗಂಭೀರತೆಯನ್ನು ತಿಳಿದ ಆಗಿನ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ, ಇಡೀ ಆಂಧ್ರಪ್ರದೇಶಕ್ಕೆ ವಿಶೇಷ ಸ್ಥಾನಮಾನ ನೀಡಲು ಒಪ್ಪಿದರು. ಇಡೀ ಆಂಧ್ರಪ್ರದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ೩೭೧ನೇ ಕಲಂನಡಿಯಲ್ಲಿ 'ಡಿ' ಉಪಬಂಧದ ಹಿನ್ನೆಲೆಯಲ್ಲಿ ಅವಲೋಕಿಸಿ ೧೯೭೩ರಲ್ಲಿ ಸಂವಿಧಾನದ ೩೨ನೇ ತಿದ್ದುಪಡಿ ತರುವ ಮೂಲಕ

ತೆಲಂಗಾಣಕ್ಕೆ ನೀಡಿದ ವಿಶೇಷ ಸ್ಥಾನಮಾನ ಪೂರ್ಣ ಆಂಧ್ರಪ್ರದೇಶಕ್ಕೆ ವಿಸ್ತರಿಸಲಾಯಿತು."[೧೩] ಆಗ ೩೭೧ನೇ ಕಲಂಗೆ 'ಡಿ' ಉಪಬಂಧವನ್ನು ಸೇರಿಸಲಾಯಿತು.

"೩೭೧ನೇ ಕಲಂ 'ಡಿ' ಉಪಬಂಧದ ಪ್ರಕಾರ, ರಾಷ್ಟ್ರಪತಿಯು ಆಂಧ್ರಪ್ರದೇಶಕ್ಕೆ ಸಂಬಂಧ ಪಟ್ಟಂತೆ ಇಡೀ ರಾಜ್ಯದ ಅಗತ್ಯತೆಗಳನ್ನು ಗಮನದಲ್ಲಿರಿಸಿ ಸರ್ಕಾರಿ ಉದ್ಯೋಗದ ವಿಷಯದಲ್ಲಿ ಮತ್ತು ಶಿಕ್ಷಣದ ವಿಷಯದಲ್ಲಿ ಆ ರಾಜ್ಯದ ವಿಭಿನ್ನ ಭಾಗಗಳಿಗೆ ಸೇರಿದ ಜನರಿಗೆ ನ್ಯಾಯಸಮ್ಮತ ವಾದ ಅವಕಾಶಗಳು ಹಾಗೂ ಸೌಲಭ್ಯಗಳು ದೊರೆಯುವಂತೆ ಆದೇಶಗಳನ್ನು ಹೊರಡಿಸಬಹುದು. ಹೀಗೆ 'ಡಿ' ಉಪಬಂಧಕ್ಕೆ ೧೦ ನಿಯಾಮಾವಳಿ ಸೇರಿಸಿ ವಿಶೇಷ ಸ್ಥಾನಮಾನ ನೀಡಲಾಯಿತು. ಇದರಿಂದಾಗಿ ಆ ಪ್ರದೇಶದಲ್ಲಿ ಭಾಷಾವಾರು ಪ್ರಾಂತ್ಯ ರಚನೆಗೂ ಮುನ್ನ ಅಸ್ತಿತ್ವದಲ್ಲಿದ್ದ ಮುಲ್ಕಿ ನಿಯಾಮಾವಳಿಗಳು ಮುಂದುವರಿಯುವಂತಾಯಿತು."[೧೪]

## ನಿಜಾಮರ ಮುಲ್ಕಿ ಕಾನೂನು

"ನಿಜಾಮರ ಆಡಳಿತಕ್ಕೊಳಪಟ್ಟಿದ್ದ 'ಹೈದರಾಬಾದ್ ಸಂಸ್ಥಾನವು' ಬಹುಭಾಷಾ ಸಂಸ್ಕೃತಿಯಿಂದ ಕೂಡಿತ್ತು. ಇಲ್ಲಿ ಮರಾಠಿ, ತೆಲುಗು, ಕನ್ನಡ ಭಾಷಿಕರು ಬಹುಸಂಖ್ಯಾತರಾಗಿದ್ದರು. ಕೇವಲ ಶೇ.೧೨ರಷ್ಟು ಜನಸಂಖ್ಯೆ ಮುಸ್ಲಿಮರದಾಗಿತ್ತು."[೧೫] ಹಾಗಿದ್ದರೂ ಆಡಳಿತ ಭಾಷೆ ಹಾಗೂ ಶಿಕ್ಷಣ ಮಾಧ್ಯಮ 'ಉರ್ದು' ಭಾಷೆಯಾಗಿತ್ತು. ಪ್ರಭುತ್ವ ಯಾರದೋ ಅವರ ಭಾಷೆಯಲ್ಲಿ ಆಡಳಿತ, ಶಿಕ್ಷಣ ನಡೆಯುವುದು ರೂಢಿಯಾಗಿತ್ತು. ಇತರ ಭಾಷಿಕರನ್ನು ಪ್ರೋತ್ಸಾಹಿಸುವ ಶಿಕ್ಷಣ ಸಂಸ್ಥೆಗಳು ಬಹಳ ವಿರಳವಾಗಿದ್ದವು, ಹೀಗಾಗಿ ಉರ್ದು ಭಾಷೆಯಲ್ಲಿ ಶಿಕ್ಷಣ ಪಡೆದವರಿಗೆ ಸರಕಾರಿ ಉದ್ಯೋಗಗಳು ಸಿಗುತ್ತಿದ್ದವು, ಅದರಲ್ಲೂ ಉತ್ತರ ಭಾರತದ 'ಆಲಿಘಡ ಮುಸ್ಲಿಂ ವಿಶ್ವವಿದ್ಯಾಲಯದ' ಉರ್ದು ಮಾಧ್ಯಮದ ಅಭ್ಯರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಸರಕಾರಿ ಹುದ್ದೆಗೆ ನೇಮಕಗೊಳ್ಳುತ್ತಿದ್ದರು. ಇದರಿಂದ ಸ್ಥಳೀಯರು ಶಿಕ್ಷಣ ಹಾಗೂ ಉದ್ಯೋಗದಿಂದ ವಂಚಿತರಾಗುತ್ತಿದ್ದರು. ಇದನ್ನು ಮನಗಂಡು ಹೈದರಾಬಾದ್ ನಿಜಾಮರು ೧೯೧೯ರಲ್ಲಿ ರಾಜ್ಯದ ನೌಕರಿಗಳು ಇದೇ ರಾಜ್ಯದಲ್ಲಿನ ಅಭ್ಯರ್ಥಿಗಳಿಗೆ ಸಿಗಬೇಕೆಂದು **'ಮುಲ್ಕಿ'** ಕಾನೂನು ಜಾರಿಗೆ ತಂದರು.

"ಮುಲ್ಕಿ ಎಂದರೆ ಉರ್ದುವಿನಲ್ಲಿ ಸ್ಥಳೀಯರು ಎಂದರ್ಥ. ಮುಲ್ಕಿ ಕಾನೂನು ಎಂದರೆ ಹೈದರಾಬಾದ್ ಸಂಸ್ಥಾನದಲ್ಲಿ ೧೫ ವರ್ಷಗಳಿಂದ ಸ್ಥಳೀಯರಾಗಿ ವಾಸಿಸುವವರಿಗೆ ಎಲ್ಲಾ ಸರಕಾರಿ ಹುದ್ದೆಗಳ ನೇಮಕಾತಿ ಮತ್ತು ಶಿಕ್ಷಣದಲ್ಲಿ ಶೇ. ೭೦ರಿಂದ ಶೇ. ೮೦ ಸ್ಥಾನಗಳನ್ನು ಸ್ಥಳೀಯರಿಗೆ ಮೀಸಲು ನೀಡುವುದು."[೧೬] ಆಂಧ್ರಪ್ರದೇಶದ ತೆಲಂಗಾಣದಲ್ಲಿ ಈಗಲೂ ಈ ವಿಧಿಗಳ ಪ್ರಕಾರ 'ಮುಲ್ಕಿ ಕಾನೂನು' ಜಾರಿಯಲ್ಲಿದೆ. ಆದರೆ ಕರ್ನಾಟಕಕ್ಕೆ ಸೇರ್ಪಡೆಗೊಂಡ ಬೀದರ್, ಗುಲಬರ್ಗಾ, ಯಾದಗಿರಿ, ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳನ್ನೊಳಗೊಂಡ ಪ್ರದೇಶಕ್ಕೆ ಮುಲ್ಕಿ ನಿಯಮವನ್ನು ಕೈ ಬಿಡಲಾಯಿತು. ಇದನ್ನು ಪ್ರಶ್ನಿಸಿ ಆಗ ಕೋರ್ಟ್ ಮೆಟ್ಟಿಲೇರಿದ್ದಾಗ ೭೦ರ ದಶಕದಲ್ಲಿ ಸುಪ್ರೀಂ ಕೋರ್ಟ್ ನಿಯಮವನ್ನು ಎತ್ತಿ ಹಿಡಿದಿದೆ. ಇತ್ತೀಚೆಗೆ ನಿಯಮದ ಜಾರಿಗೆ ಕೋರಿ ಮಾಜಿ ಮಂತ್ರಿಗಳು ಹಾಗೂ ಹೈದರಾಬಾದ್ ಕರ್ನಾಟಕ ಹೋರಾಟ ಸಮಿತಿ ಅಧ್ಯಕ್ಷರಾದ ವೈಜನಾಥ ಪಾಟೀಲ ಅವರು ನಿಯಮದ ಜಾರಿಗೆ ಕೋರಿ

ಹೈಕೋರ್ಟ್‌ನಲ್ಲಿ ಅರ್ಜಿ ಸಲ್ಲಿಸಿ ಹೋರಾಟ ಮಾಡಿದಾಗ ಕೊನೆಗೆ ಸುಪ್ರೀಂ ಕೋರ್ಟ್ ೨೦೧೨ರಲ್ಲಿ ಅನುಮತಿಯನ್ನು ನೀಡಿದ ಫಲವಾಗಿ ೩೭೧(ಜೆ) ಕಲಂ ಜಾರಿಗೆ ಬಂದಿದೆ. ಆದರೆ ಇದರ ಬೆಳವಣಿಗೆಯನ್ನು ಕಾದು ನೋಡಬೇಕಾಗಿದೆ.

**ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಗೆ ಕೂಗು**

"ನಿಜಾಮರ ಆಳ್ವಿಕೆಯಲ್ಲಿ ಉದಾಸೀನಕ್ಕೊಳಗಾದ ಹೈದರಾಬಾದ್ ಕರ್ನಾಟಕ ಇಂದು ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ದಕ್ಷಿಣ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದ ನಡುವೆ ೫೦ ವರ್ಷಗಳಷ್ಟು ಹಿರಿತನ, ಕಿರಿತನ ಕಂಡುಬರುತ್ತದೆ. ಹೀಗಿದ್ದೂ ಸರಕಾರವು ಕರ್ನಾಟಕದ ಇತರ ಪ್ರದೇಶಗಳ ಅಭಿವೃದ್ಧಿಗೆ ಮಾಡಿದ ವೆಚ್ಚಕ್ಕೆ ಹೋಲಿಸಿದಾಗ, ಹೈದರಾಬಾದ್ ಕರ್ನಾಟಕದ ಪ್ರದೇಶದ ಅಭಿವೃದ್ಧಿಗೆ ಮಾಡಿರುವ ವೆಚ್ಚ ಬಹಳ ಕಡಿಮೆ. ಹೀಗಾಗಿ ಈ ಪ್ರದೇಶದ ಅಭಿವೃದ್ಧಿಗೆ ವಿಶೇಷ ಸ್ಥಾನಮಾನದ ತಿದ್ದುಪಡಿಗೆ ಕೂಗು ಹೆಚ್ಚಾಗತೊಡಗಿತು."[೧೭] ಆರಂಭದಲ್ಲಿ ಸರಕಾರ, ಜನಪ್ರತಿನಿಧಿಗಳ ನಿರ್ಲಕ್ಷ್ಯದಿಂದ ವಿಷಯ ಮರೆತೇ ಹೋಗಿತ್ತು. ಆದರೆ ೯೦ರ ದಶಕದ ನಂತರ ಇದು ಮರುಜೀವ ಪಡೆಯಿತು.

ಆರಂಭದಲ್ಲಿ ಹೈದರಾಬಾದ್ ಕರ್ನಾಟಕದ ನಾಯಕರಾಗಿದ್ದ ಶ್ರೀ ವೀರೇಂದ್ರ ಪಾಟೀಲ, ಮಹಾದೇವಪ್ಪ ರಾಂಪುರೆ, ಬಾಪುಗೌಡ ದರ್ಶನಾಪುರ, ಚಂದ್ರಶೇಖರ ಪಾಟೀಲ, ಕಲ್ಯಾಣರಾವ್ ಮರಗುತ್ತಿ, ಸರ್ದಾರ ಶರಣಗೌಡ ಇನಾಮದಾರ, ಮುಕ್ತಿದಾರ, ದಾಸ್ ವಕೀಲರು, ಇನ್ನಿತರರು ಈ ಪ್ರದೇಶದ ಅಭಿವೃದ್ಧಿಗೆ ಅನೇಕ ಬೇಡಿಕೆಗಳನ್ನು, ಒತ್ತಡಗಳನ್ನು ಸರಕಾರದ ಮೇಲೆ ಹೇರಿದರು. ದೇವರಾಜ ಅರಸು ಅವರು ಮುಖ್ಯಮಂತ್ರಿಯಾಗಿದ್ದಾಗ ಸರಕಾರ ಹೈದರಾಬಾದ್ ಕರ್ನಾಟಕ ಪ್ರದೇಶಗಳ ಸ್ಥಿತಿಗತಿಗಳ ಅಧ್ಯಯನಕ್ಕೆ ಧರ್ಮಸಿಂಗ್ ಅವರ ಅಧ್ಯಕ್ಷತೆಯಲ್ಲಿ ಉನ್ನತಮಟ್ಟದ ಸಮಿತಿಯನ್ನು ನೇಮಕ ಮಾಡಿತ್ತು. ಇಡೀ ಪ್ರದೇಶವನ್ನು ಸಂಚರಿಸಿದ ಸಮಿತಿ, ಮೂಲಭೂತ ಸೌಕರ್ಯಗಳು, ಸಣ್ಣ ನೀರಾವರಿ, ಕೈಗಾರಿಕೆಗಳು, ಶಿಕ್ಷಣ, ಆರೋಗ್ಯ ಹೀಗೆ ಹಲವಾರು ಸೌಲಭ್ಯ ಗಳಿಂದ ಪ್ರದೇಶ ವಂಚಿತವಾಗಿರುವುದನ್ನು ಮನಗಂಡಿತು. ತೀರ ಹಿಂದುಳಿದಿರುವ ಈ ಪ್ರದೇಶದ ಪ್ರಗತಿಯಾಗಬೇಕು ಎಂದಾದರೆ ಪ್ರತ್ಯೇಕ ಅಭಿವೃದ್ಧಿ ಮಂಡಳಿ ಇರಬೇಕು. ಅದಕ್ಕಾಗಿ ಸರಕಾರ ತಕ್ಷಣವೇ ನಿಜಾಮರ ಆಡಳಿತ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿಗೆ ಮಂಡಳಿಯನ್ನು ರಚಿಸಿ ಆ ಮೂಲಕ ಸಮರೋಪಾದಿಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು ಎಂದು ಧರ್ಮಸಿಂಗ್ ಸಮಿತಿ ಶಿಫಾರಸು ಮಾಡಿತ್ತು.

ಧರ್ಮಸಿಂಗ್ ಸಮಿತಿ ನೀಡಿದ್ದ ಶಿಫಾರಸಿನಂತೆ ೧೯೯೨ರ ಅಂತ್ಯದಲ್ಲಿ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಕಾರ್ಯಾರಂಭ ಮಾಡಿತು. ಮಂಡಳಿ ಕಾರ್ಯಾರಂಭ ಮಾಡಿದಾಗ ಇಡೀ ಪ್ರದೇಶದ ಜೊತೆ ಜೊತೆಯಲ್ಲಿಯೇ ತಮ್ಮ ಅದೃಷ್ಟವೇ ಖುಲಾಯಿಸಬಹುದು ಎಂದು ಜನ ಭಾವಿಸಿದ್ದರು. ಆದರೆ ಮಂಡಳಿ ಆ ಪ್ರದೇಶದ ಸರ್ವಾಂಗೀಣ ಪ್ರಗತಿಗೆ ಸೂಕ್ತ ವೇದಿಕೆಯಾಗಲಿಲ್ಲ. ಹಾಗೆಂದ ಮಾತ್ರಕ್ಕೆ ಮಂಡಳಿಯ ಕಾರ್ಯ ವೈಖರಿ ಅತೃಪ್ತಿಕರವಾಗೇನೂ ಇಲ್ಲ. ಆದರೆ ಮಂಡಳಿಗೆ ಸಾಕಾಗುವಷ್ಟು ಹಣ ಬಿಡುಗಡೆಯಾಗಿಲ್ಲ ಎಂಬ ಕೊರಗು

ಆರಂಭದಿಂದಲೂ ಇದೆ. ಹೀಗಾಗಿ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಯೊಂದರಿಂದಲೇ ಹಿಂದುಳಿದ ಪ್ರದೇಶದ ಪ್ರಗತಿ ಅಸಾಧ್ಯ ಎಂಬುದನ್ನು ಮನಗಂಡ ಶ್ರೀ ವೈಜನಾಥ ಪಾಟೀಲ ಅವರು ೧೯೯೫ರಲ್ಲಿ ಸಚಿವರಾಗಿದ್ದರೂ, ಹೈದರಾಬಾದ್ ಕರ್ನಾಟಕಕ್ಕೆ ವಿಶೇಷ ಸ್ಥಾನಮಾನದ ಬೇಡಿಕೆಯ ಕೂಗೆಬ್ಬಿಸಿದರು. ಮೂರು ವರ್ಷಗಳ ನಿರಂತರ ಒತ್ತಾಯದ ಮಧ್ಯೆಯೂ ಅವರ ಸ್ವಪಕ್ಷೀಯ ಸರಕಾರ, ಬೇಡಿಕೆಗೆ ಸ್ಪಂದಿಸದೇ ಹೋಯಿತು. ನಂತರ ಶ್ರೀ ವೈಜನಾಥ ಪಾಟೀಲ ಅವರು 'ಹೈದರಾಬಾದ್ ಕರ್ನಾಟಕ ಹೋರಾಟ ಸಮಿತಿ' ಸ್ಥಾಪಿಸಿ ಹೋರಾಟಕ್ಕಿಳಿದರು.

**ಪ್ರಸ್ತುತ ಸ್ಥಿತಿಗತಿಗಳು**

"ಆಂಧ್ರ ಮತ್ತು ಮಹಾರಾಷ್ಟ್ರಕ್ಕೆ ಸೇರಿದ ನಿಜಾಮರ ಪ್ರದೇಶದ ಜನತೆಗೆ ಸಿಕ್ಕ ಭಾವನಾತ್ಮಕ ಹಾಗೂ ಶಾಸನಾತ್ಮಕ ಗೌರವಗಳು, ಅದೇ ಪ್ರದೇಶದಿಂದ ನವ ಮೈಸೂರು ರಾಜ್ಯಕ್ಕೆ ಸೇರಿದ ಜನತೆಗೆ ಬಹಳ ತಡವಾಗಿ ಸಿಕ್ಕಿದ್ದು ದುರದೃಷ್ಟಕರ ಸಂಗತಿಯಾಗಿದೆ. ಈ ಪ್ರದೇಶದ ಜಿಲ್ಲೆಗಳಲ್ಲಿನ ನಿರುದ್ಯೋಗ ಮತ್ತು ಶೈಕ್ಷಣಿಕ ಸಮಸ್ಯೆಗಳ ಕುರಿತು ಎಷ್ಟು ಹೇಳಿದರೂ ಸಾಲದು. ೩೭೧ನೇ ಕಲಮಿನ ಅನ್ವಯ ಹೈದರಾಬಾದ್ ಕರ್ನಾಟಕದ ಸ್ಥಳೀಯ ವಿದ್ಯಾರ್ಥಿ ಸಮೂಹ ವೈದಕೀಯವೂ ಸೇರಿದಂತೆ ಇತರ ವೃತ್ತಿಶಿಕ್ಷಣ ತರಗತಿಗಳಲ್ಲಿ ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿ ಲಭ್ಯವಿರುವ ಒಟ್ಟು ಸ್ಥಾನಗಳಲ್ಲಿ ಶೇ. ೮೦ರಷ್ಟು ಸ್ಥಳೀಯ ವಿದ್ಯಾರ್ಥಿಗಳಿಗೆ ಮೀಸಲಾಗಿರುತ್ತವೆ. ಸರಕಾರದ ನಾಗರಿಕ ಸೇವೆಗಳ ಹುದ್ದೆಗಳಲ್ಲಿ ಸ್ಥಳೀಯವಾಗಿ ಶೇಕಡ ೮೦ರಷ್ಟು ಮೀಸಲು ಸೌಲಭ್ಯ ಪಡೆಯುತ್ತಾರೆ. ಹೈದರಾಬಾದ್ ಕರ್ನಾಟಕ ಜಿಲ್ಲೆಗಳ ವಿದ್ಯಾರ್ಥಿಗಳು ಹೊರ ರಾಜ್ಯದ ವಿದ್ಯಾರ್ಥಿಗಳೊಂದಿಗೆ ಪೈಪೋಟಿ ನಡೆಸಲು ಸಾಧ್ಯವಾಗದೆ, ಶಿಕ್ಷಣದ ಅವಕಾಶಗಳಿಂದ ವಂಚಿತರಾಗಿದ್ದರು. ಈ ಭಾಗದ ವಿದ್ಯಾರ್ಥಿಗಳು ಶೇ. ೭೫ಕ್ಕೂ ಹೆಚ್ಚು ಅಂಕ ಪಡೆದರೂ ಅವರಿಗೆ ವೈದ್ಯ ಮತ್ತು ಇಂಜಿನಿಯರಿಂಗ್ ಸೀಟುಗಳು ಸಿಗುತ್ತಿರಲಿಲ್ಲ."[೧೮]

ರೈತರ ಹೊಲಗಳಿಗೆ ನೀರು ಹಾಯಿಸಬೇಕಾಗಿರುವ ಕೃಷ್ಣಾ, ಆಲಮಟ್ಟಿ, ತುಂಗಭದ್ರಾ, ಭೀಮಾ, ಮುಂತಾದ ನೀರಾವರಿ ಯೋಜನೆಗಳು ಇಂದಿಗೂ ಅಪೂರ್ಣವಾಗಿದ್ದು ರೈತರನ್ನು ಚಿಂತೆಯಲ್ಲಿ ಮುಳುಗಿಸಿವೆ. ಹೈದರಾಬಾದ್ ಕರ್ನಾಟಕ ಪ್ರದೇಶದ ರೈತರಿಗಿಂತ ಆಂಧ್ರ ಮತ್ತು ಮಹಾರಾಷ್ಟ್ರ ರೈತರು ಈ ನದಿಗಳ ನೀರಿನ ಉಪಯೋಗ ಪಡೆಯಲು ಹವಣಿಸುತ್ತಿದ್ದಾರೆ. ಇಲ್ಲಿ ಬಡ ರೈತರ ಜಮೀನುಗಳನ್ನು ಇವರು ಕಡಿಮೆ ಬೆಲೆಗೆ ಖರೀದಿಸಿ ಭೂ ಒಡೆಯರಾಗಿದ್ದಾರೆ. ಕಾವೇರಿ ನದಿ ಹಂಚಿಕೆ ವಿವಾದ ಸೃಷ್ಟಿಯಾದಾಗ ಸರಕಾರ ಕಾಳಜಿ ವಹಿಸಿ ಜನರ ಜೊತೆ ಹೋರಾಟಕ್ಕೆ ಧುಮುಕುತ್ತದೆ. ಆದರೆ ಈ ಭಾಗದ ನದಿಗಳ ನೀರಿನ ಹಂಚಿಕೆಯಿಂದ ರೈತರಿಗೆ ಅನ್ಯಾಯವಾದಾಗ ಜಾಣಕಿವುಡನಂತೆ ವರ್ತಿಸುತ್ತದೆ ಎಂಬುದು ಜನರ ಅಸಮಾಧಾನವಾಗಿದೆ. ಇನ್ನೊಂದು ಕಡೆ ಇಲ್ಲಿನ ಭೂ ಒಡೆತನವು ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರ ನಿಯಂತ್ರಣದಲ್ಲಿದೆ. ಶೇ. ೫೯ರಷ್ಟು ಕೃಷಿಕರು ಇವರ ಗುಲಾಮರಾಗಿ ಜೀವಿಸುತ್ತಿದ್ದಾರೆ. ಇದರ ಜೊತೆಗೆ ಬರಗಾಲ, ಬೀಜ, ಗೊಬ್ಬರದ ಅಭಾವ, ಬೆಂಬಲ ಬೆಲೆ ಸಿಗದಿರುವುದು ಮುಂತಾದ ಕಾರಣಗಳಿಂದ ಇಲ್ಲಿನ ಕೃಷಿಕನ ಬದುಕು ದುಸ್ತರವಾಗಿದೆ. ತಲೆಮಾರುಗಳಿಂದ ಭೂಮಿಯೊಂದಿಗೆ

ಭಾವನಾತ್ಮಕ ಸಂಬಂಧ ಇಟ್ಟುಕೊಂಡಿದ್ದ ರೈತ ತನಗಿರುವ ಅಂಗುಲದ ನೆಲವನ್ನೇ ಮಾರುತ್ತಿದ್ದಾನೆ, ಭೂಮಿ ಬೀಳು ಬಿದ್ದಿವೆ.

ಬಡವರು ಮತ್ತು ಕೆಳವರ್ಗದ ಕೃಷಿಕರು ದುಡಿಮೆಗಾಗಿ ನೆರೆ ರಾಜ್ಯಗಳಿಗೆ ವಲಸೆ ಹೋಗುತ್ತಿದ್ದಾರೆ. ಆಳುವ ವ್ಯವಸ್ಥೆ ಸೃಷ್ಟಿಸಿರುವ ಅಂತರಗಳು ಮತ್ತು ಬಡತನ ರೈತರು ಆತ್ಮಹತ್ಯೆಗೆ ಶರಣಾಗಲು ಕಾರಣವಾಗಿವೆ. ನಿರುದ್ಯೋಗ ಸಮಸ್ಯೆ ತೀವ್ರವಾಗಿ ಕಾಡುತ್ತಿದೆ. ಈ ಭಾಗದಿಂದ ಜನರು ಕುಟುಂಬ ಪರಿವಾರ ಸಮೇತ ಗುಳೆ ಹೋಗುವ ಪದ್ಧತಿ ನಿರ್ಮಾಣವಾಗಿ ಬಿಟ್ಟಿದೆ. ಕರ್ನಾಟಕ ರಾಜ್ಯದಲ್ಲಿಯೇ ಅಪೌಷ್ಟಿಕಾಂಶದ ಪರಾಕಾಷ್ಟೆ ಯಾದಗಿರಿಯಲ್ಲಿದೆ. ಸಾವಿರಾರು ತಾಯಂದಿರು ಅಪೌಷ್ಟಿಕಾಂಶದಿಂದ ಬಳಲುತ್ತಿರುವುದರಿಂದ ಅತಿ ಹೆಚ್ಚು ಅಸುರಕ್ಷಿತ ಹೆರಿಗೆಗಳು ನಡೆದು ಸಾಕಷ್ಟು ಬಾರಿ ತಾಯಿ ಮಗು ಅಪಾಯಕ್ಕೆ ಸಿಲುಕುತ್ತಿದ್ದಾರೆ. ಇಲ್ಲಿರುವ ಶೇ. ೩೨ರಷ್ಟು ದಲಿತರು ಮತ್ತು ಶೇ.೨೩ರಷ್ಟು ಅಲ್ಪಸಂಖ್ಯಾತರು ಹಾಗೂ ಇತರ ಕೆಳವರ್ಗದವರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

**ಸಂವಿಧಾನದ ೩೭೧ನೇ ಕಲಂ ತಿದ್ದುಪಡಿ: ಒಂದು ವಿಶ್ಲೇಷಣೆ**

ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ವಿಶೇಷ ಸ್ಥಾನ ಕಲ್ಪಿಸುವ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಯಿಂದ ಈ ಭಾಗಕ್ಕೆ ಇಲ್ಲಿನ ಜನರಿಗೆ ಅನೇಕ ಪ್ರಯೋಜನಗಳು ಆಗುತ್ತವೆ. ಸರಕಾರಿ ನೇಮಕಾತಿ ಮತ್ತು ಶೈಕ್ಷಣಿಕ ವ್ಯವಸ್ಥೆಯಲ್ಲಿ ಮೀಸಲಾತಿ ಕಲ್ಪಿಸುವ ಅಂಶಗಳು ಸಂವಿಧಾನದ ೩೭೧ನೇ ಪರಿಚ್ಛೇದದ ತಿದ್ದುಪಡಿ ಕರಡಿನ ಪ್ರಮುಖ ಅಂಶಗಳಾಗಬಹುದು. ಹೀಗಾದಲ್ಲಿ, ನೇಮಕಾತಿ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದಂತೆ ದೊರಕುವ ಪ್ರಾದೇಶಿಕ ಮೀಸಲಾತಿ ಯಿಂದ ಸರ್ಕಾರಿ ನೌಕರರಲ್ಲಿ ಹೈದರಾಬಾದ್ ಕರ್ನಾಟಕದವರ ಸಂಖ್ಯೆ ಹೆಚ್ಚಾಗುತ್ತದೆ. ಅಂದರೆ ಈ ಪ್ರದೇಶದಲ್ಲಿರುವ ಸರಕಾರಿ ಹುದ್ದೆಗಳಲ್ಲಿ ಶೇ. ೭೦ರಷ್ಟು ಭಾಗ ಸ್ಥಳೀಯರಿಗೆ ಮೀಸಲಾಗಿರುತ್ತದೆ. ಉಳಿದ ಶೇ. ೩೦ರಷ್ಟು ಹುದ್ದೆಗಳ ನೇಮಕಾತಿ ರಾಜ್ಯಮಟ್ಟದಲ್ಲಿ ನಡೆಯುತ್ತದೆ. ಇದೇ ನಿಯಮ ವರ್ಗಾವಣೆಗೂ ಅನ್ವಯಿಸುತ್ತದೆ.

ಹೈದರಾಬಾದ್ ಕರ್ನಾಟಕ ಜಿಲ್ಲೆಗಳಲ್ಲಿರುವ ಸರಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಇಲ್ಲಿ ಪ್ರದೇಶದ ವಿದ್ಯಾರ್ಥಿಗಳಿಗೆ ಶೇ. ೭೦ರಷ್ಟು ಸೀಟುಗಳು ಸಿಗುವುದು ಇಲ್ಲಿನ ವಿದ್ಯಾರ್ಥಿಗಳಿಗೆ ವರದಾನವಾಗಿದೆ. ಪ್ರತಿ ವರ್ಷ ಸರಿಸುಮಾರು ೪೦೦ಕ್ಕಿಂತ ಹೆಚ್ಚು ವೈದ್ಯಕೀಯ ಸೀಟುಗಳು ಹೈದರಾಬಾದ್ ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗೆ ದೊರೆಯಲಿದೆ. ಹಾಗೆಯೇ ವೃತ್ತಿಪರ ಮತ್ತು ತಾಂತ್ರಿಕ ಶಿಕ್ಷಣದ ಪ್ರವೇಶದಲ್ಲಿ ಮತ್ತು ವಿಶ್ವವಿದ್ಯಾಲಯಗಳು ಸೇರಿದಂತೆ ಶಿಕ್ಷಣ ಸಂಸ್ಥೆ ಗಳಲ್ಲಿ ಈ ಭಾಗದವರಿಗೆ ಪ್ರವೇಶ ನೀಡಲು ವಿಶೇಷ ಮೀಸಲು ಸಿಗಲಿದೆ. ಇನ್ನು ಶಿಕ್ಷಣ ಮತ್ತು ಉದ್ಯೋಗಕ್ಕೆ ಸಂಬಂಧಿಸಿದಂತೆ, ಸರಕಾರದ ಎಲ್ಲಾ ಹುದ್ದೆಗಳಿಗೆ ಗುಲಬರ್ಗಾ ವಿಭಾಗ ಮತ್ತು ಈ ವಿಭಾಗದಡಿ ಬರುವ ಎಲ್ಲಾ ಜಿಲ್ಲೆಗಳಿಗೆ ವಿಶೇಷ ಮೀಸಲು ಸೌಲಭ್ಯ ಸಿಗುತ್ತದೆ. ವಿಧಾನ ಸೌಧದಲ್ಲಿಯೂ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡುವಾಗಲೂ ಈ ಭಾಗದ ಜಿಲ್ಲೆಗಳಿಗೆ ವಿಶೇಷ ಮೀಸಲು ಲಭ್ಯವಾಗುತ್ತದೆ. ಹೈದರಾಬಾದ್ ಕರ್ನಾಟಕ ಭಾಗದ ಜಿಲ್ಲೆಗಳ

ಸರಕಾರಿ ಕಚೇರಿಗಳಲ್ಲಿ ಖಾಲಿಯಿರುವ ಹುದ್ದೆಗಳಿಗೆ ಅದೇ ಜಿಲ್ಲೆಯವರು ಭರ್ತಿಯಾಗಲು ಅವಕಾಶ ಇರುತ್ತದೆ. ವೃತ್ತಿಪರ ಕಾಲೇಜುಗಳು ಸೇರಿದಂತೆ ಎಲ್ಲ ಹಂತದ ಶಿಕ್ಷಣಕ್ಕೆ ಈ ಭಾಗದ ಜಿಲ್ಲೆಗಳ ವಿದ್ಯಾರ್ಥಿಗಳಿಗೆ ವಿಶೇಷ ಮೀಸಲು ಸಿಗುತ್ತದೆ.

ಸಂವಿಧಾನದ ತಿದ್ದುಪಡಿ ಮೂಲಕ ದೊರೆಯುವ ವಿಶೇಷ ಸ್ಥಾನಮಾನದ ಕಾರಣದಿಂದ ಕೈಗಾರಿಕೆ, ಕೃಷಿ, ಸಂಪರ್ಕ ವ್ಯವಸ್ಥೆ ಹಾಗೂ ಆರೋಗ್ಯ, ಶಿಕ್ಷಣ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ವಿಶೇಷ ಅಭಿವೃದ್ಧಿ ಯೋಜನೆಗಳು ರೂಪುಗೊಳ್ಳುತ್ತವೆ. ಯೋಜನೆಗಳು ಜಾರಿಗಾಗಿ, ಉಸ್ತುವಾರಿಗಾಗಿ ಪ್ರತ್ಯೇಕ ಮಂಡಳಿಗಳು ರಚನೆಯಾಗುತ್ತದೆ. ಹೈದರಾಬಾದ್ ಕರ್ನಾಟಕ ಭಾಗದ ಅಭಿವೃದ್ಧಿಗೆ ಸ್ಥಾಪನೆಯಾಗುವ ಪ್ರತ್ಯೇಕ ಅಭಿವೃದ್ಧಿ ಮಂಡಳಿ ತನ್ನದೇ ಚುನಾಯಿತ ಪ್ರತಿನಿಧಿಗಳು ಹಾಗೂ ಬಜೆಟ್ ಒಳಗೊಳ್ಳಲಿದೆ. ಮಂಡಳಿಗೆ ನೇರವಾಗಿ ಕೇಂದ್ರ ಸರಕಾರದ ಹಾಗೂ ರಾಜ್ಯ ಸರಕಾರದ ಆರ್ಥಿಕ ನೆರವು ದೊರೆಯುತ್ತದೆ. ಅಸಮಾನತೆ ನಿವಾರಣೆಗಾಗಿ ವಿವಿಧ ಕ್ಷೇತ್ರಗಳಲ್ಲಿ ವಿಶೇಷ ಅನುದಾನ ದೊರೆಯುತ್ತವೆ. ಬಹಳಷ್ಟು ವರ್ಷಗಳಿಂದ ನೆನೆಗುದಿಗೆ ಬಿದ್ದಿರುವ ನೀರಾವರಿ ಯೋಜನೆಗಳ ಅನುಷ್ಠಾನಕ್ಕಾಗಿ ಕೇಂದ್ರ ಸರಕಾರ ವಿಶೇಷ ಯೋಜನೆಗಳನ್ನು ರೂಪಿಸುತ್ತದೆ. ಹಾಗೆಯೇ ಈ ಪ್ರದೇಶಗಳ ಮೂಲ ಸೌಲಭ್ಯಗಳ ಅಭಿವೃದ್ಧಿಗೆ ರಾಜ್ಯ ಬಜೆಟ್‌ನಲ್ಲಿ ಪ್ರತ್ಯೇಕವಾಗಿ ಹಣದ ಹಂಚಿಕೆಯ ವ್ಯವಸ್ಥೆ ಮಾಡಲಾಗುವುದು.

ಹೀಗೆ ಕೇಂದ್ರ ಸರಕಾರ ಈಗ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಗೆ ನೀಡಿರುವ ಒಪ್ಪಿಗೆಯಂತೆ ಶಿಕ್ಷಣ ಹಾಗೂ ಉದ್ಯೋಗದಲ್ಲಿ ಮೀಸಲಾತಿ ಮತ್ತು ಭೌತಿಕ ಅಭಿವೃದ್ಧಿಗಾಗಿ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸುವುದಾಗಿದೆ ಎನ್ನುವುದು ಇಲ್ಲಿ ವಿಶೇಷವಾಗಿದೆ. ಇಂತಹ ಗೆಲುವಿನಿಂದಾಗಿ ಎರಡು ದಶಕಗಳಿಂದ ಈ ಭಾಗದಲ್ಲಿ ಹೋರಾಟ ಮಾಡುತ್ತಾ ಬಂದ ಹೋರಾಟಗಾರರಿಗೆ ಹಲವಾರು ವರ್ಷಗಳ ವನವಾಸ ಹಾಗೂ ಅಜ್ಞಾತವಾಸ ಮುಗಿದಂತಾಗಿದೆ ಎಂದೆನಿಸುತ್ತಿದೆ.

ಇತ್ತೀಚಿನ ಇನ್ನೊಂದು ಬೆಳವಣಿಗೆಯಲ್ಲಿ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಯ ಎಲ್ಲ ಪ್ರಕ್ರಿಯೆ ಪೂರ್ಣಗೊಂಡು ಜಾರಿಯಾಗುವವರೆಗೂ ನೇಮಕಾತಿಯ ಪದ್ಧತಿ ಬದಲಾಯಿಸಿ ಹೊರಗುತ್ತಿಗೆ ನೇಮಕ ಪದ್ಧತಿ ಅನುಸರಿಸಬೇಕೆಂದು, ಗುಲಬರ್ಗಾದಲ್ಲಿ ೨೦೧೨ರಂದು ಶ್ರೀ ವೈಜನಾಥ ಪಾಟೀಲ ಅವರ ಅಧ್ಯಕ್ಷತೆಯಲ್ಲಿ ನಡೆದ 'ಹೈದರಾಬಾದ್ ಕರ್ನಾಟಕ ಹೋರಾಟ ಸಮಿತಿ' ಸಭೆಯಲ್ಲಿ ನಿರ್ಣಯ ಅಂಗೀಕರಿಸಿದೆ. ೧೯೫೬ರಿಂದ ಈ ಭಾಗಕ್ಕೆ ನೇಮಕಾತಿಯಲ್ಲಿ ಆದ ಅನ್ಯಾಯ ಸರಿಪಡಿಸಲು ಅಲ್ಲಿಂದಲೇ ಈ ಭಾಗದವರಿಗೆ ಬ್ಯಾಕ್‌ಲಾಗ್ ಮೂಲಕ ಹುದ್ದೆ ಗಳನ್ನು ಭರ್ತಿ ಮಾಡಬೇಕು. ಈಗ ಹೊಸ ನೇಮಕ ಮಾಡಿದರೆ ಗುತ್ತಿಗೆ ಆಧಾರದಲ್ಲಿರಬೇಕು. ಕೇಂದ್ರ ಸರಕಾರ ೩೭೧ನೇ ಕಲಂ ತಿದ್ದುಪಡಿಗೆ ಅಂತಿಮ ರೂಪ ನೀಡಿ ಅಗತ್ಯ ಸೌಲಭ್ಯ ಕಲ್ಪಿಸಲು ಮುಂದಾಗಿ. ಅದಕ್ಕೆ ಸಮಿತಿ ರಚಿಸಿದರೆ ಆ ಸಮಿತಿಯಲ್ಲಿ ವೈಜನಾಥ ಪಾಟೀಲರನ್ನು ಸದಸ್ಯರನ್ನಾಗಿ ನೇಮಕ ಮಾಡಿಕೊಳ್ಳಬೇಕು. ಇದಕ್ಕೆ ರಾಜ್ಯ ಸರಕಾರ ಶಿಫಾರಸ್ಸು ಮಾಡಬೇಕು ಎಂದು ಸಭೆ ಸರ್ವಾನುಮತದಿಂದ ನಿರ್ಣಯ ಅಂಗೀಕರಿಸಿತು. ಒಟ್ಟಿನಲ್ಲಿ ೩೭೧ನೇ ಕಲಂ

ತಿದ್ದುಪಡಿ ಹೈದರಾಬಾದ್ ಕರ್ನಾಟಕದ ಜನರಿಗೆ ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದರ ಜೊತೆಗೆ, ವಿವಿಧ ಯೋಜನೆಗಳ ಲಾಭ ದೊರಕಿಸಿ ಕೊಡುವುದರೊಂದಿಗೆ ಇಲ್ಲಿನ ಜನರ ಬದುಕಿನಲ್ಲಿ ಹೊಸ ಬದಲಾವಣೆ ತರುವ, ಇಲ್ಲಿನ ಜನರ ಆಶೋತ್ತರಗಳನ್ನು ಈಡೇರಿಸುವಲ್ಲಿ ಸಫಲವಾಗುತ್ತದೆ ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ.

ಗುಲಬರ್ಗಾ ವಿಭಾಗದ ಆರು ಜಿಲ್ಲೆಗಳ ಹಿಂದುಳಿದಿರುವ ಸಂಗತಿಯನ್ನು ಗಮನಿಸಿ ಕೇಂದ್ರ ಸರಕಾರವು ಸಂವಿಧಾನದ ೩೭೧ನೇ ಕಲಂಗೆ ತಿದ್ದುಪಡಿ ತಂದು ಈ ಪ್ರದೇಶದ ಅಭಿವೃದ್ಧಿಗೆ ವಿಶೇಷ ಸ್ಥಾನಮಾನ ನೀಡುವ ತೀರ್ಮಾನ ತೆಗೆದುಕೊಂಡಿರುವುದು ಸ್ವಾಗತಾರ್ಹ. ಏಕೆಂದರೆ ಈ ವಿಭಾಗದ ಆರು ಜಿಲ್ಲೆಗಳು ರಾಜ್ಯದ ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿರುವುದು ಎಲ್ಲರಿಗೂ ತಿಳಿದಿದೆ. ಆರು ಜಿಲ್ಲೆಗಳ ಹಿಂದುಳಿದಿರುವಿಕೆಗೆ ಬಹುಮುಖಗಳಿವೆ. ಅವು ಜನಸಂಖ್ಯೆಯ ಬೆಳವಣಿಗೆ, ವರಮಾನ ಅಭಿವೃದ್ಧಿ ಸೂಚ್ಯಂಕ, ಆಧುನೀಕರಣ, ಕೈಗಾರಿಕೀಕರಣ ಹೀಗೆ ಎಲ್ಲ ದೃಷ್ಟಿಯಿಂದ ಹಿಂದುಳಿದಿವೆ. ಇದನ್ನು ಗಮನದಲ್ಲಿಟ್ಟುಕೊಂಡು ಹೈದರಾಬಾದ್ ಕರ್ನಾಟಕ ಭಾಗಕ್ಕೆ ವಿಶೇಷ ಸ್ಥಾನಮಾನ ಕಲ್ಪಿಸುವುದಕ್ಕಾಗಿ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿ ತರಲು ಕೇಂದ್ರ ಸರಕಾರವು ತಾತ್ವಿಕ ಒಪ್ಪಿಗೆ ನೀಡಿದ್ದು, ತಿದ್ದುಪಡಿಯ ಕರಡು ಸಿದ್ಧವಾಗುತ್ತಿದೆ. ಇದು ಸಂಸತ್ತಿನಲ್ಲಿ ಮಂಡನೆಯಾಗಿ ಚರ್ಚೆಯ ನಂತರ ತಿದ್ದುಪಡಿ ಜಾರಿಗೆ ಬಂದಿದೆ.

ಆದರೆ ಇಲ್ಲಿ ಉದ್ಭವವಾಗುವ ಪ್ರಶ್ನೆಯೆಂದರೆ ೩೭೧(ಜೆ) ಕಲಂನ ಜಾರಿಯಿಂದಾಗಿ ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ಅಸಮಾನತೆಯ ಸಮಸ್ಯೆ ನಿವಾರಣೆಯಾಗುತ್ತದೆಯೆ? ಇಲ್ಲಿನ ಜನರ ಬಾಳು ಹಸನಾಗುತ್ತದೆಯೆ? ಜನರ ಆಶೋತ್ತರಗಳು ಎಷ್ಟರಮಟ್ಟಿಗೆ ಈಡೇರಬಲ್ಲವು? ಯಾವ ವರ್ಗಕ್ಕೆ ಯಾವ ಮಟ್ಟದಲ್ಲಿ ಅನುಕೂಲ ಆಗುತ್ತದೆ? ನಿಜವಾದ ಹಿಂದುಳಿದ ಮತ್ತು ಸೌಲಭ್ಯವಂಚಿತ ವರ್ಗದವರಿಗೆ ನ್ಯಾಯ ಸಿಗಬಹುದೆ? ಎನ್ನುವುದನ್ನು ಯೋಚಿಸಬೇಕಾಗಿದೆ. ಏಕೆಂದರೆ ಈಗಾಗಲೇ ೩೭೧ನೇ ಕಲಂನ ಸೌಲಭ್ಯಗಳನ್ನು ಪಡೆದ ವಿದರ್ಭ, ತೆಲಂಗಾಣ ಪ್ರದೇಶಗಳ ಪರಿಸ್ಥಿತಿಯನ್ನು ಅವಲೋಕಿಸಿದಾಗ ಆ ಪ್ರದೇಶದ ಜನರಲ್ಲಿ ನೆಮ್ಮದಿ, ತೃಪ್ತಿ ಇದೆಯೇ ಎನ್ನುವುದನ್ನು ಪರಿಶೀಲಿಸಬೇಕಾಗುತ್ತದೆ. ಪಕ್ಕದ ತೆಲಗಾಣ ಪ್ರದೇಶದತ್ತ ಕಣ್ಣು ಹಾಯಿಸಿದರೆ ವಾಸ್ತವದ ಅರಿವಾಗುತ್ತದೆ. ಸರಿಯಾಗಿ ಐವತ್ತಾರು ವರ್ಷಗಳ ಹಿಂದೆ ೩೭೧ನೇ ಕಲಂಗೆ ತಿದ್ದುಪಡಿ ಮೂಲಕ ವಿಶೇಷ ಸ್ಥಾನಮಾನ ಪಡೆದಿದ್ದ, ಆಂಧ್ರದ ತೆಲಂಗಾಣದಲ್ಲಿ ಅಸಮಾಧಾನದ ಹೊಗೆಯಾಡುತ್ತಿದ್ದು ತೆಲಂಗಾಣ ಹೋರಾಟದ ಸಮಿತಿಯಿಂದ ಪ್ರತ್ಯೇಕ ರಾಜ್ಯದ ಕೂಗು ಕೇಳಿ ಬಂದಿದ್ದು ಆ ಪ್ರದೇಶದಲ್ಲಿ ಗಂಭೀರ ಪರಿಸ್ಥಿತಿ ಇದೆ. ಮಹಾರಾಷ್ಟ್ರದ ವಿದರ್ಭದಲ್ಲಿಯೂ ತೃಪ್ತಿಯಿಲ್ಲ, ಅಂದರೆ ೩೭೧ರ ಕಲಂನಿಂದ ಪಡೆದಿರುವ ಸೌಲಭ್ಯಗಳಿಂದ ಮಾತ್ರಕ್ಕೆ ಅಲ್ಲಿನ ಸಮಸ್ಯೆಗಳು ಪೂರ್ಣ ನಿವಾರಣೆಯಾದಂತೆ ಕಾಣುವುದಿಲ್ಲ. ಇದರಿಂದ ನಾವು ಪಾಠ ಕಲಿಯ ಬೇಕಾಗಿದ್ದು, ಮುಂದಿಡುವ ಪ್ರತಿ ಹೆಜ್ಜೆಯ ಬಗ್ಗೆಯೂ ಗಂಭೀರವಾಗಿ ಯೋಚನೆ ಮಾಡಬೇಕಾಗಿದೆ.

ಪ್ರಸ್ತುತ ಹೈದರಾಬಾದ್ ಕರ್ನಾಟಕದ ಸ್ಥಿತಿಗತಿಗಳನ್ನು ನೋಡಿದಾಗ ಈಗಾಗಲೇ ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಸಂಬಂಧಿಸಿದಂತೆ ಡಾ. ಡಿ.ಎಂ. ನಂಜುಂಡಪ್ಪ ಸಮಿತಿಯ ವರದಿಯ

ಬಹುಮುಖ್ಯ ಶಿಫಾರಸ್ಸಾದ ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆಯ ಅನುಷ್ಠಾನ ಕಾರ್ಯ ೨೦೦೭-೦೮ರಿಂದ ಜಾರಿಯಾಗಿದೆ. ಅದರಲ್ಲೂ ಗುಲಬರ್ಗಾ ವಿಭಾಗದ ಜಿಲ್ಲೆಗಳ ಅಭಿವೃದ್ಧಿಗಾಗಿ ರೂ. ೩೬೬೪ ಕೋಟಿಯಷ್ಟು ಹಣವನ್ನು ತೆಗೆದಿರಿಸಲಾಗಿದೆ. ಆದರೆ ಹಣದ ಸದ್ಬಳಕೆ ಆಗುತ್ತಿದೆಯೇ ಎನ್ನುವ ಅನುಮಾನ ಕಾಡುತ್ತಿದೆ. ಏಕೆಂದರೆ ಈ ಬಗ್ಗೆ ಇತ್ತೀಚೆಗೆ ನಡೆದ ಪ್ರಗತಿ ಪರಿಶೀಲನೆಯ ಸಂದರ್ಭದಲ್ಲಿ ಕಂಡುಬಂದ ನಿಜಾಂಶವೆಂದರೆ ಹಣದಲ್ಲಿ ಶೇ. ೫೭.೩೩ರಷ್ಟನ್ನು ಮಾತ್ರ ಬಳಸಿಕೊಳ್ಳಲು ಸಾಧ್ಯವಾಗಿದೆ. ಅಲ್ಲದೇ ಇನ್ನೂ ಆತಂಕದ ಸಂಗತಿಯೆಂದರೆ ೨೦೧೦-೧೧ನೆಯ ಸಾಲಿನಲ್ಲಿ ಮಂಜೂರಾದ ೨೪೫೪ ಕೋಟಿ ರೂ.ಗಳಲ್ಲಿ ಅಕ್ಟೋಬರ್‌ವರೆಗೆ ವಿನಿಯೋಜನೆಯಾಗಿರುವ ಮೊತ್ತ ಕೇವಲ ೬೪೬ ಕೋಟಿ ರೂ.(ಶೇ.೨೬.೨೨) ಮಾತ್ರ

ಗುಲಬರ್ಗಾ ವಿಭಾಗಕ್ಕೆ ೨೦೧೦-೧೧ನೇ ಸಾಲಿನಲ್ಲಿ ಸರಕಾರ ಒದಗಿಸಿದ ಒಟ್ಟು ಮೊತ್ತ ೩೭೦೬ ಕೋಟಿ ರೂ.ಗಳಷ್ಟು, ಎಂದರೆ ಇದು ಸಣ್ಣ ಮೊತ್ತವೇನಲ್ಲ. ಆದರೆ ಇದನ್ನು ಪೂರ್ಣ ವಾಗಿ ಬಳಸಿಕೊಳ್ಳಲು ನಮಗೆ ಸಾಧ್ಯವಾಗುತ್ತಿಲ್ಲ. ಈ ವಿಭಾಗದ ಆರ್ಥಿಕ ಪರಿಸ್ಥಿತಿಯ ಬಗ್ಗೆ ಅರ್ಥಶಾಸ್ತ್ರ ತಜ್ಞರ ಅಭಿಪ್ರಾಯವೇನೆಂದರೆ ಗುಲಬರ್ಗಾ ವಿಭಾಗದಲ್ಲಿ ಸಂಪನ್ಮೂಲವನ್ನು ಮೀರಿಸಿ ಕೊಳ್ಳುವ ಗುಣ ಕಡಿಮೆ ಇದೆ. ಅಪಾರ ಪ್ರಮಾಣದಲ್ಲಿ ಹಣ ವಿಭಾಗಕ್ಕೆ ಬರುತ್ತಿದೆಯಾದರೂ ಅದಕ್ಕೆ ತಕ್ಕಂತೆ ವಿಭಾಗದ ಜಿಲ್ಲೆಗಳಲ್ಲಿ ಅದಕ್ಕೆ ಸೂಕ್ತವಾದ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸಿ ಜನರನ್ನು ಅದರಲ್ಲಿ ತೊಡಗಿಸಿಕೊಂಡು ಅಭಿವೃದ್ಧಿಯನ್ನು ಮಾಡಿಕೊಳ್ಳುವುದು ಇಲ್ಲಿನವರಿಗೆ ಸಾಧ್ಯವಾಗಿಲ್ಲ.

ಇನ್ನೊಂದು ವಿಷಾದದ ಸಂಗತಿಯೆಂದರೆ ಈ ವಿಭಾಗದ ಮೂಲ ಸಮಸ್ಯೆಯನ್ನು ನಾವು ಇದುವರೆಗೂ ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿಲ್ಲ. ಇಲ್ಲಿನ ಅನಕ್ಷರತೆ, ಅತ್ಯಧಿಕ ಪ್ರಮಾಣದಲ್ಲಿರುವ ಭೂರಹಿತ ದಿನಗೂಲಿಗಳ ಪ್ರಮಾಣ ಆತಂಕಕಾರಿ ಪ್ರಮಾಣದಲ್ಲಿರುವ ಶಾಲೆ ಬಿಡುವ ಮಕ್ಕಳ ಪ್ರಮಾಣ, ಮಹಿಳಾ ದಿನಗೂಲಿ ದುಡಿಮೆಗಾರರ ಬವಣೆ, ವಲಸೆ ಸಮಸ್ಯೆ, ಭೂ ಮಾಲೀಕತ್ವದಲ್ಲಿ ತೀವ್ರ ಅಸಮಾನತೆ, ಸವಾಲಿಗೆ ತಕ್ಕಂತಹ ಸಾಮರ್ಥ್ಯವಿಲ್ಲದ ಸರಕಾರಿ ಅಧಿಕಾರಿವರ್ಗ, ಅಭಿವೃದ್ಧಿಯೆಂದರೆ ಬೆಂಗಳೂರು ಮಾತ್ರವೇ ಎಂದು ನಂಬಿರುವ ಜನಪ್ರತಿನಿಧಿಗಳ ಮನೋಭಾವ ಮುಂತಾದ ಸಂಗತಿಗಳು ಇರುವಾಗ ಸಂವಿಧಾನದ ಪರಿಚ್ಛೇದ ೩೭೧ರ ಚೌಕಟ್ಟಿಗೆ ಗುಲಬರ್ಗಾ ವಿಭಾಗವನ್ನು ತರುವುದರಿಂದ ಎಲ್ಲಾ ಸಮಸ್ಯೆ ಬಗೆಹರಿದು ಬಿಡುತ್ತವೆಯೇ ಎನ್ನುವುದು ಚಿಂತನೆ ಮಾಡಬೇಕಾದ ಗಂಭೀರ ವಿಷಯವಾಗಿದೆ. ಈ ಕಲಂ ಅನ್ವಯ ಶಿಕ್ಷಣ ಮತ್ತು ಉದ್ಯೋಗದಲ್ಲಿ ವಿಭಾಗದ ಅಭ್ಯರ್ಥಿಗಳಿಗೆ ಮೀಸಲು ನೀಡುವುದರಿಂದ ಎಲ್ಲಾ ಸಮಸ್ಯೆ ಬಗೆಹರಿಯುವುದಿಲ್ಲ ಅಥವಾ ಬಡತನ ಅನಕ್ಷರತೆ, ಬಾಲ್ಯವಿವಾಹಗಳು, ವಲಸೆ ಹೋಗುವುದು, ಹಸಿವು, ಅಪೌಷ್ಠಿಕತೆಯ ಸಮಸ್ಯೆ ನಿವಾರಣೆಯಾಗುವುದಿಲ್ಲ. ಪ್ರಾದೇಶಿಕ ಅಸಮತೋಲನವೆಂದರೆ ಅದು ಹಿಂದುಳಿದ ಪ್ರದೇಶದಲ್ಲಿನ ಹಿಂದುಳಿದ ಜನರ ಪರಿಶಿಷ್ಟ ಜನಸಮುದಾಯಗಳ, ಬಡತರ ಶೋಷಿತರ ಹಿಂದುಳಿದವರ ಪ್ರಶ್ನೆಯಾಗಿದೆ.

ಅದರಲ್ಲೂ ಹೈದರಾಬಾದ್ ಕರ್ನಾಟಕದಲ್ಲಿ ನೂರಾರು ಎಕರೆ ಜಮೀನು ಹೊಂದಿರುವ ರೈತ ಒಂದು ಕಡೆಯಾದರೆ, ಒಂದು ಎಕರೆ ಜಮೀನು ಇಲ್ಲದ ರೈತ ಇನ್ನೊಂದು ಕಡೆ

ಇದ್ದಾನೆ. ಇಂತಹ ಪ್ರದೇಶದಲ್ಲಿ ೩೭೧ನೇ ಕಲಂ ತಿದ್ದುಪಡಿಯಿಂದ ಜಮೀನ್ದಾರಿಕೆ ಪದ್ಧತಿ ಹೋಗಿ, ಬಡವರಿಗೆ ಭೂರಹಿತರಿಗೆ ಹಂಚುವುದಾದರೆ, ಅಸಮಾನತೆಯ ನಿವಾರಣೆಗೆ ಸಹಾಯಕ ವಾಗುವುದಾದರೆ ಇದು ಸ್ವಾಗತಾರ್ಹ. ಈ ಕಲಂನಿಂದ ಸಿಗುವ ರಾಜಕೀಯ ಮೀಸಲಾತಿ ಬಡವರಿಗೆ, ನಿರ್ಲಕ್ಷಿತ ವರ್ಗದವರಿಗೆ, ಕೆಳವರ್ಗದವರಿಗೆ, ಬಡ ಕೂಲಿ ಕಾರ್ಮಿಕರಿಗೆ ಸಿಗುವುದಾದರೆ ಸ್ವಾಗತಾರ್ಹ. ಆದರೆ ಮೀಸಲಾತಿ ಮುಂತಾದ ಸೌಲಭ್ಯಗಳು ಮತ್ತೆ ಶ್ರೀಮಂತರಿಗೆ, ಜಮೀನ್ದಾರರಿಗೆ, ಉಳ್ಳವರಿಗೆ ದೊರೆತು ಶ್ರೀಮಂತರು ಶ್ರೀಮಂತರಾಗುತ್ತಾ, ಬಡವರು ಬಡವರಾಗುತ್ತಾ ಉಳಿದರೆ ಕಲಂನ ಪ್ರಯೋಜನವಾದರೂ ಏನು ಎನ್ನುವ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬೇಕಾಗಿದೆ.

ಹೀಗಾಗಿ ಹೈದರಾಬಾದ್ ಕರ್ನಾಟಕದ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ಭೌಗೋಳಿಕ, ಔದ್ಯೋಗಿಕ ಸ್ಥಿತಿಗತಿಗನುಗುಣವಾಗಿ ಅಭಿವೃದ್ಧಿಯ ಯೋಜನೆಗಳನ್ನು ರೂಪಿಸಬೇಕಾಗುತ್ತದೆ. ಶಿಕ್ಷಣ ಸಂಸ್ಥೆಗಳ ಸಂಖ್ಯೆಯನ್ನು ಹೆಚ್ಚಿಸಬೇಕು. ಈ ಭಾಗದಿಂದ ಗುಳೆ ಹೋಗುವುದನ್ನು ತಪ್ಪಿಸಲು ನಿರಂತರ ಉದ್ಯೋಗ ಸಿಗುವ ಹಾಗೆ ಸಣ್ಣ ಹಾಗೂ ಭಾರಿ ಉದ್ಯಮಗಳನ್ನು ಸ್ಥಾಪಿಸಬೇಕು. ಸಾಕಷ್ಟು ನೀರಿನ ಲಭ್ಯತೆಯಿರುವುದರಿಂದಲೇ ತ್ವರಿತವಾಗಿ ಕಾಲಮಿತಿಯೊಳಗೆ ನೀರಾವರಿ ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತಂದು ರೈತಾಪಿ ಜನ ಗುಳೆ ಹೋಗುವುದನ್ನು ತಪ್ಪಿಸಬೇಕು. ಇಲ್ಲಿನ ಶೇ.೩೨ರಷ್ಟು ದಲಿತರು ಮತ್ತು ಶೇ.೨೩ರಷ್ಟು ಅಲ್ಪಸಂಖ್ಯಾತರಿಗಾಗಿ ವಿಶೇಷ ಯೋಜನೆಗಳನ್ನು ರೂಪಿಸಬೇಕು. ಜನಸಂಖ್ಯೆಗನುಗುಣವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿ ಅದರ ರಕ್ಷಣೆಗೆ ಮುಂದಾಗಬೇಕಾಗಿದೆ. ಒಂದು ವೇಳೆ ಹೀಗಾಗದಿದ್ದರೆ, ಮುಂದೊಂದು ದಿನ ಇವುಗಳನ್ನು ಜಾರಿಗೆ ತರಲು ಇನ್ನೊಂದು ಜನಾಂದೋಲನ ರೂಪಿಸುವ ಅಗತ್ಯ ಬೀಳಲೂಬಹುದು. ಏಕೆಂದರೆ ನಂಜುಂಡಪ್ಪ ವರದಿ ಅನುಷ್ಠಾನಕ್ಕಾಗಿ ಕೋಟ್ಯಂತರ ರೂಪಾಯಿ ಬಿಡುಗಡೆ ಮಾಡುತ್ತಿರುವುದಾಗಿ ತಿಳಿಸುವ ರಾಜ್ಯ ಸರಕಾರವು ಈಗಾಗಲೇ ಜಾರಿಯಲ್ಲಿದ್ದ ಯೋಜನೆಗಳ ಅನುಷ್ಠಾನ ಮಾಡುವುದಕ್ಕೆ ಆ ಹಣ ಬಳಸುತ್ತಿದೆ. ಅಂದರೆ ಚಾಲ್ತಿಯಲ್ಲಿರುವ ಯೋಜನೆಗಳ ಜೊತೆಯಲ್ಲಿ ಹೆಚ್ಚುವರಿ ಅನುದಾನ ನೀಡುವ ಬದಲು ಶೀರ್ಷಿಕೆ ಬದಲು ಮಾಡಿ ದಿಕ್ಕು ತಪ್ಪಿಸಲಾಯಿತು. ಇದೇ ರೀತಿಯ ಕ್ರಮಗಳು ತೆಲಂಗಾಣ ಪ್ರದೇಶದಲ್ಲಿ ನಡೆದಿವೆ. ಅದು ತೆಲಂಗಾಣ ನಿವಾಸಿಗಳ ಅಸಹನೆ ಮತ್ತು ಬೇಸರಕ್ಕೂ ಕಾರಣವಾಗಿವೆ. ಅಭಿವೃದ್ಧಿಯ ಹೆಸರಿನಲ್ಲಿ ಹಣ ಹರಿದು ಬಂದರೆ ಮಾತ್ರ ಸಾಲದು, ಅದು ಸದ್ವಿನಿಯೋಗ ಆಗುವಂತೆ ನೋಡಿಕೊಳ್ಳುವ ಅಗತ್ಯವಿದೆ. ದೂರದೃಷ್ಟಿ ಇರುವ ಮುಖ್ಯಮಂತ್ರಿ ಮತ್ತು ಜನಪ್ರತಿನಿಧಿಗಳು ಕಾಳಜಿ ವಹಿಸಿ ಯೊಜನೆ ರೂಪಿಸಿದರೆ ಮಾತ್ರ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ನ್ಯಾಯ ದೊರಕಿಸಿದಂತಾಗುತ್ತದೆ. ವಿಶೇಷವಾಗಿ ಇಲ್ಲಿನ ಜನಪ್ರತಿನಿಧಿಗಳು ಇಚ್ಛಾಶಕ್ತಿ ತೋರಿಸಿ ವಿಭಿನ್ನ ಅಭಿವೃದ್ಧಿ ಯೋಜನೆ ರೂಪಿಸಿ ಅವುಗಳನ್ನು ಜಾರಿಗೆ ತಂದರೆ ಮಾತ್ರ ಪ್ರಗತಿ ಸಾಧ್ಯವಾಗುತ್ತದೆ.

ಹೀಗಾಗಿ ಮೊದಲು ಡಾ.ಡಿ.ಎಂ.ನಂಜುಂಡಪ್ಪ ಸಮಿತಿ ವರದಿಯ ಶಿಫಾರಸ್ಸುಗಳು ಸರಿಯಾಗಿ ಅನುಷ್ಠಾನಗೊಳ್ಳುವುದರ ಬಗ್ಗೆ, ಈಗಾಗಲೇ ಇರುವ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಮತ್ತು ಪೂರ್ಣವಾಗಿ ಬಳಸಿಕೊಳ್ಳುವುದು ಏಕೆ ಸಾಧ್ಯವಾಗಿಲ್ಲ ಎನ್ನುವುದಕ್ಕೆ ಉತ್ತರ ಕಂಡುಕೊಳ್ಳುವುದರ ಬಗ್ಗೆ ಯೋಚಿಸಬೇಕಾಗಿದೆ. ಅದನ್ನು ಬಿಟ್ಟು ೩೭೧ನೇ ಕಲಮ್ಮನ್ನೇ

ನಂಬಿಕೊಂಡು ಸುಮ್ಮನೆ ಕೂರುವುದು ಸರಿಯಲ್ಲ. ಅದು ಹೇಗೆ ಪ್ರಾದೇಶಿಕ ಅಸಮಾನತೆಯನ್ನು ನಿವಾರಣೆ ಮಾಡಿದೆ ಎಂಬುದು ವಿದರ್ಭ ಮತ್ತು ತೆಲಂಗಾಣಗಳಲ್ಲಿನ ವಸ್ತುಸ್ಥಿತಿಯಿಂದ ತಿಳಿಯುತ್ತದೆ. ಹೀಗಾಗಿ ಕೇವಲ ೩೭೧ನೇ ಕಲಂಗೆ ತಿದ್ದುಪಡಿ ಆದ ಮಾತ್ರಕ್ಕೆ ಯಾವ ಪವಾಡವೂ ಸಂಭವಿಸುವುದಿಲ್ಲ. ಆದ್ದರಿಂದ ಅದರ ಬಗ್ಗೆ ತುಂಬಾ ನಿರೀಕ್ಷೆಯಿಟ್ಟುಕೊಳ್ಳುವುದರ ಬದಲಾಗಿ ಅಭಿವೃದ್ಧಿಯ ಆಶಾಭಾವನೆ ಇರಬೇಕಾಗಿದೆ.

ಒಟ್ಟಿನಲ್ಲಿ ಸಂವಿಧಾನದ ೩೭೧ನೇ ಕಲಂನ ತಿದ್ದುಪಡಿಯಿಂದ ಹೈದರಾಬಾದ್ ಕರ್ನಾಟಕ ಭಾಗಕ್ಕೆ ಸಿಗುವ ವಿಶೇಷ ಸೌಲಭ್ಯಗಳ ಬಗ್ಗೆ ಚಿಂತನೆ ಮಾಡುವಾಗ ಲಾಭ ನಷ್ಟದ ಪ್ರಶ್ನೆ ಬರುವುದಿಲ್ಲ. ಈಗ ಈ ಭಾಗಕ್ಕೆ ಸರಕಾರದಿಂದ ದೊರೆಯುವ ಅನುದಾನದ ಜೊತೆಗೆ ವಿಶೇಷ ಅನುದಾನಗಳು ಲಭ್ಯವಾಗುವುದರಿಂದ ಇಲ್ಲಿನ ಅಭಿವೃದ್ಧಿಯ ಜೊತೆಗೆ ಇಲ್ಲಿನ ಜನರಿಗೆ ಸೌಲಭ್ಯಗಳು, ಅವಕಾಶಗಳು ದೊರೆತು ಹಿಂದುಳಿದ ಮತ್ತು ಅಸಮಾನತೆಯ ಕೂಗು ಸ್ವಲ್ಪಮಟ್ಟಿಗಾದರೂ ಸುಧಾರಿಸಬಹುದು ಹಾಗೂ ಕಡಿಮೆಯಾಗಬಹುದೆನ್ನುವ ಆಶಾಭಾವನೆ ಇಟ್ಟುಕೊಳ್ಳುವುದರಲ್ಲಿ ತಪ್ಪಿಲ್ಲ. ಯಾವ ವರ್ಗಕ್ಕೂ ಯಾವ ಕ್ಷೇತ್ರಕ್ಕೂ ಇದರಿಂದ ಅಡ್ಡ ಪರಿಣಾಮವಾಗುವುದಿಲ್ಲ. ಹಾಗೆಯೇ ಈ ಭಾಗಕ್ಕೆ ೩೭೧ನೇ ಕಲಂನ ತಿದ್ದುಪಡೆ ಮಾಡಲಾಗಿದೆ. ಏಕೆಂದರೆ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ತನ್ನದೇ ಆದ ಜ್ವಲಂತ ಸಮಸ್ಯೆಗಳಿವೆ, ಸವಾಲುಗಳಿವೆ, ಹೀಗಾಗಿ ಇದನ್ನು ಗಮನದಲ್ಲಿಟ್ಟುಕೊಳ್ಳುವುದು ಬಹಳ ಮುಖ್ಯ. ಇನ್ನಾದರೂ ಹೈದರಾಬಾದ್ ಕರ್ನಾಟಕ ಪ್ರದೇಶವು ಹಿಂದುಳಿದ ಅಸಮಾನತೆಗೀಡಾದ ಪ್ರದೇಶ ಎನ್ನುವ ಹಣೆಪಟ್ಟಿಯನ್ನು ಕಳಚಿ ಹಾಕಿ ಹೊಸ ಆಶಾಭಾವನೆಗಳೊಂದಿಗೆ ಹೊಸ ದಿಕ್ಕಿನಲ್ಲಿ ಸಾಗಲಿ ಎನ್ನುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

**ಕೊನೆ ಟಿಪ್ಪಣಿಗಳು**

೧. ಭೈರಪ್ಪ ಕೆ., ಪಾಶ್ಚಿಮಾತ್ಯ ಹಾಗೂ ಭಾರತೀಯ ಸಾಮಾಜಿಕ ಚಿಂತನೆ, ಪುಟ ೧.

೨. ಶಿವರಾಜ ಪಾಟೀಲ, ಪೂಜ್ಯಶ್ರೀ ದೊಡಪ್ಪ ಅಪ್ಪ, ಪುಟ ೨೭.

೩. ಮೀನಾಕುಮಾರಿ ಪಾಟೀಲ, ಚನ್ನಬಸವಪ್ಪ ಪಟ್ಟದೇವರ, ಪುಟ ೩೭.

೪. ಪಾಟೀಲ ಹೆಚ್. ಎಸ್., ಕೊಪ್ಪಳ ಶ್ರೀ ಗವಿಸಿದ್ಧೇಶ್ವರರು, ಪುಟ ೪೨.

೫. ಮೋಹನ್‌ಕೃಷ್ಣ ರೈ, ಚರಿತ್ರೆ ಎಂ.ಎ., ಪತ್ರಿಕೆ ೪, ಪುಟ ೧೫೪.

೬. ಚಂದ್ರಶೇಖರ ಟಿ.ಆರ್., ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತಾಧಿಕಾರ ಸಮಿತಿ ವರದಿ, ಪುಟ ೧೦.

೭. ಚಂದ್ರಶೇಖರ ಟಿ.ಆರ್., ಹೊಸತು, ಪುಟ ೨೧.

೮. ಅಂಕಿ–ಅಂಶಗಳು: ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಸಂಪನ್ಮೂಲ ಕೇಂದ್ರ, ಗುಲಬರ್ಗಾ.

೯. ಬಸವರಾಜ ಟಿ. ಕುಮ್ನೂರ, ಡಾ. ನಂಜುಂಡಪ್ಪ ವರದಿ ಮತ್ತು ಅನುಷ್ಠಾನ, ಗುಲಬರ್ಗಾ, ಪುಟ ೪೭–೪೮.

೧೦. ಪಾಲೇಕರ್ ಎಸ್.ಎ., ಇಂಡಿಯನ್ ಕಾನ್‌ಸ್ಟಿಟ್ಯೂಷನ್, ಪುಟ ೧೩೧.

೧೧. ಈರಣ್ಣ ಜೆ.ಎಲ್., ಹೈದರಾಬಾದ್ ಕರ್ನಾಟಕದ ಅಸಮಾನತೆ, ಸಂವಿಧಾನದ ೩೭೧ನೇ ಕಲಂ ಜಾರಿ: ಸವಾಲು, ಪುಟ ೧೧.

೧೨. ನೋಶಿರಾವನ್ ಹೆಚ್., ಜಾಬ್‌ವಾಲಾ, ದ ಕಾನ್‌ಸ್ಟಿಟ್ಯೂಶನ್ ಆಫ್ ಇಂಡಿಯಾ, ಪುಟ ೧೬೯.

೧೩. ಪೈಲೀ ಎಂ.ವಿ., ಇಂಡಿಯನ್ ಕಾನ್‌ಸ್ಟಿಟ್ಯೂಶನ್, ಪುಟ ೩೭೫.

೧೪. ವೆಂಕಟೇಶ್ ಕೆ., ಸರೋಜಾ ಬಿ. (ಸಂ) ಹೈದರಾಬಾದ್ ಕರ್ನಾಟಕದ ವರ್ತಮಾನದ ತಲ್ಲಣಗಳು, ಪುಟ ೮೨.

೧೫. ಅಮರೇಶ ನುಗಡೋಣಿ, ಹೈದರಾಬಾದ್ ಕರ್ನಾಟಕ ಹಾಡು-ಪಾಡು, ಪುಟ ೪೭.

೧೬. ಬಸವರಾಜ ಟಿ. ಕುಮ್ನೂರ, ಡಾ. ನಂಜುಂಡಪ್ಪ ವರದಿ ಮತ್ತು ಅನುಷ್ಠಾನ, ಪುಟ ೪೭.

೧೭. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು, ಪುಟ ೧೪೭.

೧೮. ವೆಂಕಟೇಶ್ ಕೆ., ಸರೋಜ ಬಿ.(ಸಂ) ಹೈದರಾಬಾದ್ ಕರ್ನಾಟಕದ ವರ್ತಮಾನದ ತಲ್ಲಣಗಳು, ಪುಟ ೮೫.

ಅಧ್ಯಾಯ : ಆರು

# ತುರ್ತುಪರಿಸ್ಥಿತಿಯ ಸಂದರ್ಭ ಮತ್ತು ನಂತರದ ದಿನಗಳಲ್ಲಿ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು

೬.೧. ತುರ್ತುಪರಿಸ್ಥಿತಿಯ ಘೋಷಣೆ

೬.೨. ಭಾರತದಲ್ಲಿ ತುರ್ತುಪರಿಸ್ಥಿತಿ

೬.೩. ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ

೬.೪. ಯಾದಗಿರಿ ಜಿಲ್ಲೆಯಲ್ಲಿ ತುರ್ತುಪರಿಸ್ಥಿತಿ

೬.೫. ಸಾಲಮೇಳ

೬.೬. ರಾಷ್ಟ್ರೀಕೃತ ಬ್ಯಾಂಕ್ ಮತ್ತು ಚಳುವಳಿಗಳು

ಅಧ್ಯಾಯ : ಆರು

# ತುರ್ತುಪರಿಸ್ಥಿತಿಯ ಸಂದರ್ಭ ಮತ್ತು ನಂತರದ ದಿನಗಳಲ್ಲಿ ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು

ತುರ್ತುಪರಿಸ್ಥಿತಿಯ ಪ್ರಭಾವ ದೇಶದ ಯಾವ ಭಾಗವನ್ನೂ ಬಿಟ್ಟಿಲ್ಲ. ತುರ್ತು ಪರಿಸ್ಥಿತಿಯ ಝಳ ಯಾದಗಿರಿ ಜಿಲ್ಲೆಯ ಜನ ಸಾಮಾನ್ಯರನ್ನು ಕೂಡ ಬಿಟ್ಟಿಲ್ಲ. ಅದನ್ನು ಘಟನೆಗಳಿಂದ ವಿವರಿಸಬಹುದು. ದೇಶದಲ್ಲಿ ತುರ್ತುಪರಿಸ್ಥಿತಿಯ ಬಗ್ಗೆ ಪರ-ವಿರೋಧ ಇದ್ದಂತೆ, ಯಾದಗಿರಿ ಜಿಲ್ಲೆಯಲ್ಲಿಯೂ ಇತ್ತು. ಕರ್ನಾಟಕದಲ್ಲಿ ಆಗ ಕಾಂಗ್ರೆಸ್ ಸರ್ಕಾರದ ಆಳ್ವಿಕೆ ಇತ್ತು. ಹಿಂದುಳಿದ ವರ್ಗಗಳ ಹರಿಕಾರರಾದ ದೇವರಾಜ ಅರಸು ಮುಖ್ಯಮಂತ್ರಿಗಳಾಗಿದ್ದರು. ಇಂದಿರಾಗಾಂಧಿ ಅವರು ಜಾರಿಗೆ ತಂದಿದ್ದ ಇಪ್ಪತ್ತು ಅಂಶಗಳ ಯೋಜನೆಗಳನ್ನು ರಾಜ್ಯದಲ್ಲಿ ಅರಸು ಅವರು ಜಾರಿಗೆ ತಂದರು. ದೇಶದಲ್ಲಿ ತುರ್ತುಪರಿಸ್ಥಿತಿಯು ಜಾರಿಯಲ್ಲಿದ್ದ ಸಂದರ್ಭವನ್ನು ಅರಸು ಉಪಯೋಗಿಸಿಕೊಂಡು ಭೂಸುಧಾರಣೆ, ಜೀತಪದ್ಧತಿಯ ನಿರ್ಮೂಲನೆ, ಜಾತಿ ವಿನಾಶದಂತಹ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಸುಧಾರಣೆ ಕೈಗೊಂಡರು. ಯಾದಗಿರಿ ಜಿಲ್ಲೆಯೂ ಕೂಡ ಕಾಂಗ್ರೆಸ್ ಧುರೀಣರಿಂದ ಕೂಡಿತ್ತು. ಕಾಂಗ್ರೆಸ್ಸಿನ ಪ್ರಭಾವ ಇಲ್ಲಿ ಹೆಚ್ಚು ಇತ್ತು. ಕೋಳೂರು ಮಲ್ಲಪ್ಪ, ಕಲಬುರಗಿ ಶರಣಪ್ಪ, ಜಗನ್ನಾಥರಾವ್ ಚಂಡ್ರಿಕಿ, ಸಿದ್ದರಾಮರೆಡ್ಡಿ, ಧರ್ಮಸಿಂಗ್, ಮಲ್ಲಿಕಾರ್ಜುನ ಖರ್ಗೆ ಮುಂತಾದವರು ಕಾಂಗ್ರೆಸ್ ನಾಯಕರಾಗಿದ್ದರು.

ಕೋಳೂರು ಮಲ್ಲಪ್ಪ ಅವರು ಇಂದಿರಾಗಾಂಧಿಗೆ ಅತ್ಯಂತ ನಿಕಟವರ್ತಿಗಳಾಗಿದ್ದರು. ದೇವರಾಜ ಅರಸು ಕೂಡ ಮಲ್ಲಪ್ಪ ಅವರ ಜೊತೆ ಚರ್ಚಿಸಿ ಯಾದಗಿರಿ ಜಿಲ್ಲೆಯ ಬಗೆಗಿನ ನಿರ್ಣಯಗಳನ್ನು ತೆಗೆದುಕೊಳ್ಳುತಿದ್ದರು. ಹೀಗಾಗಿ ಈ ಎಲ್ಲ ನಾಯಕರು ಮತ್ತು ಅವರ ಅನುಯಾಯಿಗಳು ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಭೂಸುಧಾರಣೆ, ಜೀತಪದ್ಧತಿಯ ವಿರೋಧ, ಜಾತಿವಿನಾಶ, ಬ್ಯಾಂಕುಗಳ ರಾಷ್ಟ್ರೀಕರಣ ಹಾಗೂ ಸಾಲ ಮೇಳದಂತಹ ಸಾಮಾಜಿಕ ಚಳುವಳಿಗಳನ್ನು ಜಿಲ್ಲೆಯಾದ್ಯಂತ ಸಂಘಟಿಸಿದ್ದರು.

ಇಂದಿರಾಗಾಂಧಿಯವರು ಘೋಷಿಸಿದ ಇಪ್ಪತ್ತು ಅಂಶಗಳ. ಸಣ್ಣ ಸಾಲಗಳಿಗೋಸ್ಕರ ಈ ಜಿಲ್ಲೆಯ ಅನೇಕ ಸಾಮಾಜಿಕ ಚಳುವಳಿಗಳ ಮೇಲೆ ಒತ್ತಡ ಹೇರುತಿದ್ದರು. ಬ್ಯಾಂಕುಗಳು ಸಾಲ ಕೊಡಲು ನಿರಾಕರಿಸಿದರೆ ಅಥವಾ ಹಿಂದೆ ಮುಂದೆ ನೋಡಿದರೆ ಈ ಚಳುವಳಿಗಾರರು

ಬ್ಯಾಂಕು ವ್ಯವಸ್ಥಾಪಕರಿಗೆ ಘೇರಾಯಿಸಿ ದಿಕ್ಕಾರ ಕೂಗುತ್ತಿದ್ದ ಅನೇಕ ಉದಾಹರಣೆಗಳಿವೆ. ಅನೇಕ ಸಂದರ್ಭಗಳಲ್ಲಿ ಬ್ಯಾಂಕುಗಳನ್ನು ಧ್ವಂಸ ಮಾಡಿದ್ದ ನಿದರ್ಶನಗಳಿವೆ. ಇನ್ನು ಭೂ ಸುಧಾರಣೆ ವಿಷಯಕ್ಕೆ ಬಂದರೆ, ಈ ಸಾಮಾಜಿಕ ಹೋರಾಟಗಾರರು ಅನೇಕ ಗೇಣಿದಾರರನ್ನು ಸಂಘಟಿಸಿ, ಅವರಲ್ಲಿ ಜಾಗೃತಿ ಮೂಡಿಸಿ ಚಳುವಳಿ ಕೈಗೊಂಡ ಉದಾಹರಣೆಗಳಿವೆ. ಹೀಗೆ ಈ ಜಿಲ್ಲೆಯಲ್ಲಿ ಮೇಲೆ ಹೇಳಿದಂತಹ ಅನೇಕ ಸಾಮಾಜಿಕ ಚಳುವಳಿಗಳನ್ನು ಮಾಡಲಾಗಿದೆ.

"೧೯೭೩ರ ನಂತರ ಇಂದಿರಾಗಾಂಧಿಯವರ ಸರ್ವಾಧಿಕಾರಿ ಮನೋಭಾವ ದಿನದಿಂದ ದಿನಕ್ಕೆ ಸಾಂದ್ರಗೊಳ್ಳುತ್ತಾ ಹೋಯಿತು. ಅವರು ಜನರ ಭಾವನೆಗಳಿಂದ ದೂರವಾಗತೊಡಗಿದರು. ಅವರ ಸುತ್ತಲೂ ಭಟ್ಟಂಗಿಗಳು ಆವರಿಸಿದರು. ಅವರಿಂದ ಪ್ರಶಂಸೆಗಳನ್ನು ಕೇಳಿದ ಇಂದಿರಾ ಗಾಂಧಿಯವರು ತಲೆದೂಗತೊಡಗಿದರು. ವಾಸ್ತವ ಸಂಗತಿಗಳನ್ನು ಅರಿಯಲು ವಿಫಲರಾದರು. ಭಟ್ಟಂಗಿಗಳ ವರ್ತನೆ ಎಷ್ಟರ ಮಟ್ಟಿಗೆ ಲಜ್ಜೆಗೇಡಿತನದಿಂದ ಕೂಡಿತ್ತೆನ್ನುವದಕ್ಕೆ ಡಿ.ಕೆ. ಬರೂವ ಅವರ ಹೇಳಿಕೆಯೇ ಸಾಕ್ಷಿ ಆಗಿದೆ. ಅಂದಿನ ಕಾಂಗ್ರೆಸ್ ಅಧ್ಯಕ್ಷರಾದ ಅವರು "ಭಾರತವೇ ಇಂದಿರಾ, ಇಂದಿರಾ ಅವರೇ ಭಾರತ" ಎಂದು ಹೊಗಳಿದರು.

ಭಾರತದ ರಾಜಕೀಯ ಸನ್ನಿವೇಶ ಮತ್ತು ಆರ್ಥಿಕ ಪರಿಸ್ಥಿತಿ ೧೯೭೩-೭೪ರ ನಂತರ ಹದಗೆಡತೊಡಗಿತು. ಬಾಂಗ್ಲಾ ದೇಶದಿಂದ ಬಂದ ಒಂದು ಕೋಟಿ ನಿರಾಶ್ರಿತರನ್ನು ಸಲಹುವುದು ಕಷ್ಟದ ಸಂಗತಿಯಾಯಿತು. ಇದರಿಂದ ಸರ್ಕಾರ ಕಾಯ್ದಿಟ್ಟಿದ್ದ ಆಹಾರ ಪದಾರ್ಥವೆಲ್ಲವೂ ವೆಚ್ಚವಾಯಿತು; ಅಪಾರ ಹಣ ಖರ್ಚಾಯಿತು. ೧೯೭೨ ಮತ್ತು ೧೯೭೩ರಲ್ಲಿ ಮಾನ್ಸೂನ್ ಮಾರುತಗಳು ಬಾರದೆ ಮಳೆ ಆಗಲಿಲ್ಲ. ಇದರಿಂದ ಭೀಕರ ಬರಗಾಲ ಬಂದಿತು. ಉದ್ಯೋಗ ಅವಕಾಶಗಳು ಸ್ಥಗಿತವಾಗಿ, ನಿರುದ್ಯೋಗ ಸಮಸ್ಯೆ ಬೃಹದಾಕಾರವಾಯಿತು. ಅಂತಾರಾಷ್ಟ್ರೀಯ ಮಟ್ಟದಲ್ಲಿ ೧೯೭೩ರಲ್ಲಿ ಕಚ್ಚಾ ತೈಲದ ಬೆಲೆ ನಾಲ್ಕು ಪಟ್ಟು ಹೆಚ್ಚಿತು. ತೈಲೋತ್ಪನ್ನಗಳು ಮತ್ತು ರಾಸಾಯನಿಕ ಗೊಬ್ಬರಗಳ ಬೆಲೆಯೂ ಅಧಿಕವಾಯಿತು."[೧] ಇದರಿಂದ ಉಂಟಾದ ಆರ್ಥಿಕ ಹೊಡೆತ, ಬಡವರನ್ನು ಮತ್ತು ಮಧ್ಯಮವರ್ಗದವರನ್ನು ಕಂಗೆಡಿಸಿತು. ಇವೆಲ್ಲದರ ಪರಿಣಾಮವಾಗಿ ಜೀವನಾವಶ್ಯಕ ವಸ್ತುಗಳ ಕೊರತೆ, ಅದೇ ಸಮಯದಲ್ಲಿ ಅವುಗಳ ಬೆಲೆ ಗಗನಕ್ಕೇರಿತು. ನಿರುದ್ಯೋಗ ಸಮಸ್ಯೆ ದೇಶವ್ಯಾಪಿಯಾಗಿ ಯುವಕರನ್ನು ಕಾಡತೊಡಗಿತು. ಸರ್ಕಾರಿ ಆಡಳಿತ ಯಂತ್ರ ಪೋಷಿತ ಭ್ರಷ್ಟಾಚಾರ ದೇಶದ ಉದ್ದಗಲಕ್ಕೂ ಹಬ್ಬಿ, ಎಲ್ಲ ವರ್ಗದವರನ್ನೂ ಕಾಡ ತೊಡಗಿತು. ಇವುಗಳ ನಿವಾರಣೆಗೆ ಇಂದಿರಾಗಾಂಧಿಯವರ ಸರ್ಕಾರ ಮತ್ತು ಪ್ರಾಂತಗಳಲ್ಲಿರುವ ಅವರದೇ ಸರ್ಕಾರಗಳು ವಿಮುಖವಾದವು.

ಇಂತಹ ಹತಾಶ ಪರಿಸ್ಥಿತಿಯ ವಿರುದ್ಧ ಜನರ ಆಕ್ರೋಶ ಭುಗಿಲೆದ್ದಿತು. ೧೯೭೩ರ ಮೇ ತಿಂಗಳಲ್ಲಿ ಲಕ್ನೋ ವಿದ್ಯಾರ್ಥಿಗಳು ಮುಷ್ಕರ ನಡೆಸಿದರು. ಸ್ವಾತಂತ್ರ್ಯದ ಹೋರಾಟಗಾರರಾದ ಜಯಪ್ರಕಾಶ ನಾರಾಯಣ ಮತ್ತು ಜೆ.ಬಿ. ಕೃಪಲಾನಿಯವರು ಇಂದಿರಾಗಾಂಧಿ ಅವರ ವಿರುದ್ಧ ಹೋರಾಟಕ್ಕೆ ನಿಂತರು. ಅವರ ನಾಯಕತ್ವದಲ್ಲಿ ಬಿಹಾರದ ಕಾಂಗ್ರೆಸ್ ಆಡಳಿತವನ್ನು ಬದಲಿಸಲು ಜನತೆ ಕರೆ ನೀಡಿದರು. ಗುಜರಾತಿನಲ್ಲೂ ಅಲ್ಲಿನ ಭ್ರಷ್ಟ ಸರ್ಕಾರದ ವಿರುದ್ಧ ವಿದ್ಯಾರ್ಥಿಗಳಿಂದ

ಆಂದೋಲನ ಆರಂಭವಾಯಿತು. ಇಂದಿರಾಗಾಂಧಿಯವರೇ ನೇಮಿಸಿದ್ದ ಮುಖ್ಯಮಂತ್ರಿಗಳು ಗುಜರಾತ್ ಮತ್ತು ಬಿಹಾರದಲ್ಲಿನ ಪರಿಸ್ಥಿತಿಯನ್ನು ನಿಯಂತ್ರಿಸಲು ವಿಫಲರಾದರು. ಜಾರ್ಜ್ ಫರ್ನಾಂಡಿಸ್ ದೇಶವ್ಯಾಪಿ ರೈಲ್ವೆ ಮುಷ್ಕರವನ್ನು ೧೯೭೪ರ ಏಪ್ರಿಲ್–ಮೇ ತಿಂಗಳಲ್ಲಿ ನಡೆಸಿದರು. ಇದು ೨೨ ದಿನಗಳ ಕಾಲ ನಡೆಯಿತು. ಮುಷ್ಕರ–ಆಂದೋಲನ ಸಾಮಾನ್ಯ ಸಂಗತಿ ಆಯಿತು. ವಿದ್ಯಾರ್ಥಿ ಪ್ರತಿಭಟನೆ ಮತ್ತು ಜನತೆಯ ಹೋರಾಟ ಭೀಕರ ಸ್ವರೂಪ ತಾಳಿತು. ಕಾನೂನುಗಳು ನಿಷ್ಕ್ರಿಯವಾದವು. ಎಲ್ಲೆಲ್ಲೂ ಅವ್ಯವಸ್ಥೆ ತಾಂಡವವಾಡತೊಡಗಿತು. ಭ್ರಷ್ಟಾಚಾರ ತಾರಕಕ್ಕೇರಿತು. ಜಯಪ್ರಕಾಶ ನಾರಾಯಣರು 'ಸಂಪೂರ್ಣ ಕ್ರಾಂತಿ'ಗೆ ಕರೆ ನೀಡಿದರು. ಯುವಕರು, ಮುಷ್ಕರ ನಿರತ ಸರ್ಕಾರಿ ಉದ್ಯೋಗಿಗಳು, ಅಸಂಖ್ಯಾತ ವಿದ್ಯಾವಂತರು ಜಯಪ್ರಕಾಶ ನಾರಾಯಣ ಅವರ ಕ್ರಾಂತಿಗೆ ಬೆಂಬಲ ನೀಡಿದರು. ಇದೇ ಸಮಯದಲ್ಲಿ ಬಂದ ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪು ಸನ್ನಿವೇಶಕ್ಕೆ ಕ್ರಾಂತಿಕಾರಕ ತಿರುವು ನೀಡಿತು.

**ಅಲಹಾಬಾದ್ ನ್ಯಾಯಾಲಯ ತೀರ್ಪು**

ಇಷ್ಟೆಲ್ಲ ಅವ್ಯವಸ್ಥೆ–ಅನಿಶ್ಚಿತತೆಯ ನಡುವೆ ಮತ್ತೊಂದು ಘಟನೆ ಸಂಭವಿಸಿತು. "೧೯೭೧ರ ಸಾರ್ವತ್ರಿಕ ಲೋಕಸಭಾ ಚುನಾವಣೆಯಲ್ಲಿ ಉತ್ತರ ಪ್ರದೇಶದ ರಾಯಬರೇಲಿ ಕ್ಷೇತ್ರದಿಂದ ಇಂದಿರಾಗಾಂಧಿ ಅವರ ವಿರುದ್ಧ ಸ್ಪರ್ಧಿಸಿದ್ದ ರಾಜನಾರಾಯಣ್ ಅವರು ಸೋತಿದ್ದರು. ಇಂದಿರಾ ಗಾಧಿಯವರು ಭ್ರಷ್ಟಚಾರವೆಸಗಿ, ಗೆಲುವು ಪಡೆದಿದ್ದಾರೆಂದು ಅವರು ಅಲಾಹಾಬಾದ್ ಉಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು. ಅವರು ಗೆಲ್ಲಲು ಪ್ರಧಾನಮಂತ್ರಿಯ ಕಚೇರಿಯ ಉದ್ಯೋಗಿಗಳನ್ನು ಬಳಸಿಕೊಂಡರೆಂದು ನ್ಯಾಯಾಲಯ ಭಾವಿಸಿತ್ತು. ಅಲಹಾಬಾದ್ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಜಗಮೋಹನ್ ಸಿನ್ಹ ಅವರು ೧೯೭೫ರ ಜೂನ್ ೧೨ರಂದು ಈ ಮೊಕದ್ದಮೆಯ ಬಗ್ಗೆ ಐತಿಹಾಸಿಕ ತೀರ್ಪು ನೀಡಿ, ಇಂದಿರಾಗಾಂಧಿಯವರ ಚುನಾವಣಾ ಗೆಲುವನ್ನು ಅನೂರ್ಜಿತಗೊಳಿಸಿದರು; ಅವರು ಮುಂದೆ ಆರು ವರ್ಷಗಳ ಕಾಲ ಚುನಾವಣೆಯಲ್ಲಿ ಸ್ಪರ್ಧಿಸಲು ಅನರ್ಹರೆಂದು ತೀರ್ಪಿನಲ್ಲಿ ತಿಳಿಸಿದರು. ಇಂದಿರಾ ಅವರು ತಮ್ಮ ಲೋಕಸಭಾ ಸ್ಥಾನ ಮತ್ತು ಪ್ರಧಾನಮಂತ್ರಿ ಹುದ್ದೆಯನ್ನು ತೆರವು ಮಾಡದೆ, ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದರು. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ವಿ.ಆರ್. ಕೃಷ್ಣ ಅಯ್ಯರ್ ಅವರು ಜೂನ್ ೨೪ರಂದು 'ಷರತ್ತಿನ ತಡೆಯಾಜ್ಞೆ' ನೀಡಿದರು. ಇದರ ಪ್ರಕಾರ ಇಂದಿರಾ ಅವರು ಪ್ರಧಾನಮಂತ್ರಿಯಾಗಿ ಮುಂದುವರಿಯಬಹುದು, ಆದರೆ ಲೋಕಸಭೆಯಲ್ಲಿ ಮತದಾನ ಮಾಡುವಂತಿರಲಿಲ್ಲ."[೨]

ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪು ವಿರೋಧ ಪಕ್ಷಗಳ ಕೈಗೆ ಸಿಕ್ಕಿದ ಬ್ರಹ್ಮಾಸ್ತ್ರವಾಯಿತು. ಜಯಪ್ರಕಾಶ ನಾರಾಯಣರು ಮತ್ತು ವಿರೋಧ ಪಕ್ಷಗಳ ಒಕ್ಕೂಟವು ಸರ್ವೋಚ್ಚ ನ್ಯಾಯಾಲಯದ ಅಂತಿಮ ತೀರ್ಪನ್ನು ಕಾಯಲು ಸಿದ್ಧವಿರಲಿಲ್ಲ. ಅವರೆಲ್ಲರೂ ಇಂದಿರಾಗಾಂಧಿಯವರ ರಾಜೀನಾಮೆಗೆ ಒತ್ತಾಯಿಸಿದರು. ಇದಾವುದಕ್ಕೂ ಇಂದಿರಾ ಅವರು ಜಗ್ಗುವಂತಿರಲಿಲ್ಲ. ಜೆಪಿಯವರು ಇಂದಿರಾ ಅವರನ್ನು ಅಧಿಕಾರದಿಂದ ತೆಗೆದುಹಾಕಲು ಒಂದು

ವಾರದವರೆಗೆ ದೇಶಾದ್ಯಂತ ಕಾಯಿದೆಭಂಗ ಚಳುವಳಿಯನ್ನು ನಡೆಸುವುದಾಗಿ ಜೂನ್೨೫ರಂದು ಪ್ರಕಟಿಸಿದರು. ಈ ಚಳುವಳಿಯ ಅಂತ್ಯದಲ್ಲಿ ಪ್ರಧಾನಿ ಮನೆಯ ಮುಂದೆ ಅವರ ರಾಜೀನಾಮೆಗಾಗಿ ಘೇರಾವೊ ಮಾಡುವುದೆಂದು ತೀರ್ಮಾನಿಸಲಾಯಿತು. ಜಯಪ್ರಕಾಶ್ ನಾರಾಯಣ ರವರು ಸರ್ಕಾರ ಕಾರ್ಯ ನಿರ್ವಹಿಸದಂತೆ ನೋಡಿಕೊಳ್ಳಬೇಕೆಂದು ಜನತೆಗೆ ಕರೆ ನೀಡಿದರು. ಇದರ ಜೊತೆಗೆ, ಸೈನ್ಯ ಮತ್ತು ಪೊಲೀಸ್ ಪಡೆಗಳು ಸರ್ಕಾರದ ನ್ಯಾಯವಿರೋಧಿ ಮತ್ತು ಸಂವಿಧಾನ ವಿರೋಧಿ ಆದೇಶಗಳನ್ನು ಪಾಲಿಸಕೂಡದೆಂದು ಘೋಷಿಸಿದರು. ಗುಜರಾತ್ ವಿಧಾನಸಭೆಗೆ ನಡೆದ ಚುನಾವಣೆಯ ಫಲಿತಾಂಶ ಜೂನ್ ೧೫ರಂದು ಪ್ರಕಟವಾಯಿತು. ಇದರಲ್ಲಿ ಇಂದಿರಾ ಗಾಂಧಿಯವರ ಕಾಂಗ್ರೆಸ್ ಪಕ್ಷ ಸೋಲನ್ನು ಅನುಭವಿಸಿತು. ಜನತಾಪಕ್ಷ ಜಯ ಗಳಿಸಿತು. ಇದು ಇಂದಿರಾ ಅವರ ಪಾಲಿಗೆ ಮತ್ತೊಂದು ಹೊಡೆತವಾಯಿತು.

**೬.೧. ತುರ್ತುಪರಿಸ್ಥಿತಿಯ ಘೋಷಣೆ**

"ಪರಿಸ್ಥಿತಿಯನ್ನು ನಿಭಾಯಿಸಲು ವಿಫಲರಾದ ಇಂದಿರಾಗಾಂಧಿ ಅವರು ಚಿಂತಾಕ್ರಾಂತ ರಾದರು. ಇದೇ ಸಮಯದಲ್ಲಿ ಕಾಂಗ್ರೆಸ್ ನಾಯಕರೂ, ಪಶ್ಚಿಮ ಬಂಗಾಳದ ಮುಖ್ಯಮಂತ್ರಿಗಳಾದ ಸಿದ್ಧಾರ್ಥ ಶಂಕರ ರೇ ಅವರು ತುರ್ತುಪರಿಸ್ಥಿತಿಯನ್ನು ಘೋಷಿಸಬಹುದೆಂದು ಪೋನ್ ಮುಖಾಂತರ ಸಲಹೆ ನೀಡಿದರು. ಪ್ರಧಾನ ಮಂತ್ರಿಗಳು ೧೯೭೫ ಜೂನ್ ೨೫ರ ರಾತ್ರಿ ಬಹಳ ಹೊತ್ತಿನ ನಂತರ ಭಾರತದ ರಾಷ್ಟ್ರಪತಿಗಳಾದ ಫಕ್ರುದ್ದಿನ್ ಆಲಿ ಅಹಮದರನ್ನು ಭೇಟಿ ಆದರು. ಭಾರತದ ಸಂವಿಧಾನದ ೩೫೨ನೇ ಅನುಚ್ಛೇದದ ಅನ್ವಯ ತುರ್ತುಪರಿಸ್ಥಿತಿಯನ್ನು ಘೋಷಿಸಲು ಶಿಫಾರಸ್ಸು ಮಾಡಿದರು. ಆಂತರಿಕ ಗೊಂದಲಗಳಿಂದ ದೇಶದ ಭದ್ರತೆಗೆ ಅಪಾಯ ಒದಗಿದೆ ಎಂಬ ಕಾರಣ ಕೊಟ್ಟರು. ರಾಷ್ಟ್ರಪತಿಗಳು ಅಂದೇ(ಜೂನ್೨೬, ೧೯೭೫) ತುರ್ತುಪರಿಸ್ಥಿತಿ ಯನ್ನು ಜಾರಿಗೆ ತಂದರು. ಚುನಾವಣೆಗಳು ಮತ್ತು ನಾಗರಿಕ ಹಕ್ಕುಗಳನ್ನು ಅಮಾನತ್ತಿನಲ್ಲಿಡಲಾಯಿತು. ತುರ್ತುಪರಿಸ್ಥಿತಿ ಸ್ವತಂತ್ರ ಭಾರತದ ಅತ್ಯಂತ ವಿವಾದಾತ್ಮಕ ಹಾಗೂ ಕರಾಳ ಕಾಲಾವಧಿಯಾಯಿತು. ತುರ್ತುಪರಿಸ್ಥಿತಿಯನ್ನು ಘೋಷಿಸಲು ತಮ್ಮ ಸಚಿವ ಸಂಪುಟದಿಂದ ಅನುಮೋದನೆಯನ್ನು ಪಡೆದುಕೊಂಡಿರಲಿಲ್ಲ. ಮಾರನೇ ದಿವಸ ಅಂತಹ ಅನುಮೋದನೆಯನ್ನು ಪಡೆದುಕೊಂಡರು.

ಮಾರನೇ ದಿವಸ ಜೂನ್ ೨೬ರಂದು ಇಂದಿರಾಗಾಂಧಿಯವರ ಸರ್ಕಾರ ಸುಮಾರು ಹತ್ತು ಸಾವಿರಕ್ಕೂ ಅಧಿಕ ಮಂದಿಯನ್ನು ಬಂಧಿಸಿ, ಜೈಲಿಗಟ್ಟಿತು. ಇದರಲ್ಲಿ ವಿದ್ಯಾರ್ಥಿಗಳು, ರಾಜಕಾರಣಿಗಳು, ಪತ್ರಕರ್ತರು, ಬುದ್ಧಿಜೀವಿಗಳು ಕಾಂಗ್ರೆಸ್ ಪಕ್ಷದ ಅವರ ವಿರೋಧಿಗಳು ಸೇರಿದ್ದರು."[೩] 'ಆಂತರಿಕ ಭದ್ರತಾ ನಿರ್ವಾಹಣಾ ಕಾಯಿದೆಯ' ಅಡಿಯಲ್ಲಿ ಜಯಪ್ರಕಾಶ ನಾರಾಯಣ, ಮೊರಾರ್ಜಿ ದೇಸಾಯಿ, ರಾಜನಾರಾಯಣ, ಕುಲದೀಪ ನಾಯರ್, ಚರಣಸಿಂಗ್, ಪಿಲೂ ಮೋದಿ, ಚಂದ್ರಶೇಖರ್ ಮುಂತಾದ ಧುರೀಣರನ್ನು ಬಂದಿಸಲಾಯಿತು. ಈ ಅಪಾಯದ ವಾಸನೆಯನ್ನು ಗ್ರಹಿಸಿದ್ದ ಸುಬ್ರಹ್ಮಣ್ಯಸ್ವಾಮಿ ಮತ್ತು ಅವರ ಸ್ನೇಹಿತರು ಬಂಧನವನ್ನು ತಪ್ಪಿಸಿಕೊಂಡರು. ಜಾರ್ಜ್ ಫರ್ನಾಂಡಿಸ್, ನಾನಾಜಿ ದೇಶಮುಖ್ ಮುಂತಾದವರು ಭೂಗತರಾದರು. ಬೆಂಗಳೂರಿಗೆ ಬಂದಿದ್ದ ಲಾಲ್ ಕೃಷ್ಣ ಅದ್ವಾನಿ ಅವರನ್ನು ಅಲ್ಲೇ ಬಂಧಿಸಲಾಯಿತು.

ವಿರೋಧ ಪಕ್ಷಗಳ ನಾಯಕರ ಜೊತೆಯಲ್ಲೇ, ಇಂದಿರಾಗಾಂಧಿ ಅವರ ಆಕ್ರೋಶಕ್ಕೆ ತೀವ್ರವಾಗಿ ಗುರಿಯಾದದ್ದು ಪತ್ರಿಕೆಗಳು. ಪತ್ರಿಕಾ ಸ್ವಾತಂತ್ರ್ಯವನ್ನು ದಮನ ಮಾಡಲು ಬಿಗಿಯಾದ ಪತ್ರಿಕಾ ನಿರ್ಬಂಧ ಅಥವಾ ಸೆನ್ಸಾರನ್ನು ಹೇರಿದರು. ೧೯೭೫ರ ಜೂನ್ ೨೫ರ ರಾತ್ರಿ ದೆಹಲಿಯ ಪ್ರಮುಖ ಪತ್ರಿಕೆಗಳಿಗೆ ವಿದ್ಯುಚ್ಛಕ್ತಿ ಪೂರೈಕೆಯನ್ನು ಕಡಿದು ಹಾಕಲಾಯಿತು. 'ದಿ ಹಿಂದುಸ್ತಾನ್ ಟೈಮ್ಸ್' ಮತ್ತು 'ದಿ ಸ್ಟೇಟ್ಸ್‌ಮನ್' ಪತ್ರಿಕೆಗಳು ಮಾತ್ರ ಪ್ರಕಟವಾದವು. ಈ ರಾಜಕೀಯ ಚದುರಂಗ ಆಟದಲ್ಲಿ ಹೆಚ್ಚು ಹಾನಿಗೆ ಒಳಗಾದವರು 'ದಿ ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯ ಬಳಗ ಮತ್ತು ಅದರ ಮಾಲಿಕರಾದ ರಾಮನಾಥ ಗೋಯಂಕರ. ದೇಶದ ನಾಲ್ಕು ವಾರ್ತಾ ಏಜೆನ್ಸಿಗಳನ್ನು ಒಂದುಗೂಡಿಸಿ, 'ಸಮಾಚಾರ್' ಎಂಬ ಸಂಸ್ಥೆಯನ್ನು ಸರ್ಕಾರ ಭಾರತೀಯ ಪತ್ರಕರ್ತರು ಸೆರೆಮನೆ ಸೇರಿದರು. ವಿದೇಶಿ ಪತ್ರಕರ್ತರನ್ನು ದೇಶವನ್ನು ಬಿಟ್ಟು ಹೋಗುವಂತೆ ಆದೇಶಿಸಲಾಯಿತು.

### ತುರ್ತುಪರಿಸ್ಥಿತಿಯ ಕಾರ್ಯಾಚರಣೆಗಳು

"ತುರ್ತುಪರಿಸ್ಥಿತಿಯ ಕಾಲದಲ್ಲಿ ಸಂಸತ್ತು ಪೂರ್ಣವಾಗಿ ನಿಷ್ಕ್ರಿಯವಾಯಿತು ಅಥವಾ ಇಂದಿರಾಗಾಂಧಿ ಅವರ ಸಂಪೂರ್ಣ ನಿಯಂತ್ರಣಕ್ಕೆ ಒಳಗಾಯಿತು. ಪಾರ್ಲಿಮೆಂಟಿನ ನೆರವಿನಿಂದ ಮೂಲಭೂತ ಹಕ್ಕುಗಳನ್ನು ಅಮಾನತಿನಲ್ಲಿಡಲಾಯಿತು. ಯಾರನ್ನಾದರೂ ಯಾವಾಗ ಬೇಕಾದರೂ ಬಂಧಿಸಬಹುದಿತ್ತು. ಇದಕ್ಕೆಲ್ಲಾ ಸಂಸತ್ತಿನ ಮಾನ್ಯತೆ ದೊರೆಯಿತು. ಅನಗತ್ಯ ಬಂಧನದಿಂದ ದೇಶಾದ್ಯಂತ ಭಯದ ಸನ್ನಿವೇಶ ಉಂಟಾಯಿತು. ಅಧಿಕಾರಿಗಳ ದಬ್ಬಾಳಿಕೆ ನಡೆಯತೊಡಗಿತು. ವಿರೋಧ ಪಕ್ಷಗಳನ್ನು ನಿಸ್ತೇಜಗೊಳಿಸುವ ಅವರ ಹವ್ಯಾಸ ಅವ್ಯಾಹತವಾಗಿ ಮುಂದುವರಿಯಿತು. ಕೆಲ ರಾಜ್ಯಗಳಲ್ಲಿದ್ದ ಕಾಂಗ್ರೆಸ್ಸೇತರ ಸರ್ಕಾರಗಳನ್ನು ವಜಾ ಮಾಡಿದರು; ಕೆಲ ರಾಜ್ಯಗಳ ತಮ್ಮ ಪಕ್ಷದ ಮುಖ್ಯಮಂತ್ರಿಗಳನ್ನು ಬದಲಿಸಿದರು."[೪] ತಮಿಳುನಾಡಿನ ಸರ್ಕಾರ ಮತ್ತು ಗುಜರಾತಿನ ಸರ್ಕಾರಗಳನ್ನು ಬಹುಮತವಿದ್ದರೂ ವಜಾ ಮಾಡಿದರು. ಉತ್ತರಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳ ಮುಖ್ಯಮಂತ್ರಿಗಳನ್ನು ತಮಗೆ ವಿಶ್ವಾಸಪರರಲ್ಲವೆನಿಸಿದ್ದರಿಂದ, ಅವರನ್ನೂ ಬದಲಿಸಿದರು. ತುರ್ತು ಪರಿಸ್ಥಿತಿಯಲ್ಲಿ ಅವರ ಮಗ ಸಂಜಯಗಾಂಧಿಯವರು ಪ್ರಬಲರಾದರು. ಅವರ ನೇತೃತ್ವದಲ್ಲಿದ್ದ ಯೂತ್ ಕಾಂಗ್ರೆಸ್, ಮಾತೃಪಕ್ಷಕ್ಕಿಂತ ಪ್ರಬಲವಾಗಿ ಮೆರೆಯತೊಡಗಿತು.

### ಸಂಜಯಗಾಂಧಿಯವರ ಏಳಿಗೆ

ತುರ್ತುಪರಿಸ್ಥಿತಿಯ ಕರಾಳ ಬೆಳವಣಿಗೆ ಎಂದರೆ ಸಂಜಯ ಗಾಂಧಿಯವರ ಏಳಿಗೆ. "ಯಾವುದೇ ಚುನಾಯಿತ ಸ್ಥಾನವಾಗಲಿ, ಸರ್ಕಾರದಲ್ಲಿ ಅಧಿಕಾರ ಸ್ಥಾನವಾಗಲಿ ಸಂಜಯ ಗಾಂಧಿಯವರು ಪಡೆದಿರಲಿಲ್ಲ. ಕೇವಲ ಪ್ರಧಾನಿ ಇಂದಿರಾಗಾಂಧಿಯವರ ಪುತ್ರರೆಂಬ ಕಾರಣದಿಂದ ಸರ್ಕಾರ ಮತ್ತು ಪಕ್ಷದಲ್ಲಿ ಅಪಾರವಾದ ಅಧಿಕಾರವನ್ನು ಚಲಾಯಿಸಲು ಆರಂಭಿಸಿದರು. ಅದಕ್ಕೆ ತುರ್ತುಪರಿಸ್ಥಿತಿ ಸರ್ವ ವಿಧದಲ್ಲೂ ನೆರವಾಯಿತು. ಅವರಿಗೆ ತಮ್ಮ ತಾಯಿಯವರ ಮೇಲೆ ಅಪಾರವಾದ ಪ್ರಭಾವವಿತ್ತು. ಇಂದಿರಾಗಾಂಧಿಯವರು ಸಂಜಯಗಾಂಧಿ ಅರನ್ನು ಹೆಚ್ಚು

ಹೆಚ್ಚು ಅವಲಂಬಿಸತೊಡಗಿದರು. ಸಂಜಯ ಗಾಂಧಿಯವರು ರಾಜ್ಯಗಳ ಮುಖ್ಯಮಂತ್ರಿಗಳು, ಕೇಂದ್ರ ಸಂಪುಟ ಸಚಿವರು, ಸರ್ಕಾರದ ಉನ್ನತ ಅಧಿಕಾರಿಗಳು, ಪೋಲಿಸು ಅಧಿಕಾರಿಗಳು ಇವರ ಮೇಲೆ ಅಧಿಕಾರ ಚಲಾಯಿಸಿದರು. ಇದನ್ನು ವಿರೋಧಿಸಿ ಅನೇಕ ಕೇಂದ್ರ ಸಂಪುಟ ಸಚಿವರು ರಾಜೀನಾಮೆ ನೀಡಿದರು. ಅವರ ಸ್ಥಳಕ್ಕೆ ಸಂಜಯ ಗಾಂಧಿಯವರು ತಮ್ಮವರನ್ನು ನೇಮಿಸಿದರು. ಇದರಲ್ಲಿ ಇಂದ್ರಕುಮಾರ್ ಗುಜ್ರಾಲರ ಘಟನೆ ಪ್ರಸಿದ್ಧವಾಗಿದೆ. ಮುಂದೆ ಪ್ರಧಾನ ಮಂತ್ರಿಗಳಾದ ಇವರು, ಅಂದು ವಾರ್ತಾ ಮತ್ತು ಪ್ರಸಾರ ಖಾತೆ ಸಚಿವರಾಗಿದ್ದರು. ಇವರಿಗೆ ಸಂಜಯ ಗಾಂಧಿ ಆಜ್ಞೆಯನ್ನು ಹೊರಡಿಸಿದರು. ಯಾವುದೇ ಚುನಾಯಿತ ಸ್ಥಾನದಲ್ಲಿರದ ವ್ಯಕ್ತಿಯಿಂದ ಆದೇಶ ಪಡೆಯುವುದಿಲ್ಲವೆಂದು, ಬೈದು, ಗುಜ್ರಾಲ್ ತಮ್ಮ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಈ ರೀತಿ ಕೆಲವೇ ಮುಖಂಡರು ಸಂಜಯ–ಇಂದಿರಾ ಗಾಂಧಿಯವರನ್ನು ವಿರೋಧಿಸಿದರು. ಬಹುತೇಕ ಮಂದಿ ಅವರನ್ನು ಬೆಂಬಲಿಸಿದರು; ಭಟ್ಟಂಗಿತನವನ್ನು ನಿರ್ಲಜ್ಜೆಯಿಂದ ವ್ಯಕ್ತಪಡಿಸಿದರು. ದಾಸ್ಯ ಮನೋಭಾವದ ರಾಜಕೀಯಕ್ಕೆ ಬೆಂಬಲ ದೊರೆಯಿತು. ಅಂದಿನ ಕಾಂಗ್ರೆಸ್ ಅಧ್ಯಕ್ಷರಾದ ಡಿ.ಕೆ. ಬರೂವ ಅವರು "ಇಂದಿರಾವರೇ ಇಂಡಿಯ, ಇಂಡಿಯ ದೇಶವೇ ಇಂದಿರಾ" ಎಂದು ನಿರ್ಲಜ್ಜೆಯಿಂದ ಘೋಷಿಸಿದರು.

ಜಮಾ ಮಸೀದಿಯ ಹತ್ತಿರವಿರುವ ಕೊಳಚೆ ಪ್ರದೇಶ ನಿವಾರಣೆ ಮತ್ತು ಕುಟುಂಬ ಯೋಜನೆ ಜಾರಿಗೆ ತರುವಲ್ಲಿ ಅವರು ನಿರ್ವಹಿಸಿದ ಪಾತ್ರ ವಿವಾದದಿಂದ ಕೂಡಿದೆ. ದೆಹಲಿಯ ಜಮಾ ಮಸೀದಿ ಮತ್ತು ಟರ್ಕಮೆನ್ ಗೇಟ್ ಪ್ರದೇಶದಲ್ಲಿ ಅಸಹ್ಯಕರವಾದ ಕೊಳಚೆ ಪ್ರದೇಶಗಳಿದ್ದವು. ಇಲ್ಲಿ ಇದ್ದವರಲ್ಲಿ ಹೆಚ್ಚಿನವರು ಮುಸ್ಲಿಮರು. ಅವರನ್ನು ತೆರವುಗೊಳಿಸಲು ಸಂಜಯ ಗಾಂಧಿಯವರು ದೆಹಲಿ ಅಭಿವೃದ್ಧಿ ಪ್ರಾಧಿಕಾರಕ್ಕೆ ಆದೇಶ ನೀಡಿದರು. ಅವರ ಸದುದ್ದೇಶ ಮೆಚ್ಚಬೇಕಾದದ್ದೇ. ಇದಕ್ಕೆ ಅವರು ಅನುಸರಿಸಿದ ಮಾರ್ಗ ಅನಪೇಕ್ಷಣೀಯ ಮತ್ತು ಆಘಾತತನದ್ದಾಗಿತ್ತು. ಕೊಳಚೆ ಪ್ರದೇಶದ ನಿವಾಸಿಗಳು ತಾವಿದ್ದ ಜಾಗವನ್ನು ತೆರವು ಮಾಡಲು ನಿರಾಕರಿಸಿದರು."[೫] ಬಲವನ್ನು ಪ್ರಯೋಗಿಸಿದಾಗ ಅತ್ಯಧಿಕ ಸಂಖ್ಯೆಯಲ್ಲಿ ಸಾವುನೋವುಗಳು ಉಂಟಾದವು. ಇದರಿಂದ ಕಾಂಗ್ರೆಸ್ ಬೆಂಬಲದ ಶಕ್ತಿ ಎನಿಸಿದ ಮುಸ್ಲಿಮರು, ಕಾಂಗ್ರೆಸ್ ಪಕ್ಷದ ವಿರೋಧಿಗಳಾದರು. ಸಂಜಯ ಗಾಂಧಿಯವರು ದುಡುಕಿನಿಂದ ನಡೆದುಕೊಂಡ ಮತ್ತೊಂದು ಘಟನೆ ಕುಟುಂಬ ಯೋಜನೆಯದು. ಜನಸಂಖ್ಯಾ ಸ್ಫೋಟದಿಂದ ದೇಶದ ಪ್ರಗತಿ ಕುಂಠಿತವಾಗುತ್ತಿದೆ, ಜನಸಂಖ್ಯೆಯ ಬೆಳವಣಿಗೆಯನ್ನು ತಡೆಯಬೇಕೆನ್ನುವುದು ಸಂಜಯ ಗಾಂಧಿಯವರ ಸದುದ್ದೇಶ. ಕುಟುಂಬ ಯೋಜನೆಯನ್ನು ಕಡ್ಡಾಯವಾಗಿ ಜಾರಿಗೆ ತರಲು ಆದೇಶ ನೀಡಿದರು. ಸರ್ಕಾರಿ ಅಧಿಕಾರಿಗಳು ಮತ್ತು ಪೋಲೀಸರು ಕಿರಿಯ ವಯಸ್ಸಿನ ಯುವಕ, ಯುವತಿಯರು ಕೆಲವೊಮ್ಮೆ ಮದುವೆ ಆಗದವರನ್ನು ಹಿಡಿದುತಂದು ಸಂತಾನಶಕ್ತಿ ಹರಣ ಮಾಡಿದರು. ಇದಕ್ಕೆಲ್ಲ ರಾಜಕೀಯ ವಿರೋಧಿಗಳು, ಮುಗ್ಧರು ಮತ್ತು ಬಡಜನರು ಬಲಿ ಆದದ್ದುಂಟು. ಈ ಕುಖ್ಯಾತ ಕುಟುಂಬ ಯೋಜನೆಯ ಘಟನೆ ಬಹಳ ಕಾಲದ ವರೆಗೆ ಜನರಲ್ಲಿ ಜುಗುಪ್ಸೆಯನ್ನು ಉಂಟುಮಾಡಿತು. ಕಾಂಗ್ರೆಸ್ ಪಕ್ಷ ಜನಪ್ರಿಯತೆಯನ್ನೂ, ಜನರ ಅಖಂಡ ಬೆಂಬಲವನ್ನೂ ಕಳೆದುಕೊಂಡಿತು.

**ತುರ್ತುಪರಿಸ್ಥಿತಿಯ ಲಾಭಗಳು**

ತುರ್ತು ಪರಿಸ್ಥಿತಿಗೆ ವ್ಯಾಪಕ ಕರಾಳ ಮುಖವಿರುವಂತೆ, ಅದರಿಂದ ಕೆಲವೊಂದು ಲಾಭಗಳೂ ಆಗಿವೆ ಎನ್ನುವುದನ್ನು ಕಡೆಗಣಿಸುವಂತಿಲ್ಲ. "ಜುಲೈ ಒಂದರಿಂದ ಇಂದಿರಾಗಾಧಿ ಅವರು ೨೦-ಅಂಶಗಳ ಆರ್ಥಿಕ ಕಾರ್ಯಕ್ರಮವನ್ನು ಪ್ರಕಟಿಸಿದರು. ನೀರಾವರಿ ಮತ್ತು ಕೃಷಿಯನ್ನು ಅಭಿವೃದ್ಧಿಪಡಿಸುವುದು, ಸಮಗ್ರ ಗ್ರಾಮೀಣ ಅಭಿವೃದ್ಧಿ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ, ಕೃಷಿ ಭೂಮಿಯ ಗರಿಷ್ಠಪರಿಮಿತಿ ಕಾಯಿದೆ, ಕೃಷಿ ಕಾರ್ಮಿಕರಿಗೆ ಕನಿಷ್ಠ ಮಜೂರಿ, ಜೀತ ಕಾರ್ಮಿಕರಿಗೆ ಪುನರ್ವಸತಿ, ಕೊಳಗೇರಿಗಳ ಅಭಿವೃದ್ಧಿ ಮುಂತಾದ ತೀವ್ರ ಕಾರ್ಯಕ್ರಮಗಳನ್ನು ೨೦-ಅಂಶಗಳ ಕಾರ್ಯಕ್ರಮದಲ್ಲಿ ಅಳವಡಿಸಲಾಯಿತು. ಇವಿಷ್ಟೇ ಅಲ್ಲದೆ, ಎಲ್ಲ ಗ್ರಾಮಗಳಿಗೂ ಕುಡಿಯುವ ನೀರನ್ನು ಒದಗಿಸುವುದು, ಗರಿಷ್ಠ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವುದು, ಸಾರ್ವತ್ರಿಕ ಮೂಲ ಶಿಕ್ಷಣವನ್ನು ಒದಗಿಸುವುದು ಮುಂತಾದ ಅಭಿವೃದ್ಧಿ ಪ್ರಯೋಜನೆಗಳನ್ನು ಹಮ್ಮಿಕೊಳ್ಳಲಾಯಿತು. ಸ್ವಾಯಿಚ್ಛಾ ಕುಟುಂಬ ಯೋಜನೆ ಕಾರ್ಯಕ್ರಮ, ಸಾರ್ವತ್ರಿಕ ಮೂಲ ಆರೋಗ್ಯ ಕಾರ್ಯಕ್ರಮ, ಗರ್ಭಿಣಿ ಸ್ತ್ರೀಯರಿಗೆ ಪೌಷ್ಟಿಕತೆಯನ್ನು ಒದಗಿಸುವುದು-ಇವೇ ಮೊದಲಾದ ಅಗತ್ಯ ಕಾರ್ಯಕ್ರಮಗಳು ರೂಪುಗೊಂಡವು.

ಕಳ್ಳಸಾಗಾಣಿಕೆದಾರರು, ಕಪ್ಪುದಾಸ್ತಾನುಗಾರರು, ತೆರಿಗೆ ತಪ್ಪಿಸುವವರು ಇವರ ಮೇಲೆ ತೀವ್ರವಾದ ಕ್ರಮ ಕೈಗೊಂಡು ಬಂಧಿಸಲಾಯಿತು. ಇವರ ಜೊತೆಯಲ್ಲೇ ರಾಜಕೀಯ ನಾಯಕರನ್ನೂ ಬಂಧಿಸಿದ್ದು ಭಾರತದ ರಾಜಕೀಯದ ಅಣಕು ಸಂಗತಿಯಾಗಿತ್ತು. ಅದೇನೇ ಇರಲಿ, ಹಲವಾರು ಉತ್ತಮ ಪರಿಣಾಮಗಳಾದವು. ಕಳ್ಳಸಾಗಾಣಿಕೆದಾರರು ಮತ್ತು ಗೂಂಡಾಗಳ ಬಂಧನದಿಂದ ಸಮಾಜವಿರೋಧಿ ಚಟುವಟಿಕೆಗಳು ಸ್ಥಗಿತಗೊಂಡವು. ಕಾರ್ಮಿಕ ಸಂಘಗಳು ಮತ್ತು ವಿದ್ಯಾರ್ಥಿ ಸಂಘಗಳು ಮುಂತಾದ ಸಂಘಟನೆಗಳನ್ನು ನಿಷೇಧಿಸಿದ್ದರಿಂದ ಉತ್ಪಾದನೆ ಹೆಚ್ಚಿತು; ಉದ್ಯೋಗಿಗಳು ಸಮಯಕ್ಕೆ ಸರಿಯಾಗಿ ಕಛೇರಿಗೆ ಹಾಜರಾದರು."[೬] ಕೆಲವು ಪ್ರಮುಖ ಕೈಗಾರಿಕೆಗಳ ಮೇಲ್ವಿಚಾರಣೆಗೆ ರಾಷ್ಟ್ರೀಯ ಸಮಿತಿಗಳನ್ನು ನೇಮಿಸಲಾಯಿತು. ಟ್ರೈನ್‌ಗಳ ಮತ್ತು ಸಾರಿಗೆ ಸಂಚಲನ ನಿಯಮಿತವಾಗಿ ನಡೆಯತೊಡಗಿತು. ಭೂರಹಿತರಿಗೆ ಭೂಮಿಯನ್ನು ಹಂಚಲಾಯಿತು. ಸಣ್ಣ ರೈತರ ಸಾಲಗಳನ್ನು ಮನ್ನಾ ಮಾಡಲಾಯಿತು. ಜೀವನದ ಅವಶ್ಯವಸ್ತುಗಳ ಬೆಲೆ ಕೆಳಗಿಳಿಯಿತು. ಈ ಕಾರ್ಯಕ್ರಮಗಳು ಆರಂಭದಲ್ಲಿ ಉತ್ತಮವಾಗಿ ಕಾರ್ಯ ನಿರ್ವಹಿಸಿದವು. ಅನಂತರದಲ್ಲಿ ಬೆಲೆಗಳೂ ಏರತೊಡಗಿದವು. ಈ ಯೋಜನೆಗಳು ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡವು. ಇಂದಿರಾಗಾಂಧಿಯವರ ಜನಪ್ರಿಯತೆ ಕುಸಿಯಿತು.

ಅನೇಕ ಮಹನೀಯರು ತುರ್ತುಪರಿಸ್ಥಿತಿಯನ್ನು ಸ್ವಾಗತಿಸಿದ್ದುಂಟು. ಅವರಲ್ಲಿ ಮೊದಲಿಗರು ವಿನೋಬಾ ಭಾವೆ ಅವರು. ಅವರು ಈ ಕಾಲವನ್ನು ಅನುಶಾಸನ ಪರ್ವವೆಂದು ವರ್ಣಿಸಿದರು. ಮದರ್ ತೆರೇಸ, ಪ್ರಖ್ಯಾತ ಉದ್ಯಮಿ ಜೆ.ಆರ್.ಡಿ ಟಾಟಾ, ಖ್ಯಾತ ಪತ್ರಕರ್ತ ಖುಷವಂತ್‌ಸಿಂಗ್ ಇವರು ತುರ್ತುಪರಿಸ್ಥಿತಿಯನ್ನು ಬೆಂಬಲಿಸಿದರು.

**ತುರ್ತುಪರಿಸ್ಥಿತಿಯ ಅಂತ್ಯ**

ಇಂದಿರಾ ಗಾಂಧಿಯವರು ತುರ್ತುಪರಿಸ್ಥಿತಿಯನ್ನು ಘೋಷಿಸಿದಾಗ, ಅದು ತಾತ್ಕಾಲಿಕ ಕ್ರಮವೆಂದು ಪ್ರಕಟಿಸಿದ್ದರು. ವ್ಯವಸ್ಥೆ ಜಾರಿಗೆ ಬಂದೊಡನೆಯೇ ತುರ್ತುಪರಿಸ್ಥಿತಿ ಕೊನೆಕೊಳ್ಳುವುದೆಂದು ತಿಳಿಸಿದ್ದರು. ಆದರೆ ತುರ್ತುಪರಿಸ್ಥಿತಿಯು ೧೯ ತಿಂಗಳುಗಳ ಕಾಲ ಮುಂದುವರಿಯಿತು. ಅವರು ತಾವು "ಲೋಕಸಭಾ ಚುನಾವಣೆಯಲ್ಲಿ ಗೆಲ್ಲುವ ವಿಶ್ವಾಸ ಮೂಡುತ್ತಿದ್ದಂತೆ, ಚುನಾವಣೆಯನ್ನು ಘೋಷಿಸಲು ಸಿದ್ಧರಾಗಿ ದಿಢೀರನೆ ೧೯೭೭ರ ಜನವರಿ ೨೩ರಂದು ಲೋಕಸಭೆಗೆ ಚುನಾವಣೆಯನ್ನು ಪ್ರಕಟಿಸಿದರು. ಎಲ್ಲ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿದರು. ತುರ್ತುಪರಿಸ್ಥಿತಿಯನ್ನು ಸಡಿಲಿಸಿದರು. ಪತ್ರಿಕಾ ನಿರ್ಬಂಧವನ್ನು ತೆಗೆದುಹಾಕಿದರು. ಸಾರ್ವತ್ರಿಕ ಸಭೆಗಳನ್ನು ನಡೆಯುವುದಕ್ಕೆ ಅವಕಾಶ ಕಲ್ಪಿಸಿದರು.

ಪ್ರಮುಖ ವಿರೋಧ ಪಕ್ಷಗಳು ಲೋಕನಾಯಕ ಜಯಪ್ರಕಾಶರ ನೇತೃತ್ವದಲ್ಲಿ ಒಂದಾಗಿ ಜನತಾಪಕ್ಷವನ್ನು ರಚಿಸಿಕೊಂಡವು. ಕಾಂಗ್ರೆಸ್‌ನಿಂದ ಸಿಡಿದು ಹೊರಬಂದ ಜಗಜೀವನ್‌ರಾಮ್, ಎಚ್.ಎನ್. ಬಹುಗುಣ, ಒರಿಸ್ಸಾದ ಮಾಜಿ ಮುಖ್ಯಮಂತ್ರಿ ನಂದಿನಿ ಸತ್ಪತಿ ಇವರೆಲ್ಲ ಸೇರಿ ಕಾಂಗ್ರೆಸ್ ಫಾರ್ ಡೆಮಾಕ್ರಸಿ ಎಂಬ ಪಕ್ಷವನ್ನು ಕಟ್ಟಿಕೊಂಡು ಜನತಾಪಕ್ಷದೊಂದಿಗೆ ಸಹಕರಿಸಿದರು. ೧೯೭೭ರ ಮಾರ್ಚ್ ತಿಂಗಳಲ್ಲಿ ಆರನೇ ಲೋಕಸಭೆಗೆ ಚುನಾವಣೆಗಳು ನಡೆದವು. ಕಾಂಗ್ರೆಸ್ ಹೀನಾಯವಾಗಿ ಸೋಲನ್ನು ಅನುಭವಿಸಿತು. ರಾಯಬರೇಲಿಯಿಂದ ಸ್ಪರ್ಧಿಸಿದ್ದ ಇಂದಿರಾಗಾಂಧಿ ಅವರು ಮತ್ತು ಅಮೇಥಿ ಕ್ಷೇತ್ರದಿಂದ ಸ್ಪರ್ಧಿಸಿದ್ದ ಸಂಜಯಗಾಂಧಿಯವರೇ ಪರಾಜಿತರಾಗಿದ್ದರು. ಉತ್ತರ ಭಾರತದ ಬಹುತೇಕ ರಾಜ್ಯಗಳು ಇಂದಿರಾಗಾಂಧಿಯರ ಕಾಂಗ್ರೆಸ್(ಆರ್) ಪಕ್ಷವನ್ನು ಸಾರಾಸಗಟಾಗಿ ತಿರಸ್ಕರಿಸಿದ್ದವು. ಆದರೆ ದಕ್ಷಿಣದ ರಾಜ್ಯಗಳು ಅವರಿಗೆ ನೆಲೆ ಕಾಣಿಸಿದವು.

ಸೋತ ಇಂದಿರಾಗಾಂಧಿಯವರು ಪ್ರಧಾನಮಂತ್ರಿಯವರ ಹುದ್ದೆಗೆ ೧೯೭೭ರ ಮಾರ್ಚ್ ೨೩ರಂದು ರಾಜೀನಾಮೆಯನ್ನು ನೀಡಿದರು. ಅಂದೇ ತುರ್ತುಪರಿಸ್ಥಿತಿ ಅಧಿಕೃತವಾಗಿ ಅಂತ್ಯ ವಾಯಿತು."[೭] ಮಾರ್ಚ್ ೨೪ರಂದು ಜನತಾಪಕ್ಷದ ನಾಯಕರಾದ ಮೊರಾರ್ಜಿ ದೇಸಾಯಿಯವರು ಪ್ರಧಾನಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ಮೊದಲಬಾರಿಗೆ ಕಾಂಗ್ರೆಸ್ಸೇತರ ಸರ್ಕಾರ ಅಧಿಕಾರಕ್ಕೆ ಬಂದಿತು. ಇಂದಿರಾಗಾಂಧಿಯವರು ತುರ್ತು ಪರಿಸ್ಥಿತಿಯನ್ನು ಕೊನೆಗೊಳಿಸಿ, ಚುನಾವಣೆಯನ್ನು ಘೋಷಿಸಲು ಕಾರಣವೇನು? ತದನಂತರದ ಚುನಾವಣೆಯಲ್ಲಿ ಅವರು ಹೀನಾಯವಾಗಿ ಸೋಲನ್ನು ಅನುಭವಿಸಲು ಕಾರಣವಾದ ಅಂಶಗಳು ಯಾವುವು? ಇವುಗಳನ್ನು ನಿರ್ಧರಿಸುವುದು ನಿಜಕ್ಕೂ ಕಷ್ಟಸಾಧ್ಯವಾದ ಸಂಗತಿ. ಗುಪ್ತಚಾರ ಇಲಾಖೆಗಳು ಮತ್ತು ಇಂದಿರಾಗಾಂಧಿ ಅವರ ಭಟ್ಟಂಗಿಗಳು ಅವರಿಗೆ ತಪ್ಪು ಮಾಹಿತಿಯನ್ನು ನೀಡಿದರು. ಅವರ ಆಡಳಿತ ಅತ್ಯುತ್ತಮವಾಗಿದೆಯೆಂದು, ಜನತೆ ಮೆಚ್ಚುತ್ತಾರೆಂದು ಅವರು ಇಂದಿರಾಗಾಂಧಿ ಅವರಿಗೆ ತಿಳಿಸಿದರು. ಇಂದಿರಾಗಾಂಧಿ ಅವರು ನಂಬಿದರು. "ಅಂದಿನ ಸೇನಾದಂಡನಾಯಕರಾದ ಫೀಲ್ಡ್ ಮಾರ್ಷಲ್ ಮಾಣಿಕ್‌ಷಾ ಅವರ ಬಗ್ಗೆ ಆತಂಕ-ಭಯಗಳಿದ್ದವು. ಇಂದಿರಾಗಾಂಧಿ ಅವರು ತಕ್ಷಣವೆ ಚುನಾವಣೆ ನಡೆಸದಿದ್ದರೆ, ಅವರನ್ನು ಪದಚ್ಯುತರನ್ನಾಗಿ ಮಾಡಲಾಗುವುದೆಂದು ಮಾಣಿಕ್‌ಷಾ ಹೆದರಿಸಿದರೆಂಬ ಸಂಗತಿ ಉನ್ನತ ವಲಯದಲ್ಲಿ ಹಬ್ಬಿತು. ಮುಂದೆ ಮಾಣಿಕ್‌ಷಾ ಅವರಿಗೆ ಅಂತಹ ಉದ್ದೇಶಗಳಿರಲಿಲ್ಲವೆಂದು ಅವರು, THE TIMES OF INDIAಗೆ ನೀಡಿದ ಸಂದರ್ಶನದಲ್ಲಿ ತಿಳಿಸಿದರು.

ತುರ್ತುಪರಿಸ್ಥಿತಿಯು ಸರ್ವಾಧಿಕಾರ ಮನೋಭಾವವನ್ನು ಬೆಳೆಸಿದ್ದನ್ನು, ಅದರಿಂದ ಜನರು ಬೇಸರಗೊಂಡಿದ್ದನ್ನು, ಅಗಾಧ ತೊಂದರೆಗೆ ಗುರಿಯಾದದ್ದನ್ನು ಇಂದಿರಾಗಾಂಧಿ ಅವರು ಅರಿಯಲು ಸಾಧ್ಯವಾಗಲಿಲ್ಲ. ೨೦–ಅಂಶಗಳ ಕಾರ್ಯಕ್ರಮ ತುರ್ತಾಗಿ ಜನರ ಮನಸ್ಸನ್ನು ಗೆಲ್ಲುವ ವ್ಯರ್ಥ ಕಸರತ್ತಾಗಿತ್ತು. ಇದರಿಂದ ಯಾವುದೇ ನಿರ್ದಿಷ್ಟ ಉದ್ದೇಶ ಅಥವಾ ಸಾಧನೆಯನ್ನು ಸಾಧಿಸಲು ಸಾಧ್ಯವಾಗಲಿಲ್ಲ. ತುರ್ತುಪರಿಸ್ಥಿತಿಯಲ್ಲಿ ಅಧಿಕಾರಿಗಳು ಮತ್ತು ಪೊಲೀಸರು ದುರ್ವರ್ತನೆಯಿಂದ ನಡೆದುಕೊಂಡರು. ಅವರ ದಬ್ಬಾಳಿಕೆ ಅಸಹನೀಯವಾಗಿತ್ತು. ಇದನ್ನು ಪತ್ರಿಕೆಗಳಾಗಲಿ, ಸ್ಥಳೀಯ ಶಾಸಕ ಅಥವಾ ಸಂಸತ್ ಸದಸ್ಯರಾಗಲಿ, ರಾಜಕೀಯ ನೇತಾರರಾಗಲಿ ತಡೆಯಲು ಸಾಧ್ಯವಾಗಲಿಲ್ಲ."[೮] ಉತ್ತರ ಭಾರತದಲ್ಲಿ ಅಧಿಕಾರಿಗಳು ಮತ್ತು ಪೊಲೀಸರ ಅಟಾಟೋಪ ಮಿತಿಮೀರಿತ್ತು. ಪತ್ರಿಕಾ ನಿರ್ಬಂಧದಿಂದ ಮಾಹಿತಿ ದೊರೆಯಲಿಲ್ಲ. ಇಂದಿರಾಗಾಂಧಿ ಅವರು ಸಾಮಾನ್ಯರ ಭಾವನೆಗಳಿಂದ ದೂರವಾದರು.

ತುರ್ತುಪರಿಸ್ಥಿತಿಯಲ್ಲಿ ಕಾಂಗ್ರೆಸ್ ಮತ್ತು ಇಂದಿರಾಗಾಂಧಿಯವರ ವರ್ಚಸ್ಸು ಕುಗ್ಗಲು ಕಾರಣವಾದವರು ಸಂಜಯಗಾಂಧಿ ಮತ್ತು ಅವರ ಮಿತ್ರರು. ಅವರ ಮೇರೆ ಮೀರಿದ ದಬ್ಬಾಳಿಕೆ ಸರ್ಕಾರದಲ್ಲಿದ್ದ ಜನರ ವಿಶ್ವಾಸವನ್ನು ನಾಶ ಮಾಡಿತು. ಪಕ್ಷ ಮತ್ತು ಸರ್ಕಾರದಲ್ಲಿ ಅವರು ಯಾವುದೇ ಸ್ಥಾನದಲ್ಲಿ ಇರಲಿಲ್ಲ. ಇಂದಿರಾಗಾಂಧಿಯವರು ಹೆಚ್ಚು ಹೆಚ್ಚಾಗಿ ಅವರ ಮಗನನ್ನು ಅವಲಂಬಿಸಿದರು. ಅಂತಿಮವಾಗಿ ಅವರು ತಮ್ಮ ಪತನವನ್ನು ತಾವೇ ಆಹ್ವಾನಿಸಿಕೊಂಡರು.

ಇಂದಿರಾಗಾಂಧಿಯವರು ರಾಜ್ಯಗಳಲ್ಲಿ ಕಾಂಗ್ರೇಸ್ಸೇತರ ಸರ್ಕಾರಗಳನ್ನು ಸಹಿಸುತ್ತಿರಲಿಲ್ಲ. "ಗುಜರಾತ್‌ನ ಜನತಾ ಸರ್ಕಾರ ತಮಿಳುನಾಡಿನ ಸರ್ಕಾರಗಳನ್ನು ಸಂವಿಧಾನೇತರ ಮಾರ್ಗಗಳಿಂದ ವಜಾ ಮಾಡಿದ್ದು ಜನರ ಆಕ್ರೋಶವನ್ನು ಹೆಚ್ಚಿಸಿತು. ತಮ್ಮ ಪಕ್ಷದ ದಕ್ಷ ಮುಖ್ಯಮಂತ್ರಿಗಳನ್ನೂ ಸಹ ಅವರು ಮೆಚ್ಚುತ್ತಿರಲಿಲ್ಲ. ಅವರನ್ನು ಅಧಿಕಾರದ ಗದ್ದುಗೆಯಿಂದ ಕೆಳಗಿಳಿಸುತ್ತಿದ್ದರು. ಮಾತು ಕೇಳುವ ದುರ್ಬಲ ಮುಖ್ಯಮಂತ್ರಿಗಳೇ ಅವರಿಗೆ ಬೇಕಿತ್ತು. ಇವೆಲ್ಲ ಅವರ ಬಗ್ಗೆ ಜನರಿಗಿದ್ದ ವಿಶ್ವಾಸಪರತೆಯನ್ನು ಕುಗ್ಗಿಸಿತು.

ಇಂದಿರಾಗಾಂಧಿಯವರ ಸರ್ಕಾರದ ಅವ್ಯವಹಾರ, ಭ್ರಷ್ಟಾಚಾರ, ಸ್ವಜನಪಕ್ಷಪಾತ ಮತ್ತು ಅವರ ಸರ್ವಾಧಿಕಾರ ವರ್ತನೆ ಇವುಗಳು ವ್ಯವಸ್ಥಿತವಾಗಿ ಬಯಲಿಗೆ ಬಂದಿದ್ದು ಎಕ ಚಳುವಳಿಯಿಂದ. ಜಯಪ್ರಕಾಶ ನಾರಾಯಣರ ನಿರ್ದೇಶನದಂತೆ ನಡೆದ ಚಳುವಳಿಯಲ್ಲಿ ವಿದ್ಯಾರ್ಥಿಗಳು, ನಗರ ಕಾರ್ಮಿಕರು, ಗ್ರಾಮೀಣ ರೈತರು, ಬುದ್ಧಿಜೀವಿಗಳು, ಪತ್ರಕರ್ತರು, ವಿರೋಧ ಪಕ್ಷಗಳು ಮತ್ತು ಅವುಗಳ ಧುರೀಣರು ಸಕ್ರಿಯವಾಗಿ ಭಾಗವಹಿಸಿದರು."[೯] ಇದರಿಂದ ಇಂದಿರಾಗಾಂಧಿ ಮತ್ತು ಅವರ ಪಕ್ಷ ಚುನಾವಣೆಯಲ್ಲಿ ಶೋಚನೀಯವಾಗಿ ಸೋಲನ್ನು ಅನುಭವಿಸಿತು.

ನಮ್ಮ ದೇಶದಲ್ಲಿ ೪೦ ವರ್ಷಗಳ ಹಿಂದೆ ೧೯೭೫ನೇ ಜೂನ್ ೨೫ರ ಮಧ್ಯರಾತ್ರಿಯಿಂದ ಜಾರಿಯಾಗಿ ೧೯೭೭ನೇ ಮಾರ್ಚ್ ೨೧ನೇ ಬೆಳಿಗ್ಗೆ ಮುಕ್ತಾಯಗೊಂಡ ಆಂತರಿಕ ತುರ್ತುಪರಿಸ್ಥಿತಿ ಅವಧಿಯಲ್ಲಿ ನಡೆದ ಹೋರಾಟ. ಈ ಹೋರಾಟದ ನೆನಪು ಆಗ ಬೀಸಿದ ಕಹಿ ಗಾಳಿಯಲ್ಲಿದೆ.

"ಸ್ವಾತಂತ್ರ್ಯ ಎಂದೂ ನಿರಾಳ; ಕರಾಳವಲ್ಲ. ಆದರೆ, ಈ ಅವಧಿಯಲ್ಲಿ ಬರೀ ಕರಾಳ. ಈ ಕರಾಳ ಕರಗಿಸಲು ಲಕ್ಷಾಂತರ ಯುವಕರು ಪಟ್ಟ ಬವಣೆ, ಶ್ರಮ, ಹಾನಿ, ನಷ್ಟಕ್ಕೆ ಕೊನೆಯೇ ಇಲ್ಲ. ಅದು ಅಮೂಲ್ಯ. ಇದಕ್ಕೆ ಬೆಲೆ ಕಟ್ಟಿ ಎಂದು ಯಾವ ಸಂತ್ರಸ್ತನು, ಸಂಕಟಕ್ಕೊಳಗಾದವನು, ಇನ್ನೂ ಯಾರು ಕೇಳಿಲ್ಲ. ಏಕೆಂದರೆ ಸ್ವಾತಂತ್ರ್ಯ ಎನ್ನುವುದು ನೀರು, ಗಾಳಿಯಂತೆ ಮುಖ್ಯವಾದುದಲ್ಲವೆ?

ಆಗ ಆಡಳಿತ ಪಕ್ಷವಾಗಿದ್ದ ಕಾಂಗ್ರೆಸ್‌ನಲ್ಲಿಯ 'ಹಳೇಹುಲಿ'ಗಳನ್ನು ಹೊರಗೆ ಹಾಕಿ, ಬ್ಯಾಂಕ್ ರಾಷ್ಟ್ರೀಕರಣ, ರಾಜಧನ ರದ್ದು ಮೊದಲಾದ ಉಗ್ರ ಮತ್ತು ದಿಟ್ಟ ಕ್ರಮಗಳಿಂದ ಇಂದಿರಾಗಾಂಧಿ ಪ್ರಧಾನಿಯಾಗಿ ಜನಪ್ರಿಯರಾದರು. ಗರೀಬಿ ಹಟಾವೋ ಘೋಷಣೆಗೆ ಮರುಳಾಗಿ ೧೯೭೧-೭೨ರ ಚುನಾವಣೆಗಳಲ್ಲಿ ಜನತೆ ಆಕೆಗೆ ಅಭೂತಪೂರ್ವ ಬೆಂಬಲ ಕೊಟ್ಟಿತು. ಚುನಾವಣೆಯ ನಂತರ ತಮ್ಮ ಸಮಸ್ಯೆಗಳನ್ನೆಲ್ಲ ಆಕೆ ಪರಿಹಾರ ಮಾಡಬಹುದೆಂದೂ ನಂಬಿತ್ತು. ೧೯೭೧ರ ಬಾಂಗ್ಲಾ ವಿಜಯ, ೧೯೭೨ರ ಚುನಾವಣೆಗಳಲ್ಲಿ ಪ್ರಚಂಡ ಗೆಲುವು, ಅಣುಸ್ಫೋಟ ಮೆರುಗು ಇವುಗಳಿಂದಾಗಿ ಜನತೆಯ ಬೆಂಬಲ ತನಗೇ ಗುತ್ತಿಗೆ ಎನ್ನುವ ಹಮ್ಮಿನಿಂದ ಇಂದಿರಾಗಾಂಧಿಯವರು ಸರ್ವಾಧಿಕಾರದ ಕಡೆಗೆ ನಡೆದರು. ತನ್ನ ಕೈಯಲ್ಲಿ ಹೆಚ್ಚು ಹೆಚ್ಚು ಅಧಿಕಾರ ಕೇಂದ್ರೀಕರಿಸಿಕೊಳ್ಳಲು ತೊಡಗಿದರು. ಇದರ ಮೊದಲ ಹೆಜ್ಜೆಯೇ ಕರಾಳತೆಯ ಕೊಕ್ಕೆಗಳ ಕೊಂಬೆಗಳು."[೧೦]

ಅವರು ಪಕ್ಷದಲ್ಲಿ, ಪ್ರದೇಶದಲ್ಲಿ, ಜಿಲ್ಲೆಗಳಲ್ಲಿ ಚುನಾವಣೆ ಸ್ಥಗಿತಗೊಳಿಸಿ ತನಗೆ ಬೇಕಾದವರನ್ನು ನೇಮಕ ಮಾಡುವ ಕ್ರಮವನ್ನು ಜಾರಿಗೊಳಿಸಿದರು. ಅದೇ ರೀತಿ ೧೯೭೨ರ ಚುನಾವಣೆಯ ನಂತರ ತಮ್ಮ ನಾಯಕರನ್ನು ಆರಿಸಿಕೊಳ್ಳುವ ಅವಕಾಶವನ್ನು ಆಯಾ ರಾಜ್ಯಗಳ ಶಾಸಕಾಂಗ ಪಕ್ಷಗಳಿಗೆ ಕೊಡದೇ ತಾವೇ ಮುಖ್ಯಮಂತ್ರಿಗಳ ನೇಮಕ ಮಾಡಿದರು. ಈ ರೀತಿಯಾಗಿ ಬಂಗಾಳಕ್ಕೆ ಸಿದ್ಧಾರ್ಥ ಶಂಕರ ರೇ, ಒಡಿಶಾಕ್ಕೆ ನಂದಿನಿ ಸತಪಥಿ, ಮಧ್ಯಪ್ರದೇಶಕ್ಕೆ ಪಿ.ಸಿ. ಸೇಠಿ, ಕರ್ನಾಟಕಕ್ಕೆ ದೇವರಾಜ ಅರಸು, ಗುಜರಾತಿಗೆ ಘನಶ್ಯಾಂ ಓಜಾ ಅವರು ಇಂದಿರಾಗಾಂಧಿಯವರಿಂದಲೇ ಮುಖ್ಯಮಂತ್ರಿಗಳಾಗಿ ನೇಮಕಗೊಂಡರು. ಹೀಗಾಗಿ ಕಾಂಗ್ರೆಸ್ ಪಕ್ಷದಲ್ಲಿನ ಪ್ರಜಾಪ್ರಭುತ್ವಕ್ಕೆ ಮಂಗಳ ಹಾಡಲಾಯಿತು.

ಕೇಂದ್ರ ಸಂಪುಟದಲ್ಲಿ ಸಂಬಂಧಪಟ್ಟ ಪ್ರಮುಖ ಅಧಿಕಾರಗಳನ್ನು ಇಂದಿರಾಗಾಂಧಿಯವರು ತಮ್ಮ ಕೈಗೆ ತೆಗೆದುಕೊಂಡರು. "ಗೃಹಖಾತೆಯಿಂದ ಗೂಢಚಾರ ವಿಭಾಗ, ಹಣಕಾಸು ಖಾತೆಯಿಂದ ಕಂದಾಯ ಗೂಢಚಾರ ವಿಭಾಗ, ಉದ್ಯೋಗ ಖಾತೆಯಿಂದ ವಾಣಿಜ್ಯ ಗೂಢಚಾರ, ರಕ್ಷಣಾ ಇಲಾಖೆಯಿಂದ ರಕ್ಷಣಾ ಗೂಢಚಾರ ವಿಭಾಗಗಳನ್ನು ತನ್ನ ಸೆರಗಿಗೆ ಕಟ್ಟಿಕೊಂಡರು. ಮಂತ್ರಿಮಂಡಳಕ್ಕಿಂತ ಪ್ರಧಾನಮಂತ್ರಿ ಕಾರ್ಯಾಲಯವೇ ಪ್ರಬಲವಾಯಿತು. ಜೊತೆಗೆ ಕೇಂದ್ರ ಕಾದಿಟ್ಟ ಪೊಲೀಸ್ ದಳ, ಗಡಿರಕ್ಷಣಾ ಪಡೆ, ಕೇಂದ್ರ ಉದ್ದಿಮೆಗಳ ರಕ್ಷಣಾ ಪಡೆ, ಗೃಹರಕ್ಷಕದಳ ಮೊದಲಾದ ಸಶಸ್ತ್ರ ಪಡೆಗಳನ್ನು ರಚಿಸಲಾಯಿತು, ವಿಸ್ತರಿಸಲಾಯಿತು. ಎಲ್ಲಾ ರಾಜ್ಯಗಳ ಪೊಲೀಸ್ ಪಡೆ ಒಟ್ಟು ೮೦ ಸಾವಿರ ಇದ್ದರೆ ಕೇಂದ್ರದ ಈ ಎಲ್ಲಾ ಪೊಲೀಸ್ ಸಂಖ್ಯೆ ೭ ಲಕ್ಷ ಇತ್ತು. ಇದು ನಿರಂಕುಶವಲ್ಲದೆ ಮತ್ತೇನು?"[೧೧]

ಸ್ವತಂತ್ರ, ನಿಷ್ಪಕ್ಷಪಾತ ನ್ಯಾಯಾಂಗವು ನಾಗರಿಕರ ಹಕ್ಕುಗಳ ರಕ್ಷಕ, ಪ್ರಜಾಪ್ರಭುತ್ವದ ಜೀವಾಳ. ಸಂಸದೀಯ ಪ್ರಜಾಪ್ರಭುತ್ವದಲ್ಲಿ ಮತ್ತು ಬಹು ಪಕ್ಷಗಳಿರುವ ರಾಜಕೀಯ ವ್ಯವಸ್ಥೆಯಲ್ಲಿ ನ್ಯಾಯಾಂಗ ಮತ್ತು ಸರ್ಕಾರದ ಸೇವಾ ವಿಭಾಗಗಳು ಸಂವಿಧಾನಕ್ಕೆ ನಿಷ್ಠವಾಗಿರಬೇಕೇ ಹೊರತು ಯಾವೊಂದು ರಾಜಕೀಯ ಪಕ್ಷದ ನೀತಿಗಳಿಗಲ್ಲ. ಆದರೆ ಇಂದಿರಾಗಾಂಧಿಯವರ ಅಡಿಯಾಳಾಗಿರುವಂತೆ ಈ ವ್ಯವಸ್ಥೆಗಳನ್ನು ನೋಡಿಕೊಂಡರು. ವಿರೋಧಪಕ್ಷ ಮತ್ತು ಪ್ರಚಾರ ಮಾಧ್ಯಮಗಳ ಸಲಹೆಗಳಿಗೆ, ಸಂಸತ್ ಸಮಿತಿಗಳಿಗೆ ಬೆಲೆಯನ್ನೇ ಕೊಡಲಿಲ್ಲ. ಜನಾಭಿಪ್ರಾಯದ ವಿವಿಧ ಮುಖಗಳನ್ನು ಮುಕ್ತವಾಗಿ ಪ್ರಕಟಿಸುವ ಸಾಧನವಾದ ಪತ್ರಿಕೆಗಳನ್ನು ಹತ್ತಿಕ್ಕಲು ಹೊರಟರು. ಮುದ್ರಣ ಕಾಗದ, ಜಾಹೀರಾತು ನಿಲ್ಲಿಸತೊಡಗಿದರು. ಆದರೆ, ಈ ಬೆದರಿಕೆಗಳಿಗೆ ಪತ್ರಿಕೆಗಳು ಬಗ್ಗಲಿಲ್ಲ, ಸರ್ಕಾರಕ್ಕೆ ಶರಣು ಎನ್ನಲಿಲ್ಲ.

"೧೯೭೪ನೇ ಏಪ್ರಿಲ್‌ನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಕಮಿಟಿ(ಎಐಸಿಸಿ) ಸಮ್ಮೇಳನದಲ್ಲಿ ರಾಜಕೀಯ ನಿರ್ಣಯ ಅಂಗೀಕರಿಸಿತು. ಈ ನಿರ್ಣಯವು ರಾಷ್ಟ್ರೀಯ ಸ್ವಯಂ ಸೇವಾ ಸಂಘ (ಆರ್‌ಎಸ್‌ಎಸ್), ಆನಂದ ಮಾರ್ಗ ಮತ್ತು ಇತರ ಫ್ಯಾಸಿಸ್ಟ್ ಸಂಸ್ಥೆಗಳ ಚಟುವಟಿಕೆಗಳನ್ನೂ ಖಂಡಿಸಿತು. ಈ ಸಂಸ್ಥೆಗಳು ವಿರೋಧ ಪಕ್ಷಗಳು ಕೈಜೋಡಿಸಿವೆ, ಜನತೆಯ ಸಂಕಷ್ಟಗಳ ಲಾಭ ಪಡೆದು ಹಿಂಸೆಯನ್ನು ಪ್ರಚೋದಿಸುತ್ತಿವೆ. ಯುವಕರನ್ನು ಅಡ್ಡದಾರಿಗೆ ಎಳೆಯುತ್ತಿವೆ. ಉತ್ಪಾದನೆ ಸ್ಥಗಿತಗೊಳಿಸುತ್ತಿವೆ, ಆರ್ಥಿಕ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುತ್ತಿವೆ ಎಂದಿತು ಕಾಂಗ್ರೆಸ್. ಫ್ಯಾಸಿಸ್ಟ್ ಮಾದರಿಯ ಸರ್ವಾಧಿಕಾರದತ್ತ ಇಂದಿರಾಗಾಂಧಿ ಹೊರಟ ಹಾದಿಯಲ್ಲಿ ಈ ನಿರ್ಣಯ ಇನ್ನೊಂದು ಮೈಲಿಗಲ್ಲಾಯಿತು."[೨]

೧೯೭೨-೭೩ರಲ್ಲಿ ಮಳೆ ಸರಿಯಾಗಿ ಬರಲಿಲ್ಲ. ಆಹಾರದ ಉತ್ಪಾದನೆ ಕುಸಿಯಿತು. ಜೀವನಾವಶ್ಯಕ ವಸ್ತುಗಳ ಅಭಾವ, ಬೆಲೆ ಏರಿಕೆಯಿಂದಾಗಿ ಜನಜೀವನ ಕಂಗಾಲಾಯಿತು. ಈ ವರ್ಷವೇ ಕರ್ನಾಟಕದ ಅರಸೀಕೆರೆಯಲ್ಲಿ ಅನ್ನ ಕೇಳಿದ ಜನಕ್ಕೆ ಗುಂಡು ಹೊಡೆದುದರಲ್ಲಿ ಒಬ್ಬನ ಪ್ರಾಣವೂ ಹೋಯಿತು. ಮುಂದೆ ಅಕ್ಟೋಬರ್‌ವರೆಗೆ ರಾಜ್ಯದಲ್ಲಿ ೮೪ ಕಡೆ ಆಹಾರದ ನಿಮಿತ್ತ ಗಲಭೆಗಳಾದವು. ೮ ಜನ ಗುಂಡಿಗೆ ಆಹುತಿಯಾದರು. ವಿರೋಧ ಪಕ್ಷಗಳು ದೇಶದಲ್ಲೂ, ರಾಜ್ಯದಲ್ಲೂ ಖಂಡಿಸಿದವು. ಸರ್ಕಾರ ಇದಕ್ಕೆಲ್ಲ ವಿರೋಧ ಪಕ್ಷಗಳೇ ಕಾರಣವೆಂದು ಬೊಟ್ಟು ಮಾಡಿ ತೋರಿಸಿತು.

"ಇಂತಹ ಸನ್ನಿವೇಶದಲ್ಲಿ ಲೋಕನಾಯಕ ಜಯಪ್ರಕಾಶ ನಾರಾಯಣರು ೧೯೭೪ನೇ ಏಪ್ರಿಲ್ ೧೪ರಂದು ಪ್ರಜಾಪ್ರಭುತ್ವಕ್ಕಾಗಿ ನಾಗರಿಕರ ವೇದಿಕೆಯನ್ನು ದೇಹಲಿಯಲ್ಲಿ ಸ್ಥಾಪಿಸಿದರು. ನಾಡಿನ ಗಣ್ಯರು, ವಿರೋಧ ಪಕ್ಷದವರನ್ನು ಒಗ್ಗೂಡಿಸಿ ಪ್ರಜಾಸತ್ತೆಯನ್ನು ರಕ್ಷಿಸುವುದು ಇದರ ಉದ್ದೇಶವೆಂದು ಸಾರಿದರು. ಇದಕ್ಕಾಗಿ ಜಯಪ್ರಕಾಶ್ ನಾರಾಯಣ-ಇಂದಿರಾಗಾಂಧಿಯವರ ಸಂಧಾನವಾಯಿತು. ಭ್ರಷ್ಟಾಚಾರ ಸಂಬಂಧ ಪುರಾವೆ ಕೊಡಿ ಎಂದು ಕೇಳಿಯೇ ಬಿಟ್ಟರು. ಜಯಪ್ರಕಾಶ್ ನಾರಾಯಣ ಹೇಳಿದರು, ನಿಮ್ಮ ಕೈಯಲ್ಲಿರುವ ಗೂಢಚಾರ ವಿಭಾಗವನ್ನೇ ಕೇಳಿ ಎಂದು ಅಂದರು. ಆಗ ಇಂದಿರಾಗಾಂಧಿಯವರು, ಜಯಪ್ರಕಾಶ್ ನಾರಾಯಣರ ವಿರುದ್ಧ

ಅಪಪ್ರಚಾರದ ದಾಳಿ ಆರಂಭಿಸಿದರು. ಎಲ್ಲೆಡೆ ನಿರಾಶಾಮಯ ವಾತಾವರಣ. ಆಗ ಕಿರಣ ಬೆಳಗಲು ಮುಂದಾಯಿತು ಗುಜರಾತಿನ ವಿದ್ಯಾರ್ಥಿ ಯುವಜನ. ೧೯೭೩ನೇ ಡಿಸೆಂಬರ್‌ನಲ್ಲಿ ಭ್ರಷ್ಟ ಸರ್ಕಾರದ ವಿರುದ್ಧ ಬಂಡಾಯವೆದ್ದರು. ಕಾಲೇಜುಗಳಿಂದ ಹೊರಬಿದ್ದರು. ಚಳವಳಿ ಆರಂಭಿಸಿದರು. ಮಣಭಾಯಿ ಪಟೇಲ್ ಸರ್ಕಾರ ರಾಜಿನಾಮೆ ಕೊಟ್ಟಿತು. ವಿಧಾನಸಭೆ ವಿಸರ್ಜನೆ, ರಾಷ್ಟ್ರಪತಿ ಆಳ್ವಿಕೆ ಜಾರಿಯಾಯಿತು."[೧೩]

ಬಿಹಾರದ ಪರಿಸ್ಥಿತಿಯು ಗುಜರಾತಿಗಿಂತ ಬಹಳ ಕೆಟ್ಟಿತ್ತು. ಬಡತನದ ತಾಂಡವ ಇಲ್ಲಿನ ಮಂತ್ರಿಗಳೇ ಭ್ರಷ್ಟಾಚಾರಿಗಳೆಂದು ಸ್ವತಃ ರಾಜ್ಯಪಾಲ ಭಂಡಾರೆ ಅವರೇ ಮುಂಬೈ, ನಾಗಪುರದಲ್ಲಿ ಬಹಿರಂಗವಾಗಿ ಸಾರಿದರು. ಇಂತಹವರಿಗೆ ಪ್ರಮಾಣವಚನ ಕೊಡುವುದಿಲ್ಲವೆಂದು ನಿರಾಕರಿಸಿದ್ದೂ ಉಂಟು. ಗುಜರಾತ್ ವಿದ್ಯಾರ್ಥಿಗಳ ಯಶಸ್ಸಿನಿಂದ ಬಿಹಾರಿನ ವಿದ್ಯಾರ್ಥಿಗಳೂ ಸ್ಫೂರ್ತಿ ಪಡೆದರು. ಚಳವಳಿ ಸಿಡಿಯಿತು. ಒಂದೇ ವಾರದಲ್ಲಿ ಯುವಕರು ಹೆಚ್ಚಿನ ಸಂಖ್ಯೆಯಲ್ಲಿ ಪೊಲೀಸ್ ಗೋಲಿಗೆ ಬಲಿಯಾದರು. ಈ ಬರ್ಬರತೆಯೇ ಜಯಪ್ರಕಾಶ್ ನಾರಾಯಣರಿಗೆ ತಂದಿತು ವ್ಯಥೆ. ಬಿಹಾರದ ವಿದ್ಯಾರ್ಥಿಗಳು ರಾಜಕೀಯವಿಲ್ಲದ, ನಿಷ್ಕಳಂಕ, ಸರ್ವೋದಯ ನೇತಾರ ಜಯಪ್ರಕಾಶ್ ನಾರಾಯಣ ಬಳಿ ಬಂದು ಮಾರ್ಗದರ್ಶನ ಮಾಡಿರೆಂದು ಪ್ರಾರ್ಥಿಸಿದರು. ಜಯಪ್ರಕಾಶ್ ನಾರಾಯಣರು ಚಳವಳಿ ಶಾಂತಿ ತಪ್ಪಿದ ದಿನ ಹಿಂದೆ ಸರಿಯುವುದಾಗಿ, ಕಠೋರವಾಗಿ ನುಡಿದು ಪ್ರಸನ್ನವದನರಾಗಿ ನೇತೃತ್ವ ವಹಿಸಿದರು.

ಜಯಪ್ರಕಾಶ್ ನಾರಾಯಣ ಅವರು ಸ್ಪಷ್ಟವಾಗಿ ಸಾರಿದ್ದು ಜೂನ್ ೨೫, ೧೯೭೪ನೇ ಇಸವಿ. "ಪಟ್ನಾ ಗಾಂಧಿ ಮೈದಾನದಲ್ಲಿ ಭಾಷಣ ಮಾಡಿ 'ಈ ಹೋರಾಟವು ಕೇವಲ ಸೀಮಿತ ಉದ್ದೇಶಗಳಿಗಾಗಿ ನಡೆಯುತ್ತಿಲ್ಲ. ಇದರ ಉದ್ದೇಶಗಳು ತುಂಬಾ ದೂರಗಾಮಿಯಾಗಿವೆ. ಭಾರತೀಯ ಪ್ರಜಾತಂತ್ರವು ವಾಸ್ತವಿಕವಾಗುವಂತೆ ಅದನ್ನು ಹೊಸದಾಗಿ ಸದೃಢಗೊಳಿಸುವುದು, ನಿಜವಾದ ಜನತಾರಾಜ್ಯವನ್ನು ನೆಲೆಗೊಳಿಸುವುದು, ಕೊನೆಯದಾಗಿ ನವಭಾರತ ನಿರ್ಮಾಣ ಸಾಧಿಸುವುದು ಇದು ಸಂಪೂರ್ಣ ಕ್ರಾಂತಿ' ಎಂದರು.

ಬಿಹಾರದಲ್ಲಿ ಚಳವಳಿ ಜಾಸ್ತಿಯಾಯಿತು. ದಿನವೂ ಪೊಲೀಸರ ಗೋಲಿಬಾರು, ಹಿಂಸಾತ್ಮಕ ಚಳವಳಿಗೆ ಜೆಪಿ ಪ್ರೋತ್ಸಾಹ ಕೊಡುತ್ತಿದ್ದಾರೆಂದು ದಿನದಿನವೂ ಇಂದಿರಾಗಾಂಧಿ ಅವರ ಕಹಳೆ. ೧೯೭೫ನೇ ಜನವರಿ ೩ರಂದು ರೈಲ್ವೆ ಮಂತ್ರಿ ಎಲ್.ಎನ್. ಮಿಶ್ರಾ ಅವರು ಸಮಷ್ಟಿಪುರದಲ್ಲಿ ನಡೆದ ಬಾಂಬ್ ಸ್ಫೋಟದಿಂದ ನಿಧನರಾದರು. ಈ ಹತ್ಯೆಯು ಹಿಂಸಾ ಚಳವಳಿಯ ಫಲ. ಇದಕ್ಕೆ ಆರ್‌ಎಸ್‌ಎಸ್, ಆನಂದಮಾರ್ಗ ಸಂಸ್ಥೆಗಳೇ ಹೊಣೆ ಎಂದರು ಇಂದಿರಾಗಾಂಧಿ. ಆದರೆ, ಈ ಬಗ್ಗೆ ನ್ಯಾಯಾಂಗ ತನಿಖೆ ಮಾಡಲೇ ಇಲ್ಲ. ಬಿಹಾರದ ಈ ಸಂಘರ್ಷಕ್ಕೆ ೯ ತಿಂಗಳಲ್ಲಿ ೪೦೦ ಜನ ಗಾಯ, ೧೦೦ ಜನ ಸಾವು, ೨೪ ಸಾವಿರ ಜನರು ಜೈಲು ಸೇರಿದರು. ಜನರು ಸರ್ಕಾರಗಳ ರಾಜೀನಾಮೆ ಕೇಳಬಾರದು. ಅದು ಸಂವಿಧಾನವಿರೋಧಿ ಎಂದೇ ಇಂದಿರಾಗಾಂಧಿ ಕೂಗಿದರು."[೧೪]

೧೯೭೫ನೇ ಮಾರ್ಚ್ ೬ರಂದು ದೆಹಲಿಯಲ್ಲಿ ಅಭೂತಪೂರ್ವ ಜನತಾ ದರ್ಶನ. ಜಯಪ್ರಕಾಶರೇ ಅದರ ನೇತಾರ. ಕೆಂಪು ಕೋಟೆಯಿಂದ ಸಂಸತ್ತಿನವರೆಗೆ ಜನತಾ ಪ್ರವಾಹ. ಜನತೆ ಬರುತ್ತದೆ, ಸಿಂಹಾಸನ ಖಾಲಿ ಮಾಡಿ ಎಂಬ ಘೋಷಣೆ ರಾಜಕೀಯ ಸಮರಕ್ಕೆ ಆಹ್ವಾನ ಕೊಟ್ಟಂತಿತ್ತು. ಅನಂತರ ೧೯೭೫, ಜುಲೈ ೧೨ ಭಾರತದ ಚರಿತ್ರೆಗೆ ನಿರ್ಣಾಯಕ ತಿರುವು ಕೊಟ್ಟ ದಿನ. ಒಂದು ಇಂದಿರಾಗಾಂಧಿ, ಲೋಕಸಭಾ ಸದಸ್ಯತ್ವ ರದ್ದು ಎಂದು ಅಲಹಾಬಾದ್ ಹೈಕೋರ್ಟ್ ತೀರ್ಪು, ಅವತ್ತೇ ಗುಜರಾತ್ ವಿಧಾನಸಭೆ ಚುನಾವಣೆ ಫಲಿತಾಂಶದಲ್ಲಿ ಇಂದಿರಾಗೆ ಭಾರಿ ಸೋಲು, ಜನತಾ ಮೋರ್ಚಾಗೆ ಗೆಲುವು. ಹೀಗೆ ಸೋಲಿನ ಮೇಲೆ ಸೋಲಾಯಿತು.

ಇಂದಿರಾಗಾಂಧಿ ಅವರಿಗೆ ನ್ಯಾಯಾಲಯದಲ್ಲಿ ಸೋಲು. ಚುನಾವಣೆಯಲ್ಲಿ ಸೋಲು. ಪಕ್ಷದಲ್ಲಿ ಸೋಲು ಎಲ್ಲವೂ ಸೋಲು. ಇವರ ಬತ್ತಳಿಕೆಯ ಅಸ್ತ್ರಗಳು ಖಾಲಿ. ಇದ್ದ 'ಬ್ರಹ್ಮಾಸ್ತ್ರ' ಪ್ರಯೋಗಕ್ಕೆ ಮಂತ್ರ ಹೇಳಿಕೊಟ್ಟವರೇ ಸಿದ್ಧಾರ್ಥ ಶಂಕರ ರೇ. ಅದೇ ಅಂತರಿಕ ತುರ್ತುಪರಿಸ್ಥಿತಿಯ ಘೋಷಣೆ. ಆ ದಿನವೇ ಜೂನ್ ೨೫, ೧೯೭೫. ಜಯಪ್ರಕಾಶ ನಾರಾಯಣ ಸಹಿತ ಎಲ್ಲ ವಿರೋಧ ಪಕ್ಷದ ಗಣ್ಯರ ಬಂಧನ, ಸಂವಿಧಾನ ತಿದ್ದುಪಡಿಗೆ ಅವಸರ ಎಲ್ಲವೂ ಅದವು.

೧೯೭೫, ಮೇ ೧೮ರಂದು ಜಯಪ್ರಕಾಶರು ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್ ಮೈದಾನದಲ್ಲಿ ಭಾರಿ ಬಹಿರಂಗ ಸಭೆ ಉದ್ದೇಶಿಸಿ ಮಾತನಾಡಿದರು. ನವನಿರ್ಮಾಣ ಮಾಡಲು ಯುವಜನರು ಲೋಕ ಸಂಘರ್ಷ ಸಮಿತಿಗೆ ಬಂದು ಸಂಪೂರ್ಣ ಕ್ರಾಂತಿಗೆ ದುಡಿಯಿರಿ ಎಂದರು. ಮೂರನೇ ದಿನ ಗಾಂಧಿಭವನದಲ್ಲಿ ಈ ವಿಚಾರದ ಆಸಕ್ತರ ಸಭೆಯನ್ನು ಜಯಪ್ರಕಾಶ್ ನಾರಾಯಣ ಕರೆದಿದ್ದರು. ಅಲ್ಲಿ ಸತ್ಯವ್ರತ, ಲಂಕೇಶ್, ಪಿ.ಜಿ.ಆರ್. ಸಿಂಧ್ಯ ಮತ್ತಿತರರು ಕೆಲವೇ ಮಂದಿ ಇದ್ದರು. ಈ ಬೃಹತ್ ಆಂದೋಲನದ ನಾಯಕನ ಮಾತನ್ನು ಕೇಳಿದುದು ಸಿಹಿ ನೆನಪು. ನಂತರ ಒಂದು ತಿಂಗಳಲ್ಲಿ ಬಂದೇ ಬಿಟ್ಟಿತು ತುರ್ತುಸ್ಥಿತಿ.

ಜಯಪ್ರಕಾಶ ನಾರಾಯಣರ ಬಂಧನ ವಾರ್ತೆಯನ್ನು ಆಕಾಶವಾಣಿಯಲ್ಲಿ ಕೇಳಿ ಐದು ಮಂದಿ ತಿಪಟೂರಿನ ಬೆಂಗಳೂರು-ಹೊನ್ನಾವರ ರಸ್ತೆಯಲ್ಲಿ ಪ್ರತಿಭಟನೆ. ಇಂದಿರಾಗಾಂಧಿಗೆ ಧಿಕ್ಕಾರ ಹೇಳಿದರು. ನಂತರದ ದಿನಗಳಲ್ಲಿ ಅಲ್ಲಿನ ಕಲ್ಪತರು ಕಾಲೇಜಿನ ವಿದ್ಯಾಥಿಗಳನ್ನು ಕೂಡಿ ಹಾಕಿ ತುರ್ತುಸ್ಥಿತಿ ವಿರೋಧಿಸಿ ಮೆರವಣಿಗೆ ಹೊರಡಿಸಲಾಯಿತು. ಪೊಲೀಸರು ಬಂದು ಬಂಧಿಸುವಾಗ ಇದ್ದ ವಿದ್ಯಾರ್ಥಿಗಳು ಐವರು. ಉಳಿದವರು ಮೆರವಣಿಗೆಯಲ್ಲಿ ಭಯದಿಂದ ಕರಗಿ ಹೋಗಿದ್ದರು.

ಆಗಿನ ಪತ್ರಿಕೆಗಳಲ್ಲಿ ಆದಷ್ಟು ಧೈರ್ಯವಾಗಿ ಪ್ರಕಟಿಸುತ್ತಿದ್ದ ಪತ್ರಿಕೆ 'ಲೋಕವಾಣಿ'ಗೆ 'ಸಂವಿಧಾನ ಬದಲಾವಣೆ ಅಗತ್ಯವೇ' ಸರಣಿ ಲೇಖನಗಳನ್ನು ತುರ್ತುಸ್ಥಿತಿ ಇದ್ದಷ್ಟೂ ಕಾಲ ಬರೆಯಲಾಯಿತು. ಈ ಪತ್ರಿಕೆ ಆಗ ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿದ್ದ ಅನೇಕ ನಾಯಕರ ಕೈಗೆ ಯಾರೋ ಜನತಂತ್ರ ಪ್ರೇಮಿಗಳು ತಲುಪಿಸುವುದಲ್ಲದೆ 'ಧರಣಿಮಂಡಲ ಮಧ್ಯದೊಳಗೆ' ಕೈಬರಹದ ಭೂಗತ ಪತ್ರಿಕೆಯನ್ನೂ ಮಾಡಿದ್ದಾಯಿತು. ಮಹಾಚುನಾವಣೆ

ಪ್ರಕಟವಾದಾಗ ಲಕ್ಷಾಂತರ ವಿದ್ಯಾರ್ಥಿಗಳ ಸಭೆ. ಆ ಸಭೆಯಲ್ಲಿ 'ಆ ಸ್ವತಂತ್ರ ಸ್ವರ್ಗಕ್ಕೆ ನಮ್ಮ ನಾಡು ಏಳಲೇಳಲೇಳಲಿ' ರವೀಂದ್ರರ ಹಾಡು-ಗಾಯನ. ತುರ್ತುಸ್ಥಿತಿಯ ಕಹಿ ಘಟನೆಯ ಬಿತ್ತರ.

ಜಯಪ್ರಕಾಶ ನಾರಾಯಣರು ಮೂತ್ರಪಿಂಡದ ವೈಫಲ್ಯದಿಂದಾಗಿ ಜಸ್‌ಲೋಕ್ ಆಸ್ಪತ್ರೆಗೆ ಸೇರಿದ್ದರು. ಅಲ್ಲಿಂದಲೇ 'ಜಯಗೀತೆ'ಯನ್ನು ತುರ್ತುಪರಿಸ್ಥಿತಿ ಹೋರಾಟಗಾರರಾದ ಲೋಕ ಸಂಘರ್ಷ ಸಮಿತಿಯವರಿಗೆ ಆ ವೀರ ಕವನವನ್ನು ತಲುಪಿಸಿದ್ದರು. ಜಯಪ್ರಕಾಶ್ ನಾರಾಯಣ ಅವರ ನಿಜವಾದ ಅನುಯಾಯಿ ತಿಪಟೂರು ತಾಲ್ಲೂಕಿನ ಸಾರ್ಥವಳ್ಳಿ ಸತ್ಯ ಅವರು. ಜಯಪ್ರಕಾಶ್ ನಾರಾಯಣ ಅವರಿಗೆ ೧೦೦ ಎಳನೀರು ತೆಗೆದುಕೊಂಡು ಜಸ್‌ಲೋಕ್ ಆಸ್ಪತ್ರೆಗೆ ಹೊರಟರು. ಈ ಕಾರ್ಯದಲ್ಲಿ ಸಿದ್ಧತೆ ನಡೆಸಿದುದು ಸಿಹಿಸಿಹಿ ನೆನಪು. ತಿಪಟೂರು ತಾಲ್ಲೂಕಿನ ಹೊನ್ನವಳ್ಳಿಯದ್ದು 'ಗಂಗಾಪಾಣಿ ಎಳನೀರು.' ದುರದೃಷ್ಟವೆಂದರೆ ಸತ್ಯರು ಜಯಪ್ರಕಾಶ್ ನಾರಾಯಣ ಹೋಗುವಷ್ಟರಲ್ಲಿ ತಪಾಸಣೆಯ ಹೆಸರಲ್ಲಿ ೨ ಎಳನೀರನ್ನು ಕೈಗೆ ಕೊಟ್ಟಿದ್ದರು. ಅದನ್ನೇ ಸೇವಿಸುವಂತೆ ಜಯಪ್ರಕಾಶ್ ನಾರಾಯಣ ಅವರಿಗೆ ವಿನಂತಿಸಿ ಯಶಸ್ವಿಯಾದರು.

ಆಂಧ್ರ ಮತ್ತು ಕರ್ನಾಟಕದಲ್ಲಿ ಜನತಾಪಕ್ಷ ಗೆಲ್ಲಲಿಲ್ಲ. ಬಂದದ್ದು ಜನತಾ ಸರ್ಕಾರ. ಆದರೆ ಚುನಾವಣೆಗೆ ಸೇರುತ್ತಿದ್ದ ಜನ, ಸಭೆಯ ಭಾಷಣ, ಪ್ರಚಾರ ಎಲ್ಲ ಮಜವಾಗಿತ್ತು. ಅದೊಂದು ಅಪೂರ್ವ ರಾಜಕೀಯ-ಶಿಕ್ಷಣ, ಪತ್ರಿಕಾ ಕಮ್ಮಟವೂ ಆಗಿತ್ತು. ತುಮಕೂರು ಜಿಲ್ಲೆಯ ಜನತಾಪಕ್ಷದ ಅಭ್ಯರ್ಥಿ ಪರವಾಗಿ ಜಿಲ್ಲಾ ಏಜೆಂಟ್ ಆಗಿ ಮತಪತ್ರಗಳಿದ್ದ ಕೇಂದ್ರಕ್ಕೆ ಹೊಸದೊಂದು ಬೀಗ ಹಾಕಿ ಇಡೀ ರಾತ್ರಿ ಕಾಯುವುದೂ ಆಗಿತ್ತು. ಆದರೇನು ಪ್ರಯೋಜನ? ಗೆದ್ದಿದ್ದು ಕಾಂಗ್ರೆಸ್ಸೇ.

ಎಲ್ಲ ಮುಗಿದ ಮೇಲೆ ತುರ್ತುಪರಿಸ್ಥಿತಿಯ ರಹಸ್ಯ, ಹೋರಾಟ, ಬಂಧನ, ಸಾವು-ನೋವು ಎಲ್ಲವನ್ನೂ ತಿಳಿಸುವ ಬೃಹತ್ ವಸ್ತುಪ್ರದರ್ಶನ, 'ಸಂಕೋಲೆ-ಸಂಗ್ರಾಮ-ಸ್ವಾತಂತ್ರ್ಯ' ಈ ಕಲ್ಪನೆಯಲ್ಲಿ. ಅದರ ಸಾಕಾರದಲ್ಲಿ ಸಂಪೂರ್ಣ ಭಾಗಿ ಆಗಬೇಕಾಯಿತು. ನಂತರ ಕಾಲಘಟ್ಟದಲ್ಲಿ ಸಂಪೂರ್ಣ ಕ್ರಾಂತಿಯೂ ಇಲ್ಲ.

**೬.೨. ಭಾರತದಲ್ಲಿ ತುರ್ತುಪರಿಸ್ಥಿತಿ**

ಚುನಾವಣಾ ಅಕ್ರಮದ ಕುರಿತ ಕೋರ್ಟ್ ತೀರ್ಪು ಇಂದಿರಾಗಾಂಧಿ ಅವರು ತುರ್ತು ಪರಿಸ್ಥಿತಿ ಹೇರಲು ಕಾರಣ ಎಂಬುದು ಸಾಮಾನ್ಯ ಗ್ರಹಿಕೆ. ಆದರೆ ಅದಕ್ಕೂ ಎರಡು ವರ್ಷ ಹಿಂದಿನಿಂದಲೇ ಇಂದಿರಾಗೆ ಕೇಡುಗಾಲ ಆರಂಭವಾಗಿತ್ತು. ಬ್ಯಾಂಕುಗಳ ರಾಷ್ಟ್ರೀಕರಣ ಮತ್ತಿತರ ಕ್ರಮಗಳ ಮೂಲಕ ದೇಶಾದ್ಯಂತ 'ಇಂದಿರಮ್ಮ' ಎನಿಸಿಕೊಂಡಿದ್ದ ಇಂದಿರಾ, ೧೯೭೧ರ ಸಾರ್ವತ್ರಿಕ ಚುನಾವಣೆಯಲ್ಲಿ 'ಗರೀಬಿ ಹಟಾವೋ' ಘೋಷವಾಕ್ಯದ ಮೂಲಕ ಜನಮನಗೆದ್ದು ಸ್ಪಷ್ಟ ಬಹುಮತ(೫೧೮ರಲ್ಲಿ ೩೫೨ ಸ್ಥಾನ) ದಿಂದ ಅಧಿಕಾರಕ್ಕೆ ಬಂದಿದ್ದರು. ಅದೇ ವರ್ಷ, ಬಾಂಗ್ಲಾ ವಿಮೋಚನಾ ಸಮರದಲ್ಲಿ ಪಾಕ್ ಸೇನೆಯನ್ನು ಬಗ್ಗುಬಡಿದು ಬಾಂಗ್ಲಾದೇಶ ಉದಯಕ್ಕೆ ಕಾರಣರಾಗಿದ್ದರು.

ರಾಯ್‌ಬರೇಲಿಯಿಂದ ಸಮಾಜವಾದಿ ಪಕ್ಷದ ಅಭ್ಯರ್ಥಿಯಾಗಿ ಇಂದಿರಾ ವಿರುದ್ಧ ಸ್ಪರ್ಧಿಸಿ ಸೋತಿದ್ದ ರಾಜ್ ನಾರಾಯಣ್, ಚುನಾವಣಾ ಅಕ್ರಮ ಸಂಬಂಧ ಅಲಹಾಬಾದ್ ಹೈಕೋರ್ಟ್‌ನಲ್ಲಿ ದಾವೆ ಹೂಡಿದರು. ಇಂದಿರಾ ಗಾಂಧಿಯನ್ನು ಕಟಕಟೆಗೆ ಕರೆಸಿ ವಿಚಾರಣೆ ಮಾಡಲಾಯಿತು. ಇದು ಪ್ರಧಾನಿಯೊಬ್ಬರು ಕಟಕಟೆಯಲ್ಲಿ ವಿಚಾರಣೆ ಎದುರಿಸಿದ ಪ್ರಥಮ ದೃಷ್ಟಾಂತವಾಗಿತ್ತು. ಮತದಾರರಿಗೆ ಹಣ ಹಂಚಿಕೆ ಸೇರಿ ೧೪ ಪ್ರಕರಣಗಳನ್ನು ಇಂದಿರಾ ಎದುರಿಸುತ್ತಿದ್ದರಾದರೂ ಸರ್ಕಾರಿ ಅಧಿಕಾರಿಗಳು, ಪೊಲೀಸರನ್ನು ಚುನಾವಣಾ ಪ್ರಚಾರ ಕಾರ್ಯದಲ್ಲಿ ಬಳಸಿಕೊಂಡ ಸಂಬಂಧ ೨ ಪ್ರಕರಣಗಳಲ್ಲಿ ಇಂದಿರಾ ದೋಷಿಯೆಂದು ೧೯೭೫ರ ಜೂ.೧೨ ರಂದು ನ್ಯಾಯಮೂರ್ತಿ ಜಗಮೋಹನ್‌ಲಾಲ್ ಸಿನ್ಹಾ ತೀರ್ಪು ನೀಡಿ, ಅವರ ಲೋಕಸಭಾ ಸದಸ್ಯತ್ವವನ್ನು ಅನರ್ಹಗೊಳಿಸಿದರು. ಸುಪ್ರೀಂ ಕೋರ್ಟ್‌ನಲ್ಲಿ ಮೇಲ್ಮನವಿ ಸಲ್ಲಿಸಲು ಅವರಿಗೆ ೨೦ ದಿನಗಳ ಕಾಲಾವಕಾಶ ನೀಡಲಾಯಿತು.

ಇನ್ನೊಂದೆಡೆ ಪುತ್ರ ಸಂಜಯ್‌ಗಾಂಧಿಯ ಹುಚ್ಚು ಸಾಹಸಗಳು ಇಂದಿರಾಗಾಂಧಿ ಅವರನ್ನು ಇನ್ನಿಲ್ಲದಂತೆ ಕಾಡಲಾರಂಭಿಸಿದ್ದವು. ಕಾರು ಉತ್ಪಾದನಾ ಯೋಜನೆಗೆ ಪ್ರಭಾವ ಬಳಸಿ ಬ್ಯಾಂಕ್‌ಗಳ ಸಾಲ ಹಾಗೂ ಹರಿಯಾಣದ ಫಲವತ್ತಾದ ಕೃಷಿ ಭೂಮಿಯನ್ನು ಸಂಜಯ್ ಪಡೆದುಕೊಂಡಿದ್ದು ಭಾರಿ ಟೀಕೆಗೆ ಒಳಗಾಯಿತು. ಅಲ್ಲದೆ, "೧೯೭೪ರಲ್ಲಿ ಗುಜರಾತ್ ಕಾಲೇಜೊಂದರಲ್ಲಿ ಮೆಸ್‌ಬಿಲ್ ಹೆಚ್ಚಳ ವಿರೋಧಿಸಿ ಪ್ರತಿಭಟನೆ ಆರಂಭಿಸಿದ ವಿದ್ಯಾರ್ಥಿಗಳು, ಬಳಿಕ ಅದನ್ನು 'ಭಾರತ ನವ ನಿರ್ಮಾಣ' ಹೋರಾಟವನ್ನಾಗಿ ಪರಿವರ್ತಿಸಿದರು. ಇದೇ ವೇಳೆ ಆಡಳಿತ ದುರುಪಯೋಗ ಹಾಗೂ ಭ್ರಷ್ಟಾಚಾರ ವಿರೋಧಿಸಿ ಗಾಂಧಿವಾದಿ ಜಯಪ್ರಕಾಶ ನಾರಾಯಣ ಬಿಹಾರದಲ್ಲಿ ವಿದ್ಯಾರ್ಥಿ ಸಂಘಟನೆಗಳ ಸಹಕಾರದೊಂದಿಗೆ ಹೋರಾಟ ಆರಂಭಿಸಿದರು. ೧೯೭೫ರ ಮೇನಲ್ಲಿ ವೇತನ ಹೆಚ್ಚಳಕ್ಕೆ ಒತ್ತಾಯಿಸಿ ಅಖಿಲ ಭಾರತ ರೈಲ್ವೆ ನೌಕರರ ಒಕ್ಕೂಟದ ಅಧ್ಯಕ್ಷ ಜಾರ್ಜ್ ಫರ್ನಾಂಡಿಸ್ ನೇತೃತ್ವದಲ್ಲಿ ೧೭ ಲಕ್ಷ ರೈಲ್ವೆ ನೌಕರರು ೨೦ ದಿನಗಳ ಕಾಲ ಹರತಾಳ ನಡೆಸಿದರು. ಹಲವರನ್ನು ಬಂಧಿಸಲಾಯಿತು.

ಚುನಾವಣಾ ಅಕ್ರಮ ಪ್ರಕರಣದಲ್ಲಿ ಅಲಹಾಬಾದ್ ಹೈಕೋರ್ಟ್ ತೀರ್ಪು ಪ್ರಶ್ನಿಸಿ ಇಂದಿರಾ ಸಲ್ಲಿಸಿದ ಮೇಲ್ಮನವಿ ವಿಚಾರಣೆ ನಡೆಸಿದ ಸುಪ್ರೀಂ ಕೋರ್ಟ್ ಜಡ್ಜ್ ವಿ.ಆರ್. ಕೃಷ್ಣ ಅಯ್ಯರ್, ಜೂ. ೨೪ರಂದು ಹೈಕೋರ್ಟ್ ತೀರ್ಪಿಗೆ ಷರತ್ತುಬದ್ಧ ತಡೆ ನೀಡಿದರು. ಪ್ರಧಾನಿಯಾಗಿ ಇಂದಿರಾಗಾಂಧಿ ಮುಂದುವರಿಯಬಹುದು ಆದರೆ, ಲೋಕಸಭೆಯಲ್ಲಿ ಮತ ಚಲಾಯಿಸುವ ಅಧಿಕಾರವಿರುವುದಿಲ್ಲ ಎಂಬ ಈ ತೀರ್ಪನ್ನೇ ಅಸ್ತ್ರವಾಗಿಸಿಕೊಂಡು ಇಂದಿರಾಗಾಂಧಿ ಪದತ್ಯಾಗಕ್ಕೆ ಒತ್ತಾಯಿಸಿ ದೇಶದಾದ್ಯಂತ ಹೋರಾಟ ತೀವ್ರಗೊಳಿಸಲು ಜಯಪ್ರಕಾಶ ನಾರಾಯಣ ಮತ್ತಿತರ ವಿರೋಧಿ ಮುಖಂಡರು ಕಾರ್ಯಪ್ರವೃತ್ತರಾದರು. ಇದರಿಂದ ತೀವ್ರ ಮುಜುಗರಕ್ಕೊಳಗಾದ ಇಂದಿರಾಗಾಂಧಿ, ಸಂಪುಟದ ಒಪ್ಪಿಗೆಯನ್ನೂ ಪಡೆಯದೆ ಜೂ. ೨೫ರ ರಾತ್ರಿ ೧೨ ಗಂಟೆಗೆ ಕೆಲವೇ ನಿಮಿಷಗಳಿರುವಾಗ ರಾಷ್ಟ್ರಪತಿಯ ಮೂಲಕ ತುರ್ತುಪರಿಸ್ಥಿತಿಯನ್ನು ಘೋಷಿಸಿಬಿಟ್ಟರು.

ತುರ್ತುಪರಿಸ್ಥಿತಿ ಘೋಷಣೆಯಾಗುತ್ತಿದ್ದಂತೆ ಅದರ ಬಿಸಿ ಮೊದಲಿಗೆ ತಟ್ಟಿದ್ದು ಮಾಧ್ಯಮಗಳಿಗೆ ಹಾಗೂ ಪ್ರತಿಪಕ್ಷಗಳ ಮುಖಂಡರಿಗೆ. ದೆಹಲಿಯ ಬಹಾದುರ್ ಷಾ ಜಾಫರ್ ಮಾರ್ಗದಲ್ಲಿ ಬಹುತೇಕ ರಾಷ್ಟ್ರೀಯ ದಿನಪತ್ರಿಕೆಗಳ ಮುಖ್ಯ ಕಚೇರಿಗಳು ಇದ್ದುದರಿಂದ ಈ ರಸ್ತೆಗೆ ವಿದ್ಯುತ್ ಸಂಪರ್ಕವನ್ನು ಕಡಿತಗೊಳಿಸಲಾಯಿತು. ಪ್ರತಿಪಕ್ಷ ನಾಯಕರಾದ ಜಯಪ್ರಕಾಶ ನಾರಾಯಣ, ಮೊರಾರ್ಜಿ ದೇಸಾಯಿ, ವಿಜಯರಾಜೆ ಸಿಂಧಿಯಾ, ಚರಣ್‌ಸಿಂಗ್, ರಾಜ್‌ನಾರಾಯಣ್, ವಾಜಪೇಯಿ, ಆಡ್ವಾಣಿ, ಪ್ರಖ್ಯಾತ ಪತ್ರಕರ್ತರಾದ ಎಂ.ಎಲ್.ಕಕ್, ಕುಲದೀಪ್‌ನಯ್ಯರ್ ಮತ್ತಿತ್ತರರನ್ನು ಮೊದಲ ಹಂತದಲ್ಲಿ ಬಂಧಿಸಲಾಯಿತು. ಹಲವು ಮುಖಂಡರು ಹಾಗೂ ಪತ್ರಕರ್ತರು ಭೂಗತ ರಾದರು. ಪತ್ರಿಕೆಗಳನ್ನು ಸರ್ಕಾರಿ ಸೆನ್ಸಾರ್‌ಷಿಪ್‌ಗೆ ಒಳಪಡಿಸಿ ಪ್ರತಿ ಸುದ್ದಿ ಹಾಗೂ ಸಂಪಾದಕೀಯ ಗಳ ಮೇಲೆ ನಿಗಾ ಇರಿಸಲಾಯಿತು. ರಾಷ್ಟ್ರೀಯ ಸ್ವಯಂಸೇವಕ ಸಂಘ, ಜಮಾತ್ ಎ ಇಸ್ಲಾಮಿ ಮತ್ತಿತರ ಸಂಘ ಸಂಸ್ಥೆಗಳನ್ನು ನಿಷೇಧಿಸಲಾಯಿತು. ಕಾಂಗ್ರೆಸ್ ಆಡಳಿತವಿದ್ದ ರಾಜ್ಯಗಳ ಮುಖ್ಯಮಂತ್ರಿಗಳು ಇಂದಿರಾ ಹಾಗೂ ಸಂಜಯ್‌ರನ್ನು ಮೆಚ್ಚಿಸಲು ತುರ್ತುಪರಿಸ್ಥಿತಿ ಹೇರಿಕೆಯಲ್ಲಿ ಪೈಪೋಟಿ ನಡೆಸಿದರು. ಬಂಧನ ಅಥವಾ ಹಕ್ಕುಗಳ ದಮನ ಪ್ರಶ್ನಿಸಿ ಸಲ್ಲಿಕೆಯಾಗುವ ಅರ್ಜಿಗಳನ್ನು ಪರಿಗಣಿಸದಂತೆ ಕೇಂದ್ರ ಸರ್ಕಾರದ ನಿರ್ದೇಶನವಿದ್ದರೂ ೯ ಹೈಕೋರ್ಟ್‌ಗಳು ಸರ್ಕಾರದ ವಿರುದ್ಧವೇ ತೀರ್ಪು ನೀಡಿದ್ದವು. ಆದರೆ, ಸುಪ್ರೀಂ ಕೋರ್ಟ್ ಮುಖ್ಯ ನ್ಯಾಯಮೂರ್ತಿ ಯಾಗಿದ್ದ ಎ.ಎನ್. ರೇ ಹೈಕೋರ್ಟ್‌ಗಳ ಆದೇಶವನ್ನು ರದ್ದುಪಡಿಸಿದರು.

ತುರ್ತುಪರಿಸ್ಥಿತಿಯನ್ನು ಅಂತ್ಯಗೊಳಿಸಿ ಮಾರ್ಚ್‌ನಲ್ಲಿ ಸಾರ್ವತ್ರಿಕ ಚುನಾವಣೆ ನಡೆಸುವುದಾಗಿ ಜ.೧೮, ೧೯೭೭ರಂದು ಘೋಷಿಸಿದ ಇಂದಿರಾ, ರಾಜಕೀಯ ಕೈದಿಗಳನ್ನು ಬಿಡುಗಡೆಗೊಳಿಸಿದರು. ೧೯೭೭ರ ಚುನಾವಣೆಯಲ್ಲಿ ಕಾಂಗ್ರೆಸ್ ೧೫೩ ಸೀಟುಗಳಿಗೆ ತೃಪ್ತಿಪಡಬೇಕಾಯಿತು. ಜನತಾಪಕ್ಷ ೨೯೮ ಸ್ಥಾನ ಗಳಿಸಿದರೆ ಅದರ ಮಿತ್ರಪಕ್ಷಗಳು ೪೭ ಕ್ಷೇತ್ರಗಳಲ್ಲಿ ಜಯ ಗಳಿಸಿದವು. ಮೊರಾರ್ಜಿ ದೇಸಾಯಿ, ಪ್ರಥಮ ಕಾಂಗ್ರೆಸ್ಸೇತರ ಪ್ರಧಾನಿ ಎಂಬ ಹೆಗ್ಗಳಿಕೆಗೆ ಪಾತ್ರರಾದರು. 'ಸಮ್ಮಿಶ್ರ ಸರ್ಕಾರ' ಪರಿಕಲ್ಪನೆಯೂ ಜನ್ಮ ತಾಳಿತು. ತುರ್ತುಪರಿಸ್ಥಿತಿ ಅಪರಾಧಗಳ ಕುರಿತು ತನಿಖೆಗೆ ನೂತನ ಸರ್ಕಾರ ಷಾ ಆಯೋಗವನ್ನು ರಚಿಸಿತು. ಇಂದಿರಾ, ಸಂಜಯ್ ಸೇರಿ ಕಾಂಗ್ರೆಸ್‌ನ ನೂರಾರು ಮುಖಂಡರು ಹಾಗೂ ಇಂದಿರಾ ಪರ ಅಧಿಕಾರಿಗಳನ್ನು ಬಂಧಿಸಿ ದೋಷಾರೋಪ ಹೊರಿಸ ಲಾಯಿತು. ಆದರೆ, ಅಗತ್ಯ ಸಾಕ್ಷ್ಯಗಳನ್ನು ಒದಗಿಸುವಲ್ಲಿ ಪೊಲೀಸರು ವಿಫಲರಾಗುವುದರೊಂದಿಗೆ ಬಹುತೇಕರು ಶಿಕ್ಷೆಯಿಂದ ಪಾರಾದರು. ಆಂತರಿಕ ಭಿನ್ನಾಭಿಪ್ರಾಯ, ಮುಖಂಡರ ನಡುವೆ ಜಗಳ, ಪರಿಣಾಮಕಾರಿ ಆಡಳಿತ ನೀಡಲು ವಿಫಲವಾಗಿದ್ದು ಸೇರಿ ಹಲವು ಕಾರಣಗಳಿಂದಾಗಿ, ಮೂರು ವರ್ಷಕ್ಕೂ ಮೊದಲೇ ಪ್ರಥಮ ಸಮ್ಮಿಶ್ರ ಸರ್ಕಾರ ಅಧಿಕಾರ ಕಳೆದುಕೊಂಡಿತು. ಬಳಿಕ ನಡೆದ ಚುನಾವಣೆಯಲ್ಲಿ ಪ್ರಚಂಡ ಬಹುಮತದೊಂದಿಗೆ ಇಂದಿರಾ ಮತ್ತೆ ಅಧಿಕಾರಕ್ಕೆ ಬಂದು, ಷಾ ಆಯೋಗದ ವರದಿಯನ್ನು ಮೂಲೆಗೆಸೆದರು."[೫]

"ಸಮಾಜ ಸುಧಾರಕ ವಿನೋಬಾ ಭಾವೆ, ಉದ್ಯಮಿ ಜೆ.ಆರ್.ಡಿ ಟಾಟಾ, ಬರಹಗಾರ ಖುಷ್ವಂತ್ ಸಿಂಗ್, ಒಡಿಶಾ ಮುಖ್ಯಮಂತ್ರಿಯಾಗಿದ್ದ ನಂದಿನಿ ಸತ್ಪತಿ ಮೊದಲಾದವರು

ತುರ್ತುಪರಿಸ್ಥಿತಿಯನ್ನು ಬೆಂಬಲಿಸಿದರು. ಆದರೆ, ಟಾಟಾ ಹಾಗೂ ನಂದಿನಿ ತುರ್ತುಪರಿಸ್ಥಿತಿ ಬೆಂಬಲಿಸಿದ್ದಕ್ಕಾಗಿ ಕೆಲ ವರ್ಷಗಳ ಬಳಿಕ ವಿಷಾದ ವ್ಯಕ್ತಪಡಿಸಿದ್ದರು. ಈ ಅವಧಿಯಲ್ಲಿ ಇಂದಿರಾ ಘೋಷಿಸಿದ್ದ ೨೦ ಅಂಶಗಳ ಯೋಜನೆಯಿಂದ ಕೃಷಿ, ಕೈಗಾರಿಕೆ ಉತ್ಪಾದನೆ ಪ್ರಮಾಣ ಹೆಚ್ಚಳ ಹಾಗೂ ರಫ್ತು ಪ್ರಮಾಣ ಹೆಚ್ಚಳವಾಗಿದ್ದು ದೇಶದ ಅಭಿವೃದ್ಧಿಗೆ ಕಾರಣವಾಯಿತು ಎಂಬುದು ತುರ್ತುಪರಿಸ್ಥಿತಿ ಬೆಂಬಲಿಗರ ವಾದ."[೧೬]

**೬.೩. ಕರ್ನಾಟಕದಲ್ಲಿ ತುರ್ತುಪರಿಸ್ಥಿತಿ**

ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಕರ್ನಾಟಕದಲ್ಲಿಯೂ ಉಗ್ರ ಹೋರಾಟ ನಡೆಯಿತು. ರಾಜಕೀಯ ಮುಖಂಡರು ಮಾತ್ರವಲ್ಲದೆ ಜನಸಾಮಾನ್ಯರೂ ಈ ಹೋರಾಟದಲ್ಲಿ ಪಾಲ್ಗೊಂಡು ಜೈಲುವಾಸ ಅನುಭವಿಸಿದರು. ಮಾಧ್ಯಮಗಳೂ ಭೂಗತವಾಗಿ ಕಾರ್ಯ ನಿರ್ವಹಿಸಿ ತುರ್ತುಪರಿಸ್ಥಿತಿ ವಿರೋಧಿ ಸಾಹಿತ್ಯವನ್ನು ಹಂಚಿದವು. ಆಗಿನ ಆತಂಕ, ನೋವಿನ ಕ್ಷಣಗಳಿಗೆ ಸಾಕ್ಷಿಯಾದ ಹಲವು ನಾಯಕರು, ಪ್ರಮುಖರು ತಮ್ಮ ಅನುಭವಗಳನ್ನು ಕಟ್ಟಿಕೊಟ್ಟಿದ್ದಾರೆ.

ಸಾಹಿತ್ಯವಲಯದಲ್ಲಿ ಎಮರ್ಜೆನ್ಸಿ ವಿರುದ್ಧ ದನಿಯೆತ್ತಿದವರು ಕೆಲವೇ ಜನರಾದರೂ, ಅದು ತೀಕ್ಷ್ಣವಾಗಿತ್ತು. ಶಿವರಾಮ ಕಾರಂತರು ನೇರವಾಗಿ ಹೋರಾಟಕ್ಕೆ ಇಳಿಯದಿದ್ದರೂ ಹೋರಾಟದಲ್ಲಿ ತೊಡಗಿದವರಿಗೆ ಪ್ರಬಲ ನೈತಿಕ ಬೆಂಬಲ ನೀಡಿದ್ದರು. ೧೯೭೫ರ ಜುಲೈ ತಿಂಗಳಲ್ಲಿ ನಡೆದ ಸಾಂಕೇತಿಕ ಸತ್ಯಾಗ್ರಹಕ್ಕೆ ಘೋಷಣೆಗಳ ಸರಮಾಲೆಗಳನ್ನೇ ಬರೆದುಕೊಟ್ಟಿದ್ದರು. ಅವುಗಳ ಸ್ಯಾಂಪಲ್ ಹೀಗಿವೆ–'ಆ ಗಾಂಧಿ ರಾಮರಾಜ್ಯ ತರಲು ಬಯಸಿದರು–ಈ ಗಾಂಧಿ ಹರಾಮರಾಜ್ಯ ತಂದಳು,' 'ಸುಗ್ರೀವಾಜ್ಞೆಯಿಂದ ಆಳಲು ಇದೇನು ಕಪಿಗಳ ರಾಜ್ಯವಲ್ಲ,' ತುರ್ತು ಪರಿಸ್ಥಿತಿಯನ್ನು ವಿನೋಬಾ ಭಾವೆ ಮೆಚ್ಚಿಕೊಂಡಿದ್ದಾರೆ ಎಂಬ ಸಂಗತಿ ತಿಳಿದು, 'ಇವನೊಬ್ಬ ನಕಲಿ ಸನ್ಯಾಸಿ' ಎಂದು ಕೋಪದಿಂದ ಕಿಡಿಯಾಗಿದ್ದರು ಕಾರಂತರು.

ಯು.ಆರ್.ಅನಂತಮೂರ್ತಿ ಅವರು ಭಾಷಣಗಳು ಮತ್ತು ಭೂಗತ ಪತ್ರಿಕೆಗಳ ಮೂಲಕ ತುರ್ತುಪರಿಸ್ಥಿತಿ ವಿರುದ್ಧ ಧ್ವನಿ ಎತ್ತಿದ್ದರು; ಜೈಲಿಗೆ ಹೋಗಲು ಸಿದ್ಧವೆಂದೂ ಹೇಳಿದ್ದರು. ೧೯೭೬ರ ಡಿಸೆಂಬರ್ ೧೧ರಿಂದ ಮೂರು ದಿನಗಳ ಕಾಲ ಶಿವಮೊಗ್ಗದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನ ಐತಿಹಾಸಿಕವಾದುದು. ತುರ್ತುಪರಿಸ್ಥಿತಿ ವಿರುದ್ಧ ಭೂಗತ ಚಟುವಟಿಕೆ ನಡೆಸುತ್ತಿದ್ದವರು 'ಹೃದಯ–ಮಿದುಳು' ಎನ್ನುವ ೪೦ ಪುಟಗಳ ಕಿರುಹೊತ್ತಿಗೆಯನ್ನು ಪ್ರಕಟಿಸಿ ಸಮ್ಮೇಳನಕ್ಕೆ ಬಂದಿದ್ದ ಸಾಹಿತಿಗಳ ಕೊಠಡಿಗಳಿಗೆ ರಾತ್ರೋರಾತ್ರಿ ಹಂಚಿದರು. ಎಸ್.ಎಲ್. ಭೈರಪ್ಪ ಅವರು ಈ ಸಮ್ಮೇಳನದ ಗೋಷ್ಠಿಯೊಂದರಲ್ಲಿ 'ಸದ್ಯದಲ್ಲೆ ನಮ್ಮ ಸ್ಥಿತಿ ಕಿಟಕಿ–ಬಾಗಿಲುಗಳನ್ನೆಲ್ಲ ಮುಚ್ಚಿದ ತಾರಸಿ ಕೋಣೆಯಲ್ಲಿ ಕೂಡಿದಂತಾಗಲಿದೆ. ಇದೇ ಸ್ಥಿತಿ ಮುಂದುವರಿದರೆ ನಾವೆಲ್ಲ ಬೌದ್ಧಿಕವಾಗಿ ಸಾಯುತ್ತೇವೆ.... ಕೊನೆಯ ಪಕ್ಷ ಯಾರೂ ಸರ್ಕಾರವನ್ನು ಸಮರ್ಥನೆ ಮಾಡುವ ಆಸ್ಥಾನ ಸಾಹಿತಿಗಳಾಗಬಾರದು' ಎಂದಿದ್ದರು.

ಜಿ.ಎಸ್.ಉಬರಡ್ಕ ಅವರು ಸುಬ್ರಾಯ ಚೊಕ್ಕಾಡಿ ಮತ್ತು ಇತರ ಗೆಳೆಯರ ಜೊತೆ ಸೇರಿ 'ಅಜ್ಞಾತಪರ್ವ' ಎಂಬ ಕೈಬರಹದ ಪತ್ರಿಕೆಯನ್ನು ರಾತ್ರೋರಾತ್ರಿ ಬರೆದು ಹೋರಾಟಗಾರರಿಗೆ

ತಲುಪಿಸುತ್ತಿದ್ದರು. ಇದೇ ವೇಳೆ 'ಕಹಳೆ' ಭೂಗತ ಪತ್ರಿಕೆಯನ್ನು ದು.ಗು. ಲಕ್ಷ್ಮಣ ಹಾಗೂ 'ರಣದುಂದುಭಿ'ಯನ್ನು ಕೆ.ವಿ.ಸುಬ್ಬಣ್ಣ ಪ್ರಕಟಿಸುತ್ತಿದ್ದರು. ಸುಬ್ಬಣ್ಣ ಅವರು ಕಲ್ಲಚ್ಚಿನಲ್ಲಿ ಸಾವಿರ ಪ್ರತಿ ಮುದ್ರಿಸಿ ರಹಸ್ಯವಾಗಿ ಹಂಚಿಸುತ್ತಿದ್ದರು. ರಶ್ಮಿ, ಜ್ಯೋತಿ ಎಂಬ ಭೂಗತ ಪತ್ರಿಕೆಗಳೂ ಜೈಲಿನಲ್ಲಿದ್ದ ರಾಜಕೀಯ ಹೋರಾಟಗಾರರನ್ನು ತಲುಪುತ್ತಿದ್ದವು. ಚಂದ್ರಶೇಖರ ಪಾಟೀಲರು ಮಾತ್ರ ಬಂಧನಕ್ಕೊಳಗಾದ ಸಾಹಿತಿ. ೧೫ ದಿನಗಳ ಸೆರೆವಾಸ ಅನುಭವಿಸಿ ಬಿಡುಗಡೆಗೊಂಡರು. ಸಾಕಷ್ಟು ಲೇಖಕರು ಪರೋಕ್ಷವಾಗಿ ಕಾರ್ಯ ನಿರ್ವಹಿಸಿದ್ದರು. ಆ ಪೈಕಿ ಪ್ರಮುಖರಾದ ಕೆಲವರು ಎಂ.ಎನ್ ವ್ಯಾಸರಾವ್, ಗುರುಮೂರ್ತಿ ಪೆಂಡಕೂರು, ಬಿ.ವಿ. ವೈಕುಂಠರಾಜು, ಚದುರಂಗ, ಟಿ.ಪಟ್ಟಾಭಿರಾಮ ರೆಡ್ಡಿ ಮುಂತಾದವರು.

**ಡಿ.ಎಚ್. ಶಂಕರಮೂರ್ತಿ**

"ಕೇವಲ ೪೦ ವರ್ಷಗಳ ಹಿಂದೆ ಜರುಗಿದ ದೇಶದ ಇತಿಹಾಸದ ಕರಾಳ ಅಧ್ಯಾಯವೊಂದು ಜನಮಾನಸದಿಂದ ಮಾಸಿಹೋಗುತ್ತಿದೆ. ಅದಕ್ಕೆ ಅವಕಾಶ ಕೊಡಬಾರದು. ತಮ್ಮ ಅಧಿಕಾರಕ್ಕೆ ಸಂಚಕಾರ ಬರುತ್ತದೆ ಎಂಬ ಒಂದೇ ಕಾರಣಕ್ಕೆ ದೇಶದ ಜನತೆಯ ಮೂಲಭೂತ ಹಕ್ಕುಗಳನ್ನೇ ಕಿತ್ತುಕೊಳ್ಳುವಂಥ ಘೋರ ಅಪರಾಧವನ್ನು ಇಂದಿರಾ ಗಾಂಧಿ ಎಸಗಿದರು. ಆದರೆ ತುರ್ತುಪರಿಸ್ಥಿತಿ ಹೇರಿದ್ದಕ್ಕಾಗಿ ಇಂದಿರಾ ಎಂದೂ ಪಶ್ಚಾತ್ತಾಪ ಪಡಲಿಲ್ಲ. ಕೊನೆ ಪಕ್ಷ ಕ್ಷಮೆಯನ್ನೂ ಕೇಳಲಿಲ್ಲ.

ಬೆಂಗಳೂರು ಸೇರಿದಂತೆ ದೇಶದ ವಿವಿಧ ಜೈಲುಗಲ್ಲಿ ಕಾಂಗ್ರೆಸ್ಸೇತರ ನಾಯಕರನ್ನು ಕೂಡಿಹಾಕಲಾಗಿತ್ತು. ಜನಸಂಘದ ವಾಜಪೇಯಿ, ಆಡ್ವಾಣಿ, ಮುಖಂಡರಾದ ಮುರಾರ್ಜಿ ದೇಸಾಯಿ, ರಾಮಕೃಷ್ಣ ಹೆಗಡೆ, ದೇವೇಗೌಡ, ಜೆ.ಎಚ್.ಪಟೇಲ್, ಮೈಕೆಲ್ ಫರ್ನಾಂಡಿಸ್ ಮುಂತಾದ ನಾಯಕರು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದರು. ನಾನು ಅಲ್ಲೆ ಬಂಧಿತನಾಗಿದ್ದೆ. ತುರ್ತುಪರಿಸ್ಥಿತಿ ಕಾಂಗ್ರೆಸ್ ವಿರುದ್ಧ ಎಲ್ಲಾ ಪಕ್ಷಗಳು ಒಂದಾಗಲು ಕಾರಣವಾಯಿತು. ಜನಸಂಘ ಸೇರಿದಂತೆ ಬಹುತೇಕ ಎಲ್ಲಾ ರಾಜಕೀಯ ಪಕ್ಷಗಳು ಜನತಾ ಪಕ್ಷದಲ್ಲಿ ವಿಲೀನವಾದವು. ಜೈಲಿನಲ್ಲಿ ವ್ಯಾಯಾಮ, ಓದು, ಆಟ, ಚರ್ಚೆ ಮೂಲಕ ಸಮಯ ಕಳೆಯುತ್ತಿದ್ದೆವು. ಆ ಅವಧಿಯಲ್ಲಿ ನಾನು ಜೈಲಿನಲ್ಲಿ ಭಗವದ್ಗೀತೆ, ಬೈಬಲ್‌ಗಳನ್ನು ಪೂರ್ಣವಾಗಿ ಓದಿದೆ.

**ಅಡಗೂರು ಎಚ್. ವಿಶ್ವನಾಥ**

ತುರ್ತುಪರಿಸ್ಥಿತಿ ಕರ್ನಾಟಕದ ಪಾಲಿಗೆ ಒಂದು ರೀತಿಯಲ್ಲಿ ಅನುಕೂಲವೇ ಆಯಿತು. ಆಗ ಅವರು ತುರ್ತುಪರಿಸ್ಥಿತಿಯ 'ಕರಿಛಾಯೆ' ರಾಜ್ಯದ ಮೇಲೆ ಬೀಳದಂತೆ ನೋಡಿಕೊಂಡರು. ಇಂದಿರಾಗಾಂಧಿಯವರು ಜಾರಿಗೆ ತಂದ ೨೦ ಅಂಶಗಳ ಕಾರ್ಯಕ್ರಮ ಹಾಗೂ ಸಂಜಯ್ ಗಾಂಧಿಯವರ ೫ ಅಂಶಗಳ ಕಾರ್ಯಕ್ರಮಗಳು ರಾಜ್ಯದಲ್ಲಿ ಉಳಿದೆಡೆಗಿಂತ ಉತ್ತಮವಾಗಿ ಅನುಷ್ಠಾನವಾಗುವುದಕ್ಕೆ ಅರಸು ವೇದಿಕೆ ನಿರ್ಮಿಸಿದರು. ಭೂಸುಧಾರಣಾ ಕಾಯ್ದೆ, ಜೀತ ವಿಮುಕ್ತಿ, ಮನೆಗಳ ನಿರ್ಮಾಣಕ್ಕೆ ಭೂಮಿ ಪಡೆಯುವುದು ಸೇರಿದಂತೆ ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ತುರ್ತುಪರಿಸ್ಥಿತಿ ಜಾರಿಯಲ್ಲಿದ್ದುದರಿಂದ ಸರ್ಕಾರದ ನಿರ್ಧಾರಗಳನ್ನು ಯಾರೂ ಪ್ರಶ್ನಿಸುತ್ತಿರಲಿಲ್ಲ. ವಕೀಲರು ಪ್ರತಿಭಟನೆಯಲ್ಲಿ ನಿರತರಾಗಿದ್ದರಿಂದ ಯಾರೂ ನ್ಯಾಯಾಲಯದಲ್ಲೂ

ಪ್ರಶ್ನಿಸಲಿಲ್ಲ. ತುರ್ತುಪರಿಸ್ಥಿತಿಯನ್ನು ಯಾರೂ ಸ್ವಾಗತಿಸಲಿಲ್ಲ ನಿಜ, ಆದರೆ ಆ ಸಂದರ್ಭವನ್ನು ಹೇಗೆ ಬಳಸಿಕೊಳ್ಳುತ್ತಾರೆಂಬುದು ನಾಯಕತ್ವದ ಜಾಣ್ಮೆಯನ್ನು ಅವಲಂಬಿಸಿರುತ್ತದೆ. ಅರಸು ಅಂತಹ ನಾಯಕತ್ವ ಗುಣವನ್ನು ಪ್ರದರ್ಶಿಸಿದರು.

**ಎಸ್. ಸುರೇಶ್‌ಕುಮಾರ**

ಅದು ೧೯೭೫ರ ನವೆಂಬರ್ ೭. ಆಗ ನನಗೆ ೧೯ ವರ್ಷ ಎಂದು ಎಸ್.ಸುರೇಶ್‌ಕುಮಾರ್ ಅವರು ಹೇಳಿರುವಂತೆ, ಬೆಂಗಳೂರಿನ ಅಶೋಕ ಹೋಟೆಲ್‌ಗೆ ಕಾಮನ್‌ವೆಲ್ತ್ ದೇಶಗಳ ಪ್ರತಿನಿಧಿಗಳು ಬಂದಿದ್ದರು. ಅವರಿಗೆ ದೇಶದಲ್ಲಿ ತುರ್ತುಪರಿಸ್ಥಿತಿ ಹೇರಿದ್ದು ಸರಿಯಾದ ಕ್ರಮ ಎಂದು ನವದೆಹಲಿಯಲ್ಲಿ ಬಿಂಬಿಸಿ ಕಳುಹಿಸಲಾಗಿತ್ತು. ಆದರೆ ಅದು ಸುಳ್ಳು ಎಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕಿತ್ತು. ಅದಕ್ಕಾಗಿ ಪೊಲೀಸರಿಂದ ಮೊದಲ ಬಾರಿಗೆ ಹೊಡೆತ ತಿಂದೆ ಎಂದು ಹೇಳಿದರು.

ಕಾಮನ್‌ವೆಲ್ತ್ ಪ್ರತಿನಿಧಿಗಳು ಅಶೋಕ ಹೋಟೆಲ್‌ನಿಂದ ಬಸ್‌ನಲ್ಲಿ ಎಲ್ಲಿಗೋ ಹೊರಟಿದ್ದರು. ಆ ಸಂದರ್ಭದಲ್ಲಿ ಕೆಲವು ವಿದ್ಯಾರ್ಥಿಗಳು ಸೇರಿ ಪೊಲೀಸ್ ಭದ್ರತೆಯನ್ನು ಭೇದಿಸಿ ಅವರಿದ್ದ ಬಸ್‌ನೊಳಗೆ ನುಗ್ಗಿದೆವು. ತುರ್ತುಪರಿಸ್ಥಿತಿಯ ಕರಾಳ ಮುಖವನ್ನು ವಿವರಿಸುವ ಕರಪತ್ರ, ಸಾಹಿತ್ಯವನ್ನು ಅವರಿಗೆ ನೀಡಿದೆವು. ಕೂಡಲೇ ಪೊಲೀಸರು ನಮ್ಮನ್ನು ವಶಕ್ಕೆ ಪಡೆದರು. ಸೆಲ್‌ನಲ್ಲಿ ನಾಲ್ಕು ದಿನ ಕಳೆದೆವು, ಎಂದು ಸುರೇಶ್ ಕುಮಾರ್ ಹೇಳಿದರು.

ಜಾರ್ಜ್ ಫರ್ನಾಂಡಿಸ್ ಅವರ ಸಹೋದರ ಲಾರೆನ್ಸ್ ಫರ್ನಾಂಡಿಸ್ ನಮ್ಮ ಜತೆ ಇದ್ದ. ಆತನಿಗೆ ಪೊಲೀಸರು ಕರುಣೆ ಇಲ್ಲದಂತೆ ಹೊಡೆದರು. ಆತ ಸತ್ತೇ ಹೋದ ಅಂದು ಕೊಂಡೆವು. ಹೊಡೆತ ತಿಂದ ಲಾರೆನ್ಸ್ ಮಿಸುಕಾಡದೇ ಇದ್ದುದನ್ನು ಕಂಡ ಪೊಲೀಸರು ಆತನನ್ನು ರೈಲ್ವೆ ಟ್ರ್ಯಾಕ್ ಬಳಿ ಹಾಕಲು ಕೊಂಡೊಯ್ದರು. ಆತ ಇನ್ನೂ ಜೀವಂತವಾಗಿದ್ದಾನೆಂಬುದು ಖಾತ್ರಿಯಾದ ನಂತರ ಮತ್ತೆ ಜೈಲಿನಲ್ಲಿ ಕೂಡಿ ಹಾಕಿದರು. ಎಲ್ಲ ಜೈಲುಗಳಲ್ಲಿ ನಾಯಕರು ತುಂಬಿ ತುಳುಕುತ್ತಿದ್ದರು. ಆ ಜೈಲುಗಳೇ ನಮ್ಮಂಥವರ ಪಾಲಿಗೆ ವಿಶ್ವವಿದ್ಯಾಲಯಗಳಾಗಿ ಮಾರ್ಪಟ್ಟವು. ಓದಲಿಕ್ಕೆ ಕಾಲಾವಕಾಶ ಸಿಗುತ್ತಿತ್ತು. ಚರ್ಚೆಗೆ ಹಿರಿಯ ನಾಯಕರು ಸಿಗುತ್ತಿದ್ದರು. ಜೈಲಿನಲ್ಲಿಯೇ ಯೋಗ ಕಲಿತೆ. ರಾಜಕೀಯ ಪುಸ್ತಕಗಳ ಅಧ್ಯಯನ ಮಾಡಿದೆ. ಜೀವನದಲ್ಲಿ ಶಿಸ್ತನ್ನು ರೂಢಿಸಿಕೊಂಡೆ ಎಂದು ತಮ್ಮ ಅನುಭವವನ್ನು ಹಂಚಿಕೊಂಡರು.

**ಶ್ರೀ ಗಣೇಶ್, ಸಾಮಾಜಿಕ ಕಾರ್ಯಕರ್ತ**

ಹರೆಯದ ವಯಸ್ಸು, ತಪ್ಪು ಕಂಡ ತಕ್ಷಣ ಸಿಡಿದೇಳುವ ಮನಃಸ್ಥಿತಿ. ಜಯಪ್ರಕಾಶ ನಾರಾಯಣ ಚಳವಳಿ ಆರಂಭವಾದಾಗ, ಕಡಿದಾಳ್ ಮಂಜಪ್ಪ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಿಕೊಂಡು ಆಂದೋಲನ ಆರಂಭಿಸಿದಾಗ ವಿದ್ಯಾರ್ಥಿ ಮುಖಂಡರು ಅದರಲ್ಲಿ ಸೇರಿದೆವು. ಬೆಂಗಳೂರಿನ ನ್ಯಾಷನಲ್ ಕಾಲೇಜು ಮೈದಾನದಲ್ಲಿ ಬೃಹತ್ ಸಭೆ ಆಯೋಜಿಸಿದಾಗ ಜಯಪ್ರಕಾಶ ನಾರಾಯಣ ಅವರೂ ಬಂದರು. ಆ ಹೊತ್ತಿನಲ್ಲೇ ತುರ್ತುಪರಿಸ್ಥಿತಿ ಜಾರಿಯಾಯಿತು. ಬೆಂಗಳೂರಿನಲ್ಲಿ ಸಂಸದೀಯ ಉಪಸಮಿತಿ ಸಭೆಯಲ್ಲಿ ಭಾಗವಹಿಸಲು ಆಗಮಿಸಿದ್ದ ಮಧು ದಂಡವತೆ,

ವಾಜಪೇಯಿ, ಆಡ್ವಾಣಿ ಅವರನ್ನು ಬಂಧಿಸಲಾಯಿತು. ಎಬಿವಿಪಿ ರಾಜ್ಯ ಕಾರ್ಯದರ್ಶಿಯಾಗಿದ್ದ ದತ್ತಾತ್ರೇಯ ಹೊಸಬಾಳೆ ನೇತೃತ್ವದಲ್ಲಿ ತುರ್ತುಪರಿಸ್ಥಿತಿ ವಿರುದ್ಧ ಅಭಿಪ್ರಾಯ ಮೂಡಿಸುವ 'ಕಹಳೆ' ಪ್ರಕಟಣೆ ಹೊರಬಂದಿತು. ಈ ಪ್ರಕಟಣೆಗಳನ್ನು ಕಾಲೇಜು ವಿದ್ಯಾರ್ಥಿಗಳಿಗೆ ತಲುಪಿಸಲು ನೆಟ್‌ವರ್ಕ್ ಮಾಡಿಕೊಂಡು ಕಾರ್ಯಪ್ರವೃತ್ತರಾಗಿದ್ದಾಗ ನಾನೂ ಪೊಲೀಸರಿಗೆ ಸಿಕ್ಕಿಬಿದ್ದೆ. ಅದರ ಬೆನ್ನಲ್ಲೇ ನ್ಯಾಷನಲ್ ಕಾಲೇಜು ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಗಾಂಧಿ ಬಜಾರ್‌ನಲ್ಲಿ ಪ್ರತಿಭಟನೆಗೆ ಮುಂದಾದಾಗ ಪೊಲೀಸರು ಬಂಧಿಸಿದರು. ಆಗ ಒಂದೂವರೆ ತಿಂಗಳು ಜೈಲಿನಲ್ಲಿ ಹಿರಿಯ ನಾಯಕರು ಯುವಕರಾದ ನಮಗೆ ಪ್ರೇರಣೆ ನೀಡುವ ಮಾತುಗಳನ್ನಾಡುತ್ತಿದ್ದರು. ಅದು ನಮ್ಮ ಮೇಲೆ ಪ್ರಭಾವ ಬೀರಿತು.

**ಅನಂತ ಕುಮಾರ್**

ತುರ್ತುಪರಿಸ್ಥಿತಿಯ ವಿರುದ್ಧ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳಿ ಎಂದು ಲೋಕ ಸಂಘರ್ಷ ಸಮಿತಿಯಿಂದ  ಕರೆ ಬಂದಿತ್ತು. ಪಿಯುಸಿ ಓದುತ್ತಿದ್ದ ನಮ್ಮ ವಿದ್ಯಾರ್ಥಿಗಳ ತಂಡ ೧೯೭೫ರ ಡಿ. ೮ರಂದು ಪ್ರತಿಭಟನೆ ನಡೆಸುತ್ತಿದ್ದಾಗ ಪೊಲೀಸರು ಬಂಧಿಸಿದರು. ಎಲ್ಲರನ್ನೂ ಹುಬ್ಬಳ್ಳಿ ಉಪಕಾರಾಗೃಹದಲ್ಲಿ ಬಂಧಿಸಿಟ್ಟರು.  ಭಾರತ್ ಮಾತಾ ಕಿ ಜೈ, ಇಂದಿರಾ ಗಾಧಿಗೆ ಧಿಕ್ಕಾರ ಘೋಷಣೆ ಕೂಗಿ ಸಾರ್ವಜನಿಕರಿಗೆ ತೊಂದರೆ ಉಂಟುಮಾಡಿದ್ದರಿಂದ ಬಂಧಿಸಲಾಗಿದೆ ಎಂದು ಪೊಲೀಸರು ತಿಳಿಸಿದ್ದರು. ನ್ಯಾಯಾಧೀಶರು, ಭಾರತ್ ಮಾತಾ ಕಿ ಜೈ ಘೋಷಣೆ ಹೇಗೆ ಸಾರ್ವಜನಿಕರಿಗೆ ತೊಂದರೆಯಾಗುತ್ತದೆ ಎಂದು ಪ್ರಶ್ನಿಸಿ, ೪೮ ದಿನಗಳ ನಮ್ಮ ಜೈಲುವಾಸಕ್ಕೆ ೧೯೭೬ರ ಜ.೧೪ರ ಸಂಕ್ರಾಂತಿ ದಿನ ಮುಕ್ತಿ ದೊರಕಿಸಿಕೊಟ್ಟರು.

ಜೈಲಿನಲ್ಲಿದ್ದ ಬಹಳಷ್ಟು ಜನರು ಆರೆಸ್ಸೆಸ್, ಎಬಿವಿಪಿ ಹಿನ್ನೆಲೆಯವರಾದ್ದರಿಂದ ಅಲ್ಲಿಯೇ ೧೦೦ ಜನರ ಆರೆಸ್ಸೆಸ್ ಶಾಖೆ ೪೮ ದಿನಗಳ ಕಾಲ ನಡೆಯುವಂತಾಯಿತು. ಸಂಜೆಯ ವೇಳೆಯಲ್ಲಿ ಪ್ರತಿ ದಿನವೂ ಅಲ್ಲೊಂದು ಗೋಡೆಯ ಮೇಲೆ ಭಾರತದ ಭೂಪಟ ಹಾಗೂ ಭಗವಾಧ್ವಜದ ಚಿತ್ರವನ್ನು ಇಟ್ಟಿಗೆಯಿಂದ ಬರೆದು ಶಾಖೆ ಮಾಡುತ್ತಿದ್ದೆವು. ಭೂಗತ ಕರಪತ್ರವನ್ನು ಸಿನಿಮಾ ಹಾಲ್‌ಗಳಲ್ಲಿ ಹಂಚಿ, ಎರಚಿ ಬರುತ್ತಿದ್ದೆವು. ಮಂಗೇಶ್ ಭೇಂಡೆಯವರ ನೇತೃತ್ವದಲ್ಲಿ ಈ ಕಾರ್ಯಗಳು ನಡೆಯುತ್ತಿದ್ದವು. ಇಂದಿನ ಈ ಅನಂತಕುಮಾರ್ ರೂಪುಗೊಳ್ಳಲು ತುರ್ತುಪರಿಸ್ಥಿತಿಯ ಆ ೩ ವರ್ಷಗಳೇ ಕಾರಣ.

**ಶ್ರೀಕಾಂತ ದೇಸಾಯಿ, ಹುಬ್ಬಳ್ಳಿ**

ಅಂದು ೧೯೭೫ರ ಜೂನ್ ೨೬. ಹುಬ್ಬಳ್ಳಿಯ ವಿದ್ಯಾನಗರದ ಜೆ.ಜಿ. ಕಾಮರ್ಸ್ ಕಾಲೇಜಿನ ಆವರಣದಲ್ಲಿ ಲೋಕ ಸಂಘರ್ಷ ಸಮಿತಿಯ ಆಶ್ರಯದಲ್ಲಿ ಮೂರನೇ ತಂಡದ ಸತ್ಯಾಗ್ರಹ ನಿಶ್ಚಯವಾಗಿತ್ತು. ನಾನು ಮತ್ತು ವಾದೀಂದ್ರ ಆಚಾರ್ ಈ ತಂಡದಲ್ಲಿದ್ದೆವು. ಮಧ್ಯಾಹ್ನ ೧೨ ಗಂಟೆ ಆಗುತ್ತಿದ್ದಂತೆ, 'ಇಂದಿರಾಗಾಂಧಿ ಸರ್ವಾಧಿಕಾರಕ್ಕೆ ಧಿಕ್ಕಾರ'. 'ತುರ್ತುಪರಿಸ್ಥಿತಿ ರದ್ದಾಗಲೇಬೇಕು.' ಘೋಷಣೆಗಳನ್ನು ಕೂಗುತ್ತ ನಾವಿಬ್ಬರೂ ಹೊರಟೆವು. ಎರಡು ಸಾವಿರ ವಿದ್ಯಾರ್ಥಿಗಳು, ಸಾರ್ವಜನಿಕರು ಸತ್ಯಾಗ್ರಹ ಸ್ಥಳದೆದುರು ಜಮಾಯಿಸಿದ್ದರು. ಸತ್ಯಾಗ್ರಹ

ನಡೆಸುತ್ತಿದ್ದವರು ನಾವಿಬ್ಬರು ಎಂದು ಸ್ಪಷ್ಟಪಡಿಸಿದ್ದರಿಂದ, ಪೊಲೀಸರು ನಮ್ಮಿಬ್ಬರನ್ನು ಬಂಧಿಸಿ ಠಾಣೆಗೊಯ್ದರು. ಹುಬ್ಬಳ್ಳಿಯಲ್ಲಿ ಅದೇ ವರ್ಷ ನಡೆದಿದ್ದ ಎಬಿವಿಪಿ ರಾಜ್ಯ ಸಮ್ಮೇಳನ, ಜಯಪ್ರಕಾಶ ನಾರಾಯಣರ ಕಾರ್ಯಕ್ರಮದ ಸಮಿತಿಗಳಲ್ಲಿ ಜವಾಬ್ದಾರಿ ಹೊತ್ತಿದ್ದೆ. ಇದರ ಅರಿವಿದ್ದ ಪೊಲೀಸರು ನಾನಾ ರೀತಿಯ 'ಟ್ರೀಟ್‌ಮೆಂಟ್' ಮೂಲಕ ಬಾಯಿಬಿಡಿಸಲು ಪ್ರಯತ್ನಿಸಿದರು. ನಮ್ಮನ್ನು ಬಿಡುಗಡೆ ಮಾಡಿದರು(ವಾದೀಂದ್ರ ಕಳೆದ ಫೆಬ್ರವರಿ ೧೯ರಂದು ನಮ್ಮನ್ನಗಲಿದ). ಪೊಲೀಸರು ಮತ್ತೆ ನನ್ನನ್ನು ಬಂಧಿಸಿ ಬಳ್ಳಾರಿಗೆ ಕೊಂಡೊಯ್ದರು. ಯಾವುದಕ್ಕೂ ಬಾಯಿಬಿಡದ ನನ್ನನ್ನು ಪೊಲೀಸರು ಬೆಂಗಳೂರು ಕೊನೆಗೆ ಬೆಳಗಾವಿಗೆ ಸ್ಥಳಾಂತರಿಸಿ ಅಲ್ಲಿ ೧೯೭೭ರ ಜನವರಿ ೨೬ರಂದು ಬಿಡುಗಡೆ ಮಾಡಿದರು."[೧೭]

**೭.೪. ಯಾದಗಿರಿ ಜಿಲ್ಲೆಯಲ್ಲಿ ತುರ್ತುಪರಿಸ್ಥಿತಿ**

ಅದು ೧೯೭೫ರ ಜೂನ್ ೨೫ರ ಮಧ್ಯರಾತ್ರಿ ಜಾರಿಗೆ ಬಂದ ತುರ್ತುಪರಿಸ್ಥಿತಿ ವಿರುದ್ಧ ಇಡೀ ಕನಾಟಕದಲ್ಲಿ ಸತ್ಯಾಗ್ರಹ ನಡೆದಿದ್ದರೆ, ಗುಲ್ಬರ್ಗದ ಹಯಮನಾಬಾದ್ ಅಗಸಿಯಿಂದ ಚೌಕ್‌ವರೆಗೆ ಬಾವುಟ ಹಿಡಿದು ತುರ್ತುಪರಿಸ್ಥಿತಿ ವಿಧಿಸಿದ್ದರ ವಿರುದ್ಧ ಘೋಷಣೆ ಕೂಗುತ್ತ ಚಳವಳಿ ಆರಂಭಿಸಿದ ಮೊದಲ ವ್ಯಕ್ತಿಯೆಂದರೆ ಕುಸುಮಾಕರ ದೇಸಾಯಿ.

ಅಧಿಕಾರದ ವ್ಯಾಮೋಹ, ಸ್ವಾರ್ಥ ರಾಜಕಾರಣ, ಆಡಳಿತದ ಪರಾಕಾಷ್ಠೆ, ತನ್ನದೇ ನಡೆಯಬೇಕೆನ್ನುವ ಮನೋಭಾವದ ಪ್ರಭು, ಪ್ರಜಾತಂತ್ರ ವ್ಯವಸ್ಥೆಗೆ ಎಷ್ಟು ಮಾರಕವಾಗಬಲ್ಲ ಎಂಬುದಕ್ಕೆ ಇಂದಿರಾಗಾಂಧಿ ಒಂದು ನಿದರ್ಶನ ಹಾಗೂ ಅವರೇ ಹೇರಿದ ತುರ್ತುಪರಿಸ್ಥಿತಿ ಸಂದರ್ಭದ ಕರಾಳ ದಿನಗಳು ಕೂಡ. ಅದುವರೆಗೆ ಸಾಕಷ್ಟು ಒಳ್ಳೆಯ ಸಾಧನೆಗಳನ್ನು ಮಾಡಿದ್ದ ಇಂದಿರಾಗಾಂಧಿ, ಇದೊಂದು ಕಾರಣಕ್ಕೆ ದೇಶವ್ಯಾಪಿ ವಿರೋಧಿ ನಿಲುವಿಗೆ ಉದಾಹರಣೆಯಾದರು. ಅಂದಿನಿಂದ ಅಕ್ಷರಶಃ ಭಯದ ವಾತಾವರಣ ಹಬ್ಬಿತ್ತು. ಜುಲೈ ೭ರಂದು ರಮೇಶ ಬಂದಗದ್ದೆ ಮತ್ತು ಕುಸುಮಾಕರ ದೇಸಾಯಿ ಪ್ರಜಾತಂತ್ರದ ಕೊಲೆಯಾಗುತ್ತಿರುವುದರ ವಿರುದ್ಧ ದೀರ್ಘ ಹೋರಾಟದ ಯೋಜನೆ ರೂಪಿಸಿಕೊಂಡರು. ಜೆ.ಎಸ್. ವೆಂಕೋಬರಾವ ಹಾಗೂ ಬಾಪು ಹೆದ್ದೂರ ಶೆಟ್ಟಿ ಅವರೊಂದಿಗೆ ಭೂಗತ ಸಂಪರ್ಕ ಇಟ್ಟುಕೊಂಡು ಚಟುವಟಿಕೆಗಳನ್ನು ಮಾಡುತ್ತ ತುರ್ತುಪರಿಸ್ಥಿತಿ ವಿರುದ್ಧ ಹೋರಾಟಕ್ಕಿಳಿದರು. ಅಕ್ಟೋಬರ್ ೯ರಂದು ಏಕಾಂಗಿ ಸತ್ಯಾಗ್ರಹ ಆರಂಭಿಸಿದ್ದರು.

ಜಿಲ್ಲಾ ವಕೀಲರ ಸಂಘದ ಅಧ್ಯಕ್ಷರಾಗಿದ್ದ ಅವರು, ೧೯೪೭ರಿಂದ ಸೆಪ್ಟೆಂಬರ್ ೧೭, ೧೯೪೮ರವರೆಗೆ ಹೈದರಾಬಾದ್ ಕರ್ನಾಟಕ ವಿಮೋಚನೆ ಮತ್ತು ಸ್ವಾತಂತ್ರ್ಯಪೂರ್ವದ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಭೂಗತ ಹಾಗೂ ಗೆರಿಲ್ಲಾ ಚಟುವಟಿಕೆಗಳಲ್ಲಿದ್ದ ಅವರು, ಬೀದಿಗಳಲ್ಲಿ ಬಾವುಟ ಹಿಡಿದು ಕೂಗಿದರು. ಡಿಐಜಿ ಅವರಿಗೆ ಈ ಕುರಿತು ತಿಳಿಸಿದಾಗ ದೇಸಾಯಿಯವರನ್ನು ದಸ್ತಗಿರಿ ಮಾಡಲಾಯಿತು. ಅಕ್ಟೋಬರ್ ೧೦ರಂದು ಕೋರ್ಟ್‌ಗೆ ಹಾಜರುಪಡಿಸಿದಾಗ ೬ ತಿಂಗಳ ಶಿಕ್ಷೆ ವಿಧಿಸಿ ಗುಲ್ಬರ್ಗ ಜೈಲಿಗೆ ಕಳಿಸಲಾಯಿತು.

ಇವರ ವಿದ್ಯಾರ್ಥಿಗಳಾಗಿದ್ದ ಬಿ.ಆರ್.ಪಾಟೀಲ್, ಮೂರು ದಿನಗಳ ನಂತರ ಸತ್ಯಾಗ್ರಹ ಆರಂಭಿಸಿದ್ದರು. ೪೪ನೇ ಸಾಲಿನ ತಿದ್ದುಪಡಿ ಕಾಯಿದೆ ವಿರುದ್ದ ಸಭೆ ಏರ್ಪಡಿಸಿದಾಗ ವೀರೇಂದ್ರ ಪಾಟೀಲ್ ಮತ್ತು ಲಕ್ಷ್ಮೀಸಾಗರ ಭಾಗಿಗಳಾಗಿದ್ದರು. ದೇಸಾಯಿ ಜೈಲಿನಲ್ಲಿದ್ದಾಗಲೇ ಖಾಸಾ ತಂಗಿಯಾದ ವೈಜಯಂತಿಯ ಮದುವೆಯಾಯಿತು. ಕನಿಷ್ಠ ಅನುಕಂಪ ಅಥವಾ ಸೌಜನ್ಯಕ್ಕಾಗಿ ತಂಗಿ ಮದುವೆಗೆ ಹೋಗಲು ಅನುಮತಿಸಲಿಲ್ಲ. ಅಂಥ ಕರಾಳ ದಿನಗಳಲ್ಲಿ ದೇಸಾಯಿ, ಇಡೀ ರಾಜ್ಯದಲ್ಲಿ ಹೆಚ್ಚಿನ ಶಿಕ್ಷೆಗೊಳಪಟ್ಟವರು.

"ಡಿಫೆನ್ಸ್ ಆಫ್ ಇಂಡಿಯಾದೊಳಗೆ ೬ ತಿಂಗಳ ಶಿಕ್ಷೆ ಅನುಭವಿಸಿದ್ದು ದೇಸಾಯಿ ಅವರೇ ಮೊದಲಿಗರು. ವಿಶ್ವನಾಥ ಪಾಟೀಲ್ ಹೆಬ್ಬಾಳ, ಬಸಯ್ಯ ಗುತ್ತೇದಾರ್ ಚಿಂಚೋಳಿ, ಅನಂತ ಶರ್ಮಾ, ಅಶೋಕ ಪಾಟೀಲ, ವೆಂಕಟೇಶ ಗುರುನಾಯಕ, ಲಕ್ಷ್ಮಣ ದೊಂದೆ ಯಾದಗಿರಿ, ಜಯಾಚಾರ್, ಸಿದ್ದಣ್ಣ ವಕೀಲ, ಡಾ.ದರಭಂಜನ್, ಸಿಂಘಟಾಲು ಕೊಪ್ಪಳ ಚಳವಳಿಯಲ್ಲಿದ್ದರು. ಮಾಜಿ ಸಂಸದ ಡಾ.ಬಿ.ಜಿ.ಜವಳಿ ಅಣ್ಣ ಶಿವಶರಣಪ್ಪ ಜವಳಿ, ಹಣಮಂತಪ್ಪ ಜಂಬಗಿ, ಮನೋಹರ ಧಮ್ಮೂರ್ ಮುಂತಾದವರಿದ್ದರು.

ತುರ್ತುಪರಿಸ್ಥಿತಿ ವಿರೋಧಿಸಿದ್ದ ಜೆ.ಎಚ್ ಪಟೇಲ್, ಗಣೇಶ ಬೀಡಿ ಮಾಲೀಕ ಆನಂದರಾವ ಅವರನ್ನು ಕೂಡ ದೇಸಾಯಿಯವರಿದ್ದ ಜೈಲಿಗೆ ಕರೆತರಲಾಗಿತ್ತು. ಲಂಡನ್‌ನಿಂದ ಹೊರಡುತ್ತಿದ್ದ 'ಸ್ವರಾಜ್' ಪತ್ರಿಕೆ ಭಾರತದಲ್ಲಿ ಒಂದು ಸಾವಿರ ಜನಕ್ಕೆ ತಲುಪುತ್ತಿದ್ದವು. ಅದರಲ್ಲಿ ದೇಸಾಯಿ ಒಬ್ಬರು. ಸ್ವರಾಜ್ ಪತ್ರಿಕೆಯು ಸಮಾಜವಾದಿ ಪಕ್ಷ ಹೊರಡಿಸುತ್ತಿದ್ದ ತುರ್ತುಪರಿಸ್ಥಿತಿ ವಿರುದ್ಧದ ಲೇಖನಗಳನ್ನು ಪ್ರಕಟಿಸುತ್ತಿತ್ತು. ಗುಪ್ತವಾಗಿ ರವಾನಿಸಲಾಗುತ್ತಿತ್ತು. ೪೦ ರೂ. ಬೆಲೆಯಿದ್ದ ಆ ಪತ್ರಿಕೆ ಹಾಗೂ ಅದರ ಪ್ರಸಾರದ ಬಗ್ಗೆ ಕುಲದೀಪ್ ನಯ್ಯರ್ ತಮ್ಮ 'ಜಡ್ಜ್‌ಮೆಂಟ್' ಎಂಬ ಕೃತಿಯಲ್ಲಿ ಬರೆದಿದ್ದಾರೆ. ತುರ್ತುಪರಿಸ್ಥಿತಿ ಕರಾಳ ನೆನಪಿಗೆ ಬೆಳ್ಳಿಹಬ್ಬದ ಸಂದರ್ಭದಲ್ಲಿ ಕುಸುಮಾರ ದೇಸಾಯಿ ಹಾಗೂ ಸರಿತಾ ದೇಸಾಯಿ ಅವರನ್ನು ಸಂದರ್ಶನ ಮಾಡುವಾಗ ಕರಾಳ ದಿನಗಳನ್ನು ನೆನಪಿಸಿಕೊಂಡಿದ್ದರು. ದೇಸಾಯಿ ದಂಪತಿ ಈಗಿಲ್ಲ. ಆದರೆ ಅಂದು ನೆನಪು ಮಾಡಿಕೊಂಡ ಇತಿಹಾಸದ ಕಪ್ಪು ಚುಕ್ಕೆಯಾದ ತುರ್ತುಪರಿಸ್ಥಿತಿಯ ನೆನಪಿದು."[೧೮]

**೬.೫. ಸಾಲಮೇಳ**

ಇಪ್ಪತ್ತನೆಯ ಶತಮಾನದ ಎಪ್ಪತ್ತರ ದಶಕದ ತುರ್ತುಪರಿಸ್ಥಿತಿಯು ದೇಶಕ್ಕೆ ಮಾರಕವಾದಂತೆಯೇ, ಪೂರಕವು ಆಗಿತ್ತು ಎಂದು ಹೇಳಬಹುದು. ಇದರಿಂದಾಗಿ, ಅನೇಕ ಜನಸಾಮಾನ್ಯರಿಗೆ ಹಾಗೂ ರೈತರಿಗೆ ಅನುಕೂಲಕರಕವೂ ಆಗಿತ್ತು. ಅಂತಹ ಲಾಭಕರವಾದ ಸಂಗತಿಯೇ ಸಾಲಮೇಳ. ಇಂದಿರಾಗಾಂಧಿಯವರು ಘೋಷಿಸಿದ ಇಪ್ಪತ್ತಂಶಗಳ ಕಾರ್ಯಕ್ರಮದ ಭಾಗವಾಗಿ ಬಂದ ಈ ಸಾಲಮೇಳ ರೈತರಿಗೆ ಸಣ್ಣ ಸಾಲಗಳನ್ನು ಒದಗಿಸುತ್ತಿತ್ತು. ಆದರೆ ಇದರ ಲಾಭವನ್ನು ಸಣ್ಣ ರೈತರಿಗಿಂತ ದೊಡ್ಡ ರೈತರೇ ಹೆಚ್ಚು ಪಡೆದದ್ದು.

ಯಾದಗಿರಿ ಜಿಲ್ಲೆಯಲ್ಲಿಯೂ ಅನೇಕ ರೈತರು ಇದರ ಲಾಭವನ್ನು ಪಡೆದಿದ್ದರು. ಈ ಜಿಲ್ಲೆಯ ರಾಜಕೀಯ ಪಕ್ಷಗಳು ಮತ್ತು ರಾಜಕಾರಣಿಗಳು ರೈತರನ್ನು ಬ್ಯಾಂಕ್‌ಗಳಿಗೆ ಕರೆದುಕೊಂಡು

ಹೋಗಿ ಸಾಲವನ್ನು ಕೊಡಿಸುತ್ತಿದ್ದರು. ಈ ಸಾಲ ಪಡೆಯುವುದಕ್ಕೆ ಯಾವುದೇ ಸರಿಯಾದ ಮಾನದಂಡಗಳು ಇರಲಿಲ್ಲವೆಂದೆನಿಸುತ್ತದೆ. ಆದ್ಯಾಗೂ ಅನೇಕ ರೈತರು ಇದರ ಲಾಭ ಪಡೆದಿದ್ದರು. ಯಾದಗಿರಿ, ಶಾಹಪುರ, ಹಾಗೂ ಸುರಪುರದಂತಹ ದೊಡ್ಡ ನಗರಗಳಲ್ಲಿ ರಾಜಕಾರಣಿಗಳು ರೈತರಿಗೆ ಸಾಲವನ್ನು ಕೊಡಿಸುತ್ತಿದ್ದರು. ಉದಾಹರಣೆಗೆ ಕೊಳೂರು ಮಲ್ಲಪ್ಪ ಮತ್ತು ಕಲಬುರಗಿ ಶರಣಪ್ಪರಂತಹವರು ಯಾದಗಿರಿ ಮತ್ತು ಶಾಹಪುರಗಳಲ್ಲಿ ರೈತರಿಗೆ ಸಾಲ ಕೊಡಿಸುತ್ತಿದ್ದರು. ಗುರುಮಠಕಲ್‌ನಂತಹ ಸಣ್ಣ ನಗರಗಳಲ್ಲಿ ಅಲ್ಲಿಯ ಸ್ಥಾನಿಕ ನಾಯಕರು ಇದರ ಬಗ್ಗೆ ಅರಿವು ಮೂಡಿಸುತ್ತಿದ್ದರು, ಸಹಾಯ ಮಾಡುತ್ತಿದ್ದರು. ಗುರುಮಠಕಲ್‌ನಲ್ಲಿ ವಿದ್ಯಾಧರ ಗುರೂಜಿ, ಚಂಡರಕಿ ಸಿದ್ರಾಮರೆಡ್ಡಿ, ಮಲ್ಲಿಕಾರ್ಜುನ ಖರ್ಗೆ ಮುಂತಾದವರು ರೈತರಿಗೆ ಸಹಾಯ ಮಾಡುತ್ತಿದ್ದರು.

"ರಾಜಕೀಯ ನಾಯಕರ ಜತೆ ಅನೇಕ ಸಾಮಾಜಿಕ ಸಂಘಟನೆಗಳು ಕೂಡ ಸಾಲಮೇಳ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಹೋರಾಟ ಮಾಡಿದ ಉದಾಹರಣೆಗಳಿವೆ. ಈ ಸಾಮಾಜಿಕ ಹೋರಾಟಗಾರರು ನೂರಾರು ಜನರನ್ನು ಬ್ಯಾಂಕ್‌ಗಳಿಗೆ ಕರೆತಂದು ಸಾಲ ಕೊಡಲು ಒತ್ತಡ ಹೇರುತ್ತಿದ್ದರು. ಬ್ಯಾಂಕ್‌ಗಳು ಏನಾದರೂ ಕಾನೂನು ರೂಲ್ಸ್ ಎಂದು ಹಿಂದೆ ಮುಂದೆ ನೋಡಿದರೆ ಆ ಹೋರಾಟಗಾರರು ಬ್ಯಾಂಕ್‌ಗಳಿಗೆ ಘೇರಾವೊ ಹಾಕುತ್ತಿದ್ದರು. 'ಒಂದು ಸಲ ತಮ್ಮ ತಂದೆಯ ನೇತೃತ್ವದಲ್ಲಿ ಸುಮಾರು ಜನ ಬಂದು ಗುರುಮಠಕಲ್‌ನಲ್ಲಿ ಒಂದು ಬ್ಯಾಂಕಿನ ಸುತ್ತಲು ಘೇರಾಯಿಸಿದ್ದೆವು. ಅದರಲ್ಲಿ ಹೆಚ್ಚಿನವರು ಸಾಲಕ್ಕೆ ಅರ್ಹರಲ್ಲ ಎಂದು ಬ್ಯಾಂಕಿನ ವ್ಯವಸ್ಥಾಪಕರು ಹೇಳಿದರು. ಇದನ್ನು ತಿಳಿದ ರೈತರು ಹೋರಾಟ ತೀವ್ರಗೊಳಿಸಿದರು. ಆದರೆ ಪರಿಸ್ಥಿತಿ ಕೈ ಮೀರಿ ಹೋಗುವ ಲಕ್ಷಣ ಕಂಡು ಬ್ಯಾಂಕಿನ ವ್ಯವಸ್ಥಾಪಕರು ಕಂಗೆಟ್ಟು ತಮ್ಮ ಮೇಲಧಿಕಾರಿಗೆ ದೂರವಾಣಿಯಲ್ಲಿ ಪರಿಸ್ಥಿತಿ ವಿವರಿಸಿ ಅನುಮತಿ ಪಡೆದು ಸಾಲ ವಿತರಿಸಲು ವ್ಯವಸ್ಥೆ ಮಾಡಿಕೊಂಡಿದ್ದರು' ಎಂದು ಕಲಬುರಗಿ ಶರಣಪ್ಪ ಅವರ ಮಗಳು ತಿಳಿಸುತ್ತಾರೆ. ಆ ಚಳವಳಿಗಳ ತೀವ್ರತೆ ಹೇಗಿತ್ತೆಂದರೆ, ಬ್ಯಾಂಕ್‌ಗಳ ಮೇಲಾಧಿಕಾರಿಗಳು ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಹೋರಾಟಕ್ಕೆ ಹೆದರಿ ನಿರ್ಣಯಗಳಿಂದ ನುಣುಚಿಕೊಳ್ಳುವುದು ಪ್ರಾರಂಭವಾಗಿತ್ತು. ಶಾಖಾ ವ್ಯವಸ್ಥಾಪಕರಿಗೆ, ಆ ಸ್ಥಳದಲ್ಲಿದ್ದವರಾಗಿ, ಸುತ್ತಲ ಪರಿಸ್ಥಿತಿಯನ್ನು ಗಮನಿಸಿ ಬ್ಯಾಂಕಿನ ಹಿತರಕ್ಷಣೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ನೀವೇ ನಿಮ್ಮ ನಿರ್ಣಯಗಳನ್ನು ತೆಗೆದುಕೊಳ್ಳಬೇಕೆಂದು ಮೇಲಧಿಕಾರಿಗಳು ಸೂಚಿಸುತ್ತಿದ್ದರು ಎಂದು ಅವರು ಮುಂದುವರಿದು ಹೇಳುತ್ತಾರೆ."[೯೯]

## ೬.೬. ರಾಷ್ಟ್ರೀಕೃತ ಬ್ಯಾಂಕ್ ಮತ್ತು ಚಳವಳಿಗಳು

ತುರ್ತು ಪರಿಸ್ಥಿತಿ ವಿರುದ್ಧ ಯಾದಗಿರಿಯಲ್ಲಿ ಸಾಕಷ್ಟು ಹೋರಾಟ ನಡೆಯಿತು. ಅದರಲ್ಲಿ ವಿಶೇಷವಾಗಿ ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಅವುಗಳಿಂದ ಸಾಲ ಪಡೆಯಲು ಸಾಮಾಜಿಕ ಚಳವಳಿಗಳು ನಡೆದವು. ಭೂಸುಧಾರಣೆ, ಮೀಸಲಾತಿ ವಿಸ್ತರಣೆ, ಜೀತಪದ್ಧತಿ ಹಾಗೂ ಮಲ ಹೊರುವ ಪದ್ಧತಿಗಳ ನಿಷೇಧ ಮುಂತಾದವುಗಳ ಕುರಿತು ಜನಸಾಮಾನ್ಯರು ಅನೇಕ ಸಾಮಾಜಿಕ ಹೋರಾಟಗಳನ್ನು ನಡೆಸಿದರು. ತುರ್ತು ಪರಿಸ್ಥಿತಿಯ ನಂತರ ಯಾದಗಿರಿ ಜಿಲ್ಲೆಯಲ್ಲಿ ರೈತರ

ಭೂಮಿ, ಮೀಸಲಾತಿ ಹಾಗೂ ಜಾತಿಯ ಕುರಿತಂತೆ ಹೊಸ ಸಮೀಕರಣಗಳು ಕಾಣಿಸುತ್ತಿರುವ ಆ ಸಂದರ್ಭದಲ್ಲಿ ಸಾಮಾಜಿಕ ಚಳವಳಿಗಳು ಮಹತ್ವದ ಪಾತ್ರ ವಹಿಸಿದವು.

ಯಾರು ಏನೇ ಹೇಳಲಿ ಈ ದೇಶದಲ್ಲಿ ಪ್ರಜಾಪ್ರಭುತ್ವ ಅದರ ಮೂಲಶಕ್ತಿಯಲ್ಲಿ ಸ್ಥಾಪಿತ ವಾಗಲು ಬೇಕಾದ ಕೆಲವು ಘನವಾದ, ಧೀರವಾದ ತೀರ್ಮಾನಗಳನ್ನು ಇಂದಿರಾಗಾಂಧಿಯವರು ತೆಗೆದುಕೊಂಡರು. ತುರ್ತುಪರಿಸ್ಥಿತಿಯ ಹಿನ್ನೆಲೆಯಲ್ಲಿ ಆಕೆ ಪ್ರಜಾಪ್ರಭುತ್ವವಾದಿಯೇ ಅಲ್ಲ ಎನ್ನುವ ವರೂ ಒಪ್ಪಲೇಬೇಕಾದ ಕೆಲವು ಮಹತ್ವದ ನಿರ್ಣಯಗಳು ಈ ದೇಶದ ಸಾಮಾಜಿಕ ಮತ್ತು ಆರ್ಥಿಕ ಚಹರೆಯನ್ನು ಮರುರೂಪಿಸುವಲ್ಲಿ ವಹಿಸಿದ ಪಾತ್ರ ಆಧುನಿಕ ಭಾರತದ ರೂಪುಗೊಳ್ಳುವಿಕೆ ಯಲ್ಲಿ ಕಟುವಾದದ್ದು ಎನ್ನುವುದನ್ನು ಈಕೆಯ ಕಟು ಟೀಕಾಕಾರರೂ ಮರು ಮಾತಿಲ್ಲದೆ ಒಪ್ಪುತ್ತಾರೆ. ಬ್ಯಾಂಕುಗಳ ರಾಷ್ಟ್ರೀಕರಣ ಅಂಥ ಗಟ್ಟಿ ತೀರ್ಮಾನಗಳಲ್ಲಿ ಒಂದು.

ಎಲ್ಲ ಬಗೆಯ ರಾಷ್ಟ್ರೀಯ, ಆರ್ಥಿಕ ಮತ್ತು ವಾಣಿಜ್ಯ ಯೋಜನೆಗಳು ಮತ್ತು ಸಂಗತಿಗಳಿಗೆ ಬ್ಯಾಂಕುಗಳು ಮೂಲ ವಾಹಕಗಳು. ಈ ಮೂಲವಾಹಕಗಳನ್ನು ಸೃಷ್ಟಿ ಮಾಡಿದ್ದೇ ಇಂದಿರಾಗಾಂಧಿ ಅವರು. ಅವರ ಬ್ಯಾಂಕುಗಳನ್ನು ಸಮುದಾಯದ ಸಂಸ್ಥೆಗಳಾಗಿ, ಅಭಿವೃದ್ಧಿಯ ಮತ್ತು ಬದಲಾವಣೆಯ ಕಾರ್ಯ ನಿರ್ವಾಹಕರ ಮಹತ್ವದ ಪಾತ್ರ ವಹಿಸುವಂತೆ ಮಾಡಿದ್ದು. ಈ ತೀರ್ಮಾನವನ್ನು ಕುರಿತು ಆರ್ಥಿಕ ತಜ್ಞರು ಸಂಪುಟಗಟ್ಟಲೆ ಬರೆದಿದ್ದಾರೆ. ಪ್ರಧಾನಮಂತ್ರಿಯಾಗಿ ಅವರು ತೆಗೆದುಕೊಂಡ ಒಂದು ತೀರ್ಮಾನ ಈ ದೇಶದ ಆಗುಹೋಗುಗಳ ಗತಿಯನ್ನೇ ಬದಲಾಯಿಸಿತು. ಈ ದೇಶದ ವರ್ಗ ಸಂಘರ್ಷಕ್ಕೆ ಒಂದು ಚಾಲನೆಯಾಗಿ ಕೆಲಸ ಮಾಡಿತು ಎಂದು ಬರೆದಿದ್ದಾರೆ.

ಆ ಕಾಲದಲ್ಲಿ ರಾಜರಿಗೆ ಹಾಗೂ ರಾಜಕುಮಾರರಿಗೆ ನೀಡುತ್ತಿದ್ದ ರಾಜಧನವನ್ನು ನಿಲ್ಲಿಸಿ ಜನಸಾಮಾನ್ಯರ ಆರ್ಥಿಕ ಏಳಿಗೆಗೆ ನೆರವಾದದ್ದು ಕೂಡ ಮತ್ತೊಂದು ಮಹತ್ವದ ತೀರ್ಮಾನ. ಕೋಟಿಗಟ್ಟಲೆ ಹಣವನ್ನು ಅರಸೊತ್ತಿಗೆಯ ಬಿಳಿಯಾನೆಗಳನ್ನು ಸಾಕಲು ಬಳಸಲಾಗುತ್ತಿತ್ತು. ಇಂತಹ ಹಣವನ್ನು ಬ್ಯಾಂಕುಗಳ ಮೂಲಕ ಜನಸಾಮಾನ್ಯರಿಗೆ ಸಾಲ ರೂಪದಲ್ಲಿ ಮತ್ತು ಇತರೆ ಜನಾಭಿವೃದ್ಧಿಗೋಸ್ಕರ ಉಪಯೋಗಿಸಲಾಯಿತು. ಅರಸೊತ್ತಿಗೆಗಳ ಜೊತೆ ಭಾರತೀಯ ಸಮುದಾಯಕ್ಕಿರುವ ಭಾವನಾತ್ಮಕ ಸಂಬಂಧ ಒಂದು ಕಡೆ, ಜನಸಾಮಾನ್ಯರ ತೆರಿಗೆಯ ಹಣದ ಬಗೆಗಿನ ಉತ್ತರದಾಯಿತ್ವದ ಪ್ರಶ್ನೆ ಇನ್ನೊಂದು ಕಡೆ. ನಿಜವಾಗಿ, ಇಂದಿರಾಗಾಂಧಿ ಅವರು ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಿ ಜನಸಾಮಾನ್ಯರ ನಿಲುವನ್ನೇ ಬದಲಾಯಿಸಿದರು.

"ಬ್ಯಾಂಕು ರಾಷ್ಟ್ರೀಕರಣದ ಭಾಗವಾಗಿ ಇಂದಿರಾಗಾಂಧಿ ಅವರು ಬಂಡವಾಳಶಾಹಿಗಳು ಕೆಲವು ಹಕ್ಕುಗಳನ್ನೇ ರದ್ದುಗೊಳಿಸಿದ್ದರು. ಬ್ಯಾಂಕು ರಾಷ್ಟ್ರೀಕರಣಕ್ಕೂ ಮೊದಲು ಕೆಲವು ಖಾಸಗಿ ವಲಯದಲ್ಲಿ ಬ್ಯಾಂಕುಗಳನ್ನು ಸ್ಥಾಪಿಸಿಕೊಂಡು ಬ್ಯಾಂಕು ವ್ಯವಹಾರ ಹಾಗೂ ಲೇವಾದೇವಿ ವ್ಯವಹಾರವನ್ನು ಮಾಡಿ ಅಪಾರ ಹಣವನ್ನು ಸಂಗ್ರಹಿಸುತ್ತಿದ್ದರು. ಆದರೆ ೧೯೭೫ರ ತುರ್ತು ಪರಿಸ್ಥಿತಿಯಿಂದಾಗಿ ಇಂತವರು ಆಸ್ತಿ ಸಂಪಾದನೆ, ಖರೀದಿ ಹಾಗೂ ಮಾರಾಟದ ಕೆಲ ಹಕ್ಕು ಗಳನ್ನು ಕಳೆದುಕೊಂಡರು. ಜೊತೆಗೆ ವ್ಯಾಪಾರ ವಹಿವಾಟು ನಡೆಸುವ ಹಕ್ಕು ಕಳೆದುಕೊಂಡರು."[೫೫]

ಇಂದಿರಾಗಾಂಧಿ ಅವರ ಇಂತಹ ತೀರ್ಮಾನಗಳನ್ನು ಮತ್ತು ಸುಧಾರಣೆಗಳನ್ನು ರಾಷ್ಟ್ರ ಮಟ್ಟದಲ್ಲಿ ಕೆಲವರು ಬೆಂಬಲಿಸಿದ್ದರು. ಸಮಾಜ ಸುಧಾರಕ ವಿನೋಬಾ ಭಾವೆ, ಉದ್ಯಮಿ ಜೆ.ಆರ್.ಡಿ. ಟಾಟಾ. ಬರಹಗಾರ ಖುಷ್ವಂತ್ ಸಿಂಗ್. ಆಗ ಒಡಿಶಾ ಮುಖ್ಯಮಂತ್ರಿಯಾಗಿದ್ದ ನಂದಿನಿ ಸತ್ಪತಿ ಮೊದಲಾದವರು ತುರ್ತುಪರಿಸ್ಥಿತಿಯನ್ನು ಬೆಂಬಲಿಸಿದ್ದರು. ಆಗ ಕರ್ನಾಟಕದ ಮುಖ್ಯಮಂತ್ರಿಗಳಾದ ದೇವರಾಜ ಅರಸು ಕೂಡ ಇಂದಿರಾ ಪರವಾಗಿದ್ದರು. ಇವರ ಮುಖ್ಯ ವಾದವೆಂದರೆ ಇಂದಿರಾಗಾಂಧಿ ಅವರ ಇಪ್ಪತ್ತು ಅಂಶಗಳ ಕಾರ್ಯಕ್ರಮದಿಂದಾಗಿ ೨೦ ಅಂಶಗಳ ಯೋಜನೆಗಳಲ್ಲಿ ಒಂದು ಬ್ಯಾಂಕು ರಾಷ್ಟ್ರೀಕರಣವಾಗಿತ್ತು. ದೇಶದಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ, ಶಿಕ್ಷಣ, ಉದ್ಯೋಗ ಹಾಗೂ ರಫ್ತು ಪ್ರಮಾಣ ಹೆಚ್ಚಳವಾಗಿದ್ದು ದೇಶದ ಅಭಿವೃದ್ಧಿಗೆ ಕಾರಣವಾಯಿತು ಎಂಬುದಾಗಿತ್ತು.

ಯಾದಗಿರಿ ಜಿಲ್ಲೆಯಲ್ಲಿಯೂ ಇಂದಿರಾಗಾಂಧಿ ಅವರ ಆಡಳಿತ ವೈಖರಿ ಕುರಿತು ಮಿಶ್ರ ಅಭಿಪ್ರಾಯಗಳಿದ್ದವು. ಕೆಲ ವಿಷಯಗಳಲ್ಲಿ ಅವರಿಗೆ ಶ್ಲಾಘನೆ ವ್ಯಕ್ತವಾದರೆ, ಇನ್ನು ಕೆಲವದರಲ್ಲಿ ಟೀಕೆಗಳ ಸುರಿಮಳೆ. ಆದರೆ ಆಂತರಿಕ ಭದ್ರತೆ ಭೀತಿಯ ಹೆಸರಲ್ಲಿ ದೇಶದ ಮೇಲೆ ತುರ್ತುಪರಿಸ್ಥಿತಿ ಹೇರಿದ್ದು ಮಾತ್ರ ಅಕ್ಷಮ್ಯ ಅಪರಾದ ಎಂದೇ ಪರಿಗಣಿತವಾಗಿದೆ. ಈ ಘಟನೆ ಅಭಿವೃದ್ಧಿಗೆ ಮಾರಕ ಎಂದು ಕೆಲವು ಸಾಮಾಜಿಕ ಸಂಘಟನೆಗಳು ಹೋರಾಟ ಮಾಡಿವೆ. ರಾಜಕೀಯ ಪಕ್ಷಗಳು, ಮಾಧ್ಯಮದವರು, ಕಾರ್ಮಿಕ ಸಂಘಟನೆಗಳು, ವಿದ್ಯಾರ್ಥಿ ಸಂಘಟನೆಗಳು ತಿರುಗಿ ಬಿದ್ದದ್ದು ನೋಡಬಹುದು. ಯಾದಗಿರಿ ಜಿಲ್ಲೆಯ ಕಮ್ಯೂನಿಸ್ಟ್ ಸಿದ್ಧಾಂತವಾದಿ ಸಂಘಟನೆಗಳು ತುರ್ತುಪರಿಸ್ಥಿತಿ ವಿರೋಧಿಸಿ ಹೋರಾಟ ನಡೆಸುತ್ತಿದ್ದರೆ, ಬಲಪಂಥೀಯ ಸಂಘಟನೆಯಾದ ಆರೆಸ್ಸೆಸ್ ಆಂದೋಲನದ ಮಾದರಿಯಲ್ಲಿ ಹೋರಾಟ ಕೈಗೊಂಡಿತ್ತು. ಸಂಘದ ಮುಖಂಡರ ನೇತೃತ್ವದಲ್ಲಿ ಜಿಲ್ಲೆಯಾದ್ಯಂತ ನಡೆದ ಸತ್ಯಾಗ್ರಹದಲ್ಲಿ ಸಾವಿರಾರು ಸದಸ್ಯರು ಪಾಲ್ಗೊಂಡರು. ನೂರಾರು ಕಾರ್ಯಕರ್ತರು ಬಂಧಿಗಳಾದರು. ಮಾಧ್ಯಮಗಳಿಗೆ ಸರಕಾರ ಸೆನ್ಸಾರ್‌ಷಿಪ್ ಹೇರಲಾಗಿತ್ತು.

ಯಾದಗಿರಿ ಜಿಲ್ಲೆಯಲ್ಲಿ ತುರ್ತುಪರಿಸ್ಥಿತಿ ಸಂದರ್ಭದಲ್ಲಿ ನಡೆದ 'ಸಂತಾನಶಕ್ತಿ ಹರಣ ಶಸ್ತ್ರಚಿಕಿತ್ಸೆ' ಭಾರಿ ವಿವಾದ ಸೃಷ್ಟಿಸಿತು. ಜನಸಂಖ್ಯೆ ಬೆಳವಣಿಗೆ ತಡೆಯೊಡ್ಡುವ ಗುರಿಯೊಂದಿಗೆ ೧೯೭೬ರ ಸೆಪ್ಟೆಂಬರ್ ತಿಂಗಳಲ್ಲಿ ಸಾಮಾಜಿಕ ಸಂತಾನಶಕ್ತಿ ಹರಣ ಶಸ್ತ್ರಚಿಕಿತ್ಸೆಗೆ ಒತ್ತು ನೀಡಲಾಯಿತು. ಕುಟುಂಬ ಯೋಜನೆಗೆ ಒಳಗಾಗಲು ಬಯಸುವವರಿಗಷ್ಟೇ ಶಸ್ತ್ರಚಿಕಿತ್ಸೆ ಮಾಡುವುದು ಯೋಜನೆ ಉದ್ದೇಶವಾದರೂ ಶಿಬಿರಗಳನ್ನು ಹಮ್ಮಿಕೊಳ್ಳುವ ಮೂಲಕ ಸಿಕ್ಕಸಿಕ್ಕವರನ್ನು ಬಲವಂತವಾಗಿ ಕಡ್ಡಾಯ ಶಸ್ತ್ರಚಿಕಿತ್ಸೆಗೆ ಒಳಪಡಿಸಲಾಯಿತು. ಅದರಲ್ಲೂ ತಮಗಾಗದ ಹೋರಾಟ ಗಾರರು ಹಾಗೂ ಧರ್ಮಿಯರನ್ನೇ ಗುರಿಯಾಗಿಸಲಾಗಿತ್ತು ಎಂಬ ಆರೋಪವು ಇದೆ.

ಇದೊಂದು ಕಡೆಗೆ ಯಾದಗಿರಿ ಜಿಲ್ಲೆಯ ಶ್ರೇಷ್ಠ ನಾಯಕರಾದ ಕೋಳೂರು ಮಲ್ಲಪ್ಪ. ಸಿದ್ದರಾಮರೆಡ್ಡಿ, ಮಲ್ಲಿಕಾರ್ಜುನ ಖರ್ಗೆ ಮುಂತಾದ ನಾಯಕರು ತುರ್ತುಪರಿಸ್ಥಿತಿಯ ಪರವಾಗಿದ್ದರು. ಅವರು ಇಂದಿರಾಗಾಂಧಿ ಅವರ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಬಗ್ಗೆ ಜನರಲ್ಲಿ ಮನವರಿಕೆ ಜಾಗೃತಿ ಮೂಡಿಸುತ್ತಿದ್ದರು.

“ದೇಶ ಕಂಡ ತುರ್ತುಪರಿಸ್ಥಿತಿಯ ಕರಾಳ ನೆನಪಿಗೀಗ ೪೦ ವರ್ಷ. ಚುನಾವಣಾ ಪ್ರಕರಣದಲ್ಲಿ ಅಲಹಾಬಾದ್ ಹೈಕೋರ್ಟ್ ಹಾಗೂ ಸುಪ್ರೀಂ ಕೋರ್ಟ್ ನೀಡಿದ ತೀರ್ಪುಗಳು ತಮ್ಮ ಕಾಲಬುಡವನ್ನೇ ಸುತ್ತಿಕೊಳ್ಳುವುದು ಖಚಿತವಾಗುತ್ತಿದ್ದಂತೆ ಅಂದಿನ ಪ್ರಧಾನಿ ಇಂದಿರಾಗಾಂಧಿ ಆಂತರಿಕ ಕ್ಷೋಭೆಯ ನೆಪದಲ್ಲಿ ಸಂಪುಟದ ಸಮ್ಮತಿಯನ್ನೂ ಪಡೆಯದೆ ಜೂನ್. ೨೫ರ ರಾತ್ರಿ ರಾಷ್ಟ್ರಪತಿ ಮೂಲಕ ತುರ್ತುಪರಿಸ್ಥಿತಿ ಘೋಷಿಸಿದ್ದರು. ಇದು ಭಾರತದ ಇತಿಹಾಸದಲ್ಲೊಂದು ಕಪ್ಪುಚುಕ್ಕೆಯಾಗಿ, ಭಾರತೀಯರು ಎರಡನೇ ಬಾರಿ ಸ್ವಾತಂತ್ರ್ಯವನ್ನು ಕಳೆದುಕೊಂಡಂತಾಯಿತು.”[೨೧] ಈಗಲೂ ಹೋರಾಟದ ಮೂಲಕವೇ ತುರ್ತುಪರಿಸ್ಥಿತಿಯಿಂದ ಹೊರಬರಬೇಕಾಯಿತು. ಆ ನಂತರದ ೪ ದಶಕಗಳಲ್ಲಿ ಆಗಿದ್ದೇನು? ಎಮರ್ಜೆನ್ಸಿ ಕಂಡ ರಾಷ್ಟ್ರ, ರಾಜ್ಯ ನಾಯಕರ ಅನುಭವ, ಅವರ ಹೋರಾಟದ ಸ್ವರೂಪವನ್ನು ಓದುಗರಿಗೆ ಪರಿಚಯಿಸುವ ಪ್ರಯತ್ನವನ್ನು ಮಾಡಲಾಗಿದೆ.

“ತುರ್ತುಪರಿಸ್ಥಿತಿ ಅವಧಿಯನ್ನು ಎಲ್ಲ ರೀತಿಯಿಂದಲೂ ಇಂದಿರಾ ತಮ್ಮ ಲಾಭಕ್ಕೆ ಬಳಸಿಕೊಂಡರು. ಲೋಕಸಭೆ ಚುನಾವಣೆ ಮತ್ತು ಕೆಲ ರಾಜ್ಯಗಳ ವಿಧಾನಸಭೆ ಚುನಾವಣೆಯನ್ನು ಮುಂದೂಡಿದರು. ಅಸ್ತಿತ್ವದಲ್ಲಿದ್ದ ಕಾನೂನುಗಳಿಗೆ ಬದಲಾವಣೆ ತಂದು ಹೊಸ ರೂಪ ನೀಡಿದರು. ಹಲವು ಬಾರಿ ಸಂಸತ್ತನ್ನೂ ನಿರ್ಲಕ್ಷಿಸಿ, ರಾಷ್ಟ್ರಪತಿಗೆ ಒತ್ತಡ ಹೇರಿ ಸುಗ್ರೀವಾಜ್ಞೆ ಹೊರಡಿಸಿದರು. ಚುನಾವಣಾ ಅಕ್ರಮ ಪ್ರಕರಣವನ್ನು ಮುಚ್ಚಿಹಾಕುವ ಸಲುವಾಗಿ ಪ್ರಜಾಪ್ರತಿನಿಧಿ ಕಾಯ್ದೆಗೆ ಬದಲಾವಣೆ ತಂದರು. ತಾವು ಬಯಸಿದಂತೆ ಪೊಲೀಸರು, ಸರಕಾರಿ ಅಧಿಕಾರಿಗಳು ಕಾರ್ಯ ನಿರ್ವಹಿಸುವಂತೆ ಇಂದಿರಾ ನೋಡಿಕೊಂಡಿದ್ದರಿಂದ ಜನತೆಯಲ್ಲಿ ಸರ್ಕಾರದ ಬಗ್ಗೆ ಭೀತಿ ನೆಲೆಸಿತ್ತು.

ದೇಶದ ಮೇಲೆ ಎರಡು ವರ್ಷಗಳ ತುರ್ತುಪರಿಸ್ಥಿತಿ ಹೇರಿದ್ದ ಕರಾಳ ಅಧ್ಯಾಯಕ್ಕೆ ಇಂದಿಗೆ ೪೦ ವರ್ಷಗಳು. ಇಂದಿಗೂ ಆ ನೆನಪುಗಳು ತಾಜಾ ಆದಾಗ ಹಲವು ರಾಜಕೀಯ ನಾಯಕರ ಎದೆಯಲ್ಲಿ ವಿಷಾದ ಭಾವ, ಆಗ ಅನುಭವಿಸಿದ, ಪಟ್ಟ ಕಷ್ಟಗಳ ಬಗೆಗಿನ ಆಕ್ರೋಶ ವ್ಯಕ್ತವಾಗುತ್ತದೆ. ಜನಪ್ರಿಯತೆಯ ಉತ್ತುಂಗಕ್ಕೆ ತಲುಪಿದ್ದ ಇಂದಿರಾಗಾಂಧಿ ಕೈಗೊಂಡ ಈ ನಿರ್ಣಯದಿಂದ ಮುಂದೆ ಭಾರತದ ರಾಜಕೀಯ ಚಿತ್ರಣವೇ ಬದಲಾಯಿತು ಎಂಬುದು ಇತಿಹಾಸ.”[೨೨] ಆದರೆ, ನಿಜಕ್ಕೂ ದೇಶದಲ್ಲಿ ತುರ್ತುಪರಿಸ್ಥಿತಿ ಹೇರುವಂಥ ಸನ್ನಿವೇಶ ಸೃಷ್ಟಿಯಾಗಿತ್ತೆ ಎಂಬ ಪ್ರಶ್ನೆ ಇಂದಿಗೂ ಕಾಡುತ್ತಿದೆ. ಇಂದಿರಾಗಾಂಧಿ ಭಾರತದ ಮೊದಲ ಮಹಿಳಾ ಪ್ರಧಾನಿ ಎಂಬ ಹೆಗ್ಗಳಿಕೆಯ ಜತೆ ಆಡಳಿತದಲ್ಲಿ ಕೆಲ ಮಹತ್ವದ ಹಾಗೂ ದಿಟ್ಟ ನಿರ್ಧಾರಗಳನ್ನು ತಳೆದವರು.

ಬಾಂಗ್ಲಾ ವಿಮೋಚನೆಗಾಗಿ ನಡೆಸಿದ ಹೋರಾಟವನ್ನು ಆಗಿನ ಪ್ರತಿಪಕ್ಷಗಳೂ ಸ್ವಾಗತಿಸಿದ್ದವು. ಇಂಥ ಇಂದಿರಾ ಕೂಡ ಲೋಕನಾಯಕ ಜಯಪ್ರಕಾಶ ನಾರಾಯಣರ ಆಂದೋಲನ, ಪುತ್ರ ಸಂಜಯ್‌ಗಾಂಧಿ ಮೇಲೆ ಬಂದ ಆರೋಪ ಹಾಗೂ ದೇಶದಲ್ಲಿನ ಕೆಲ ಕ್ಷಿಪ್ರ ಬೆಳವಣಿಗೆಗಳಿಂದ ಅಧೀರರಾಗಿದ್ದು ಸುಳ್ಳಲ್ಲ. ಚುನಾವಣೆಯಲ್ಲಿ ಇಂದಿರಾ ಆಯ್ಕೆಯನ್ನೇ ಅಲಹಾಬಾದ್ ನ್ಯಾಯಾಲಯವು ಅಕ್ರಮ ಎಂದು ಹೇಳಿ ಅದನ್ನು ರದ್ದು ಮಾಡಿದಾಗ ಅವರಲ್ಲಿ ಜಾಗೃತವಾಗಿದ್ದು ಸರ್ವಾಧಿಕಾರದ ಭಾವ. ಇದಕ್ಕಾಗಿ ದೇಶ ಎಷ್ಟು ದೊಡ್ಡ ಬೆಲೆ ತೆರಬೇಕಾಯಿತಲ್ಲವೇ?

ಇದ್ದಕ್ಕಿದ್ದ ಹಾಗೆ ತುರ್ತುಸ್ಥಿತಿ ಘೋಷಣೆಯಾದಾಗ ಇಡೀ ದೇಶ ಬೆಚ್ಚಿಬಿತ್ತು. ಪ್ರತಿಪಕ್ಷಗಳ ನಾಯಕರು, ಇತರ ರಾಜಕೀಯ ಮುಖಂಡರು ಜೈಲುವಾಸ ಕಾಣುವಂತಾದರೆ ಮಾಧ್ಯಮಗಳ ದನಿಯನ್ನೂ ಅದುಮಲಾಯಿತು. ಇದೆಲ್ಲ ಜನಮಾನಸದಲ್ಲಿ ಯಾವ ಪರಿ ಆಕ್ರೋಶ ಸೃಷ್ಟಿಸಿತೆಂದರೆ 'ಇಂದಿರಾ ಈಸ್ ಇಂಡಿಯಾ, ಇಂಡಿಯಾ ಈಸ್ ಇಂದಿರಾ' ಎಂಬೆಲ್ಲ ಹೆಗ್ಗಳಿಕೆ ತುರ್ತುಸ್ಥಿತಿ ಬಳಿಕದ ಚುನಾವಣೆಯಲ್ಲಿ ಕೊಚ್ಚಿಕೊಂಡು ಹೋಗಿ ಜನತಾಪಕ್ಷದ ಮೂಲಕ ಹೊಸ ರಾಜಕೀಯ ಪರಂಪರೆಯೊಂದು ಹುಟ್ಟಿಕೊಂಡಿತು.

ಬಿಜೆಪಿ ನಾಯಕ ಆಡ್ವಾಣಿ ಈಚೆಗೆ ಆಡಿದ ಮಾತೊಂದು ತುರ್ತುಪರಿಸ್ಥಿತಿಯ ಮರುಕಳಿಕೆಯ ಚರ್ಚೆಯನ್ನು ಹುಟ್ಟುಹಾಕಿದೆ. ಕಳೆದ ೪೦ ವರ್ಷಗಳಲ್ಲಿ ಸ್ಥಿತಿ ಸಾಕಷ್ಟು ಬದಲಾಗಿದೆ. ಜನರೂ ಪ್ರಬುದ್ಧರಾಗಿದ್ದಾರೆ. ತುರ್ತುಸ್ಥಿತಿಯ ದಿನಗಳು ಮತ್ತೆ ಮರುಕಳಿಸುವ ಸಾಧ್ಯತೆಗಳು, ಆತಂಕಗಳು ಗೋಚರಿಸುತ್ತಿಲ್ಲ. ಜನಭಾವನೆಗೆ ವಿರುದ್ಧವಾದ ಆಡಳಿತ/ಸರ್ಕಾರಗಳನ್ನು ಮತದಾನವೆಂಬ ಅಸ್ತ್ರದ ಮೂಲಕ ಜನತಾ ಜನಾರ್ದನ ಕಿತ್ತೆಸೆಯುತ್ತಾನೆ ಎಂಬುದಕ್ಕೆ ಹಲವು ನಿದರ್ಶನಗಳಿವೆ. ವ್ಯವಸ್ಥೆಯ ಸುಧಾರಣೆಗೆ ದಿಟ್ಟ ನಿರ್ಧಾರಗಳನ್ನು ಕೈಗೊಳ್ಳಬೇಕಾಗುತ್ತದೆ. ಅದಕ್ಕಾಗಿ ದಕ್ಷ ಆಡಳಿತವೂ ಬೇಕಾಗುತ್ತದೆ. ಇದನ್ನು ಸರ್ವಾಧಿಕಾರಿ ಮನೋಭಾವಕ್ಕೆ ಹೋಲಿಸಲಾಗದು. ರಾಜಕೀಯದಲ್ಲಿ ನೈತಿಕತೆ ಮರೆಯಾಗುತ್ತಿರುವುದು ವರ್ತಮಾನದ ದೊಡ್ಡ ತಲ್ಲಣವಾಗಿದೆ. ಒಟ್ಟಾರೆ ವ್ಯವಸ್ಥೆ ಸುಧಾರಣೆ ನಿಟ್ಟಿನಲ್ಲಿ ಅವಲೋಕನ ನಡೆಸಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಮತ್ತಷ್ಟು ಬಲಪಡಿಸುವತ್ತ ಚಿಂತನೆ ನಡೆಸಲು ಇದು ಸಕಾಲ.

**ಕೊನೆ ಟಿಪ್ಪಣಿಗಳು**

೧. ಎಸ್.ಎನ್. ಶಿವರುದ್ರಸ್ವಾಮಿ, ಸ್ವಾತಂತ್ರ್ಯೋತ್ತರ ಭಾರತ ಪುಟ ೧೮೦.

೨. ಅದೇ ಪುಸ್ತಕ, ಪುಟ ೧೮೧.

೩. ಅದೇ ಪುಸ್ತಕ, ಪುಟ ೧೮೨.

೪. ಅದೇ ಪುಸ್ತಕ, ಪುಟ ೧೮೩.

೫. ಅದೇ ಪುಸ್ತಕ, ಪುಟ ೧೮೪.

೬. ಅದೇ ಪುಸ್ತಕ, ಪುಟ ೧೮೫.

೭. ಅದೇ ಪುಸ್ತಕ, ಪುಟ ೧೮೬.

೮. ಅದೇ ಪುಸ್ತಕ, ಪುಟ ೧೮೭.

೯. ಅದೇ ಪುಸ್ತಕ, ಪುಟ ೧೮೮.

೧೦. ಪ್ರಜಾವಾಣಿ ೨೫ ಜೂನ್ ೨೦೧೪.

೧೧. ಅದೇ ಪತ್ರಿಕೆ.

೧೨. ಅದೇ ಪತ್ರಿಕೆ.

೧೩. ವಿಜಯವಾಣಿ ೨೫ ಜೂನ್ ೨೦೧೫ ಪುಟ ೮.

೧೪. ಅದೇ ಪತ್ರಿಕೆ.

೧೫. ವಿಜಯವಾಣಿ ೨೫ ಜೂನ್ ೨೦೧೫ ಪುಟ ೯.

೧೬. ಅದೇ ಪತ್ರಿಕೆ.

೧೭. ಅದೇ ಪತ್ರಿಕೆ.

೧೮. ಅದೇ ಪತ್ರಿಕೆ.

೧೯. ವಿಜಯವಾಣಿ ೨೫ ಜೂನ್ ೨೦೧೪ ಪುಟ ೪.

೨೦. ಅದೇ ಪತ್ರಿಕೆ.

೨೧. ವಿಜಯವಾಣಿ ೨೫ ಜೂನ್ ೨೦೧೫, ಪುಟ ೧೨.

೨೨. ಅದೇ ಪತ್ರಿಕೆ.

ಅಧ್ಯಾಯ : ಏಳು

# ೨೦೦೯ರ ನಂತರ ಯಾದಗಿರಿ ಜಿಲ್ಲೆಯ ಸಾಧಕ–ಬಾಧಕಗಳ ಅಧ್ಯಯನ

೭.೧. ಸಾಮಾಜಿಕ ಸ್ಥಿತಿಗತಿಗಳು

೭.೨. ರಾಜಕೀಯ ಸ್ಥಿತಿಗತಿಗಳು

೭.೩. ಶೈಕ್ಷಣಿಕ ಸ್ಥಿತಿಗತಿಗಳು

ಅಧ್ಯಾಯ : ಏಳು

# ೨೦೦೯ರ ನಂತರ ಯಾದಗಿರಿ ಜಿಲ್ಲೆಯ ಸಾಧಕ ಬಾಧಕಗಳ ಅಧ್ಯಯನ

## ೭.೧. ಸಾಮಾಜಿಕ ಸ್ಥಿತಿಗತಿಗಳು

ಸಮಾಜ ಹಾಗೂ ಸಾಮಾಜಿಕ ವ್ಯವಸ್ಥೆ ಎಂಬ ವಿಷಯಗಳನ್ನು ಕುರಿತು ವಿಶಾಲ ಅರ್ಥಗಳನ್ನು ಕಲ್ಪಿಸಲಾಗಿದೆ. ಮಾನವನು ನಾಗರಿಕತೆಯ ಜೀವನೋಪಾಯವನ್ನು ಪ್ರವೇಶಿಸುತ್ತಿದ್ದಂತೆ ವ್ಯವಸ್ಥಿತ ಬದುಕಿಗೊಂದು ಮುನ್ನುಡಿ ಇಟ್ಟನು. ಹಾಗಾಗಿ ವಿಸ್ತಾರಗೊಂಡ ಜನಸಂಖ್ಯೆಯ ನಡುವೆ ಪರಸ್ಪರ ಪ್ರೀತಿ, ಪ್ರೇಮ, ವಿಶ್ವಾಸ, ನಂಬಿಕೆಯುಳ್ಳ ಸಂಬಂಧಗಳು ಹೆಚ್ಚು ವ್ಯಾಪಕಗೊಂಡವು. ಅಂದರೆ ಅಂಥ ಸಮೂಹಗಳು ಒಂದೆಡೆ ನಿಂತು ಜೀವನ ನಿರ್ವಹಿಸುವ ಸ್ಥಿತಿಗೆ ಬಂದು ತಲುಪಿದವು. ಪರಸ್ಪರ ಸಂಬಂಧವುಳ್ಳ ಜನತೆಯ ವ್ಯವಸ್ಥಿತ ಸಮೂಹವನ್ನು ಸ್ಥೂಲವಾಗಿ ಸಮಾಜವೆನ್ನಬಹುದೆಂದು ಅಭಿಪ್ರಾಯಿಸಲಾಗಿದೆ. ಅಲ್ಲದೆ ಇಂತಹ ಸಮೂಹಗಳು ಆಯಾ ಸಮಾಜದ ಒಪ್ಪಿತ ಮೌಲ್ಯಕ್ಕೆ ಬದ್ಧವಾಗಿರುತ್ತವೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಅವು ಹೆಚ್ಚಿನ ಚರ್ಚೆಗೂ ಗ್ರಾಸವಾಗಿವೆ.

"ಸಮಾಜ ಸಂರಚನೆಯಲ್ಲಿ ವರ್ಗ, ವರ್ಣ, ಕುಟುಂಬ ಮತ್ತು ಸಂಘ-ಸಂಸ್ಥೆಗಳು ಬಹುಮುಖ್ಯ ಅಂಶಗಳಾಗಿವೆ. ಅವುಗಳ ನಂಬಿಕೆ ಮತ್ತು ಸಂಪ್ರದಾಯ(ಆಚರಣೆ)ಗಳ ಮೇಲೆಯೇ ಸಾಮಾಜಿಕ ಸಂರಚನೆಯ ವಾಹನವು ಚಲಿಸುತ್ತಿರುತ್ತದೆ. ನಮ್ಮ ನಾಡಿನಲ್ಲಿಯೂ ಸಹ ಸಮಕಾಲೀನ ಸಂದರ್ಭದಲ್ಲಿ ಇಂತಹ ಸಾಮಾಜಿಕ ರಚನೆಯೊಂದು ಇರುವ ಬಗೆಗಿನ ವಿಷಯಗಳನ್ನು ವಿದ್ವಾಂಸರು ಚರ್ಚಿಸುತ್ತಲೇ ಬಂದಿದ್ದಾರೆ. ಸಾಮಾಜಿಕ ಸಂರಚನೆಯ ಚೌಕಟಿನಲ್ಲಿ ಪ್ರಸ್ತುತ ಯಾದಗಿರಿ ಜಿಲ್ಲೆಯಲ್ಲಿ ವ್ಯಕ್ತವಾದ ಅಂಶಗಳೇನು ಎಂಬುದನ್ನು ಸಾಮಾಜಿಕ ಸ್ಥಿತಿಗತಿಗಳು ಎಂಬ ವಿವರಗಳ ಅಡಿಯಲ್ಲಿ ತಿಳಿಯುವ ಪ್ರಯತ್ನ ಮಾಡಲಾಗಿದೆ."[1]

ಸಾಮಾಜಿಕ ಸ್ಥಿತಿಗತಿಗಳ ಮುಖ್ಯ ಭೂಮಿಕೆಯಲ್ಲಿ ಕಾಣಿಸಿಕೊಳ್ಳುವ ವರ್ಣ, ವರ್ಗ ಮತ್ತು ಜಾತಿಗಳ ಹುಟ್ಟಿನ ಬಗೆಗೆ ಖಚಿತ ಅಭಿಪ್ರಾಯಗಳು ಈವರೆಗೂ ಮೂಡಿಬಂದಿಲ್ಲ. ಈ ವಿಚಾರ ಕುರಿತು ಸಾಕಷ್ಟು ಚರ್ಚೆಗಳು ನಡೆಯುತ್ತಲೇ ಇವೆ. ವರ್ಣ ಎಂಬುದು ಜಾತಿಸೂಚಕ

ವಾಗಿರದೆ ಅದು ಹೊರಗಿನವರ ಹಾಗೂ ಮೂಲನಿವಾಸಿಗಳ ನಡುವಿನ ವ್ಯತ್ಯಾಸವನ್ನು(ಭಾಷೆ, ಮತ, ಧರ್ಮ, ಬಣ್ಣ ಆಕಾರಗಳಲ್ಲಿ) ಸೂಚಿಸುವ ಪದವಾಗಿತ್ತು ಎಂಬ ಅಭಿಪ್ರಾಯಗಳಿವೆ. ನಂತರದಲ್ಲಿ ವಿವಿಧ ವೃತ್ತಿಗಳಲ್ಲಿನ ಭೇದವು ಸಾಮಾಜಿಕವಾಗಿ ಮೇಲು ಕೀಳು ಭಾವನೆಯೆಡೆಗೆ ಮೂಡಿ ಚಾತುರ್ವರ್ಣಗಳಿಗೆ ಹಾದಿ ಮಾಡಿಕೊಟ್ಟಿರುವಂತಿದೆ. ವೃತ್ತಿ ವ್ಯತ್ಯಾಸ ಹಿಮ್ಮೆಟ್ಟಿ ವ್ಯಕ್ತಿಯ ಹುಟ್ಟು, ವರ್ಣವನ್ನು ನಿರ್ಣಯಿಸಲಾಯಿತೆಂಬ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ವ್ಯಕ್ತವಾಗಿವೆ.

ಯಾದಗಿರಿ ಜಿಲ್ಲೆಯಲ್ಲಿ ಜಾತಿಸೂಚಕಗಳೇ ಹೆಚ್ಚಾಗಿ ಕಂಡುಬಂದಿವೆ. ಅಲ್ಲದೆ ಅವು ಮೇಲು–ಕೀಳು ಎಂಬ ಭಾವನೆಗಳು ಮೂಡಿಬಂದಿರುವುವು. "ಜಾತಿಗಳು ಹೊಂದಿದ ಸ್ಥಾನಮಾನಗಳ ಮೇಲೆ ಅವರ ವರ್ಗವನ್ನು ಸ್ಥೂಲವಾಗಿ ಗುರುತಿಸಲಾಗುತ್ತದೆ. ಅವರು ಅನುಕೂಲಕ್ಕೆ ತಕ್ಕಂತೆ ಊರಿನ ಬೇರೆ ಬೇರೆ ಕೇರಿ ಅಥವಾ ಓಣಿಗಳಲ್ಲಿ ಅವರಿಗಾಗಿ ನಿಶ್ಚಿತಗೊಳಿಸಿದ ಸ್ಥಳಗಳಲ್ಲಿಯೇ ವಾಸವಾಗಿದ್ದಾರೆ."[೨]

ಯಾದಗಿರಿ ಜಿಲ್ಲೆಯ ಭಾಗದ ಸಾಮಾಜಿಕ ಜನಜೀವನದ ಪ್ರಮುಖ ಲಕ್ಷಣವೆಂದರೆ ಅವಿಭಕ್ತ ಕುಟುಂಬ ಪದ್ಧತಿ. ಈ ಪ್ರದೇಶದಲ್ಲಿ ತೀರಾ ಇತ್ತೀಚಿನವರೆಗೂ ಅವಿಭಕ್ತ ಕುಟುಂಬ ವ್ಯವಸ್ಥೆಯೇ ಪ್ರಧಾನವಾಗಿತ್ತು. ಇಂದಿಗೂ ಕೆಲವು ಮನೆತನಗಳು ಯಾವುದೇ ಪ್ರಶ್ನೆ ಮಾಡದೇ ಇಂತಹ ಪದ್ಧತಿಯನ್ನು ಒಪ್ಪಿಕೊಂಡು ಕುಟುಂಬದ ಯಜಮಾನನಿಗೆ ಸೂಕ್ತ ಗೌರವ ನೀಡುತ್ತಾ ಸಾಮರಸ್ಯದಿಂದ ಬಾಳುತ್ತಿದ್ದಾರೆ. ಹಲವಾರು ತಲೆಮಾರುಗಳಿಂದ ಸಾಂಸ್ಕೃತಿಕವಾಗಿ ಬಂದ ಸಂಪ್ರದಾಯಗಳನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಅವಿಭಕ್ತ ಕುಟುಂಬಗಳು ಮಹತ್ವದ ಪಾತ್ರ ವಹಿಸಿವೆ. ಆದರೆ ಇತ್ತೀಚೆಗೆ ಸಮಾಜದಲ್ಲಿ ನಗರೀಕರಣದಿಂದ ಔದ್ಯೋಗೀಕರಣದಿಂದ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದ ಬದಲಾವಣೆ ಉಂಟಾಗುತ್ತಿವೆ. ಇಂದು ಅವಿಭಕ್ತ ಕುಟುಂಬಗಳ ಸಂಖ್ಯೆ ಕಡಿಮೆಯಾಗಿ ವಿಭಕ್ತ ಕುಟುಂಬಗಳ ಸಂಖ್ಯೆ ಹೆಚ್ಚಾಗುತ್ತಿವೆ.

**ಮಹಿಳಾ ಸ್ಥಿತಿಗತಿಗಳು**

ಯಾದಗಿರಿ ಜಿಲ್ಲೆಯ ಮಹಿಳೆಯರ ಸ್ಥಿತಿಗತಿ ಬಹಳ ಕೆಳಮಟ್ಟದಲ್ಲಿದೆ. ಬೇರೆ ಭಾಗದ ಮಹಿಳೆಯರಿಗೆ ಶಿಕ್ಷಣ ದೊರೆತು, ಸ್ಥಾನಮಾನ ದೊರೆತು ಸಮಾಜದ ಮುಖ್ಯವಾಹಿನಿಗೆ ಬಂದರು ಆದರೆ ಇಲ್ಲಿನ ಮಹಿಳೆಯರು ಎಲ್ಲಾ ಅವಕಾಶಗಳಿಂದ ವಂಚಿತರಾಗಿ ಸಮಾಜಕ್ಕೆ ಒಡ್ಡಿಕೊಳ್ಳಲಾಗಲಿಲ್ಲ. ಇದಕ್ಕೆ ರಾಜಕೀಯ, ಆರ್ಥಿಕ, ಸಾಮಾಜಿಕ ಮುಂತಾದ ಕಾರಣಗಳಿವೆ. ಮೊದಲಿನಿಂದಲೂ ಜಮೀನ್ದಾರಿ, ನಿಜಾಮರ ಆಡಳಿತದಲ್ಲಿ ಹೆಣ್ಣನ್ನು ಸಮಾನ ಎಂದು ಪರಿಗಣಿಸಲಿಲ್ಲ. ಹೆಣ್ಣನ್ನು ತನ್ನ ಅಧೀನವೆಂದೇ ಪರಿಗಣಿಸಿ ಅವಳನ್ನು ಕೌಟುಂಬಿಕ ವ್ಯವಹಾರದಿಂದ, ಯಜಮಾನಿಕೆಯಿಂದ ದೂರ ಇಡಲಾಗಿತ್ತು. ಹೀಗಾಗಿ ಶಿಕ್ಷಣ, ಉದ್ಯೋಗ ಅವಕಾಶಗಳಿಂದ ವಂಚಿತರಾಗಿ ಆಧುನೀಕರಣದ ಸೌಲಭ್ಯಗಳು ಸಿಗದೆ ಆಧುನಿಕತೆಗೆ ಒಳಗಾಗದೆ ತಮ್ಮನ್ನು ತಾವು ಗುರುತಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹೀಗಾಗಿ ಇಲ್ಲಿನ ಮಹಿಳೆಯರು ಪುರುಷರಿಗಿಂತ ಹೆಚ್ಚು ಶೋಷಣೆಗೆ ಅನಕ್ಷರತೆಗೆ ಮತ್ತು ಮೌಢ್ಯಕ್ಕೆ ಬಲಿಯಾಗಿದ್ದಾರೆ.

ಯಾದಗಿರಿ ಜಿಲ್ಲೆಯಲ್ಲಿ ಸಮಸ್ಯೆಗಳು ಎಲ್ಲಾ ವರ್ಗದ ಮಹಿಳೆಯರಿಗೆ ಇವೆಯಾದರೂ ಅದರಲ್ಲಿ ತೀವ್ರವಾಗಿ ಬಲಿಯಾಗುತ್ತಿರುವರ್‍ಯಾರು ಎನ್ನುವುದನ್ನು ಗುರುತಿಸಬೇಕಾಗಿದೆ. ಅದರಲ್ಲೂ

ದಲಿತ, ಹಿಂದುಳಿದ ವರ್ಗದವರನ್ನು ಮತ್ತು ಮೇಲ್ಜಾತಿ ಮಹಿಳೆಯರನ್ನು ಬೇರ್ಪಡಿಸಿ ಬೇರೆ ಬೇರೆಯಾಗಿ ನೋಡಬೇಕು. ಏಕೆಂದರೆ ಇವರೆಲ್ಲರೂ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಬೇರೆ ಬೇರೆ ರೀತಿಯಲ್ಲಿ ಬಲಿಪಶುವಾಗುತ್ತಿದ್ದಾರೆ. ದಲಿತ, ಕೆಳವರ್ಗದ ಹಿಂದುಳಿದ ಮಹಿಳೆಯರು ಅನಕ್ಷರತೆ, ಬಡತನ ಹಾಗೂ ಆರ್ಥಿಕ ಬಿಕ್ಕಟ್ಟುಗಳಿಗೆ ಬಲಿಯಾಗಿದ್ದಾರೆ. ಹೀಗಾಗಿ ಇಲ್ಲಿನ ಅನೇಕ ಸಮಸ್ಯೆಗಳು ಕೆಳವರ್ಗದ ಜನರನ್ನು ಮೊದಲುಗೊಂಡು ನಂತರದಲ್ಲಿ ಹಂತಹಂತವಾಗಿ ಮೇಲ್ವರ್ಗದ ಜನರನ್ನು ಸುತ್ತಿಕೊಂಡಿವೆ.

**ಕೃಷಿ-ಕೂಲಿ ಕಾರ್ಮಿಕ ಮಹಿಳೆಯರು**

ಯಾದಗಿರಿ ಜಿಲ್ಲೆಯ ಜನತೆಯ ಮುಖ್ಯ ಉದ್ಯೋಗ ಕೃಷಿಯಾಗಿದೆ. ಇಲ್ಲಿನ ಬಹುಪಾಲು ಜನರು ತಮ್ಮ ಜೀವನೋಪಾಯಕ್ಕಾಗಿ ವ್ಯವಸಾಯವನ್ನೇ ಪ್ರಧಾನ ವೃತ್ತಿಯನ್ನಾಗಿ ಅವಲಂಬಿಸಿದ್ದಾರೆ. ಕರ್ನಾಟಕದ ಒಟ್ಟು ದುಡಿಮೆಗಾರರಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇ. ೨೮ನ್ನು ಮೀರಿಲ್ಲ. ಆದರೆ ಯಾದಗಿರಿ ಜಿಲ್ಲೆಯಲ್ಲಿ ಶೇ. ೪೦ಕ್ಕಿಂತ ಅಧಿಕವಾಗಿದೆ. ಇಲ್ಲಿ ಗಮನಿಸಬಹುದಾದ ಬಹುಮುಖ್ಯ ಸಂಗತಿಯೆಂದರೆ ಕೃಷಿ ಕೂಲಿ ಕಾರ್ಮಿಕರಲ್ಲಿ ಅಧಿಕ ಪ್ರಮಾಣದಲ್ಲಿ ಇರುವವರು ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು, ಒಟ್ಟು ಕೃಷಿ ಕಾರ್ಮಿಕರಲ್ಲಿ ಶೇ. ೬೮ರಷ್ಟು ಕಾರ್ಮಿಕರು ಮಹಿಳೆಯರಾಗಿದ್ದಾರೆ. ಈ ಪ್ರಮಾಣ ಕರ್ನಾಟಕ ಇತರ ಯಾವುದೇ ಭಾಗದಲ್ಲೂ ಕಾಣಬರುವುದಿಲ್ಲ.

ಒಟ್ಟಾರೆಯಾಗಿ ಗಮನಿಸಿದಾಗ ಒಂದು ದಶಕದ ಅವಧಿಯಲ್ಲಿ ಈ ಪ್ರದೇಶದ ಕೂಲಿ ಕಾರ್ಮಿಕರ ವರ್ಗವು ಕ್ರಮೇಣ ಕೃಷಿ ಚಟುವಟಿಕೆಯಿಂದ, ಕೃಷಿಯೇತರ ಚಟುವಟಿಕೆಗೆ ಪಲ್ಲಟ ಗೊಂಡಿರುವುದನ್ನು ಕಾಣಬಹುದು. ಆದರೆ ಮಹಿಳೆಯರಿಗೆ ಸಂಬಂಧಿಸಿದಂತೆ ವಾಸ್ತವ ಪರಿಸ್ಥಿತಿಯು ಭಿನ್ನವಾಗಿದೆ. ಈ ಪ್ರದೇಶದ ಕೃಷಿ-ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣ ಅಧಿಕವಾಗಿ ಇರುವುದಲ್ಲದೇ ೧೯೯೧-೨೦೧೧ರ ಅವಧಿಯಲ್ಲಿ ಈ ಪ್ರಮಾಣ ಇನ್ನಷ್ಟು ಅಧಿಕವಾಗಿದೆ. ಒಟ್ಟು ಕೃಷಿ-ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣ ಶೇ. ೫೫.೬೫ರಷ್ಟು ಇದ್ದದ್ದು, ೨೦೧೧ಕ್ಕೆ ಶೇ. ೬೫ಕ್ಕೆ ಏರಿಕೆಯಾಗಿದೆ. ಏರಿಕೆ ಪ್ರಮಾಣವನ್ನು ಗಮನಿಸಿದಾಗ ಯಾದಗಿರಿ ಜಿಲ್ಲೆಯಲ್ಲಿ ಪ್ರದೇಶದಲ್ಲಿ ಕೃಷಿಯೇತರ ಚಟುವಟಿಕೆಗಳಲ್ಲಿ ಮಹಿಳೆಯರಿಗೆ ದೊರೆಯುತ್ತಿರುವ ಪಾಲು ಅತ್ಯಂತ ಕನಿಷ್ಠವಾಗಿದೆ ಎಂಬುದನ್ನು ಸೂಚಿಸುತ್ತದೆ.

ಇಲ್ಲಿ ಮಹಿಳೆಯರಿಗೆ ದುಡಿಮೆಯು ಆಯ್ಕೆಯಾಗಿರದೆ ಅನಿವಾರ್ಯವಾಗಿರುವುದನ್ನು ಬಹಳ ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಕುಟುಂಬದಲ್ಲಿಯ ವರಮಾನವು ಅಧಿಕವಾದಂತೆ ಮಹಿಳೆಯ ದುಡಿಮೆಯ ಪಾಲ್ಗೊಳ್ಳುವಿಕೆ ಕಡಿಮೆಯಾಗುತ್ತದೆ. ಬಡತನ, ಕುಟುಂಬದಲ್ಲಿ ಆದಾಯದ ಪ್ರಮಾಣ ಕಡಿಮೆಯಾದಂತೆಲ್ಲಾ ಸಂಸಾರದ ಹೊಣೆ, ಹೊರೆ ಮಹಿಳೆಯರ ಮೇಲೆ ನೇರ ಪರಿಣಾಮ ಬೀರುತ್ತದೆ. "ಇಂದು ಕೃಷಿ ಕ್ಷೇತ್ರದಲ್ಲಿ ಆಗಿರುವ ಕ್ರಾಂತಿಕಾರಕ ಬದಲಾವಣೆಯಿಂದಾಗಿ ಕೃಷಿ ಹೆಚ್ಚು ಹೆಚ್ಚು ಯಾಂತ್ರೀಕರಣಗೊಳ್ಳುತ್ತಿದೆ. ಹೀಗಾಗಿ ಮಹಿಳೆಯರಿಗೆ ಕೃಷಿ ಚಟುವಟಿಕೆಗಳಲ್ಲಿ ದೊರೆಯಬಹುದಾದ ಕೆಲಸ ಕಾರ್ಯಗಳ ಪ್ರಮಾಣವು ಕಡಿಮೆಯಾಗುತ್ತಾ ಹೋಗುತ್ತದೆ. ಇನ್ನು ಇಲ್ಲಿ ಮಳೆ ಆಧಾರಿತ ಬೇಸಾಯ ಹೆಚ್ಚಿರುವುದರಿಂದ ಅವರ ಜೀವನವು ಅನೇಕ ಏರುಪೇರುಗಳನ್ನು

ಆಧರಿಸಿ ಮುಂದುವರಿಯುತ್ತದೆ. ಅಂಕಿ ಅಂಶಗಳ ಆಧಾರದ ಮೇಲೆ ಹೇಳುವುದಾದರೆ ಮಳೆ ಆಧಾರಿತ ಬೇಸಾಯದಲ್ಲಿ ಉದ್ಯೋಗದ ಪ್ರಮಾಣವು ತೀರ ಕಡಿಮೆ ಇದೆ ಇಲ್ಲಿ ಉದ್ದಿಮೆಗಳ ಬೆಳವಣಿಗೆ ಸಮರ್ಪಕವಾಗಿಲ್ಲ ಹಾಗೂ ಇದಕ್ಕೆ ಬೇಕಾಗುವ ಉದ್ಯಮಶೀಲತೆ ಇಲ್ಲಿನ ಜನರಲ್ಲಿ ಕಡಿಮೆ ಇದೆ. ಯಾದಗಿರಿಯ ಹಲವಾರು ಉದ್ದಿಮೆಗಳು, ಗುಲಬರ್ಗಾದ ಹತ್ತಿ ಬಟ್ಟೆಯ ಗಿರಣಿ, ಮಿನಿ ಸಿಮೆಂಟ್ ಪ್ಲಾಂಟ್‌ಗಳು ಇಂದು ಮಾರುಕಟ್ಟೆಯ ಸ್ಪರ್ಧೆಯನ್ನು ಎದುರಿಸಲಾರದೆ ನಷ್ಟಕ್ಕೊಳಗಾಗಿ ಮುಚ್ಚಿಹೋಗಿವೆ. ಜಾಗತೀಕರಣ ಹಾಗೂ ಉದಾರೀಕರಣದ ನೀತಿಗಳು ಮುಂದುವರಿದಂತೆ ಈ ಉದ್ಯೋಗವನ್ನೆ ನಂಬಿಕೊಂಡಿರುವವರ ಪರಿಸ್ಥಿತಿ ಇನ್ನು ಗಂಭೀರವಾಗುತ್ತಿದೆ."[೩]

**ಹಿಂದುಳಿದ ಮತ್ತು ಅಲ್ಪಸಂಖ್ಯಾತ ಮಹಿಳೆಯರು**

ಯಾದಗಿರಿ ಜಿಲ್ಲೆಯಲ್ಲಿ ಹಿಂದುಳಿದ ಅಲ್ಪಸಂಖ್ಯಾತ ಮಹಿಳೆಯ ಸ್ಥಿತಿಗತಿ, ಉದ್ಯೋಗ ಅವಕಾಶಗಳ ಬಗ್ಗೆ ಅಧ್ಯಯನ ಮಾಡಿದಾಗ ಇಲ್ಲಿ ಪುರುಷರಿಗೆ ನಿರಂತರ ಉದ್ಯೋಗಾವಕಾಶ ಸಿಗುವುದೇ ಕಷ್ಟವಿರುವಾಗ ಇನ್ನು ಮಹಿಳೆಯರಿಗೆ ಉದ್ಯೋಗಾವಕಾಶಗಳು ವಿರಳವೆಂದೇ ಹೇಳಬಹುದು. ಅದರಲ್ಲೂ ಅಲ್ಪಸಂಖ್ಯಾತರ, ಹಿಂದುಳಿದ, ದಲಿತ, ಕೃಷಿ ಕಾರ್ಮಿಕ ಮಹಿಳೆಯರಂತೂ ಉದ್ಯೋಗಾವಕಾಶವಿಲ್ಲದೆ ಸಂಕಷ್ಟದಲ್ಲಿದ್ದು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಶತಮಾನಗಳಿಂದಲೂ ಈ ವರ್ಗದ ಜನರು ಹೊಲಿಗೆ, ನೂಲು, ನೇಯ್ಗೆ, ಬಿದರಿ ಕಲೆ, ಎಂಬ್ರಾಯ್‌ಡರಿ, ಬಟ್ಟೆಗೆ ಬಣ್ಣ ಹಾಕುವಿಕೆ, ಮುಂತಾದ ದೇಶೀಯ ಗುಡಿ ಕೈಗಾರಿಕೆಗಳನ್ನು ತಮ್ಮ ತಮ್ಮ ಮನೆಯಲ್ಲಿದ್ದುಕೊಂಡೇ ಮಾಡುತ್ತಿದ್ದಾರೆ.

ಆದರೆ ಕಾಲಕ್ರಮೇಣ ಬೃಹತ್ ಕಾರ್ಖಾನೆಗಳ ಸ್ಥಾಪನೆ ಹಾಗೂ ಉತ್ಪಾದನೆಗಳಲ್ಲಿ ಯಂತ್ರಗಳ ಬಳಕೆಯಿಂದಾಗಿ ಗುಡಿಕೈಗಾರಿಕೆಗಳು ಮುಚ್ಚಲ್ಪಟ್ಟು ಪುರುಷರಿಗೆ ಉದ್ಯೋಗವಿಲ್ಲದಂತಾಯಿತು. ಇಂತಹ ಪರಿಸ್ಥಿತಿಯಲ್ಲಿ ಹೆಣ್ಣುಮಕ್ಕಳಿಗೂ ನಿರುದ್ಯೋಗದಂತಹ ಸಮಸ್ಯೆ ಉಂಟಾದವು. ಆರ್ಥಿಕ ಪರಿಸ್ಥಿತಿಯ ದೃಷ್ಟಿಯಿಂದ ನೋಡಿದಾಗ ಇಲ್ಲಿನ ಕೃಷಿ ಮತ್ತು ಇತರ ದಿನಕೂಲಿ ಕಾರ್ಮಿಕರಿಗೆ ಅತಿ ಕಡಿಮೆ ಕೂಲಿ ಸಿಗುತ್ತಿದ್ದು, ಕುಟುಂಬದಲ್ಲಿ ಒಬ್ಬರ ದುಡಿಮೆ ಸಾಲದೆ ಸಂಸಾರ ಸಾಗಿಸಲು ಪುರುಷರು ಮಹಿಳೆಯರಿಬ್ಬರೂ ದುಡಿಯಲೇಬೇಕಾದ ಅನಿವಾರ್ಯತೆ ಉಂಟಾಯಿತು. ಬೆಲೆಗಳ ಹೆಚ್ಚಳದಿಂದಾಗಿ ಜೀವನ ನಿರ್ವಹಣೆಯ ವೆಚ್ಚ ಏರುತ್ತಿದ್ದು, ಆ ಮಟ್ಟದಲ್ಲಿ ಕೂಲಿಯ ದರದಲ್ಲಿ ಮಾತ್ರ ಹೆಚ್ಚಳವಾಗಿಲ್ಲ. ಇದರ ಪರಿಣಾಮ ನೇರವಾಗಿ ಮಹಿಳೆಯರ ಮೇಲೆ ಬೀಳುತ್ತಿದೆ. ಸ್ಥಳೀಯವಾಗಿ ಉದ್ಯೋಗ ಸಿಗದಿದ್ದಾಗ ಜೀವನ ನಿರ್ವಹಣೆಗೆ ಪುರುಷರು ಮನೆ ಬಿಟ್ಟು ದುಡಿಯಲು ತಿಂಗಳುಗಟ್ಟಲೇ ಪರ ಊರಿಗೆ ಹೋದಾಗ ಇಲ್ಲಿ ಮಹಿಳೆಯರು ಮನೆ, ಮಕ್ಕಳು ಜೀವನ ನಿರ್ವಹಣೆ, ಸಾಲ ಸೋಲ ಸಂಕಷ್ಟದಲ್ಲಿ ಸಿಲುಕಿ ಸಂಸಾರ ನಿಭಾಯಿಸುವ ಒತ್ತಡದಲ್ಲಿ ಬದುಕಬೇಕಾಗುತ್ತಿದೆ.

ಇನ್ನೊಂದು ಕಡೆ ಇಲ್ಲಿನ ಹಿಂದುಳಿದ, ಅಲ್ಪಸಂಖ್ಯಾತ ಮಹಿಳೆಯರ ಶೈಕ್ಷಣಿಕ. ಸ್ಥಿತಿಗಳನ್ನು ನೋಡಿದರೆ ಇವರ ಬದುಕಿನ ವಾಸ್ತವ ಚಿತ್ರ ದೊರೆಯುತ್ತದೆ. ಇತ್ತೀಚೆಗೆ ಮಹಿಳೆಯರು ಅದರಲ್ಲೂ ಗ್ರಾಮೀಣ ಭಾಗದ ಮಹಿಳೆಯರಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದ್ದು ಅವರಲ್ಲಿ

ಹೆಚ್ಚೆಚ್ಚು ಓದಬೇಕು, ಬರೆಯಬೇಕು, ಉದ್ಯೋಗಕ್ಕೆ ಸೇರಬೇಕು ಎನ್ನುವ ಆಸೆ ಇತ್ತೀಚೆಗೆ ಹೆಚ್ಚಾಗಿ ಕಂಡುಬರುತ್ತಿದೆ. ಗ್ರಾಮೀಣ ಭಾಗದ ಹೆಚ್ಚಿನ ವಿದ್ಯಾರ್ಥಿನಿಯರು ಶಿಕ್ಷಕಿಯರಾಗುವ ಕನಸಿನೊಂದಿಗೆ ಡಿ.ಎಡ್., ಬಿ.ಎಡ್. ಓದುವುದು ಅವರ ಮೊದಲ ಆಯ್ಕೆ, ಆದರೆ ಸರಕಾರದ ಕೋಟಾದಲ್ಲಿ ಸಿಗುವ ಸೀಟುಗಳು ಕಡಿಮೆ ಇರುವುದರಿಂದ ದುಬಾರಿ ಶುಲ್ಕ ತೆತ್ತು ಖಾಸಗಿ ಸಂಸ್ಥೆಗಳಲ್ಲಿ ಸೇರಲು ಇವರಿಗೆ ಆರ್ಥಿಕ ಸಮಸ್ಯೆ ಅಡ್ಡ ಬರುತ್ತಿದೆ. ಸರಕಾರಿ ಕಾಲೇಜುಗಳ ಸೀಟುಗಳಿಗಿಂತ ನಾಲ್ಕುಪಟ್ಟು ಹೆಚ್ಚು ಖಾಸಗಿ ಕಾಲೇಜಿನ ಸೀಟುಗಳಿವೆ. ಅದರಲ್ಲೂ ಪೋಷಕರಿಗೆ ಹುಡುಗ ಮತ್ತು ಹುಡುಗಿಯರಿಗೆ ವಿದ್ಯೆ ಕೊಡಿಸುವ ಆಯ್ಕೆಯ ಪ್ರಶ್ನೆ ಬಂದಾಗ, ಇಲ್ಲಿ ಹುಡುಗರಿಗೆ ಪ್ರಾಧ್ಯಾನತೆ ಕೊಟ್ಟು ಶಿಕ್ಷಣ ಕೊಡಿಸುತ್ತಾರೆ. ಇನ್ನು ಈ ವರ್ಗದವರಿಗೆ ಉನ್ನತ ವ್ಯಾಸಂಗ ಮಾಡುವ ಮೆಡಿಕಲ್ ಹಾಗೂ ಇಂಜಿನಿಯರಿಂಗ್ ಶಿಕ್ಷಣ ಪಡೆಯುವುದಂತೂ ಕನಸಿನ ಮಾತಾಗಿದೆ. ಏಕೆಂದರೆ ಲಕ್ಷಾಂತರ ರೂ. ಹಣ ಕೊಟ್ಟು ಸೀಟು ಕೊಡಿಸುವ, ನಾಲ್ಕಾರು ವರ್ಷ ಓದಿಸುವ ಸಾಮರ್ಥ್ಯ ಇವರ ಪೋಷಕರಿಗೆ ಇಲ್ಲ. ಇತ್ತೀಚೆಗೆ ವಿವಿಧ ಸಂಘ-ಸಂಸ್ಥೆಗಳ ಸಹಕಾರದಿಂದ ಕೆಲವರು ಉನ್ನತ ಶಿಕ್ಷಣ ಪಡೆಯುತ್ತಿರುವುದು ಕಂಡು ಬರುತ್ತಿದೆಯಾದರೂ ಅವರ ಸಂಖ್ಯೆ ಬೆರಳಣಿಕೆಯಷ್ಟಿದೆ.

ಹೀಗೆ ಶಿಕ್ಷಣ, ಉದ್ಯೋಗದಿಂದ ವಂಚಿತರಾಗಿ ಬಡತನದಲ್ಲೇ ಉಳಿಯುವ ಈ ವರ್ಗದ ಮಹಿಳೆಯರು ಮತ್ತೆ ಅದೇ ಕೂಲಿ, ಕಾಮಗಾರಿ ಕೆಲಸಗಳಿಗೆ ಹೋಗುತ್ತಾರೆ. ಜೀವನೋಪಾಯಕ್ಕಾಗಿ ಯಾವ ಕೆಲಸವಾದರೂ ಸರಿ ಎನ್ನುವ ಸ್ಥಿತಿಗೆ ಬಂದಿರುತ್ತಾರೆ. "ಸ್ಥಳೀಯವಾಗಿ ಅವಕಾಶಗಳಿಲ್ಲ ದಿದ್ದಾಗ, ಉದ್ಯೋಗ ಅರಸಿ ವಲಸೆ ಹೋಗುವುದು ಸಾಮಾನ್ಯವಾಗಿದೆ. ಹೀಗೆ ವಲಸೆ ಹೋದವರಿಗೆ ಪಟ್ಟಣಗಳಲ್ಲಿ ನಿರಂತರ ಕೂಲಿ ಕೆಲಸ ಸಿಗದಿದ್ದಾಗ ಜೀವನ ಸಾಗಿಸುವ ಸಂಕಷ್ಟಕ್ಕೀಡಾಗುತ್ತಾರೆ. ಹೀಗೆ ಇಲ್ಲಿನ ಹಿಂದುಳಿದ ಅಲ್ಪಸಂಖ್ಯಾತ ಮಹಿಳೆಯರ ಸಮಸ್ಯೆಗಳು ಬೇರೆ ಭಾಗದ ಸಮಸ್ಯೆಗಳಿಗಿಂತ ಬಹಳ ವಿಭಿನ್ನವಾಗಿದೆ."[೪]

### ಬಾಲ್ಯವಿವಾಹ

ಯಾದಗಿರಿ ಜಿಲ್ಲೆಯಲ್ಲಿ ಕಂಡುಬರುವ ಅನೇಕ ಸಾಮಾಜಿಕ ಸಮಸ್ಯೆಗಳಲ್ಲಿ ಬಾಲ್ಯವಿವಾಹ ಅತಿ ದೊಡ್ಡ ಸಮಸ್ಯೆಯಾಗಿದೆ. ಕರ್ನಾಟಕದಲ್ಲಿಯೇ ಅತಿ ಹೆಚ್ಚು ಬಾಲ್ಯವಿವಾಹಗಳು ಜರುಗುವುದು ಯಾದಗಿರಿ ಜಿಲ್ಲೆಯಲ್ಲಿ, ಇಲ್ಲಿನ ವಾಸ್ತವಿಕ ಪರಿಸ್ಥಿತಿಯನ್ನು ಅವಲೋಕಿಸಿದಾಗ ಯಾದಗಿರಿ ಜಿಲ್ಲೆಯಲ್ಲಿ ಅನೇಕ ಕುಟುಂಬದಲ್ಲಿ ಬಾಲ್ಯವಿವಾಹಗಳು ಜರುಗುತ್ತಲೇ ಇರುತ್ತವೆ. ಆದರೆ ಇದರ ಕಡೆ ಗಮನ ಹರಿಸದೆ ಸಾಮೂಹಿಕ ವಿವಾಹಗಳಲ್ಲಿ ಒಂದೊಂದು ಅಪ್ರಾಪ್ತರನ್ನು ಹಿಡಿದು ಅದನ್ನು ಸರಕಾರಕ್ಕೆ, ಸಮಾಜಕ್ಕೆ ತೋರಿಸುವುದಷ್ಟೆ ನಡೆದಿದೆ. ಆದರೆ ಹೆಚ್ಚು ಕುಟುಂಬದಲ್ಲಿ ಬಾಲ್ಯವಿವಾಹಗಳಾಗುತ್ತಿವೆ. ಆದರೆ ಅದನ್ನು ನಿಲ್ಲಿಸಲು ಯಾರಿಗೂ ಸಾಧ್ಯವಾಗುತ್ತಿಲ್ಲ. ಈ ಜಿಲ್ಲೆಯ ಶಹಪುರ, ಸುರಪುರಗಳನ್ನು ಮೊದಲುಗೊಂಡು ಗುರುಮಠಕಲ್ ತುದಿಯವರೆಗೆ ಕಂಡುಬರುವ ಸ್ಥಿತಿ ಎಂಥವರನ್ನು ಬೆಚ್ಚಿ ಬೀಳಿಸುತ್ತದೆ. ಅದರಲ್ಲೂ ಹಳ್ಳಿಗಳಿಗೆ ಹೋಗಿ ನೋಡಿದ್ದಾದರೆ ಎಂಟು, ಹತ್ತು ವರ್ಷದ ಹೆಣ್ಣುಮಕ್ಕಳ ಕುತ್ತಿಗೆಯಲ್ಲಿ ತಾಳಿ ಇರುವುದು ಕಂಡುಬರುತ್ತದೆ.

ಸುಮಾರು ೧೦೦ಕ್ಕೆ ೪೦ ಅಪ್ರಾಪ್ತ ಹೆಣ್ಣುಮಕ್ಕಳಲ್ಲಿ ತಾಳಿಗಳು ಕಂಡುಬರುತ್ತದೆ. ಮೇಲ್ಜಾತಿಯಲ್ಲಿರುವ ಅಥವಾ ಸ್ವಲ್ಪ ಸುಶಿಕ್ಷಿತರನ್ನು ಹೊರತುಪಡಿಸಿದರೆ ಹೆಚ್ಚು ಕಡಿಮೆ ಎಲ್ಲಾ ಬಡವರ ಅಪ್ರಾಪ್ತ ಮಕ್ಕಳ ಹೆಣ್ಣು ಶಿಶುವಿನ ಕೊರಳಲ್ಲಿ ತಾಳಿ ಇರುವುದನ್ನು ನೋಡುತ್ತೇವೆ. ಹೀಗೆ ಸಾಮೂಹಿವಾಗಿ ಈ ಸಮಸ್ಯೆಗೆ ನಮ್ಮ ಸರಕಾರಗಳಿಂದ ಪರಿಹಾರಗಳನ್ನು ರೂಪಿಸಲು ಸಾಧ್ಯವಾಗುತ್ತಿಲ್ಲ. ಇದನ್ನು ಹೋರಾಟದ ರೂಪದಲ್ಲಿ ನಿಲ್ಲಿಸಲು ಹೊರಟರೆ ಆ ತಂದೆ ತಾಯಿಗಳು ಕೇಳುವಂತಹ ಪ್ರಶ್ನೆಗಳಿಗೆ ಉತ್ತರವಿರುವುದಿಲ್ಲ. "ನಮ್ಮ ಮಗಳನ್ನು ಪ್ರಾಪ್ತವಯಸ್ಸಿಗೆ ಬಂದ ನಂತರ ಮದುವೆ ಮಾಡಿ ಅಂತ ನೀವೇನೋ ಹೇಳುತ್ತೀರಿ, ಆದರೆ ಈಗ ಬಾಲ್ಯದೊಳಗೆ ಏನೂ ವರದಕ್ಷಿಣೆ ಇಲ್ಲದೆ ಹೆಚ್ಚು ಆಡಂಬರವಿಲ್ಲದೆ, ಹೆಚ್ಚು ಖರ್ಚಿಲ್ಲದೆ, ಹೇಗೋ ಮದುವೆ ನಡೆದು ಹೋಗುತ್ತದೆ. ಆದರೆ ದೊಡ್ಡವರಾದ ಮೇಲೆ ವರದಕ್ಷಿಣೆ ಅಂತ ಕೊಡಬೇಕು, ಖರ್ಚು ಮಾಡಿ ಮದುವೆ ಮಾಡಬೇಕು. ಅದಕ್ಕಿಂತ ಹೆಚ್ಚಾಗಿ ಅವರು ಹದಿನೆಂಟು ವರ್ಷದವರಾಗುವವರೆಗೂ ಅವರನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯಬೇಕು, ಇದು ನಮ್ಮ ಕಡೆಯಿಂದ ಸಾಧ್ಯವಿಲ್ಲ. ಹಾಗಾಗಿ ಈಗಲೇ ನಾವು ಬಾಲ್ಯ ವಿವಾಹ ಮಾಡಿ ಮುಗಿಸುತ್ತೇವೆ" ಎನ್ನುವ ಮನೋಭಾವನೆ ಕೆಳವರ್ಗದವರಲ್ಲಿ ಭಯಾನಕವಾಗಿ ಬೇರೂರಿದೆ. ಒಂದು ಕಡೆ ಮೇಲ್ಜಾತಿಯವರು ಹೆಣ್ಣಿನ ಭದ್ರತೆ ಬಗ್ಗೆ ಅಷ್ಟಾಗಿ ಚಿಂತಿತರಾಗಿಲ್ಲ. ಅವರು ಹುಡುಗಿಯರನ್ನು ಕಾಯುವುದಲ್ಲ, ಅವರನ್ನು ಜಗತ್ತಿಗೆ ಮುಖಾಮುಖಿಯಾಗುವ ರೀತಿಯೊಳಗೆ ಬೆಳೆಸುತ್ತಿದ್ದಾರೆ.

ಇನ್ನು ಹೆಣ್ಣುಮಕ್ಕಳನ್ನು ಬಾಲ್ಯದಲ್ಲೆ ವಿವಾಹಕ್ಕೆ ತಳ್ಳುವುದರಿಂದ ಅವಳಿಗೆ ಜೀವನದಲ್ಲಿ ತನ್ನ ಆಯ್ಕೆಯ, ತನ್ನ ಇಚ್ಛೆಯ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾಳೆ. ತನಗೆ ಬುದ್ಧಿ, ಬರುವ ಮುಂಚೆಯೇ ಬೇರೊಬ್ಬನನ್ನು ಬೇರೊಂದು ಕುಟುಂಬವನ್ನು ತನ್ನ ಸರ್ವಸ್ವವನ್ನಾಗಿ ಸೀಕರಿಸಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಇನ್ನು ಚಿಕ್ಕಂದಿನಿಂದಲೇ ವಿವಾಹದ ಬಂಧನಕ್ಕೆ ಒಳಗಾಗುವುದರಿಂದ ಇತ್ತ ಹೆಣ್ಣು ಮಕ್ಕಳಂತೆ ತನ್ನ ಬಾಲ್ಯವನ್ನು ಅನುಭವಿಸುವ ತನ್ನಿಷ್ಟದಂತೆ ಬದುಕುವ, ಭವಿಷ್ಯದ ಜೀವನವನ್ನು ರೂಪಿಸಿಕೊಳ್ಳುವ ಅವಕಾಶದಿಂದ ವಂಚಿತಳಾಗುತ್ತಿದ್ದಾಳೆ. ಇವಳಿಗೆ ಈಗಾಗಲೇ ವಿವಾಹವಾಗಿದೆ ಎನ್ನುವ ಕಾರಣದಿಂದ ಸರಿಯಾದ ಶಿಕ್ಷಣವನ್ನು ನೀಡದೇ ಶಾಲೆಗೆ ಕಳುಹಿಸದೆ ಅವಳನ್ನು ಅನಕ್ಷರತೆಗೆ, ಮೌಢ್ಯಕ್ಕೆ ತಳ್ಳಲಾಗುತ್ತದೆ. ಮುಂದೆ ವಯಸ್ಸಿನಲ್ಲಿ ವಿವಾಹವಾಗುವ ಇವಳು ಪ್ರಾಪ್ತಳಾದ ನಂತರ ಒಂದು ವೇಳೆ ಪತಿಯನ್ನು ಕಳೆದುಕೊಂಡಳೆಂದರೆ ಅವಳ ಜೀವನ ನರಕಯಾತನೆಯಾಗುತ್ತದೆ. ಒಂದು ಕಡೆ ಅವಳ ಪುನರ್‌ವಿವಾಹಕ್ಕೆ ನಮ್ಮ ಸಮಾಜ ಅಷ್ಟು ಸುಲಭವಾಗಿ ಸಮ್ಮತಿ ನೀಡುವುದಿಲ್ಲ; ಇನ್ನು ಸ್ವತಂತ್ರಳಾಗಿ ಬದುಕುವ ವಿದ್ಯೆ, ಬುದ್ಧಿ, ಸಾಮರ್ಥ್ಯ ಅವಳಿಗಿರುವುದಿಲ್ಲ.

ಹೀಗಾಗಿ ಅವಳು ಸಾಮಾಜಿಕ ಸ್ಥಾನಮಾನ, ಆರ್ಥಿಕ ಅಭದ್ರತೆಯ ಜೊತೆಗೆ ಲೈಂಗಿಕ ಶೋಷಣೆಗಳಿಗೂ ಒಳಪಡಬಹುದಾದ ಸ್ಥಿತಿಯಿದೆ. ವಿವಾಹ ಬಂಧನದಲ್ಲಿ ಗಂಡನ ಅಧೀನದಲ್ಲಿ ದ್ದವಳು ನೇರವಾಗಿ ಕುಟುಂಬದ ಅಥವಾ ಸಮಾಜದ ಅಧೀನದಲ್ಲಿ ಬಂಧಿತಳಾಗುತ್ತಾಳೆ. ಕೆಲವೊಮ್ಮೆ ಸುತ್ತಮುತ್ತಲಿನ ಕೆಲವರು ಆಕೆಯ ಮೇಲೆ ಒಡೆತನವನ್ನು ಹೊಂದಲು ಹವಣಿಸುತ್ತಾರೆ.

ಅಂತಿಮವಾಗಿ ಇದು ಅವಳ ಆತ್ಮಹತ್ಯೆಗೂ ಕಾರಣವಾಗುತ್ತದೆ. ಹೀಗಾಗಿ ಬಾಲ್ಯವಿವಾಹ ಎನ್ನುವುದು ಒಂದೆಡೆ ಪಾವಿತ್ರ್ಯವನ್ನು ಅವಳ ಮೇಲೆ ಹೇರುತ್ತಲೇ, ಜೊತೆ ಜೊತೆಗೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಭಯ ಅಸಹಾಯಕತೆಯನ್ನು ಏರ್ಪಡಿಸುತ್ತದೆ. ಸ್ವಾತಂತ್ರ್ಯದ ನಂತರದ ಹಲವು ದಶಕಗಳವರೆಗೂ ಬಾಲ್ಯವಿವಾಹವನ್ನು ತಡೆಗಟ್ಟುವ ಯಾವ ಪರಿಣಾಮಕಾರಿ ಕಾನೂನಿನ ಪ್ರಯತ್ನಗಳು ನಡೆಯಲಿಲ್ಲ. ಬಾಲ್ಯವಿವಾಹ ನಿಷೇಧ ಕಾಯ್ದೆ ಜಾರಿಯಲಿದ್ದರೂ ಅದು ಕಾನೂನಿನ ಪುಸ್ತಕದಲ್ಲಿನ ಹೇಳಿಕೆಗೆ ಮಾತ್ರ ಸೀಮಿತವಾಗಿದೆ. ಅದರಲ್ಲೂ ವಿವಾಹವೆಂಬುದು ಕೌಟುಂಬಿಕ ಧಾರ್ಮಿಕ ಆಚರಣೆಯ ಸಮರೂಪವಾದ್ದರಿಂದ ಅದನ್ನು ಕಾನೂನಿನ ಮೂಲಕ ನಿಷೇಧದ ಮೂಲಕ ಹಿಡಿತವನ್ನು ಹೊಂದುವುದು ಸುಲಭದ್ದಾಗಿಲ್ಲ.

"೧೯೭೮ರಲ್ಲಿ ಸರಕಾರ ಕಾನೂನಿಗೆ ತಿದ್ದುಪಡಿ ತಂದು ಮದುವೆಯಾಗುವ ಹೆಣ್ಣುಗಂಡಿನ ವಯಸ್ಸು ೧೮-೨೧ ಎಂದು ನಿರ್ಧರಿಸಿದೆ. ಅದರಲ್ಲೂ ಬಾಲ್ಯವಿವಾಹ ನಿಷೇಧವು, ಮಹಿಳಾ ಸುಧಾರಣೆಯೊಂದಿಗೆ ಹಲವಾರು ಭಿನ್ನ ಸಾಮಾಜಿಕ ಸಮಸ್ಯೆಗಳಿಂದ ಬಿಡುಗಡೆ ನೀಡುವ ಅಂಶವಾಗಿರುವುದರಿಂದ ಸರಕಾರ ಹಲವಾರು ಪ್ರಯತ್ನಗಳನ್ನು ಕೈಗೊಂಡಿದೆ. ಹಲವಾರು ಮಹಿಳೆ ಸಂಘಟನೆಗಳು, ಸಾಮೂಹಿಕ ವಿವಾಹಗಳ ಮೇಲೆ ಹದ್ದಿನ ಕಣ್ಣಿಟ್ಟಿವೆ. ಬಾಲ್ಯವಿವಾಹ ಸಮಾಜಕ್ಕೆ ಅಂಟಿಕೊಂಡಿರುವ ಅನಿಷ್ಟ ಪದ್ಧತಿ. ಇದರ ನಿರ್ಮೂಲನೆಗೆ ಪಾಲಕರು, ಪೋಷಕರು, ಪ್ರಜ್ಞಾವಂತ ಯುವಕರು, ನಾಗರಿಕರು ಮುಂದಾಗಬೇಕು. ಗ್ರಾಮೀಣ ಭಾಗದಲ್ಲಿ ಮೂಢನಂಬಿಕೆಯೇ ಬಾಲ್ಯವಿವಾಹಕ್ಕೆ ಕಾರಣವಾಗಿದೆ. ಹೀಗಾಗಿ ಇವರು ಮಕ್ಕಳಿಗೆ ಮೊದಲು ಶಿಕ್ಷಣ ನೀಡಬೇಕು. ಸರಕಾರಗಳು ಅಗತ್ಯ ಯೋಜನೆಗಳನ್ನು ರೂಪಿಸಿ ಅವರ ಮುಂದಿನ ಉತ್ತಮ ಭವಿಷ್ಯಕ್ಕೆ ದಾರಿ ಮಾಡಿ ಕೊಡಬೇಕು. ಈ ಪದ್ಧತಿ ಆಚರಿಸುವವರಿಗೆ ಕಠಿಣ ಶಿಕ್ಷೆ ವಿಧಿಸಬೇಕು. ಮಹಿಳಾ ಸಂಘಟನೆಗಳು, ಸಂಘಸಂಸ್ಥೆಗಳು ಗ್ರಾಮೀಣ ಪ್ರದೇಶದ ಜನರಿಗೆ ಇದರ ಬಗ್ಗೆ ತಿಳುವಳಿಕೆ ನೀಡಬೇಕು. ಆಗ ಮಾತ್ರ ಈ ಪದ್ಧತಿ ನಿಯಂತ್ರಣಕ್ಕೆ ಬರಲು, ನಿರ್ಮೂಲನೆ ಆಗಲು ಸಾಧ್ಯ ವಾಗುತ್ತದೆ. ಇತ್ತೀಚೆಗೆ ಸರಕಾರ ಮತ್ತು ಸಂಘಸಂಸ್ಥೆಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸಹಯೋಗದಲ್ಲಿ ಬಾಲ್ಯವಿವಾಹ ನಿಷೇಧ ಅರಿವು, ಆಂದೋಲನಗಳು, ಬಾಲ್ಯವಿವಾಹ ನಿಷೇಧ ಲಾಂಛನಗಳ ಬಿಡುಗಡೆಯೊಂದಿಗೆ ಆರಂಭವಾಗಿರುವುದು ಉತ್ತಮ ಬೆಳವಣಿಗೆಯಾಗಿದೆ."[೫]

**ಶುದ್ಧ ಕುಡಿಯುವ ನೀರಿನ ಸಮಸ್ಯೆ**

ಯಾದಗಿರಿ ಜಿಲ್ಲೆಯಲ್ಲಿ ಬಹುದೊಡ್ಡ ಸಮಸ್ಯೆಯೆಂದರೆ ಶುದ್ಧ ಕುಡಿಯುವ ನೀರಿನ ಸಮಸ್ಯೆ. ಇತ್ತೀಚೆಗೆ ಜಿಲ್ಲೆಯಲ್ಲಿ ಶುದ್ಧ ಕುಡಿಯುವ ನೀರಿಗಾಗಿ ಮಹಿಳೆಯರು ಖಾಲಿ ಕೊಡಗಳನ್ನು ಹಿಡಿದು ಗ್ರಾಮ ಪಂಚಾಯಿತಿಗಳ ಮುಂದೆ ಹೋರಾಟ ಮಾಡಿದರು. ಎಂಬ ವರದಿಗಳು ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿವೆ. ಈ ಜಿಲ್ಲೆಯಲ್ಲಿ ಬೇಸಿಗೆ ಪ್ರಾರಂಭವಾಗುತ್ತಿದ್ದಂತೆ ನೀರಿನ ತೊಂದರೆ ಹೇಳತೀರದು. ಬೇಸಿಗೆ ಕಾಲದಲ್ಲಿ ಕುಡಿಯುವ ನೀರಿನ ಸಮಸ್ಯೆ ಮತ್ತಷ್ಟು ಹೆಚ್ಚಾಗಿ ಕುಡಿಯುವ ನೀರಿಗಾಗಿ ಮಹಿಳೆಯರು ಪರದಾಡುವ ಸ್ಥಿತಿ ನಿರ್ಮಾಣವಾಗುತ್ತದೆ. ಕುಡಿಯುವ ನೀರಿನ ಸಮಸ್ಯೆ ನಿವಾರಣೆಗೆ ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗಿದೆ. ಮತಕ್ಷೇತ್ರದಲ್ಲಿ ಎಲ್ಲಿಯೂ

ನೀರಿಗೆ ಸಮಸ್ಯೆಯಿಲ್ಲ. ಎಲ್ಲಾ ಸಮಸ್ಯೆಗಳಿಗೆ ಪರಿಹಾರವನ್ನು ಕಲ್ಪಿಸಲಾಗಿದೆ. ಈ ಬಾರಿ ಅಷ್ಟೇನು ಸಮಸ್ಯೆಯಿಲ್ಲ. ಎನ್ನುವುದು ಅಧಿಕಾರಿಗಳ ವಾದ. ಆದರೆ ಇಲ್ಲಿ ಮಾತ್ರ ನೀರಿಗಾಗಿ ಮಹಿಳೆಯರು ಪರದಾಡುವುದು ತಪ್ಪಿಲ್ಲ. ಅದರಲ್ಲೂ ಪ್ರಮುಖವಾಗಿ ಗಡಿಭಾಗಕ್ಕೆ ಹೊಂದಿಕೊಂಡಿರುವ ಗ್ರಾಮಗಳ ಪರಿಸ್ಥಿತಿಯಂತೂ ಹೇಳತೀರದಷ್ಟು ಹದಗೆಟ್ಟು, ಮಹಿಳೆಯರು ಸುಮಾರು ಎರಡು ಮೂರು ಕಿ.ಮೀ. ದೂರದವರೆಗೆ ಕ್ರಮಿಸಿ ನೀರು ತರುವ ಸ್ಥಿತಿ ಉಂಟಾಗಿದೆ. ಕುಡಿಯುವ ನೀರಿಗಾಗಿ ಗ್ರಾಮದಿಂದ ಹೊರಗಡೆಯಿರುವ ದೊಡ್ಡ ಬಾವಿ ಮತ್ತು ಹೊಲಗಳಲ್ಲಿ ಹಾಕಿದ ಕೊಳವೆ ಬಾವಿಗಳಿಗೆ ಹೋಗಿ ನೀರು ತರುವ ಸ್ಥಿತಿ ಇದೆ. ಇಲ್ಲಿನ ಮಹಿಳೆಯರಿಗೆ ನೀರು ತರುವುದೇ ದಿನದ ಕಾಯಕವಾಗಿದೆ. ಆದರೆ ಈ ಸಂಬಂಧಪಟ್ಟ ತಾಲೂಕು ಪಂಚಾಯಿತಿ ಹಾಗೂ ಗ್ರಾಮ ಪಂಚಾಯಿತಿಗಳ ಅಧಿಕಾರಿಗಳಿಗೆ ಮಾತ್ರ ಇದರ ಬಗ್ಗೆ ಗಮನವೇ ಇಲ್ಲವಾಗಿ ರುವುದು ಅಷ್ಟೇ ವಿಚಿತ್ರ ಸಂಗತಿಯಾಗಿದೆ.

ಸರಕಾರವು ಗ್ರಾಮಾಂತರ ಪ್ರದೇಶದಲ್ಲಿನ ಜನತೆ ಬೇಸಿಗೆಯಲ್ಲಿ ಕುಡಿಯುವ ನೀರಿನ ಸಮಸ್ಯೆಗೆ ಒಳಗಾಗದಿರಲಿ ಎಂದು ಹಣದ ರಾಶಿಯನ್ನೇ ಹರಿಸುತ್ತದೆ. ಆದರೆ ಅದು ಸರಿಯಾದ ರೀತಿಯಲ್ಲಿ ಬಳಕೆಯಾಗದೇ ಇರುವ ಕಾರಣ ಇಲ್ಲಿ ಪ್ರತಿ ವರ್ಷ ಕುಡಿಯುವ ನೀರಿಗಾಗಿ ಪರದಾಟ ತಪ್ಪಿಲ್ಲ. ಗ್ರಾಮದ ಜನತೆಗೆ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಲಾಗುತ್ತದೆ ಎಂದು ಜಿಲ್ಲಾಡಳಿತ ಹೇಳುತ್ತದೆ. ಆದರೆ ಯಾವ ಗ್ರಾಮಗಳಲ್ಲಿ ಈ ಸೌಲಭ್ಯ ಒದಗಿಸಲಾಗಿದೆ ಎನ್ನುವ ಪ್ರಶ್ನೆ ಜನರಲ್ಲಿದೆ.

ತಾಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕುಡಿಯುವ ನೀರಿನ ಸಮಸ್ಯೆಯಿಂದ ಜನತೆ ಪರದಾಡುತ್ತಿದ್ದಾರೆ. "ನೀರಿನ ಸಮಸ್ಯೆಯನ್ನು ಪರಿಹರಿಸಬೇಕಾದ ಪಂಚಾಯಿತಿಯ ಅಭಿವೃದ್ಧಿ ಅಧಿಕಾರಿಗಳ ಪತ್ತೆಯೇ ಇಲ್ಲ. ಮೊಬೈಲ್ ಫೋನ್‌ಗಳನ್ನು ಸಹ ಸ್ವಿಚ್ ಆಫ್ ಮಾಡಿಕೊಳ್ಳುವ ಇವರು ಯಾರ ಸಂಪರ್ಕಕ್ಕೂ ಸಿಗುತ್ತಿಲ್ಲ. ಇಂತಹ ಅಧಿಕಾರಿಗಳನ್ನು ಎಲ್ಲಿ ಹುಡುಕಾಡುವುದು ಎನ್ನುತ್ತಾರೆ ಇಲ್ಲಿನ ಜನತೆ. ಒಟ್ಟಾರೆಯಾಗಿ ಈ ಜಿಲ್ಲೆಯಲ್ಲಿ ಬೇಸಿಗೆಯ ಬಿಸಿಲಿನ ತಾಪಕ್ಕೆ ಕೆರೆ–ಬಾವಿಗಳ ನೀರು ಬತ್ತಿ ಹೋಗುತ್ತವೆ. ಇಲ್ಲಿ ಮಾತ್ರ ನೀರು ಇದ್ದರೂ ಬಳಸಿಕೊಳ್ಳಲು ಆಗದಂತಾಗಿದೆ."[5] ಗ್ರಾಮಸ್ಥರು ಮತ್ತು ಮಹಿಳೆಯರು ಪರದಾಡುವಂತ, ಪರಿಸ್ಥಿತಿ ನಿರ್ಮಾಣವಾಗಿದೆ. ಇದಕ್ಕೆ ಸಂಬಂಧಪಟ್ಟ ಜಿಲ್ಲಾಡಳಿತ ಈ ಕಡೆ ಗಮನ ಹರಿಸಿ ತ್ವರಿತವಾಗಿ ನೀರಿನ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ.

**ರೈತರ ಸ್ಥಿತಿಗತಿ**

ಇತ್ತೀಚೆಗೆ ಯಾದಗಿರಿ ಜಿಲ್ಲೆಯಾದ್ಯಂತ ಭೂಕಾಯ್ದೆ ಅಡಿ ಬರುವ ರೈತರ ಸಮಸ್ಯೆಗಳ ಶೀಘ್ರ ವಿಲೇವಾರಿ, ವಿದ್ಯುತ್ ಸಮಸ್ಯೆ, ರಸ್ತೆಗಳ ದುಸ್ಥಿತಿ, ನೀರಿನ ಸಮಸ್ಯೆಗಳು ಸೇರಿದಂತೆ ವಿವಿಧ ಬೇಡಿಕೆಗಳ ಈಡೇರಿಕೆಗಾಗಿ ಇಲ್ಲಿನ ಸಂಘಟನೆಗಳು ಹೋರಾಟಗಳನ್ನು ಮಾಡಿದರು. ಶಹಾಪುರ, ಸುರಪುರ ಹಾಗೂ ಯಾದಗಿರಿ ಹೋಬಳಿ ಮಟ್ಟದಲ್ಲಿ ರೈತಾಪಿ ಜನರು ಜಮೀನು ವರ್ಗಾವಣೆಗಾಗಿ ಪರದಾಡುವಂತಹ ಸ್ಥಿತಿ ಬಂದಿದೆ. ಭೂಮಾಪನ ಕಛೇರಿಯೂ ತಮ್ಮ

ಅಧೀನದಲ್ಲಿ ಬರುವುದರಿಂದ ರೈತಾಪಿ ಜನರಿಗೆ ಅನುಕೂಲವಾಗುವಂತೆ ಕಡತಗಳನ್ನು ಶೀಘ್ರ ವಿಲೇವಾರಿ ಮಾಡಲು ಸುತ್ತೋಲೆಯನ್ನು ಹೊರಡಿಸುವಂತೆ ಮನವಿ ಮಾಡಿ ಜಿಲ್ಲೆಯಾದ್ಯಂತ ಪಾರದರ್ಶಕ ಆಡಳಿತ ವ್ಯವಸ್ಥೆಯನ್ನು ತಂದು ಜನ ಸಾಮಾನ್ಯರಿಗೆ ಸೂಕ್ತ ಸೌಲಭ್ಯಗಳು ತಲುಪಬೇಕಾದ ಅವಶ್ಯಕತೆ ಇದೆ. ಈ ನಿಟ್ಟಿನಲ್ಲಿ ಸೂಕ್ತ ಕ್ರಮ ಕೈಗೊಳ್ಳಬೇಕು. "ಸಾರ್ವಜನಿಕರಿಗೆ ಹಾಗೂ ರೈತರಿಗೆ ಎಲ್ಲ ರೀತಿಯ ಸೌಲಭ್ಯಗಳನ್ನು ಒದಗಿಸಬೇಕಾಗಿದೆ. ಜಿಲ್ಲೆಯಾದ್ಯಂತ ರಸ್ತೆಗಳು ಹದಗೆಟ್ಟಿದ್ದು, ಲೋಕೋಪಯೋಗಿ ಇಲಾಖೆ ಹಾಗೂ ಜಿಲ್ಲಾ ಪಂಚಾಯಿತಿ ಇಂಜಿನಿಯರಿಂಗ್ ಇಲಾಖೆಯವರು ಎಚ್ಚೆತ್ತುಕೊಳ್ಳುವಂತೆ ಮಾಡಬೇಕು. ಬರಗಾಲ ಸ್ಥಿತಿಯಲ್ಲಿ ರೈತರಿಗೆ ಸಮರ್ಪಕ ವಿದ್ಯುತ್ ಒದಗಿಸಬೇಕು ಎಂದು ಹೋರಾಟಗಳು ಮಾಡುತ್ತಲೇ ಬಂದಿದ್ದಾರೆ."[೭] ಆದರೆ ಇದುವರೆಗೆ ಯಾವುದೇ ಪ್ರಯೋಜನವಾಗಿಲ್ಲ.

ಯಾದಗಿರಿ ಜಿಲ್ಲೆಯಲ್ಲಿ ಮಳೆಯನ್ನೇ ನಂಬಿರುವ ಹಾಗೂ ೧ರಿಂದ ೨ ಎಕರೆ ಭೂಮಿಯನ್ನು ಮಾತ್ರ ಹೊಂದಿರುವ ಹೆಚ್ಚಿನ ರೈತರು ಗ್ರಾಮೀಣ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. "ತಲ ತಲಾಂತರಗಳಿಂದ ಇವರ ಬದುಕು ಬಡತನದಲ್ಲೇ ಸಾಗಿದೆ. ಮಳೆಯನ್ನೇ ನಂಬಿದ ಇವರ ಕೃಷಿ ಬದುಕು, ಬರ, ಅತಿವೃಷ್ಟಿ, ವಿದ್ಯುತ್ ಅಭಾವ ಮತ್ತು ಸರಕಾರದ ನೀತಿಗಳಿಂದ ಈ ಜನರ ಬದುಕು ಅತಂತ್ರವಾಗಿದೆ. ಸರಕಾರ ರೈತನಿಗೆ ಸಬ್ಸಿಡಿಯ ಆಮೀಷವೊಡ್ಡಿ ರೈತನು ಸಾಲಗಾರನಾಗುವಂತೆ ಮಾಡಿದೆ."[೮] ಸ್ವಾತಂತ್ರ್ಯ ನಂತರದಲ್ಲಿ ದೇಶದ ರೈತರು ಸ್ವಾವಲಂಬಿಗಳಾಗಿ ಬದುಕುವ ಸ್ವಾತಂತ್ರ್ಯವನ್ನೇ ಕಳೆದುಕೊಂಡಿದ್ದಾರೆ. "ಸುಧಾರಿತ ಬೀಜ, ನವೀನ ತಳಿ, ಹೆಚ್ಚಿನ ಇಳುವರಿ ಎಂಬ ಕಂಪನಿಗಳ ಜಾಹೀರಾತು ಮತ್ತು ಪ್ರಚಾರಕ್ಕೆ ಒಳಗಾದ ರೈತರು ದೇಶಿ ತಳಿಗಳನ್ನೇ ಕೈ ಬಿಟ್ಟು, ಹೊಸ ತಳಿಗಳಿಗೆ ಆಕರ್ಷಿತರಾದರು. ರಸಗೊಬ್ಬರ ಬಳಕೆಯಲ್ಲಿ ವಿವೇಚನೆ ಮರೆತು ರೈತರು ಭೂಮಿಯ ಸತ್ವವನ್ನೇ ಹಾಳು ಮಾಡಿಕೊಂಡಿದ್ದಾರೆ. ರೈತರ ಮೇಲೆ ಅವಲಂಬಿತರಾದ ಉಪ ಕುಲಕಸುಬುದಾರರು ತಮ್ಮ ಕಸುಬುಗಳನ್ನು ತೊರೆದು ಇನ್ನಾವುದೋ ಕೆಲಸದಲ್ಲಿದ್ದಾರೆ."[೯] ಹೀಗಾಗಿ ಯಾದಗಿರಿ ಜಿಲ್ಲೆಯ ರೈತರು ಒಂದಲ್ಲಾ ಒಂದು ಸಮಸ್ಯೆಯ ಎದುರಿಸುತ್ತಿದ್ದಾರೆ.

**ಬರ ಸಂದರ್ಭಗಳು**

ಯಾದಗಿರಿ ಜಿಲ್ಲೆ ಎಂದಾಕ್ಷಣ ನೆನಪಿಗೆ ಬರುವುದೇ ಬರಗಾಲದ ನಾಡು ಮತ್ತು ಬಿಸಿಲಿನ ತವರೆಂದು. "ಇಲ್ಲಿನ ಬಿಸಿಲಿನ ತಾಪದ ಬಗ್ಗೆ ಋತುಮಾನಗಳ ಬಗ್ಗೆ ಇಲ್ಲಿನ ಭಾಷೆಯಲ್ಲಿ ಹೇಳಬೇಕೆಂದರೆ ಇವರಿಗೆ ತಿಳಿದಿರುವುದು ೨ ಕಾಲಗಳು. ಒಂದು ಬೇಸಿಗೆ ಕಾಲ, ಇನ್ನೊಂದು ಅತಿ ಬೇಸಿಗೆ ಕಾಲ. ಇಂತಹ ಮಾತು ಅತಿಶೋಕ್ತಿ ಎನಿಸಿದರೂ ಈ ಪ್ರದೇಶಗಳ ಬಿಸಿಲಿನ ತಾಪವನ್ನು ಅನುಭವಿಸಿದವರಿಗೆ ಇದರ ವಾಸ್ತವ ತಿಳಿಯುತ್ತದೆ. ಏಪ್ರಿಲ್, ಮೇ ತಿಂಗಳಲ್ಲಿ ಇಲ್ಲಿನ ಉಷ್ಣತೆ ೪೨ರಿಂದ ೪೩ ಡಿಗ್ರಿ ಸೆಲ್ಸಿಯಸ್‌ನಷ್ಟಿರುತ್ತದೆ. ಇಲ್ಲಿನ ಕೃಷಿ ಜೂನ್‌ನಿಂದ ಸೆಪ್ಟೆಂಬರ್ ನಡುವೆ ಬೀಳುವ ಮಳೆಯನ್ನೇ ಹೆಚ್ಚಾಗಿ ಅವಲಂಬಿಸಿದೆ. ಇಲ್ಲಿನ ಗ್ರಾಮೀಣ ಜನತೆಯ ಆಹಾರ ಬೆಳೆಗಳು ಮತ್ತು ವಾಣಿಜ್ಯ ಬೆಳೆಗಳು ಮಳೆಯನ್ನೇ ಅವಲಂಬಿಸಿವೆ.

ಶೇ. ೭೦ರಷ್ಟು ರೈತರು ಮುಂಗಾರು ಮಳೆಯನ್ನೇ ಅವಲಂಬಿಸಿರುವ ಭಾಗದಲ್ಲಿ ಮಳೆ ಮಾತ್ರ ಸಕಾಲದಲ್ಲಿ ಬಾರದಿರುವುದು ಸಾಮಾನ್ಯವಾಗಿದೆ. ಬೇಸಿಗೆಯಲ್ಲಿ ರೈತರ ಭೂಮಿ ಬಿರುಕು ಬಿಟ್ಟಿರುತ್ತದೆ. ಹುಲ್ಲು ಒಣಗಿ ಮಣ್ಣು ಸೇರಿರುತ್ತದೆ. ರೈತ ಆಕಾಶವನ್ನು ಮೋಡಗಳನ್ನು ನೋಡುತ್ತಾ ಮಳೆಗಾಗಿ ಕಾಯುತ್ತಾ ಕುಳಿತುಕೊಳ್ಳುವುದು ಮಾತ್ರ ತಪ್ಪಿಲ್ಲ. ಮುಂಗಾರು ಮಳೆ ಕೈ ಕೊಟ್ಟರೆ ಈ ಭಾಗದ ರೈತರ ಒಂದು ವರ್ಷದ ಬೆಳೆಯು ಕೈಕೊಟ್ಟಂತೆ."[೧೦]

ಯಾದಗಿರಿ ಜಿಲ್ಲೆಯು ಬರಪೀಡಿತವೆಂದು ಘೋಷಿಸಬೇಕೆಂದು ದಿನಾಂಕ ೧.೭.೨೦೧೪ರಂದು ಯಾದಗಿರಿ ಜಿಲ್ಲೆಯ ರೈತರು, ಹಿಂದುಳಿದ ವರ್ಗಗಳ ಜಿಲ್ಲಾಧ್ಯಕ್ಷರಾದಂತಹ ಉಮೇಶ ಕೆ. ಮುದ್ನಾಳ ಅವರ ನೇತೃತ್ವದಲ್ಲಿ ಪ್ರತಿಭಟನೆಯನ್ನು ಮಾಡಿದರು. "ಮಳೆಗಾಲ ಪ್ರಾರಂಭಗೊಂಡು ತಿಂಗಳು ಗತಿಸಿದರೂ ಯಾದಗಿರಿ ಜಿಲ್ಲೆಯಲ್ಲಿ ಇನ್ನೂ ಮಳೆ ಬಿದ್ದಿಲ್ಲ. ಹೀಗಾಗಿ ಸರಕಾರ ಕೂಡಲೆ ಗುಲ್ಬರ್ಗಾದಲ್ಲಿ ಸಚಿವ ಸಂಪುಟ ಸಭೆ ನಡೆಸಿ ಈ ಭಾಗವನ್ನು ಬರಪೀಡಿತವೆಂದು ಘೋಷಣೆ ಮಾಡುವಂತೆ ಒತ್ತಾಯಿಸಿ ಯಾದಗಿರಿ ಜಿಲ್ಲೆಯ ಜಿಲ್ಲಾಧಿಕಾರಿ ಮೂಲಕ ಮುಖ್ಯಮಂತ್ರಿಗೆ ಮನವಿ ಸಲ್ಲಿಸಿದರು. ಜೂನ್ ತಿಂಗಳು ಮುಗಿದು ಜುಲೈ ಆರಂಭವಾದರೂ ಇದುವರೆಗೂ ಮಳೆ ಬಿದ್ದಿಲ್ಲ. ಇದರಿಂದ ರೈತಾಪಿ ವರ್ಗದ ಬದುಕು ತತ್ತರಿಸಿದೆ. ಕೃಷಿಯನ್ನೇ ನಂಬಿ ಜೀವನ ಸಾಗಿಸುವ ಗ್ರಾಮೀಣ ಭಾಗದ ಜನತೆ ಉದ್ಯೋಗಕ್ಕಾಗಿ ದೊಡ್ಡ ನಗರಗಳಿಗೆ ಗುಳೆ ಹೋಗುತ್ತಿದ್ದಾರೆ. ಕೂಡಲೇ ಸರಕಾರ ಯಾದಗಿರಿ ಜಿಲ್ಲೆಯನ್ನು ಬರಗಾಲಪೀಡಿತ ಪ್ರದೇಶ ಎಂದು ಘೋಷಿಸಿ ವಿಶೇಷ ಪ್ಯಾಕೇಜ್ ನೀಡಬೇಕು."[೧೧] ಈ ಭಾಗದಲ್ಲಿ ಸಾರ್ವಜನಿಕರಿಗೆ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಜಾನುವಾರುಗಳಿಗೆ ಮೇವಿನ ಬ್ಯಾಂಕ್ ಸ್ಥಾಪಿಸಬೇಕು. ಗುಲ್ಬರ್ಗಾದಲ್ಲಿ ಕಲ್ಯಾಣಸೌಧ ನಿರ್ಮಾಣ ಮಾಡಿ ಪ್ರತಿ ವರ್ಷ ಅಧಿವೇಶನ ನಡೆಸಿ, ಈ ಭಾಗದ ಅಭಿವೃದ್ಧಿಗೆ ನಾಂದಿ ಹಾಡಬೇಕು ಎಂದು ಒತ್ತಾಯಿಸಿ ಪ್ರತಿಭಟನೆಯನ್ನು ಮಾಡಿದರು.

### ನೆರೆ ಹಾವಳಿ

ಶತಮಾನಗಳಿಂದಲೂ ಮಳೆ ಅಭಾವದಿಂದ ಬರಗಾಲಕ್ಕೆ ತುತ್ತಾಗುತ್ತಿರುವ ಯಾದಗಿರಿ ಜಿಲ್ಲೆಯ ಪ್ರದೇಶದಲ್ಲಿ ವಲಸೆ ಹೋಗುವುದು, ಉದ್ಯೋಗ ಅರಸಿ ಗುಳೆ ಹೋಗುವುದು ಸಾಮಾನ್ಯ ವಾಗಿದೆ. ಇಲ್ಲಿ ಅತ್ಯಂತ ಕಡಿಮೆ ಮಳೆ ಬೀಳುವುದರಿಂದ ಜನ ಕುಡಿಯುವ ನೀರಿಗೂ ಪರದಾಡಬೇಕಾದ ಸ್ಥಿತಿ ಇದೆ. ಆದರೆ ಆಗಾಗ ಇಲ್ಲಿ ಉಂಟಾಗುವ ಅತಿವೃಷ್ಟಿ ಜನರನ್ನೇ ತಬ್ಬಿಬ್ಬುಗೊಳಿಸಿ ಅವರ ಜೀವನವನ್ನೇ ನರಕ ಸದೃಶ್ಯವನ್ನಾಗಿ ಮಾಡಿ ಬಿಡುತ್ತದೆ. ಉದಾಹರಣೆಗೆ, ೨೦೧೧ರಲ್ಲಿ ಸುರಿದ ಭಾರಿ ಮಳೆ ಇಲ್ಲಿನ ಜನಜೀವನವನ್ನು ತತ್ತರಗೊಳಿಸಿತು. ಶತಮಾನದಲ್ಲೇ ಕಂಡರಿಯದ ಭೀಕರ ಪ್ರವಾಹ ಯಾದಗಿರಿ ಜಿಲ್ಲೆಯಲ್ಲಿ ಅಪ್ಪಳಿಸಿ ಹಿಂದೆಂದೂ ಕಾಣದಂತಹ ಪ್ರವಾಹದ ಅಬ್ಬರಕ್ಕೆ ಸಿಲುಕಿ ಇಲ್ಲಿನ ಜನರು ನಲುಗಿ ಹೋದರು.

ಇತ್ತೀಚೆಗೆ ಸುರಿದ ಮಳೆಗೆ ಭೀಮಾ ನದಿ ಮತ್ತು ಚಿಕ್ಕಮುಟ್ಟ ಹಳ್ಳಗಳೆಲ್ಲಾ ತುಂಬಿ ಉಕ್ಕಿ ಹರಿದು ಯಾದಗಿರಿ ಜಿಲ್ಲೆ ನೆರೆಯ ಹಾವಳಿಗೆ ಸಿಲುಕಿ ನರಳಿ ಹೋಗುತ್ತಿದೆ. ಕಳೆದ ೬೦ ವರ್ಷಗಳ ಇತಿಹಾಸದಲ್ಲಿ ದಾಖಲಾದ ಎರಡನೇ ಅತ್ಯಧಿಕ ಮಳೆ ಈ ಅವಧಿಯಲ್ಲಿ ಸುರಿದಿದೆ.

ರಸ್ತೆಗಳು, ಸೇತುವೆಗಳು, ಸಣ್ಣಪುಟ್ಟ ಅಣೆಕಟ್ಟುಗಳು, ನಾಲೆಗಳು, ಮನೆಗಳು, ಪಂಪ್‌ಸೆಟ್‌ಗಳು, ಕುಡಿಯುವ ನೀರಿನ ಸಂಪರ್ಕಗಳು, ಪೈಪ್‌ಲೈನ್‌ಗಳು, ವಿದ್ಯುತ್ ಕಂಬಗಳು ಕೊಚ್ಚಿಕೊಂಡು ಹೋಗಿವೆ. ನೆರೆ ಹಾವಳಿಯಿಂದ ಸಾಂಕ್ರಾಮಿಕ ರೋಗದ ಭೀತಿ ಎದುರಾಗುತ್ತಿದೆ. ಯಾದಗಿರಿ ಜಿಲ್ಲೆಯಲ್ಲಿ ವಾರ್ಷಿಕ ವಾಡಿಕೆ ಪ್ರಮಾಣಕ್ಕಿಂತ ಹೆಚ್ಚು ಮಳೆ ಸುರಿದ ಕಾರಣಕ್ಕೆ ಜಲ ಪ್ರಳಯದಿಂದ ಇಡೀ ಯಾದಗಿರಿ ಜಿಲ್ಲೆಯ ಜನರು ತಲ್ಲಣಗೊಂಡರು.

ನೆರೆ ಪರಿಹಾರ ಕಾಮಗಾರಿಗಳನ್ನು ಸರಕಾರ ತತಕ್ಷಣ ಕೈಗೊಂಡು ಪರಿಹಾರ, ಪುನರ್‌ವಸತಿ ಏರ್ಪಡಿಸಲು ಪ್ರಯತ್ನಗಳನ್ನು ಆರಂಭಿಸಿತು. ಆದರೆ ಮನೆ, ಮಠ ಆಸ್ತಿ ಕಳೆದುಕೊಂಡ ಇಲ್ಲಿನ ಜನರ ನಷ್ಟ ಭರಿಸುವವರ‍್ಯಾರು, ಈ ಜನರ ಜೀವನ ಮೊದಲ ಸ್ಥಿತಿಗೆ ಬರಲು ಎಷ್ಟು ವರ್ಷಗಳು ಬೇಕಾಗಬಹುದು ಅಥವಾ ಮನೆ, ಆಸ್ತಿ, ಜಾನುವಾರುಗಳನ್ನು ಕಳೆದುಕೊಂಡು ಬದುಕಲು ಆಗದೆ, ಸಾಯಲು ಆಗದೆ ಅವರು ಅನುಭವಿಸಿದ, ಇನ್ನೂ ಅನುಭವಿಸುತ್ತಿರುವ ಸಂಕಟವನ್ನು ಕೇಳುವವರ‍್ಯಾರು, ಜಲಪ್ರಳಯದಿಂದ ವಸತಿಹೀನರಾದ ಜನರು ಶಾಲೆ, ಸಮುದಾಯ ಭವನ, ದೇವಸ್ಥಾನ, ರೈಲು ನಿಲ್ದಾಣದಲ್ಲಿ ಆಶ್ರಯ ಪಡೆಯುವಂತಾಯಿತು. ಸರಕಾರ ನವಗ್ರಾಮ ಯೋಜನೆಯಡಿಯಲ್ಲಿ ಪುನರ್‌ವಸತಿ ಕೇಂದ್ರಗಳನ್ನು ಶೆಡ್‌ಗಳನ್ನು ನಿರ್ಮಿಸುತ್ತದೆಯಾದರೂ ಇವು ತಾತ್ಕಾಲಿಕ ಆಶ್ರಯವನ್ನು ಒದಗಿಸುತ್ತವೆ.

### ವಿದ್ಯುತ್ ಸಮಸ್ಯೆ

ಯಾದಗಿರಿ ಜಿಲ್ಲೆಯ ರೈತರು ಎದುರಿಸುತ್ತಿರುವ ಮತ್ತೊಂದು ಗಂಭೀರ ಸಮಸ್ಯೆಯೆಂದರೆ ವಿದ್ಯುತ್ ಸಮಸ್ಯೆ. ಇಲ್ಲಿನ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ದಿನದಲ್ಲಿ ನಿರ್ದಿಷ್ಟ ಕೆಲವೇ ಗಂಟೆಗಳು ಮಾತ್ರ ವಿದ್ಯುತ್ ಸರಬರಾಜಾಗುವುದು ಕಂಡುಬರುತ್ತದೆ. ಬೇಸಿಗೆ ಕಾಲದಲ್ಲಂತೂ ವಿದ್ಯುತ್ ನಿಲುಗಡೆ ಮತ್ತು ಅಭಾವ ಇನ್ನೂ ಹೆಚ್ಚಾಗುವುದು ಸರ್ವೇಸಾಮಾನ್ಯವಾಗಿದೆ. ಇದರ ಜೊತೆಗೆ ಲೋಡ್‌ಶೆಡ್ಡಿಂಗ್, ಟ್ರಾನ್ಸ್‌ಫಾರ್ಮರ್‌ಗಳು ಪದೇ ಪದೇ ಕೆಟ್ಟು ಹೋಗುವುದು, ಕೆಟ್ಟು ಹೋದ ಟ್ರಾನ್ಸ್‌ಫಾರ್ಮರ್‌ಗಳನ್ನು ತತ್‌ಕ್ಷಣ ಬದಲಾಯಿಸದಿರುವುದು, ವಿದ್ಯುತ್ ಖಾಸಗೀಕರಣ, ಪಂಪ್‌ಸೆಟ್‌ಗಳಿಗೆ ಮೀಟರ್ ಅಳವಡಿಕೆಗೆ ಒತ್ತಾಯ, ವಿದ್ಯುತ್ ಸ್ಥಾವರಗಳಲ್ಲಿ ತಾಂತ್ರಿಕರಣ ಮತ್ತು ದೋಷ ಹಾಗೂ ಕಲ್ಲಿದ್ದಲು ಯಾದಗಿರಿ ಜಿಲ್ಲೆಯ ರೈತರು ವಿದ್ಯುತ್ ಸಂಬಂಧಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹೀಗಾಗಿ ನಿರಂತರ ವಿದ್ಯುತ್ ಸರಬರಾಜಿನ ಬೇಡಿಕೆಗಾಗಿ ಪದೇ ಪದೇ ಹೋರಾಟಗಳು ಕಂಡುಬರುತ್ತವೆ. ಕೆಲವೊಂದು ಸಲ ರೈತರ ಹೋರಾಟಗಳು ಎಷ್ಟೊಂದು ಉಗ್ರರೂಪ ತಾಳಿವೆ ಎಂದರೆ ಕ್ರೋಧಗೊಂಡ ರೈತರು ಅಧಿಕಾರಿಗಳ ಮೇಲೆ ಹಲ್ಲೆ, ವಿದ್ಯುತ್ ಕೇಂದ್ರಗಳಿಗೆ ಬೀಗ ಹಾಕುವುದು, ರಸ್ತೆ ತಡೆ, ಆತ್ಮಹತ್ಯೆ ಪ್ರಯತ್ನಗಳಿಗೆ ಮುಂದಾಗುವುದು. ಪರಿಣಾಮವಾಗಿ ರೈತರ ಮೇಲೆ ಲಾಠಿ ಪ್ರಹಾರ, ಗೋಲಿಬಾರ್‌ನಂತಹ ಘಟನೆಗಳು ತಲೆದೋರುವವು.

### ಬೆಳೆಗೆ ಕನಿಷ್ಠ ಬೆಂಬಲ ಬೆಲೆ ಸಮಸ್ಯೆ

ಯಾದಗಿರಿ ಜಿಲ್ಲೆಯ ರೈತರು ಬರ, ನೆರೆಹಾವಳಿ ಮುಂತಾದ ಸಮಸ್ಯೆಗಳನ್ನು ದಾಟಿ ಬೆಳೆ ಅವರ ಕೈಗೆ ಬಂದಾಗ ಎದುರಿಸುವ ಸಮಸ್ಯೆಯೆಂದರೆ, ಬೆಳೆಗೆ ಕನಿಷ್ಠ ಬೆಂಬಲ ಬೆಲೆ

ಸಿಗದಿರುವುದು. ರೈತರು ಬೆಳೆದ ಬೆಳೆಯ ಹಿಂದೆ ಸಾಕಷ್ಟು ಬಂಡವಾಳ ಹೂಡಿಕೆ, ದಕ್ಷತೆ, ಶ್ರಮ, ವೆಚ್ಚಗಳು ಇರುತ್ತವೆ. ಹೀಗಾಗಿ ಒಂದು ಧಾನ್ಯದ ಕನಿಷ್ಠ ಬೆಂಬಲ ಬೆಲೆ ನಿರ್ಧರಿಸುವಾಗ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿರ್ಧರಿಸಬೇಕು. ಆದರೆ ಮುಂಗಾರಿನಲ್ಲಿ ಧಾನ್ಯಗಳು ಬೃಹತ್ ಪ್ರಮಾಣದಲ್ಲಿ ಮಾರುಕಟ್ಟೆಯನ್ನು ಪ್ರವೇಶಿಸುವುದರಿಂದ ಸಾಮಾನ್ಯವಾಗಿ ಬೆಲೆಗಳು ಇಳಿಯುತ್ತವೆ. ಮಧ್ಯವರ್ತಿಗಳು ಲಾಭ ಮಾಡಿಕೊಳ್ಳುತ್ತಾರೆ. ಇನ್ನು ಸರಕಾರವು ಕನಿಷ್ಠ ಬೆಂಬಲ ಬೆಲೆ ನಿಗದಿ ಮಾಡುವಾಗ ರೈತನ ಉತ್ಪಾದನೆಯ ಶ್ರಮ, ಖರ್ಚು, ವೆಚ್ಚ, ಲಾಭಗಳನ್ನು ಮಾನದಂಡವನ್ನಾಗಿ ಇಟ್ಟುಕೊಳ್ಳದೇ ವೈಜ್ಞಾನಿಕವಾಗಿ ಬೆಂಬಲ ಬೆಲೆ ಘೋಷಿಸದೆ ರೈತರ ಒತ್ತಾಯಕ್ಕೆ ಅವೈಜ್ಞಾನಿಕವಾಗಿ ಬೆಂಬಲ ಬೆಲೆ ಘೋಷಿಸುತ್ತವೆ. ಕೆಲವೊಮ್ಮೆ ಸರಕಾರ ಘೋಷಿಸಿದ ಕನಿಷ್ಠ ಬೆಂಬಲ ಬೆಲೆ, ಮುಕ್ತ ಮಾರುಕಟ್ಟೆಯ ಬೆಲೆಗಿಂತ ಕಡಿಮೆ ಇರುತ್ತದೆ.

ಯಾದಗಿರಿ ಜಿಲ್ಲೆಯಲ್ಲಿ ಹೆಚ್ಚಾಗಿ ಬೆಳೆಯುವ ತೊಗರಿ, ಜೋಳ ಶಹಪುರ ಮತ್ತು ಸುರಪುರ ತಾಲ್ಲೂಕಗಳಲ್ಲಿ ಭತ್ತ, ಕಬ್ಬು, ಹತ್ತಿ ಬೆಳೆಗಾರರು ತಮ್ಮ ಬೆಳೆಗಳಿಗೆ ಕನಿಷ್ಠ ಬೆಲೆ ಸಿಗದೆ ಸರಕಾರದ ವಿರುದ್ಧ ಪ್ರತಿಭಟನೆ, ಹೋರಾಟ, ಚಳುವಳಿ ಮಾಡುವುದು ಪದೇ ಪದೇ ಕಂಡುಬರುತ್ತದೆ. ಕಬ್ಬು ಮತ್ತು ತೊಗರಿಗೆ ಬೆಂಬಲ ಬೆಲೆಗೆ ಬೇಡಿಕೆ, ಹೋರಾಟಗಳು ಪ್ರಾರಂಭವಾಗಿವೆ. ಏಕೆಂದರೆ, ಒಂದು ಕ್ವಿಂಟಾಲ್ ಭತ್ತ ಬೆಳೆಯಲು ೨೦೦೦ರಿಂದ ೨೫೦೦ ರೂ. ಖರ್ಚಾಗುತ್ತದೆ. ಆದರೆ ಕೇಂದ್ರ ಸರಕಾರ ೧೦೫೦ ರೂ. ಬೆಂಬಲ ಬೆಲೆ ನೀಡುತ್ತಿದೆ. ಆದ್ದರಿಂದ ರೈತ ಭತ್ತ ಬೆಳೆಯಲು ಹಿಂಜರಿಯುವ ಪರಿಸ್ಥಿತಿ ನಿರ್ಮಾಣವಾಗಿದೆ. ಕಾರ್ಮಿಕರ ಕೊರತೆ ಹಾಗೂ ಎತ್ತುಗಳ ಅಭಾವದಿಂದ ವರ್ಷದಿಂದ ವರ್ಷಕ್ಕೆ ಭತ್ತದ ಕೃಷಿ ಇಳಿಮುಖವಾಗುತ್ತಿದೆ. ನಾಟಿಗೆ ಯಂತ್ರೋಪಕರಣ ಬಳಸಿದರೆ ಎಕರೆಗೆ ೧೨೫೦ ರೂ. ವೆಚ್ಚವಾಗುತ್ತದೆ ಇದರಿಂದ ರೈತರು ಭತ್ತ ಬೆಳೆಯುವುದನ್ನು ತ್ಯಜಿಸುತ್ತಿದ್ದಾರೆ ಇದು ಹೀಗೆ ಮುಂದುವರಿದರೆ ಆಹಾರಭದ್ರತೆ ಸಮಸ್ಯೆ ತಲೆದೋರಲಿದೆ.

ಹೀಗಾಗಿ ಸರಕಾರಗಳು ಭತ್ತದ ಬೆಳೆಯ ಉತ್ಪಾದನೆ ಆಧರಿಸಿ ರೈತರಿಗೆ ಲಾಭದಾಯಕ ಬೆಲೆ ನೀಡಬೇಕು. ನೇರವಾಗಿ ಸಬ್ಸಿಡಿ ನೀಡುವ ಯೋಜನೆಯನ್ನು ಜಾರಿಗೆ ತರಬೇಕು. ರಾಜ್ಯ ಸರಕಾರಗಳೇ ಭತ್ತದ ಮಾರುಕಟ್ಟೆ ಬೆಲೆ ನಿಗದಿಯ ಮೇಲೆ ಹಾಗೂ ರೈತನ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿರ್ಧರಿಸುವಂಥ ಯೋಜನೆಗಳನ್ನಾಗಲಿ ಅಥವಾ ನಿಯಮಗಳನ್ನಾಗಲಿ ಜಾರಿಗೆ ತಂದಿಲ್ಲ. "ರೈತರು ಬೆಂಬಲ ಬೆಲೆಗೆ ಹೋರಾಟ ಆರಂಭಿಸಿದಾಗ, ಕಣ್ಣೊರೆಸುವ ತಂತ್ರ ಅನುಸರಿಸಿ ನಾಮಕಾವಸ್ಥೆಗೆ ಬೆಂಬಲ ಬೆಲೆ ಘೋಷಿಸಿ ಕೈತೊಳೆದುಕೊಳ್ಳುತ್ತದೆ. ಇನ್ನೂ ಸೋಜಿಗದ ಸಂಗತಿ ಎಂದರೆ ಯಾದಗಿರಿ ಜಿಲ್ಲೆಯಲ್ಲಿ ನಡೆದ ರೈತರ ಆತ್ಮಹತ್ಯೆಗಳಿಗೆ ಕಾರಣ ನೋಡಿದಾಗ ಬೆಳೆಗೆ ಸೂಕ್ತ ಬೆಂಬಲ ಬೆಲೆ ಸಿಗದಿರುವುದರಿಂದ ಆತ್ಮಹತ್ಯೆ ಪ್ರಕರಣಗಳು ಹೆಚ್ಚಾಗಿ ಕಂಡುಬರುತ್ತದೆ. ಈ ಭಾಗದ ರೈತರು ಬೆಂಬಲ ಬೆಲೆ ಸಿಗದೆ ಆತ್ಮಹತ್ಯೆ ಮಾಡಿಕೊಂಡರೆ ಸರಕಾರದಿಂದ ಯಾವುದೇ ಅನುದಾನ ಸಿಗುವುದು ಕಷ್ಟದ ಕೆಲಸ. ಅದೇ ಮೈಸೂರು ಪ್ರದೇಶದ ಕಡೆಗಳಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡರೆ ತಕ್ಷಣ ಪರಿಹಾರ ಘೋಷಣೆ ಮಾಡುತ್ತದೆ. ಆದರೆ

ಯಾದಗಿರಿ ಭಾಗದ ರೈತರು ಆತ್ಮಹತ್ಯೆ ಮಾಡಿಕೊಂಡರೆ ಯಾವುದೇ ಸುದ್ದಿ ಸಮಾಚಾರಗಳಿರುವುದಿಲ್ಲ. ಸರಕಾರ ಕೂಡ ಈ ಭಾಗದ ರೈತರಿಗೆ ಮಲತಾಯಿ ದೋರಣೆ ಅನುಸರಿಸುತ್ತಿದೆ."[೨]

ಹೈದರಾಬಾದ್ ಕರ್ನಾಟಕ ಭಾಗದಲ್ಲಿ ನಿರುದ್ಯೋಗ ಸಮಸ್ಯೆ ಹೆಚ್ಚಿದ್ದು ಯುವಕರಿಗೆ ಉದ್ಯೋಗ ಕಲ್ಪಿಸುವ ಮಹತ್ತರ ಯೋಜನೆಗಳನ್ನು ಕೈಗೊಳ್ಳುವ ನಿರ್ಣಯ ತೆಗೆದುಕೊಂಡು ಉದ್ಯೋಗ ಸಮಸ್ಯೆ ನೀಗಿಸುವ ನಿಟ್ಟಿನತ್ತ ಗಮನಹರಿಸಬೇಕು. ಈ ಜಿಲ್ಲೆಯಲ್ಲಿ ಶಿಕ್ಷಕರ ಕೊರತೆ ಬಹಳಷ್ಟಿದ್ದು ಈ ಕೊರತೆಯನ್ನು ನೀಗಿಸುವ ಕೆಲಸ ಮಾಡಬೇಕಿದೆ. "೩೭೧(ಜೆ) ಸಮಿತಿಯ ಶಿಫಾರಸ್ಸಿನಂತೆ ಅಭಿವೃದ್ಧಿಪಡಿಸುವ ಬಗ್ಗೆ ಹೆಚ್ಚು ಒತ್ತು ಕೊಡಬೇಕು. ರೈತರು ಬೆಳೆದ ಕಬ್ಬಿನ ಬಾಕಿ ಹಣವನ್ನು ರೈತರ ಮನೆ ಬಾಗಿಲಿಗೆ ಮುಟ್ಟಿಸುವ ಮಹತ್ತರ ನಿರ್ಣಯ ಕೈಗೊಳ್ಳಬೇಕು. ಕೆಲವು ರಸ್ತೆಗಳನ್ನು ಮೇಲ್ದರ್ಜೆಗೆ ಏರಿಸಿ ಸಾರಿಗೆ ಸಂಪರ್ಕ ಕಲ್ಪಿಸಬೇಕು."[೩] ಹೀಗೆ ಹಲವಾರು ಬೇಡಿಕೆಗಳ ಈಡೇರಿಕೆಗಾಗಿ ಇಲ್ಲಿನ ಜನರು ದಿನನಿತ್ಯ ಹೋರಾಟಗಳನ್ನು ಚಳುವಳಿಗಳನ್ನು ಮಾಡುತ್ತಲೇ ಬಂದಿದ್ದಾರೆ. ಆದರೆ ಸರ್ಕಾರವಾಗಲಿ, ಇಲ್ಲಿನ ಅಧಿಕಾರಿಗಳಾಗಲಿ ಈ ಯಾವ ಹೋರಾಟಗಳಿಗೆ ಸ್ಪಂದಿಸದೇ ಇರುವುದು ಅಸಮಾಧಾನಕರವಾದ ಸಂಗತಿಯಾಗಿದೆ.

ಹಿಂದುಳಿದ ಹೈದರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿಗಾಗಿ ಸಂವಿಧಾನದ ೩೭೧(ಜೆ) ಕಲಂಗೆ ತಿದ್ದುಪಡಿ ಮಸೂದೆ ಅಂಗೀಕಾರವಾಗಿದೆ. ಆದರೆ, ಈ ಭಾಗದ ಅಭಿವೃದ್ಧಿಗಾಗಿ ಕೆಲಸ ಮಾಡಬೇಕಾದ ಅಧಿಕಾರಿಗಳ ಕೊರತೆ ಮಾತ್ರ ಮುಂದುವರಿದಿದೆ. ಹೈದರಾಬಾದ್ ಕರ್ನಾಟಕದ ಕೇಂದ್ರ ಸ್ಥಾನವಾದ ಗುಲ್ಬರ್ಗಾ ಸೇರಿದಂತೆ ವ್ಯಾಪ್ತಿಯ ಜಿಲ್ಲೆಗಳಲ್ಲಿ ಪ್ರಮುಖ ಅಧಿಕಾರಿಗಳೇ ಇಲ್ಲದಂತಾಗಿದೆ. ಒಬ್ಬ ವ್ಯಕ್ತಿಗೆ ಐದು ಹುದ್ದೆಗಳ ಪ್ರಭಾರ ವಹಿಸಲಾಗಿದೆ. ಬೀದರ್‌ನಿಂದ ರಾಯಚೂರು ಪ್ರದೇಶದವರೆಗಿನ ವ್ಯಾಪ್ತಿಯನ್ನು ಒಬ್ಬರೇ ಅಧಿಕಾರಿ ನೋಡಿಕೊಳ್ಳುವಂತಾಗಿದೆ. ಇದು ಕೇವಲ ಒಂದು-ಎರಡು ಇಲಾಖೆಗಳ ಸ್ಥಿತಿಯಲ್ಲ. ಮೂರ್‍ನಾಲ್ಕು ಪ್ರಮುಖ ಇಲಾಖೆಗಳಲ್ಲಿ ಅಧಿಕಾರಿಗಳ ಬರ ಎದುರಾಗಿದೆ.

**ಕಾರ್ಮಿಕರ ಸ್ಥಿತಿಗತಿಗಳು**

ಸರಕಾರಗಳ ನೀತಿ ಖಂಡಿಸಿ ಇತ್ತೀಚೆಗೆ ಯಾದಗಿರಿ ಜಿಲ್ಲೆಯಲ್ಲಿ ರೈತರು ಮತ್ತು ಕಟ್ಟಡ ಕಾರ್ಮಿಕರು ಚಳುವಳಿಯನ್ನು ಮಾಡಿದರು. ಕೃಷಿ ಮತ್ತು ಕಟ್ಟಡ ಕೂಲಿ ಕಾರ್ಮಿಕರಿಗೆ ಕೇಂದ್ರ ಮತ್ತು ರಾಜ್ಯ ಸರಕಾರ ಅನ್ಯಾಯ ಮಾಡುತ್ತಿವೆ ಎಂದು ಆರೋಪಿಸಿ ಕೃಷಿ ಹಾಗೂ ಕಾರ್ಮಿಕರ ಸಂಘದ ಕಾರ್ಯಕರ್ತರು ಬೃಹತ್ ಪ್ರತಿಭಟನೆ ನಡೆಸಿದರು. ಕೇಂದ್ರ ಹಾಗೂ ರಾಜ್ಯ ಸಚಿವರು ಕೊಳಕು ರಾಜಕಾರಣ ಮಾಡುತ್ತಲೇ ಕಾಲ ಕಳೆಯುತ್ತಿದ್ದಾರೆ. ಆದರೆ ಇವರು ನೊಂದವರ ಬಾಳು ಬೆಳಗಲು ಕಿಂಚಿತ್ತು ಯೋಚನೆ ಮಾಡುತ್ತಿಲ್ಲ. ಇವರಿಂದ ಏನನ್ನು ನಿರೀಕ್ಷೆ ಮಾಡಲು ಸಾಧ್ಯವಿಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದರು. ಯಾದಗಿರಿ ನಗರದಲ್ಲಿ ಕಟ್ಟಡ ಕಾರ್ಮಿಕರ ಸಮುದಾಯ ಭವನ ನಿರ್ಮಾಣಕ್ಕೆ ನಿವೇಶನ ನೀಡಿ ತಕ್ಷಣ ಹಣ ಬಿಡುಗಡೆ ಮಾಡಬೇಕು. "ಕಟ್ಟಡ ಕಾರ್ಮಿಕರ ಹಾಗೂ ಕೃಷಿ ಕಾರ್ಮಿಕರ ವಿಶೇಷ ಅಭಿವೃದ್ಧಿ ನಿಗಮ ಸ್ಥಾಪಿಸಲು ಮುಂಬರುವ ಸಂಪುಟ ಸಭೆಯಲ್ಲಿ ನಿರ್ಣಯ ಕೈಗೊಳ್ಳಬೇಕು. ಕಾರ್ಮಿಕರಿಗೆ ಸಾಲ ನೀಡುವ

ಮೂಲಕ ಮಧ್ಯವರ್ತಿಗಳ ಹಾವಳಿ ತಪ್ಪಿಸಬೇಕು. ಕಟ್ಟಡ ಕಾರ್ಮಿಕರ ವಿಮೆ ಹಣ ಸರಕಾರವೇ ಭರಿಸಬೇಕು, ಮಕ್ಕಳಿಗೆ ಶಿಕ್ಷಣದಲ್ಲಿ ವಿಶೇಷ ರಿಯಾಯಿತಿ ನೀಡಬೇಕು. ರೈತ, ಕೃಷಿ–ಕಾರ್ಮಿಕ ಮಹಿಳೆಯರ ಮೇಲೆ ದೌರ್ಜನ್ಯಗಳನ್ನು ಸರಕಾರ ತಡೆಯಬೇಕೆಂದು ಹೋರಾಟ ಮಾಡಲಾಯಿತು.”[೧೪]

ಯಾದಗಿರಿ ಜಿಲ್ಲೆಯಾದ್ಯಂತ ಕೃಷಿ ಹಾಗೂ ಕಟ್ಟಡ ಕೂಲಿ ಕಾರ್ಮಿಕರಿಗೆ ರಾಜ್ಯ ಸರಕಾರದ ವತಿಯಿಂದ ಹಾಗೂ ಕೇಂದ್ರ ಸರಕಾರದ ವತಿಯಿಂದಲೂ ತೀರ ಅನ್ಯಾಯವಾಗುತ್ತಿದೆ. ಬಡ ಕಾರ್ಮಿಕರಿಗೆ ಯಾವುದೇ ಸರಕಾರಗಳು ಬಂದರೂ ಸ್ಪಂದಿಸುತ್ತಿಲ್ಲ. ಕರ್ನಾಟಕ ರಾಜ್ಯದಲ್ಲಿ ಭೀಕರ ಬರಗಾಲದಿಂದ ಕುಡಿಯುವ ನೀರಿಗೆ ತತ್ವಾರ, ಬರಗಾಲದಲ್ಲಿ ಕಾರ್ಮಿಕರು ತುತ್ತು ಅನ್ನಕ್ಕಾಗಿ ಪರದಾಡುವಂತಾಗಿದೆ. ಕಾರ್ಮಿಕರ ಬಗ್ಗೆ ಮೊಸಳೆ ಕಣ್ಣೀರು ಸುರಿಸುವ ಸರಕಾರ ಇವರ ಬಗ್ಗೆ ಎಳ್ಳಷ್ಟು ಕಾಳಜಿ ವಹಿಸುತ್ತಿಲ್ಲ. ಕಾರ್ಮಿಕರಿಗಾಗುವ ಅನ್ಯಾಯ ಹೇಳತೀರದು. ಸಾಮಾಜಿಕ ನ್ಯಾಯ, ಸಮಾನತೆ, ಮಾನವೀಯತೆ ಸತ್ತೇ ಹೋಗಿದೆ. ದುಡಿದು ತಿನ್ನುವ ಕೈಗಳಿಗೆ ಸರಕಾರದ ವತಿಯಿಂದ ಕೆಲಸ ಕೊಡಬೇಕಾದ ಸರಕಾರವೇ ಅನ್ನ ಕಿತ್ತುಕೊಳ್ಳುತ್ತಿದೆ. ಕಟ್ಟಡ ಕಾರ್ಮಿಕರು ತಮ್ಮ ಕೆಲಸ ಕಾರ್ಯಗಳಿಗೆ ಮರಳು ಇಲ್ಲದೆ ಹೇಗೆ ಕೆಲಸ ಮಾಡಲು ಸಾಧ್ಯ? ಹಗಲಿರುಳೆನ್ನದೆ ಕೃಷ್ಣಾ ಹಾಗೂ ಭೀಮಾ ನದಿಗಳಲ್ಲಿ ಹಳ್ಳ ಕೊಳ್ಳಗಳಲ್ಲಿ ಬೃಹತ್ ಸಹಸ್ರಾರು ಲಾರಿಗಳ ಮುಖಾಂತರ ಹೊರ ರಾಜ್ಯಗಳಿಗೆ ಸಾಗಿಸುವ ದಂಧೆಕೋರರಿಗೆ ಏನೂ ಮಾಡದ ಸರಕಾರ ಸಾಮಾನ್ಯ ಬಡ ರೈತನಿಗೆ ಟ್ರ್ಯಾಕ್ಟರ್ ಮುಖಾಂತರ ಮರಳು ಸಾಗಾಣಿಕೆ ನಿರ್ಬಂಧ ಹೇರಿರುವುದು ಎಷ್ಟು ಸಮಂಜಸ.

ಇಂದಿನ ಸನ್ನಿವೇಶದಲ್ಲಿ ಬಡವರು, ದಲಿತರು, ಕೂಲಿಕಾರರು, ರೈತರು ತಪ್ಪದೇ ಯಾವುದೇ ಚುನಾವಣೆ ಬಂದಾಗ ತಮ್ಮ ಮತ ಚಲಾಯಿಸುತ್ತಾರೆ. ಆದರೆ ಶ್ರೀಮಂತರು ಹಾಗೂ ಪ್ರತಿಷ್ಠಿತರು, ಗಣ್ಯವ್ಯಕ್ತಿಗಳು ಎನಿಸಿಕೊಂಡವರು ಆಚೆ ಬಂದು ಯಾವ ಚುನಾವಣೆಗೂ ತಮ್ಮ ಮತ ಚಲಾಯಿಸುವದಿಲ್ಲ. ಅವರು ಸಂವಿಧಾನಕ್ಕೆ ಅಪಚಾರವೆಸಗುತ್ತಾರೆ. ಅಂತಹವರು ಮಾತ್ರ ಸುಖದ ಸುಪ್ಪತ್ತಿಗೆಯಲ್ಲಿ ಇರುತ್ತಾರೆ. ಅಂತವರೇ ಸಮಾಜದ ಘಾತಕರಾಗಿ ಪಟ್ಟಭದ್ರ ಶಕ್ತಿಗಳಾಗಿ ತಮ್ಮ ಸ್ಥಾನಮಾನ ಗಟ್ಟಿಗೊಳಿಸಿಕೊಳ್ಳುತ್ತಾರೆ. ಇಂತಹ ಕೊಳಕು ರಾಜಕಾರಣಿಗಳು ಜಾತಿ ಆಧಾರಿತ ರಾಜಕಾರಣ ಮಾಡುತ್ತಾ ಬಡವರಿಗೆ ಅನ್ಯಾಯ ಮಾಡುತ್ತಿದ್ದಾರೆ. ಡಾ. ಬಾಬಾಸಾಹೇಬ ಅಂಬೇಡ್ಕರ್ ಅವರು ಬರೆದ ಸಮಾನತೆಯ ಸಂವಿಧಾನಕ್ಕೆ ಅಪಚಾರ ಮಾಡುತ್ತಿದ್ದಾರೆ. ಮುಗ್ಧ, ಬಡ ಕೂಲಿ ಕಾರ್ಮಿಕರ ಶೋಷಣೆ ತಪ್ಪಿಲ್ಲ. ಆದಕಾರಣ ಕೂಡಲೇ ಎಚ್ಚೆತ್ತು ಬಡವರಿಗಾಗುವ ಅನ್ಯಾಯ ಸರಿಪಡಿಸುವತ್ತಾ ಗಮನ ಹರಿಸಬೇಕು. ಆದರೆ ಇಂಥ ಮುಗ್ಧ ಜನತೆಯ ಮೇಲೆ ಪೊಲೀಸ್ ದೌರ್ಜನ್ಯ ಸದಾ ನಡೆಯುತ್ತಿರುತ್ತದೆ. ಇಂತವರಿಗೆ ಸದಾ ಕಿರುಕುಳ ಕೊಡುವ ಪೋಲಿಸರ ಹಿಂದೆ ಪ್ರಭಾವಿ ಕೈಗಳು ಕೆಲಸ ಮಾಡುತ್ತಿರುತ್ತವೆ. ದುರ್ಬಲರು ಧ್ವನಿ ಎತ್ತದಂತೆ ಪೊಲೀಸ್ ಬೆತ್ತದಿಂದ ಬಾಯಿ ಮುಚ್ಚಿಸುವವರೂ ಇದ್ದಾರೆ.

ಬಡವರ ಬಗ್ಗೆ ಅನುಕಂಪದ ಮಾತುಗಳನ್ನಾಡುತ್ತಾ ತಮ್ಮ ಸ್ಥಾನ ಭದ್ರಗೊಳಿಸಿಕೊಂಡು ಬಡ ರೈತ ಹಾಗೂ ಕೂಲಿ, ಕೃಷಿ, ಕಟ್ಟಡ ಕಾರ್ಮಿಕರ ಬಗ್ಗೆ ಯಾವ ಸೌಲಭ್ಯವೂ ಒದಗಿಸದ

ಸರಕಾರ ಇನ್ನು ಮುಂದಾದರೂ ಮುಗ್ಧ ಜನತೆಯ ಬಗ್ಗೆ ಕಾಳಜಿ ವಹಿಸಬೇಕು. "ರಾಜಕಾರಣಿಗಳು ಅವರ ಸ್ಥಾನದ ಭದ್ರತೆಗೋಸ್ಕರ ದಿನ ೨೪ ಗಂಟೆ ಚಿಂತಿಸುವುದನ್ನು ಬಿಟ್ಟು ಪ್ರಜೆಗಳಿಗೆ, ಕಾರ್ಮಿಕರಿಗೆ ಸೌಲಭ್ಯ ಒದಗಿಸುವತ್ತ ಪಾರದರ್ಶಕತೆಗೆ ಹೆಚ್ಚಿನ ಒಲವು ತೋರಿ ಅಧಿಕಾರಿಗಳ ಬೆನ್ನತ್ತಿ ಸಾರ್ವಜನಿಕರಿಗೆ ಅನುಕೂಲವಾಗುವಂತಹ ಕೆಲಸ ಮಾಡಬೇಕು. ಸಮಾಜದ ಕಟ್ಟಕಡೆಯ ವ್ಯಕ್ತಿಯನ್ನು ಸಂಪೂರ್ಣ ನಿರ್ಲಕ್ಷಿಸದೇ ಸೌಲಭ್ಯಗಳನ್ನು ಒದಗಿಸಬೇಕು ಎಂದು ಹೋರಾಟಗಳು ನಡೆಯುತ್ತಲೇ ಇವೆ."[೧೫]

### ಅಸಂಘಟಿತ ವಲಯದ ಕಾರ್ಮಿಕರ ಸ್ಥಿತಿಗತಿಗಳು

ಈ ಜಿಲ್ಲೆಯಲ್ಲಿ ಸಂಘಟಿತ ವಲಯದ ಕಾರ್ಮಿಕರಿಗೆ ಸೌಲಭ್ಯಗಳು ಸಿಗದೆ ಅವರ ಪಾಲಿಗೆ ಕನಸಾಗೇ ಉಳಿದಿವೆ. ಸರಿಯಾದ ಕೂಲಿ, ರಜೆ, ಸೇವಾಭದ್ರತೆ ಮುಂತಾದ ಯಾವ ಸೌಲಭ್ಯಗಳಿಲ್ಲದೇ ಅಸಂಘಟಿತ ಕಾರ್ಮಿಕರು ಸಂಕಷ್ಟದಲ್ಲಿದ್ದಾರೆ. ಸರಕಾರಗಳು ಬಂಡವಾಳಶಾಹಿಗಳ ಹಿತಾಸಕ್ತಿಗೆ ಬದ್ಧವಾಗಿದ್ದು, ಕಾರ್ಮಿಕರ ಹಿತಾಸಕ್ತಿಯನ್ನು ನಿರ್ಲಕ್ಷಿಸಿದೆ ಎನ್ನಬಹುದು. ಅಸಂಘಟಿತ ವರ್ಗಗಳ ಕಾರ್ಮಿಕರ ಹಿತ ಕಾಪಾಡಲು ಸರ್ಕಾರ ರೂಪಿಸಿರುವ ಯೋಜನೆಗಳು ಈ ವರ್ಗಗಳ ಹಲವು ಜನರಿಗೆ ಸರಿಯಾದ ನೆಲೆ ಇಲ್ಲದಾಗಿದೆ. ತಾವು ಕೆಲಸ ಮಾಡುವ ಜಾಗದ ಪಕ್ಕದಲ್ಲಿಯೇ ಜೀರ್ಣಾವಸ್ಥೆ ತಲುಪಿರುವ ಕಟ್ಟಡಗಳ, ಮರಗಳ ಕೆಳಗೆ, ಪಕ್ಕದಲ್ಲಿ ಜೋಪಡಿಗಳನ್ನು ಹಾಕಿಕೊಂಡು ವಾಸಿಸುತ್ತಿದ್ದಾರೆ. ಒಂದು ನಿರ್ದಿಷ್ಟ ನೆಲೆ ಇಲ್ಲದ ಇವರಿಗೆ ರಿಯಾಯಿತಿಯಲ್ಲಿ ಆಹಾರ ವಸ್ತುಗಳನ್ನು ಪಡೆಯಲು ರೇಷನ್ ಕಾರ್ಡ್ ಕೂಡ ಲಭ್ಯವಿಲ್ಲ. ವೋಟಿಂಗ್ ಮತದಾರರ ಪಟ್ಟಿಯಲ್ಲಿ ಹೆಸರಿಲ್ಲದಿರುವುದರಿಂದ ಮತದಾನದಿಂದಲೂ ವಂಚಿತರಾಗಿದ್ದಾರೆ. ಹೀಗಾಗಿ ಕುಟುಂಬದ ಸದಸ್ಯರೊಂದಿಗೆ ಕೂಡಿ ಕೆಲಸ ಮಾಡಿದರೆ ದಿನಕ್ಕೆ ೫೦ರಿಂದ ೧೦೦ ರೂ. ಸಂಪಾದನೆ. ಪ್ರತಿದಿನ ದುಡಿದರೆ ಮಾತ್ರ ಹೊಟ್ಟೆಗೆ ಅನ್ನ ಇಲ್ಲದಿದ್ದರೆ ಉಪವಾಸವೇ ಗತಿ. ಅನೇಕ ವಲಯಗಳಲ್ಲಿ ದುಡಿಯುವ ಅಸಂಘಟಿತ ಕಾರ್ಮಿಕರ ಜೀವನ, ಆರೋಗ್ಯ ಮತ್ತು ಅಂಗವಿಕಲತೆ, ಹೆರಿಗೆ ಹಾಗೂ ವೃದ್ಧಾಪ್ಯಗಳಿಗೆ ಸಂಬಂಧಪಟ್ಟಂತೆ ಕನಿಷ್ಠ ಸಾಮಾಜಿಕ ಭದ್ರತೆಗಳೂ ಇಲ್ಲ. ಇದರ ಜೊತೆಗೆ ಪುರುಷ ಮತ್ತು ಮಹಿಳಾ ಕಾರ್ಮಿಕರ ನಡುವೆ ತಾರತಮ್ಯವಿದೆ. ಜಾಗತೀಕರಣದ, ಖಾಸಗೀಕರಣದ, ನೀತಿಗಳ ಫಲವಾಗಿ ಗುತ್ತಿಗೆ ಕಾರ್ಮಿಕ ಪದ್ಧತಿ ಇಂದು ಸಾರ್ವತ್ರಿಕವಾಗುತ್ತಿರುವುದು ಮತ್ತಷ್ಟು ಹೆಚ್ಚಿನ ಆತಂಕಕ್ಕೆ ಕಾರಣವಾಗಿದೆ. ಇವುಗಳ ಜೊತೆಗೆ ಬೆಲೆ ಏರಿಕೆ ಬಿಸಿಯಿಂದಾಗಿ ಕಾರ್ಮಿಕರು ತತ್ತರಿಸುತ್ತಿದ್ದಾರೆ. ನಿರುದ್ಯೋಗ, ಬಡತನ, ಅನಾರೋಗ್ಯ ಮುಂತಾದ ಸಮಸ್ಯೆಗಳಿಂದಾಗಿ ಕಾರ್ಮಿಕರು ಆತ್ಮಹತ್ಯೆಗೆ ಮೊರೆ ಹೋಗುತ್ತಿದ್ದಾರೆ. ಸರ್ಕಾರಕ್ಕೆ ಕಾರ್ಮಿಕರ ಸಮಸ್ಯೆಗಳು ಗೊತ್ತಿದ್ದರೂ ಅವರ ಹಿತಾಸಕ್ತಿ ಕಾಪಾಡಲು ಸರಕಾರ ಸೂಕ್ತವಾಗಿ ಸ್ಪಂದಿಸದೇ ಇರುವುದು ಮೇಲ್ನೋಟಕ್ಕೆ ಗೋಚರಿಸುತ್ತಿದೆ. ಅಸಂಘಟಿತ ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡುವ ಅಥವಾ ರೂಪಿಸುವ ಸ್ಥಿತಿಯಲ್ಲಂತೂ ಇಲ್ಲವೇ ಇಲ್ಲ. ಹಾಗೆಯೇ ಕಾರ್ಮಿಕ ಪರ ಎಂದು ಹೇಳಿಕೊಂಡು ಹೋರಾಟಕ್ಕಿಳಿದು, ತಮ್ಮ ಸ್ವಾರ್ಥಕಾರ್ಯಕ್ಕಾಗಿ ಕಾರ್ಮಿಕರನ್ನು ಉಪಯೋಗಿಸಿಕೊಳ್ಳುವುದು ಪ್ರಸ್ತುತ ಪರಿಸ್ಥಿತಿಯಾಗಿದೆ.

ಕೈಗಾರಿಕಾ ವಲಯದ ಕಾರ್ಮಿಕರು ಸಂಘಟನೆಗಳನ್ನು ಕಟ್ಟಿ ನೋಂದಣಿ ಪಡೆದು ವೇತನ ಏರಿಕೆ, ಬೋನಸ್ ಇತ್ಯಾದಿ ಸವಲತ್ತುಗಳನ್ನು ಪಡೆದಿದ್ದಾರೆ. ಆದರೆ ಅಸಂಘಟಿತ ವಲಯಗಳಲ್ಲಿ ಕಾರ್ಮಿಕ ಸಂಘಟನೆಗಳು ಹುಟ್ಟಿಕೊಳ್ಳುತ್ತಿಲ್ಲ, ಎಲ್ಲಿಯೋ ಒಂದೊಂದು ಇದ್ದರೆ ಅವು ಲೆಕ್ಕಕ್ಕಿಲ್ಲ. ಅಸಂಘಟಿತ ವಲಯಗಳಲ್ಲಿ ಕಾರ್ಮಿಕ ಸಂಘಟನೆಗಳು ಬೆಳೆಯದೆ ಇರುವುದಕ್ಕೆ ಅನೇಕ ಕಾರಣಗಳಿವೆ. ಕಾರ್ಮಿಕರು ಒಬ್ಬ ಮಾಲೀಕನ ಅಥವಾ ಒಂದು ಕಾರ್ಖಾನೆಯ ಸೂರಿನಡಿ ಕೆಲಸ ಮಾಡುವವರಲ್ಲ. ಈ ವಲಯದ ಕಾರ್ಮಿಕರಲ್ಲಿ ಅನಕ್ಷರತೆ ಹಾಗೂ ಪರಿಸ್ಥಿತಿಯನ್ನು ಹಣೆಬರಹ ಎಂದು ಒಪ್ಪಿಕೊಂಡು ಪರಿಸ್ಥಿತಿಗೆ ಹೊಂದಿಕೊಂಡು ಬಿಡುವವರೇ ಹೆಚ್ಚು. ಅಲ್ಲದೆ ಕಾರ್ಮಿಕರು ನಿರಂತರವಾಗಿ ಒಂದು ಸೂರಿನಡಿಯಲ್ಲಿ ಕೆಲಸ ಮಾಡದೇ ಕೆಲಸ ಸಿಕ್ಕ ಕಡೆ ದಿನಗೂಲಿ ಕಾರ್ಮಿಕರಾಗಿರುವುದೇ ಹೆಚ್ಚು. ಹೀಗಾಗಿ ಇವರಲ್ಲಿ ಪ್ರಬಲ ಮುಖಂಡರೂ ಬೆಳೆಯಲು ಸಾಧ್ಯವಿಲ್ಲ. "ನಗರಗಳಲ್ಲಿ ನಗರಪಾಲಿಕೆಗಳ ಸಫಾಯಿ ಕರ್ಮಚಾರಿಗಳನ್ನು, ಕೆಲವೊಂದು ಹೋಟೆಲ್ ಕಾರ್ಮಿಕರನ್ನು, ಸಿದ್ಧ ಉಡುಪು ಉದ್ಯೋಗಿಗಳನ್ನು, ಪ್ಲಾಂಟೇಶನ್ ಕಾರ್ಯಕರ್ತರನ್ನು ಒಗ್ಗೂಡಿಸಿ ಸಂಘಟಿಸುವ ಕೆಲಸ ಕೆಲಮಟ್ಟಿಗೆ ನಡೆದಿದೆ. ಆದರೆ ಇವರ ಹೋರಾಟ ಮತ್ತು ಫಲ ಮಾತ್ರ ನಿರಿಕ್ಷಿತ ಮಟ್ಟದಲ್ಲಿ ಕಾಣುತ್ತಿಲ್ಲವೆಂದು ಹೇಳಬಹುದು."[೧೬]

### ಬಾಲಕಾರ್ಮಿಕರ ಸಮಸ್ಯೆ

ಯಾದಗಿರಿ ಜಿಲ್ಲೆಯ ಕಾರ್ಮಿಕರ ಸಮಸ್ಯೆಗಳಲ್ಲಿ ಮತ್ತೊಂದು ಗಮನಾರ್ಹ ಸಮಸ್ಯೆಯೆಂದರೆ ಬಾಲಕಾರ್ಮಿಕ ಸಮಸ್ಯೆ. ಬಾಲಕಾರ್ಮಿಕರೆಂದು ಕಾನೂನಾತ್ಮಕವಾಗಿ ಯಾರನ್ನು ಪರಿಗಣಿಸಲಾಗುತ್ತದೆ ಎಂದರೆ, ೧೪ ವರ್ಷದೊಳಗಿನ ಮಕ್ಕಳು ಶಾಲೆಯಿಂದ ಹೊರಗಿದ್ದು ತನ್ನ ಬೌದ್ಧಿಕ, ಮಾನಸಿಕ, ಶಾರೀರಿಕ ಮತ್ತು ಭಾಷಾ ಬೆಳವಣಿಗೆಗೆ ತೊಡಕಾಗುವ ಯಾವುದೇ ಚಟುವಟಿಕೆಯಿಲ್ಲದ್ದು ತನ್ನ ಮೂಲಭೂತ ಹಕ್ಕುಗಳಿಂದ ವಂಚಿತರಾಗಿದ್ದಾರೋ ಅವರೆಲ್ಲರೂ ಬಾಲಕಾರ್ಮಿಕರು ಎಂದೆನಿಸಿಕೊಳ್ಳುತ್ತಾರೆ. ೨೦೧೦ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ೧೦,೫೮,೪೧೮ ಬಾಲಕಾರ್ಮಿಕರಿದ್ದಾರೆಂದು ಅದರಲ್ಲಿ ಹೈದರಾಬಾದ್ ಕರ್ನಾಟಕ ಭಾಗದಲ್ಲೇ ೧ ಲಕ್ಷಕ್ಕಿಂತ ಹೆಚ್ಚು ಬಾಲಕಾರ್ಮಿಕರಿದ್ದು ಯಾದಗಿರಿ ಜಿಲ್ಲೆಯಲ್ಲಿ ಅತಿ ಹೆಚ್ಚು ಬಾಲಕಾರ್ಮಿಕರು ಇರುವುದು ವರದಿಯಿಂದ ತಿಳಿದುಬರುತ್ತದೆ. ಬಾಲಕಾರ್ಮಿಕರ ಸಂಖ್ಯೆ ಹೆಚ್ಚಿರಲು ಕಾರಣಗಳನ್ನು ಅಧ್ಯಯನ ಮಾಡಿದಾಗ ಇಲ್ಲಿ ಬಡತನ, ಸಾಮಾಜಿಕ ಪರಿಸ್ಥಿತಿ, ಅಜ್ಞಾನ ಮುಂತಾದ ಕಾರಣಗಳಿಂದ ೧೦ರಿಂದ ೧೪ನೇ ವಯಸ್ಸಿನ ಒಳಗಿರುವ ಮಕ್ಕಳು ಶಾಲೆಗಳನ್ನು ಬಿಟ್ಟು ಕಾರ್ಮಿಕರಾಗಿ ದಿನ ಗೂಲಿಗಾಗಿ ಕೆಲಸಕ್ಕೆ ಹೋಗುತ್ತಿರುವುದು ಕಂಡುಬರುತ್ತದೆ. ಅದರಲ್ಲೂ ರಾಜ್ಯದಲ್ಲೇ ಶಾಲೆ ಓದುತ್ತಿರುವಾಗಲೇ ಮಧ್ಯದಲ್ಲಿ ಶಾಲೆಗಳನ್ನು ಬಿಡುತ್ತಿರುವ ಮಕ್ಕಳಲ್ಲಿ ಯಾದಗಿರಿ ಜಿಲ್ಲೆಯ ಮಕ್ಕಳು ಮೊದಲನೇ ಸಾಲಿನಲ್ಲಿದ್ದಾರೆ.

ಬಾಲಕಾರ್ಮಿಕ ಪದ್ಧತಿಯು ಒಂದು ಸಾಮಾಜಿಕ ಸಮಸ್ಯೆ ಮತ್ತು ಪಿಡುಗಾಗಿ ಪರಿಣಮಿಸಿದೆ. ಈ ಬಾಲಕಾರ್ಮಿಕತನಕ್ಕೆ ನಿರ್ದಿಷ್ಟ ಕಾರಣಗಳನ್ನು ಅಧ್ಯಯನ ಮಾಡಿ ನೋಡಿದಾಗ ಕಂಡುಬರುವ ಕೆಲವು ಮುಖ್ಯ ಅಂಶಗಳೆಂದರೆ, ಬಡತನ, ತಂದೆ ತಾಯಿಗಳ ನಿಷ್ಕಾಳಜಿ, ಚಿಕ್ಕ ವಯಸ್ಸಿನಲ್ಲಿ ಮಕ್ಕಳು ಅನಾಥರಾಗುವುದು, ಅನಕ್ಷರತೆ, ವಲಸೆ, ಸಣ್ಣ ವಯಸ್ಸಿನಲ್ಲಿ ಜವಾಬ್ದಾರಿ, ಆಸ್ತಿ

ಇಲ್ಲದಿರುವುದು, ಆರ್ಥಿಕ ಸ್ಥಿತಿ ಕೆಳಮಟ್ಟದಲ್ಲಿರುವುದು ಮುಂತಾದವುಗಳನ್ನು ಗುರುತಿಸಬಹುದು. ಕಾನೂನು ಪ್ರಕಾರ ಮಕ್ಕಳನ್ನು ಬಾಲ್ಯದಲ್ಲಿ ದುಡಿಮೆಗೆ ಹಚ್ಚುವುದನ್ನು ನಿಷೇಧಿಸಿದ್ದರೂ ಆ ಸಂಬಂಧವಾಗಿ ಅನೇಕ ಕಾನೂನುಗಳನ್ನು ಜಾರಿ ಮಾಡಿದ್ದರೂ ಸಹ ಬಾಲಕಾರ್ಮಿಕರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಮಕ್ಕಳನ್ನು ಇಂದು ಎಲ್ಲಾ ಕ್ಷೇತ್ರಗಳಲ್ಲಿ ದುಡಿಸಿಕೊಳ್ಳಲಾಗುತ್ತಿದೆ. ಸಾಮಾನ್ಯವಾಗಿ ಇವರು ಕಾರ್ಯ ನಿರ್ವಹಿಸುತ್ತಿರುವ ಪರಿಸ್ಥಿತಿ, ಪರಿಸರಗಳನ್ನು ಗಮನಿಸಿದರೆ ಗಾಳಿ, ಬೆಳಕು ಕಾಣದ ಹೊಗೆ ಧೂಳು, ಅಪಾಯಕಾರಿ ಯಂತ್ರ, ಅನಿಲ ಮುಂತಾದ ಅತಿರೇಕದ ಮಾಲಿನ್ಯದಿಂದ ಹದಗೆಟ್ಟು ಹೋಗಿರುವ ಪರಿಸ್ಥಿತಿಗಳಲ್ಲಿ ರಾತ್ರಿ ಹಗಲು ಎನ್ನದೇ ನಿರಂತರವಾಗಿ ದುಡಿಯಬೇಕಾಗುತ್ತದೆ. ಆದರೆ ಇದಕ್ಕೆ ಸಿಗುವ ಪ್ರತಿಫಲ ಅತ್ಯಲ್ಪವಾಗಿದ್ದು, ಅವರ ದೈಹಿಕ, ಮಾನಸಿಕ ಬೆಳವಣಿಗೆಯನ್ನು ಕಮರಿಸಿಬಿಡುತ್ತದೆ. ಸರಿಯಾದ ಊಟ ಬಟ್ಟೆ ಇಲ್ಲದೆ ಅನಾರೋಗ್ಯಕ್ಕೆ ಈಡಾಗಿ ಅನೇಕ ಕಾಯಿಲೆಗಳಿಂದ ಬಳಲುತ್ತಿರುವ ಬಾಲಕಾರ್ಮಿಕರ ಬಗ್ಗೆ ದಿನ ಬೆಳಗಾದರೆ ಪತ್ರಿಕೆಗಳು ಹಾಗೂ ಇತರೆ ಮಾಧ್ಯಮಗಳಿಂದ ತಿಳಿದುಬರುತ್ತಿದೆ. ಬಾಲಕಾರ್ಮಿಕ ಮಕ್ಕಳು ದೈಹಿಕ ಮಾನಸಿಕ, ಲೈಂಗಿಕ ಮತ್ತು ಸಾಮಾಜಿಕ ದೌರ್ಜನ್ಯಕ್ಕೊಳಗಾಗುತ್ತಾರೆ. ಮಾನವನ ಮೂಲಭೂತ ಅವಶ್ಯಕತೆಗಳಾದ ಆಹಾರ, ಬಟ್ಟೆ, ವಸತಿ, ದೈಹಿಕ ಮಾನಸಿಕ ರಕ್ಷಣೆ ಮುಂತಾದವುಗಳಿಂದ ವಂಚಿತರಾಗುತ್ತಾರೆ. ಹೀಗೆ ಪ್ರೀತಿ, ಮಮತೆ, ಬಾಂಧವ್ಯ ಮುಂತಾದವುಗಳಿಂದ ವಂಚಿತರಾಗುವ ಮಕ್ಕಳು, ಅಸಹಾಯಕತೆ, ಶೌರ್ಯ, ಹಿಂಸೆಯಂತಹ ಗುಣಗಳನ್ನು ಬೆಳೆಸಿ ಕೊಳ್ಳುತ್ತಾರೆ. ಹೀಗಾಗಿ ಮುಂದೆ ಇಂತಹ ಮಕ್ಕಳು ಮಾದಕ ಜಾಲದಲ್ಲಿ ಬಿದ್ದು ಸಮಾಜಘಾತುಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಾರೆ.

### ದಲಿತ ಚಳುವಳಿ

ಯಾದಗಿರಿ ಜಿಲ್ಲೆಯಲ್ಲಿ ಸಾಮಾಜಿಕ ಪರಿಸ್ಥಿತಿಯನ್ನು ವಿಶ್ಲೇಷಣೆ ಮಾಡಿ ನೋಡಿದರೆ, ಜಾತಿವ್ಯವಸ್ಥೆ ಇನ್ನೂ ಜೀವಂತವಾಗಿರುವದು ಕಂಡುಬರುತ್ತದೆ. ಜಮೀನ್ದಾರಿಕೆ ವ್ಯವಸ್ಥೆ ಪ್ರಬಲವಾಗಿರುವ ಈ ಜಿಲ್ಲೆಯಲ್ಲಿ ಭೂರಹಿತ ದಲಿತರು ಜಮೀನ್ದಾರರ ಆಶ್ರಯದಲ್ಲಿ ಇರುವುದರಿಂದ ಅವರು ಗುಲಾಮರಾಗಿದ್ದಾರೆ. ಇಂದಿಗೂ ಇಲ್ಲಿನ ಎಷ್ಟೋ ಹಳ್ಳಿಗಳಲ್ಲಿ ದಲಿತರನ್ನು ಕಪ್ಪು ಜನ ಎಂದು ಗುರುತಿಸಿ ಊರ ದೇವಾಲಯಗಳ ಒಳಗೆ ಪ್ರವೇಶವನ್ನು ನಿರಾಕರಿಸಿವೆ, ಮೇಲ್ವರ್ಗದ ಮನೆಗಳ ಒಳಗೆ ಹೋಗುವಂತಿಲ್ಲ, ಮದುವೆ ಸಮಾರಂಭಗಳಲ್ಲಿ ಸಾಮೂಹಿಕ ಭೋಜನ ಮಾಡುವಂತಿಲ್ಲ ಎನ್ನುವ ಅನೇಕ ನಿರ್ಬಂಧಗಳಿವೆ. ಒಂದು ವೇಳೆ ಇದನ್ನು ಉಲ್ಲಂಘಿಸಿದರೆ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುವ ಭೀತಿ ಇದೆ. ಇಂತಹ ಪರಿಸ್ಥಿತಿ ಇಂದಿಗೂ ಕೂಡ ಯಾದಗಿರಿ ಜಿಲ್ಲೆಯ ಗ್ರಾಮಗಳಲ್ಲಿ ಕಂಡುಬರುತ್ತದೆ.

### ದಲಿತರ ಮೇಲಿನ ದೌರ್ಜನ್ಯ

ದಲಿತರು ಸ್ವಾಭಿಮಾನದ ಬದುಕನ್ನು ಕಟ್ಟಿಕೊಳ್ಳಲು ಅವಕಾಶಕ್ಕಾಗಿ ಒತ್ತಾಯ ಮಾಡಿದಾಗ, ತಾರತಮ್ಯವಾದಿ ಆಚರಣೆಗಳ ವಿರುದ್ಧ ಆಕ್ರೋಶಗೊಂಡಾಗ ಅಂತಹ ಬೇಡಿಕೆಗಳನ್ನು ಹತ್ತಿಕ್ಕಲು ದೌರ್ಜನ್ಯಗಳು ನಡೆಯುವವು. ಆರ್ಥಿಕವಾಗಿ ಹಿಂದುಳಿದಿರುವ ದಲಿತರು ಭೂಮಿಗಾಗಿ, ವಸತಿಗಾಗಿ,

ಕೂಲಿಗಾಗಿ ಸಮಾನ ವೇತನಕ್ಕಾಗಿ ಹೋರಾಟ ಮಾಡಿದಾಗ ಅವರ ಹಕ್ಕುಗಳನ್ನು ಹತ್ತಿಕ್ಕಲು ದೌರ್ಜನ್ಯಗಳು ಜರುಗುವವು. ದಲಿತರ ಮೇಲಿನ ದೌರ್ಜನ್ಯಗಳ ಸ್ವರೂಪವು ದೇಶದ ಎಲ್ಲ ಭಾಗಗಳಲ್ಲೂ ಏಕರೂಪಿಯಾಗಿಲ್ಲ. ದೇಶದ ಕೆಲವು ಪ್ರಾಂತ್ಯಗಳಲ್ಲಿ ಅವು ಕಡಿಮೆ ಇದ್ದರೆ, ಬಡತನ, ಅಜ್ಞಾನ, ಹಿಂದುಳಿದಿರುವಿಕೆ, ಜಮೀನ್ದಾರಿಕೆ, ಊಳಿಗಮಾನ್ಯ ಇರುವಂತಹ ಯಾದಗಿರಿ ಜಿಲ್ಲೆಯಲ್ಲಿ ಜಾಸ್ತಿ ಇದೆ. ಇಲ್ಲಿ ದಲಿತರ ಮೇಲಿನ ದೌರ್ಜನ್ಯ ಮತ್ತು ಹಿಂಸೆ ಕೇವಲ ಕಾನೂನು ಸುವ್ಯವಸ್ಥೆಯ ಪ್ರಶ್ನೆಯಾಗಿಲ್ಲ, ಬದಲಾಗಿ ಇಲ್ಲಿನ ಸಮಾಜದ ಮೇಲ್ಜಾಜಾತಿಯವರ ನಂಬಿಕೆ ಮನೋಭಾವ ಹಾಗೂ ವಿಚಾರಗಳಲ್ಲಿ ದಲಿತರು ಅಪವಿತ್ರರು, ಅಶುದ್ಧರು, ಅವರಿರುವುದು ಗುಲಾಮಗಿರಿಗೆ, ಜೀತಕ್ಕೆ ಎನ್ನುವ ಕಲ್ಪನೆಯಿದೆ. ಹೀಗಾಗಿ ಇವರು ನಡೆಸಿಕೊಂಡು ಬರುತ್ತಿರುವ ಕೃತ್ಯಗಳು ಹಿಂಸೆ ದೌರ್ಜನ್ಯ ಎಂದು ಪರಿಗಣಿಸುವುದಿಲ್ಲ. ಹಾಗಾಗಿಯೇ ದಲಿತರ ಮೇಲಿನ ದೌರ್ಜನ್ಯ ಹಾಗೂ ಅಸ್ಪೃಶ್ಯತೆಯಂತಹ ಕ್ರೂರ ಆಚರಣೆಯ ಮೂಲದಲ್ಲಿ ಧಾರ್ಮಿಕ ಸೂತ್ರಗಳು ಕೆಲಸ ಮಾಡುತ್ತಿರುವುದನ್ನು ತಳ್ಳಿ ಹಾಕುವಂತಿಲ್ಲ.

**ದಲಿತ ಸಂಘಟನೆಯಲ್ಲಿ ಒಡಕು**

೧೯೭೪ರಲ್ಲಿ ಸ್ಥಾಪನೆಯಾದ ದಲಿತ ಸಂಘರ್ಷ ಸಮಿತಿ ಸುಮಾರು ಎರಡು ದಶಕಗಳ ಕಾಲ ಅತ್ಯಂತ ಪ್ರಭಾವಶಾಲಿ ಸಂಘಟನೆಯಾಗಿ ದಲಿತ ಚಳುವಳಿಯನ್ನು ಮುನ್ನಡೆಸಿತು. ಕರ್ನಾಟಕದಲ್ಲಿ ಅದರಲ್ಲೂ ಯಾದಗಿರಿ ಜಿಲ್ಲೆಯಲ್ಲಿ ದಲಿತರಲ್ಲಿ ತೀವ್ರವಾದ ಸ್ವಾಭಿಮಾನ ಮತ್ತು ದಲಿತಪ್ರಜ್ಞೆ ಮೂಡಿಸಿ, ದಲಿತರು ಜಾಗೃತರಾಗುವಂತೆ ಮಾಡಿ ಅವರ ಬದುಕಿನಲ್ಲಿ ಮಹತ್ತರ ಬದಲಾವಣೆಗಳನ್ನುಂಟು ಮಾಡುವುದರಲ್ಲಿ ಯಶಸ್ವಿಯಾಯಿತು. ಆದರೆ ಇಂತಹ ಪ್ರಬಲ ಸಂಘಟನೆ ಎಂಬತ್ತರ ದಶಕದ ಕೊನೆಯಲ್ಲಿ ಇಬ್ಭಾಗವಾಗಿ ಒಡೆದುಹೋಯಿತು. ನಂತರ "ಕಾಲಕ್ರಮೇಣ ವ್ಯಕ್ತಿತತ್ವಕ್ಕೆ ಒಳಗಾಗಿ ಹಲವು ಸಂಘಟನೆಗಳಾಗಿ ಒಡೆದು ಛಿದ್ರವಾಯಿತು. ದಲಿತ ಸಂಘರ್ಷ ಸಮಿತಿಯ ತತ್ವಾಧಾರಿತ ಹೋರಾಟ ಕ್ಷೀಣಿಸಿ ವಿವಿಧ ಬಣಗಳಾಗಿ ಒಡೆದು ದಲಿತ ಚಳವಳಿಯ ಭಿನ್ನ ಮಾರ್ಗವು ಪ್ರಸ್ತುತ ಸಂದರ್ಭದ ದಲಿತರ ದೊಡ್ಡ ಸಮಸ್ಯೆಯಾಗಿದೆ."[೧೭]

ಯಾದಗಿರಿ ಜಿಲ್ಲೆಯಲ್ಲಿ ದಲಿತರು ಮತ್ತು ಹಿಂದುಳಿದವರು ತಮ್ಮ ಮೂಲಧರ್ಮವನ್ನು ಬಿಟ್ಟು ಬೇರೆ ಧರ್ಮಗಳಿಗೆ ಮಂತಾಂತರಗೊಳ್ಳುತ್ತಿರುವುದನ್ನು ಗಮನಿಸಿದಾಗ ಅದಕ್ಕೆ ಮೂಲಕಾರಣ ಅವರ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಹಾಗೂ ಅವರು ಅನುಭವಿಸುತ್ತಿರುವ ಅಭದ್ರತೆ ಮತ್ತು ಕೀಳರಿಮೆಯಾಗಿದೆ. ಯಾದಗಿರಿ ಜಿಲ್ಲೆಯಲ್ಲಿ ಮಂತಾಂತರ ಪ್ರಕ್ರಿಯೆಯು ಬಹು ಹಿಂದಿನಿಂದಲೂ ನಡೆದುಬಂದಿದೆ ಹಾಗೂ ಇಂದು ಸಹ ಹೆಚ್ಚಾಗಿ ನಡೆಯುತ್ತಿರುವುದು ಕಂಡುಬರುತ್ತಿದೆ. ಇಲ್ಲಿ ದಲಿತರು ಹೆಚ್ಚಾಗಿ ಬೌದ್ಧ ಮತ್ತು ಕ್ರೈಸ್ತ ಧರ್ಮಕ್ಕೆ ಮಂತಾಂತರಗೊಳ್ಳುತ್ತಿರುವುದನ್ನು ಗಮನಿಸಬಹುದಾಗಿದೆ. ಇವರಲ್ಲಿ ಹೊಲೆಯ ಮತ್ತು ಛಲವಾದಿ ಜನಾಂಗದವರು ಬೌದ್ಧಧರ್ಮದ ಕಡೆಗೆ ಆಕರ್ಷಿತರಾಗಿ ಬೌದ್ಧಧರ್ಮಕ್ಕೆ ಮಂತಾಂತರಗೊಳ್ಳುತ್ತಿದ್ದಾರೆ. ಹಾಗೆಯೇ ಮಾದಿಗರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳುತ್ತಿದ್ದರೆ ಉಳಿದವರು ತಮ್ಮ ಮೂಲ ಮತಕ್ಕೆ ಅಂಟಿಕೊಂಡಿರುವುದು ಕಂಡುಬರುತ್ತದೆ.

ಈ ಜಿಲ್ಲೆಯ ದಲಿತರು ಹೆಚ್ಚಾಗಿ ಬೌದ್ಧಧರ್ಮದ ಕಡೆ ಆಕರ್ಷಿತರಾಗಲು ಕಾರಣಗಳನ್ನು ಅವಲೋಕಿಸಿದಾಗ ಡಾ. ಬಿ.ಆರ್. ಅಂಬೇಡ್ಕರ್ ಅವರ ಆದರ್ಶಗಳು, ತತ್ವಗಳು ಹಾಗೂ ಮಾರ್ಗದರ್ಶನಗಳು ಅವರ ಮೇಲೆ ಬೀರಿರುವ ಪ್ರಭಾವ ಎದ್ದು ಕಾಣುತ್ತದೆ. ಇದರ ಜೊತೆಗೆ ಇತ್ತೀಚೆಗೆ ದಲಿತ ಮುಖಂಡರು ಹಾಗೂ ಪ್ರಭಾವಿ ರಾಜಕಾರಣಿಗಳಾದ ಎಂ. ಮಲ್ಲಿಕಾರ್ಜುನ ಖರ್ಗೆಯವರು ಬೌದ್ಧಧರ್ಮದ ಬಗ್ಗೆ ಕೈಗೊಂಡಿರುವ ಚಟುವಟಿಕೆಗಳು ಹಾಗೂ ದಲಿತರ ಸ್ಥಾನಮಾನಗಳಲ್ಲಿ ಬದಲಾವಣೆ ತರಲು ಇತ್ತೀಚೆಗೆ ಗುಲಬರ್ಗಾದಲ್ಲಿ ಸ್ಥಾಪಿಸಿರುವ 'ಬುದ್ಧವಿಹಾರವು' ಅನೇಕ ಬದಲಾವಣೆಗಳಿಗೆ ಕಾರಣವಾಗುತ್ತಿದೆ.

**ದಲಿತರ ಸ್ಥಿತಿಗತಿಗಳು**

ಯಾದಗಿರಿ ಜಿಲ್ಲೆಯಲ್ಲಿ ದಲಿತರ ಪರವಾಗಿ, ಶೋಷಣೆಯ ವಿರುದ್ಧವಾಗಿ ಹೋರಾಡುತ್ತಾ ಬಂದ ದಲಿತ ಸಂಘರ್ಷ ಸಮಿತಿಗೆ ತನ್ನದೇ ಆದ ಸಮಸ್ಯೆಗಳಿವೆ. ಸ್ವಾರ್ಥ ರಾಜಕಾರಣ, ಆರ್ಥಿಕ ಅಸಮಾನತೆ ಹೆಚ್ಚುತ್ತಿರುವ ಈ ಕಾಲಘಟ್ಟದಲ್ಲಿ ಶೋಷಿತ ವರ್ಗದ ಹಿರಿಯಣ್ಣನಂತಿರುವ ದಲಿತರ ಮುಂದಿರುವ ಸವಾಲು ದೊಡ್ಡದು. ದಲಿತ ಚಳುವಳಿ ತಾನು ಹುಟ್ಟಿದ ಸಂದರ್ಭದಲ್ಲಿ ಯಾವ ರೀತಿಯ ಸವಾಲುಗಳನ್ನು ಎದುರಿಸಬೇಕಿತ್ತೋ ಅದಕ್ಕಿಂತ ಗಂಭೀರ ಸ್ವರೂಪದ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ದಲಿತ ಚಳುವಳಿಯನ್ನು ಒಂದು ನೆಲೆಗಟ್ಟಿನ ಮೇಲೆ ನಿಲ್ಲಿಸಬೇಕಾಗಿದೆ. ಇಂತಹ ಸವಾಲನ್ನು ಎದುರಿಸಲು ದಲಿತ ಸಂಘಟನೆಗಳು ಒಗ್ಗೂಡಬೇಕು ಮತ್ತು ದಲಿತ ಚಳುವಳಿ ಗಟ್ಟಿಯಾಗಿರಬೇಕಿರುವುದು ಅನಿವಾರ್ಯವಾಗಿದೆ.

**ಪಡಿತರ ಚೀಟಿ ಸಮಸ್ಯೆಗಳು**

ಯಾದಗಿರಿ ಜಿಲ್ಲೆಯಲ್ಲಿ ಜನರು ಪಡಿತರ ಚೀಟಿಗಳಿಗಾಗಿ ಹೋರಾಟ ಮಾಡುತ್ತಲೇ ಬಂದಿದ್ದಾರೆ. ಆದರೆ ಇದುವರೆಗೂ ಇಲ್ಲಿನ ಜನರಿಗೆ ಪರಿಹಾರ ಮಾತ್ರ ಸಿಕ್ಕಿಲ್ಲ. ಯಾದಗಿರಿ ಜಿಲ್ಲೆಯಾದ್ಯಂತ ಬಿಪಿಎಲ್ ಕಾರ್ಡ್ ಪಡೆಯುವುದಕ್ಕೆ ಆನ್‌ಲೈನ್ ವ್ಯವಸ್ಥೆ ಮಾಡಿದ್ದು, ಇದು ಅನಕ್ಷರಸ್ಥರು ಮತ್ತು ಕಡುಬಡವರಿಗೆ ಇದರಿಂದ ತೊಂದರೆಯಾಗಿದೆ. ಇದರ ಜೊತೆಗೆ ಪರ್ಯಾಯ ವ್ಯವಸ್ಥೆ ಮಾಡಬೇಕು ಎಂದು ಅನೇಕ ವರ್ಷಗಳಿಂದ ಇಲ್ಲಿನ ಜನರು ಹೋರಾಟಗಳನ್ನು ಮಾಡುತ್ತಲೇ ಇದ್ದಾರೆ. ಈ ಸೌಲಭ್ಯ ಸಮಾಜದ ಕಟ್ಟಕಡೆಯ ವ್ಯಕ್ತಿಗೆ ಸಿಗುತ್ತಿಲ್ಲ. ಉಳ್ಳವರಿಗೆ ಇಂತಹ ಸೌಲಭ್ಯಗಳು ದೊರೆಯುತ್ತಿವೆ. ಇದರ ವಿರುದ್ಧ ಅನೇಕ ಹೋರಾಟಗಳು ಮತ್ತು ಪ್ರತಿಭಟನೆಗಳು ನಡೆಯುತ್ತಲೇ ಬಂದಿವೆ. ಆದರೆ ಇಲ್ಲಿಯವರೆಗೆ ಈ ಜಿಲ್ಲೆಯಲ್ಲಿ ಇಂತಹ ಸಮಸ್ಯೆಗಳಿಗೆ ಪರಿಹಾರಗಳು ಮಾತ್ರ ದೊರೆತಿಲ್ಲ.

**೭.೨. ರಾಜಕೀಯ ಸ್ಥಿತಿಗತಿಗಳು**

ವಿಶಾಲವಾದ ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ವಿಭಾಗಿಸುವ ಕ್ರಮ ಇಂದಿಗೂ ಅನೂಚಾನವಾಗಿ ಮುಂದುವರಿದಿದೆ. ಅಂಥದ್ದೇ ಉದ್ದೇಶವುಳ್ಳ ಸಂಗತಿಗಳನ್ನು ಪ್ರಾಚೀನ ಕನ್ನಡ ನಾಡಿನ ರಾಜ್ಯವ್ಯವಸ್ಥೆಯಲ್ಲಿಯೂ ಸಹ ಕಾಣುತ್ತೇವೆ. "ಒಬ್ಬ ವ್ಯಕ್ತಿಯಿಂದ ಮಾತ್ರ ವಿಸ್ತಾರವಾದ ಸಾಮ್ರಾಜ್ಯವನ್ನು ರಕ್ಷಿಸಿ ಮುನ್ನಡೆಸುವುದು ಕಷ್ಟದಾಯಕವೂ ಮತ್ತು ಅಸಾಧ್ಯವಾದ ಮಾತಾಗಿತ್ತು.

ರಾಜಸತ್ತೆಯು ಆಡಳಿತ ಸೌಕರ್ಯಕ್ಕಾಗಿ ವಿಭಾಗ, ಉಪ ವಿಭಾಗ, ಪ್ರಾಂತ, ನಾಡು, ಕಂಪಣ, ದೇಶ, ರಾಷ್ಟ್ರ, ವಿಷಯ ಮತ್ತು ರಾಜ್ಯ ಎಂಬ ವಿವಿಧ ಹೆಸರುಗಳಿಂದ ವಿಭಾಗಿಸಿ ಸಾಮ್ರಾಜ್ಯದ ಆಡಳಿತವನ್ನು ಭದ್ರಗೊಳಿಸಿಕೊಳ್ಳುತ್ತಿತ್ತು. ಆಡಳಿತ ವಿಕೇಂದ್ರೀಕರಣದ ಮೂಲಕ ರಾಜ್ಯಭಾರವು ಸುಸ್ಥಿರವಾಗಿ ಮುನ್ನಡೆಯಲು ಇಂಥ ಹಂಚಿಕೆಗಳು ತುಂಬಾ ಅವಶ್ಯಕವಾದ ಸಂಗತಿಗಳೇ ಆಗಿದ್ದವು. ಒಟ್ಟಾರೆ ರಾಜ್ಯವು ಸುಗಮ ಆಡಳಿತ ಕಾಣಲು ಈ ವಿಭಾಗಕ್ರಮವು ಅವಶ್ಯವಾಗಿತ್ತೆಂದು ಹೇಳ ಬಹುದು. ಇಂಥ ಕೆಲವೊಂದು ಉದಾಹರಣೆಗಳನ್ನು ಪ್ರಸ್ತುತ ಯಾದಗಿರಿ ಜಿಲ್ಲೆಯ ಸಮಕಾಲೀನ ಸಂದರ್ಭದಲ್ಲೂ ಕಾಣುತ್ತೇವೆ."[೨೮]

ಯಾದಗಿರಿ ಜಿಲ್ಲೆಯಲ್ಲಿ ಇಂಥ ಒಂದು ಆಡಳಿತ ಕ್ರಮವನ್ನು ಸಮಕಾಲೀನ ಸಂದರ್ಭದಲ್ಲಿ ನಡೆಸಿಕೊಂಡು ಬರುತ್ತಿರುವುದು ರಾಜಕೀಯ ಪಕ್ಷಗಳು. ಅದರಲ್ಲೂ ಈ ಜಿಲ್ಲೆಯಲ್ಲಿ ಸುಮಾರು ೪೦ರಿಂದ ೪೫ ವರ್ಷಗಳ ಕಾಲ ಏಕಪಕ್ಷೀಯ ಆಡಳಿತ ನಡೆದುಕೊಂಡು ಬಂದಿದೆ. "ಹಿಂದೆ ಯಾವೊಬ್ಬ ರಾಜ ಮಹಾರಾಜರೂ ಕೂಡ ಇಷ್ಟೊಂದು ದೀರ್ಘಾವಧಿಯ ಕಾಲ ರಾಜ್ಯವನ್ನು ಆಳಿರಲಿಲ್ಲ. ಆದರೆ ಈ ಜಿಲ್ಲೆಯಲ್ಲಿ ಮಾತ್ರ ಆಡಳಿತದ ಕ್ರಮ ಮತ್ತು ರಾಜಕೀಯ ಬದಲಾವಣೆಗಳು ಆಗದೇ ಇರುವುದು ಸೋಜಿಗದ ಸಂಗತಿಯಾಗಿದೆ. ಮನಸ್ಸು ಮಾಡಿದರೆ ಇಷ್ಟು ವರ್ಷಗಳ ದೀರ್ಘಾವಧಿಯ ಆಡಳಿತದಲ್ಲಿ ಯಾದಗಿರಿಯನ್ನು ಇಡೀ ರಾಜ್ಯದಲ್ಲಿಯೇ ಒಂದು ಮಾದರಿ ಜಿಲ್ಲೆಯನ್ನಾಗಿ ಮಾರ್ಪಡು ಮಾಡಬಹುದಿತ್ತು. ಈ ಜಿಲ್ಲೆಯಲ್ಲಿ ಅನೇಕ ಸಮಸ್ಯೆಗಳಿವೆ. ಆ ಸಮಸ್ಯೆಗಳನ್ನು ಬಗೆಹರಿಸಲು ಇಲ್ಲಿನ ಜನರು ದಿನನಿತ್ಯ ಹೋರಾಟಗಳು ಮತ್ತು ಚಳುವಳಿಗಳನ್ನು ಮಾಡುತ್ತಲೇ ಬಂದಿದ್ದಾರೆ."[೨೯] ಯಾದಗಿರಿ ನಗರದಲ್ಲಿರುವ ರೈಲುನಿಲ್ದಾಣದಲ್ಲಿ ಬಹುತೇಕ ರೈಲುಗಳು ನಿಲುಗಡೆ ಆಗುತ್ತಿಲ್ಲ. ಈ ಭಾಗದ ಜನರು ಬೆಂಗಳೂರಿಗೆ ಹೆಚ್ಚಾಗಿ ಪ್ರಯಾಣಿಸುತ್ತಿದ್ದು (ಗುಳೆ), ಹೀಗಿರುವ ಕೆಲವೇ ರೈಲುಗಳಲ್ಲಿ ಹತ್ತಲು ಹರಸಾಹಸ ಮಾಡಬೇಕಾಗಿದೆ. ಎಲ್ಲ ರೈಲುಗಳಿಗೆ ನಿಲುಗಡೆ ಕಲ್ಪಿಸುವ ಮೂಲಕ ಜನರಿಗೆ ಅನುಕೂಲ ಮಾಡಿಕೊಡಬೇಕೆಂದು ಒತ್ತಾಯಿಸಿ ಇಲ್ಲಿನ ಜನರು ಹೋರಾಟವನ್ನು ಮಾಡಿದರು. ಹೆಚ್ಚು ಆದಾಯ ತಂದುಕೊಡುವ ನಿಲ್ದಾಣ ಇದಾಗಿದ್ದು, ಇನ್ನೂ ಹೆಚ್ಚಿನ ರೈಲ್ವೆ ಸೌಕರ್ಯ ಕಲ್ಪಿಸಿದಲ್ಲಿ ಆದಾಯವೂ ಹೆಚ್ಚಾಗಲಿದೆ. ಪ್ರಯಾಣಿಕರಿಗೆ ಅನುಕೂಲವಾಗಲಿದೆ. ಯಾದಗಿರಿ ರೈಲ್ವೆ ನಿಲ್ದಾಣದಲ್ಲಿ ಸರಕುಸಾಗಾಣಿಕೆ ಕೇಂದ್ರ ಸ್ಥಾಪಿಸಬೇಕು. ಹೀಗೆ ಹಲವಾರು ಬೇಡಿಕೆಗಳ ಈಡೇರಿಕೆಗಾಗಿ ಹೋರಾಟಗಳು ನಡೆಯುತ್ತಿವೆ.

**ಸರಕಾರಿ ಅಧಿಕಾರಿಗಳ ಸಮಸ್ಯೆ**

ಪ್ರವಾಸೋದ್ಯಮ ಇಲಾಖೆ, ಮೀನುಗಾರಿಕೆ ಇಲಾಖೆ, ಅಂಗವಿಕಲರ ಕಲ್ಯಾಣ ಇಲಾಖೆ, ವಾರ್ತಾ ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ಮೂರರಿಂದ ಐದು ಹುದ್ದೆಗಳ ಪ್ರಭಾರ ವಹಿಸಲಾಗಿದೆ. ಪ್ರವಾಸೋದ್ಯಮ ಇಲಾಖೆಯ ಸಹಾಯಕ ನಿರ್ದೇಶಕರಾಗಿ ಗುಲ್ಬರ್ಗಾದಲ್ಲಿ ಕೆಲಸ ಮಾಡುತ್ತಿರುವ ಅಧಿಕಾರಿಗೆ ಆ ವ್ಯಾಪ್ತಿಯ ನಾಲ್ಕು ಜಿಲ್ಲೆಗಳ ಉಪ ನಿರ್ದೇಶಕರಾಗಿ ಕೆಲಸ ಮಾಡುವ ಅನಿವಾರ್ಯತೆ ಎದುರಾಗಿದೆ. ಈ ಅಧಿಕಾರಿ ಸಹಾಯಕ ನಿರ್ದೇಶಕರ ಹುದ್ದೆಯ ಜೊತೆಗೆ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು ಜಿಲ್ಲೆಗಳ ಉಪನಿರ್ದೇಶಕರಾಗಿ ಕೆಲಸ ಮಾಡುವ ಅನಿವಾರ್ಯತೆ ಎದುರಾಗಿದೆ. ಯಾದಗಿರಿ ಜಿಲ್ಲೆಯ

ಮೀನುಗಾರಿಕೆ ಇಲಾಖೆಯ ಸಹಾಯಕ ನಿರ್ದೇಶಕರದ್ದು ಇದೇ ಸ್ಥಿತಿ. ಲಿಂಗಸುಗೂರು, ಯಾದಗಿರಿ, ಶಹಾಪುರ ಹಾಗೂ ಸುರಪುರ ತಾಲೂಕುಗಳ ಉಪನಿರ್ದೇಶಕರಾಗಿಯೂ ಕಾರ್ಯ ನಿರ್ವಹಿಸುವಂತಾಗಿದೆ. ಸರ್ಕಾರದ ಸಾಧನೆಗಳನ್ನು ಪ್ರಚಾರಪಡಿಸುವ ವಾರ್ತಾ ಇಲಾಖೆಯೂ ಅಧಿಕಾರಿಗಳ ಕೊರತೆಯಿಂದ ಹೊರತಾಗಿಲ್ಲ. ವಾರ್ತಾ ಇಲಾಖೆಯ ಬೀದರ್ ಜಿಲ್ಲೆಯ ಹಿರಿಯ ಸಹಾಯಕ ನಿರ್ದೇಶರು ಗುಲ್ಬರ್ಗಾ ಹಾಗೂ ಯಾದಗಿರಿ ಜಿಲ್ಲೆಗಳ ಹಿರಿಯ ಸಹಾಯಕ ನಿರ್ದೇಶಕರ ಹುದ್ದೆಯ ಪ್ರಭಾರವನ್ನೂ ನಿರ್ವಹಿಸುತ್ತಿದ್ದಾರೆ. ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕ್ಷೇಮಾಭಿವೃದ್ಧಿ ಇಲಾಖೆಯಲ್ಲೂ ಇದೇ ಸ್ಥಿತಿ. ಗುಲ್ಬರ್ಗಾದ ಅಂಗವಿಕಲರ ಕಲ್ಯಾಣಾಧಿಕಾರಿಗಳು ಯಾದಗಿರಿ ಹಾಗೂ ಬೀದರ್ ಜಿಲ್ಲೆಗಳ ಪ್ರಭಾರವನ್ನೂ ವಹಿಸಿಕೊಂಡಿದ್ದಾರೆ. ಇನ್ನೂ ವಿಶೇಷವೆಂದರೆ, ಯಾದಗಿರಿ ಜಿಲ್ಲೆಯ ಗ್ರಾಮ ಪಂಚಾಯಿತಿಗಳ ಅಭಿವೃದ್ಧಿ ಅಧಿಕಾರಿಗಳ ಹುದ್ದೆಗಳು ಪ್ರಭಾರದ ಮೇಲೆಯೇ ನಡೆಯುತ್ತಿವೆ. ಒಬ್ಬ ಪಿಡಿಒಗೆ ಆರು ಪಂಚಾಯಿತಿಗಳ ಪ್ರಭಾರವನ್ನು ವಹಿಸಲಾಗಿದೆ.

ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಸಂಪನ್ಮೂಲಗಳ ಕೊರತೆ ಇಲ್ಲ. ಆದರೆ ಕೆಲಸ ಮಾಡುವ ಅಧಿಕಾರಿಗಳೇ ಇಲ್ಲದಾಗಿದೆ. ಹಾಗಾಗಿ ಈ ಭಾಗವು ಅಭಿವೃದ್ಧಿಯಲ್ಲಿ ಹಿಂದುಳಿಯು ವಂತಾಗಿದೆ. ಅಂಗವಿಕಲರ ಕಲ್ಯಾಣಾಧಿಕಾರಿಗಳ ಮೂರು ಜಿಲ್ಲೆಗಳ ಹುದ್ದೆಯನ್ನು ಒಬ್ಬರಿಗೆ ನೀಡಲಾಗಿದ್ದು, ಒಂದು ಜಿಲ್ಲೆಯಲ್ಲಿ ಎರಡು ದಿನ ಕಾರ್ಯ ನಿರ್ವಹಿಸಬೇಕು. ಆದರೆ, ಅಧಿಕಾರಿಗಳು ಮಾತ್ರ ಒಂದು ಜಿಲ್ಲೆಯಿಂದ ಇನ್ನೊಂದು ಜಿಲ್ಲೆಗೆ ಪ್ರಯಾಣಿಸುವಷ್ಟರಲ್ಲಿಯೇ ಸುಸ್ತಾಗುತ್ತಿದ್ದಾರೆ. "ಹೈದರಾಬಾದ್ ಕರ್ನಾಟಕದಲ್ಲಿ ಪ್ರವಾಸೋದ್ಯಮಕ್ಕೆ ಸಾಕಷ್ಟು ಅವಕಾಶಗಳಿವೆ. ಬೀದರ್, ರಾಯಚೂರು, ಗುಲ್ಬರ್ಗಾ ಹಾಗೂ ಯಾದಗಿರಿ ಜಿಲ್ಲೆಗಳು ಐತಿಹಾಸಿಕ ತಾಣಗಳಾಗಿದ್ದು, ಇವುಗಳ ಅಭಿವೃದ್ಧಿಗಾಗಿ ಸಾಕಷ್ಟು ಕೆಲಸ ಮಾಡುವುದು ಅವಶ್ಯಕವಾಗಿದೆ. ಆದರೆ ಯಾದಗಿರಿಯಲ್ಲಿ ಪ್ರವಾಸೋದ್ಯಮ ಕಚೇರಿಯನ್ನು ಹುಡುಕುವುದರಲ್ಲಿಯೇ ಸಾಕಾಗುತ್ತದೆ. ಇನ್ನು ಅಭಿವೃದ್ಧಿಗಾಗಿ ಯಾರನ್ನು ಸಂಪರ್ಕಿಸಬೇಕು ಎನ್ನುವುದೇ ತಿಳಿಯುತ್ತಿಲ್ಲ. ಅಧಿಕಾರಿಗಳನ್ನು ಕೇಳಿದರೆ, ಒಬ್ಬರೇ ವ್ಯಕ್ತಿಗೆ ನಾಲ್ಕು ಜಿಲ್ಲೆಗಳ ಪ್ರಭಾರವಿದೆ ಎಂದು ಹೇಳುತ್ತಾರೆ. ಹೀಗಾದರೆ ಈ ಭಾಗದ ಅಭಿವೃದ್ಧಿ ಆಗುವುದಾದರೂ ಹೇಗೆ? ಯಾದಗಿರಿ ತಾಲೂಕಿನ ಗುರುಮಠಕಲ್ ಕ್ಷೇತ್ರದಲ್ಲಿ ಸಾಕಷ್ಟು ಕೆರೆಗಳಿವೆ. ಇಲ್ಲಿ ಮೀನುಗಾರಿಕೆ ನಡೆಸಲು ವಿಪುಲ ಅವಕಾಶಗಳಿವೆ. ಆದರೆ, ಅಧಿಕಾರಿಗಳೇ ಇಲ್ಲದಿರುವುದರಿಂದ ಯಾವುದೇ ಪ್ರಗತಿ ಕಾಣುತ್ತಿಲ್ಲ. ಮೀನುಗಾರರು ಸೌಲಭ್ಯಗಳನ್ನು ಕೊಡುವಂತೆ ಹೋರಾಟ ಮಾಡುತ್ತಲೇ ಇರಬೇಕಾಗಿದೆ."[೨೦]

### ಮೂಲಭೂತ ಸೌಕರ್ಯಗಳ ಸಮಸ್ಯೆ

ಇತ್ತೀಚೆಗೆ ಯಾದಗಿರಿ ನಗರದ ಬಡಾವಣೆಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ಆಗ್ರಹಿಸಿ ಹೋರಾಟ ಮಾಡಿದರು. ನಗರದ ವಿವಿಧ ಬಡಾವಣೆಗಳು ಮೂಲಭೂತ ಸೌಕರ್ಯ ಗಳಿಂದ ವಂಚಿತವಾಗಿದ್ದು, ಜಿಲ್ಲೆಯ ಕೇಂದ್ರವಾದ ನಗರದ ಬಡಾವಣೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಕೊಡುವಂತೆ ಅನೇಕ ಸಂಘ ಸಂಸ್ಥೆಗಳು ಹೋರಾಟವನ್ನು ಮಾಡಿದರು. "ಯಾದಗಿರಿ ಜಿಲ್ಲೆ ಎಂದು ಘೋಷಣೆ ಆಗಿ ಬಹುದಿನಗಳ ಬೇಡಿಕೆ ಈಡೇರಿದಾಗ ನಗರದ

ಜನಕ್ಕೆ ಆದ ಸಂತೋಷಕ್ಕೆ ಪಾರವೇ ಇಲ್ಲದಂತಾಗಿತ್ತು. ಆದರೆ ಇತ್ತೀಚೆಗೆ ನಗರಸಭೆಯಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ನೋಡಿದರೆ ಬಹಳ ಆಶ್ಚರ್ಯವಾಗುತ್ತದೆ. ತಾರ್ಕಿಕ ವಿಲಕ್ಷಣಗಳಿಂದ ಕೂಡಿದ್ದು ಇದರಿಂದ ಸಾಮಾನ್ಯ ಜನರಿಗೆ ಬಹು ಕಷ್ಟಕರವಾಗಿ ಪರಿಣಮಿಸಿದೆ. ಸಾಕಷ್ಟು ವಾರ್ಡುಗಳಲ್ಲಿ ಮೂಲಭೂತ ಸೌಕರ್ಯವಿಲ್ಲದೆ ಸರಿಯಾದ ಒಳಚರಂಡಿ, ರಸ್ತೆ ಇಲ್ಲದೆ ಕಸದ ವಿಲೇವಾರಿ ಆಗದೆ ಬೇಕಾಬಿಟ್ಟಿಯಾಗಿದೆ. ಉದಾಹರಣೆಗೆ ವಾರ್ಡ್ ನಂ. ೨೯ ರಲ್ಲಿ ಚರಂಡಿ ಕಾಮಗಾರಿಯನ್ನು ಅಲ್ಲಿ ಅರ್ಧಕ್ಕೆ ನಿಲ್ಲಿಸಿದ್ದರಿಂದ ಚರಂಡಿ ನೀರು ತುಂಬಿ ನಿಂತು ಮನೆಗಳಿಗೆ ನೀರು ನುಗ್ಗಿವೆ ಹಾಗೂ ರಸ್ತೆಯ ಮೇಲೆ ನೀರು ನಿಂತು. ಗಬ್ಬು ನಾರುತ್ತಿವೆ."[೨೧] ಇದರಿಂದ ಮಕ್ಕಳಿಗೆ ಹಿರಿಯರಿಗೆ ಸಾಂಕ್ರಾಮಿಕ ರೋಗ ಬರುವ ಸಾಧ್ಯತೆ ಇದೆ ಎಂದು ಯಾದಗಿರಿ ಜಿಲ್ಲೆಯ ಹಲವಾರು ಸಂಘಟನೆಗಳು ಹೋರಾಟಗಳನ್ನು ನಡೆಸಿದರೂ ಪ್ರಯೋಜನವಾಗಿಲ್ಲ.

ಯಾದಗಿರಿ ಜಿಲ್ಲೆಯಲ್ಲಿ ಸಮಸ್ಯೆಗಳ ಸರಮಾಲೆಗಳೇ ಇವೆ. ಆದರೆ ಆಡಳಿತಾರೂಢ ಪಕ್ಷ ಮಾತ್ರ ಈ ಯಾವ ಸಮಸ್ಯೆಗಳಿಗೆ ಈ ಜಿಲ್ಲೆಯ ಬಗ್ಗೆ ಕಾಳಜಿ ವಹಿಸುತ್ತಿಲ್ಲ. ಇನ್ನೂ ವಿರೋಧ ಪಕ್ಷಗಳಂತೂ ಕಣ್ಣಿದ್ದು ಕುರುಡರಂತೆ ನಟಿಸುತ್ತಿವೆ. ಹೈದರಾಬಾದ್ ಕರ್ನಾಟಕಕ್ಕೆ ಸ್ವಾತಂತ್ರ್ಯ ಬಂದು ಆರು ದಶಕಗಳು ಕಳೆದರೂ ಇಲ್ಲಿ ವಿರೋಧ ಪಕ್ಷ ಸುಮಾರು ೫–೬ ಸಾವಿರ ಜನರನ್ನು ಸೇರಿಸಿ ಪರಿಣಾಮಕಾರಿ ಹೋರಾಟಗಳನ್ನು ಮಾಡಿದ ದಾಖಲೆಗಳಿಲ್ಲ. ಇದನ್ನೆಲ್ಲಾ ಗಮನಿಸಿದರೆ ವಿರೋಧ ಪಕ್ಷದ ನಿರ್ಲಕ್ಷದಿಂದಾಗಿ ಆಡಳಿತ ಪಕ್ಷಗಳು ಈ ಜಿಲ್ಲೆಯಲ್ಲಿ ಅಭಿವೃದ್ಧಿ ಕೆಲಸ ಕಾರ್ಯಗಳನ್ನು ಮಾಡುತ್ತಿಲ್ಲವೆಂದು ತೋರುತ್ತದೆ.

**ರಾಜಕೀಯ ಪಕ್ಷಗಳ ನಿರ್ಲಕ್ಷ**

ರಾಜಕೀಯವಾಗಿಯೂ ಕೂಡ ಯಾದಗಿರಿ ಜಿಲ್ಲೆ ಕೊನೆಯ ಸ್ಥಾನದಲ್ಲಿರಲು ಕೂಡ ಇಲ್ಲಿನ ಆಡಳಿತ ಪಕ್ಷಗಳು ಕಾರಣವಾಗಿವೆ. ಈ ಜಿಲ್ಲೆಯಲ್ಲಿ ಅಭಿವೃದ್ಧಿ ಕೆಲಸಗಳನ್ನು ಮಾಡುತ್ತಿಲ್ಲ. ಸರಕಾರದಿಂದ ಯೋಜನೆಗಳು ಸಾಕಷ್ಟು ಮಂಜೂರಾಗುತ್ತವೆ. ಆದರೆ ಆ ಮಂಜೂರಾಜದ ಹಣವೆಲ್ಲ ಆಡಳಿತ ಪಕ್ಷ ಮತ್ತು ಅಧಿಕಾರಿಗಳು ಹಂಚಿಕೊಂಡು ತಿಂದರೆ ಅಭಿವೃದ್ಧಿ ಕೆಲಸಗಳು ಆಗಲು ಎಲ್ಲಿಂದ ಸಾಧ್ಯವಾಗುತ್ತದೆ. ಇದನ್ನೆಲ್ಲಾ ಕೇಳಕಾಗಿರುವ ಕೆಲಸ ವಿರೋಧ ಪಕ್ಷ ಮತ್ತು ಪ್ರಜೆಗಳದ್ದು. ಆದರೆ ಈ ಜಿಲ್ಲೆಯಲ್ಲಿ ಪ್ರಜೆಗಳಿಗೆ ಇಂತಹ ಯಾವ ಯೋಜನೆಗಳ ಬಗ್ಗೆ ಸರಕಾರಿ ಅಧಿಕಾರಿಗಳು ಸರಿಯಾದ ಮಾಹಿತಿಯನ್ನೇ ನೀಡುವುದಿಲ್ಲ. ಇನ್ನು ವಿರೋಧ ಪಕ್ಷ ಇದನ್ನು ವಿರೋಧಿಸಿ ಪ್ರತಿಭಟಿಸಬಹುದು. ಆದರೆ ವಿರೋಧ ಪಕ್ಷದ ಅಸಮರ್ಥತೆ ಈ ಜಿಲ್ಲೆಯಲ್ಲಿ ಎದ್ದು ಕಾಣುತ್ತದೆ. ಎಲ್ಲಿಯವರೆಗೆ ಈ ಜಿಲ್ಲೆಯಲ್ಲಿ ವಿರೋಧ ಪಕ್ಷ ಪ್ರಬಲವಾಗಿ ಆಡಳಿತ ಪಕ್ಷವನ್ನು ವಿರೋಧಿಸಿ ಪ್ರತಿಭಟಿಸುವುದಿಲ್ಲವೋ ಅಲ್ಲಿಯವರೆಗೆ ಈ ಜಿಲ್ಲೆಯಲ್ಲಿ ಅಭಿವೃದ್ಧಿ ಕೆಲಸಗಳಾಗಲು ಮತ್ತು ಈ ಜಿಲ್ಲೆ ಅಭಿವೃದ್ಧಿ ಹೊಂದಲು ಸಾಧ್ಯವೇ ಇಲ್ಲ.

**೭.೩. ಶೈಕ್ಷಣಿಕ ಸ್ಥಿತಿಗತಿಗಳು**

೧೯೫೬ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ ಹೆಚ್ಚಾಗಿ ಕನ್ನಡ ಶಾಲೆಗಳು ಹುಟ್ಟಿಕೊಳ್ಳತೊಡಗಿದವು. ಕನ್ನಡ ಶಾಲೆಗಳು ಆರಂಭಗೊಂಡಾಗ ಬೀದರ್, ಗುಲಬರ್ಗಾ(ಅವಿಭಜಿತ)

ಈ ಎರಡೂ ಜಿಲ್ಲೆಗಳಲ್ಲಿ ಕನ್ನಡ ಕಲಿಸುವ ಶಿಕ್ಷಕರು ಇರಲಿಲ್ಲವೆಂದು ತಿಳಿದುಬರುತ್ತದೆ. ಪ್ರಾಥಮಿಕ ಹಂತದಲ್ಲಿ ಕನ್ನಡ ಶಾಲೆಗಳ ಬೆಳವಣಿಗೆ ನಿಧಾನಗತಿಯಲ್ಲಿ ಆಯಿತು. ಈ ನಿಧಾನ ಈ ಹೊತ್ತಿಗೂ ತನ್ನ ಗತಿಯನ್ನು ಕಾಯ್ದುಕೊಂಡು ಬಂದಿದೆ. "೨೧ನೇ ಶತಮಾನದಲ್ಲಿ ಕೂಡ ಕರ್ನಾಟಕದಲ್ಲಿಯೇ ಈ ಜಿಲ್ಲೆ ಶೈಕ್ಷಣಿಕವಾಗಿ ಹಿಂದುಳಿದಿದೆ. ಸ್ವಾತಂತ್ರ್ಯ ನಂತರ ಉನ್ನತ ಶಿಕ್ಷಣಕ್ಕೆ ಬೇಕಾದ ಅವಕಾಶಗಳು ಹೆಚ್ಚಾಗಿರಲಿಲ್ಲ. ೧೯೭೦ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಗುಲಬರ್ಗಾದಲ್ಲಿ ಆರಂಭವಾಯಿತು. ಈ ಕೇಂದ್ರಕ್ಕೆ ಬೋಧಕರಾಗಿ ಬಂದವರು ಕೂಡ ಮುಂಬಯಿ ಪ್ರಾಂತ್ಯದವರೇ."[೨೨]

**ವಲಸಿಗರ ಮಕ್ಕಳ ಶೈಕ್ಷಣಿಕ ಸಮಸ್ಯೆಗಳು**

ಶಿಕ್ಷಣವನ್ನು ಕಲಿಯುವುದು ಅವರವರ ಸ್ಥಾನಮಾನ ಮತ್ತು ಬುದ್ಧಿಮತ್ತೆಯನ್ನು ಹೆಚ್ಚಿಸುವ ಸಂಗತಿಯಾಗಿದೆ. ವಿದ್ಯೆ ಪಡೆದವನ ಬಗೆಗೆ ಎಲ್ಲಾ ಕಾಲಕ್ಕೂ ಅಪಾರ ಗೌರವವನ್ನು ಈ ಸಮಾಜ ಇಟ್ಟುಕೊಂಡಿದೆ. ಈ ಪ್ರದೇಶದಲ್ಲಿ ಬಡತನ ಹೆಚ್ಚಾಗಿದೆ. ಬಡವರು, ಕೆಳವರ್ಗದವರು ದುಡಿಮೆಗಾಗಿ ನೆರೆ ರಾಜ್ಯಗಳಿಗೆ ವಲಸೆ ಹೋಗುತ್ತಾರೆ. ರಾಜ್ಯದ ಒಳಗೆ ಇರುವ ದೊಡ್ಡ ನಗರಗಳಿಗೂ ಹೋಗುತ್ತಾರೆ. ದುಡಿಮೆಗಾಗಿ ವಲಸೆ ಹೋಗುವವರು ಇಲ್ಲಿಯ ಬೇರು ಕಡಿದುಕೊಂಡು ಹೋಗುವುದಿಲ್ಲ. ಯಾಕೆಂದರೆ ಮನೆ, ಚೂರುಪಾರು ಭೂಮಿ ಇರುತ್ತದೆ. ಇರುವ ಭೂಮಿಯನ್ನು ಉತ್ತು ಬಿತ್ತುವಾಗ ಮತ್ತು ಸುಗ್ಗಿ ಬಂದಾಗ ಇಲ್ಲಿಗೆ ಬರುವುದು, ಸುಗ್ಗಿ ಮುಗಿದ ಕೂಡಲೇ ಪುನಃ ಹೋಗುವುದು ಮಾಡುತ್ತಾರೆ. ಅವರ ಬೇರುಗಳು ಈ ಪ್ರಾಂತದಲ್ಲಿಯೇ ಇರುತ್ತವೆ. ಈ ಬಗೆಯದು ಒಂದು ವರ್ಗವಾದರೆ, ಇನ್ನೊಂದು ವರ್ಗ ಈ ಪ್ರಾಂತದಲ್ಲಿಯೇ ನೀರಾವರಿ ಪ್ರದೇಶಗಳಿಗೆ ಹೋಗಿ ದುಡಿದು ಪುನಃ ತಮ್ಮ ಜಿಲ್ಲೆಗಳಿಗೆ ಹೋಗುತ್ತಾರೆ. "ರಾಯಚೂರು ಜಿಲ್ಲೆಯಲ್ಲಿ ನೀರಾವರಿ ಇರುವ ಮಾನ್ವಿ, ಸಿಂಧನೂರು, ಗಂಗಾವತಿ ತಾಲೂಕುಗಳಿಗೆ ಯಾದಗಿರಿ ಜಿಲ್ಲೆಯಿಂದ ಸುಗ್ಗಿಗೆ ಹೋಗುತ್ತಾರೆ. ಈ ಬಗೆಯ ವಲಸಿಗರ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಲೇ ಇರುತ್ತಾರೆ. ಬಡತನದಿಂದ ಚಿಕ್ಕವಯಸ್ಸಿನಲ್ಲೇ ದುಡಿಮೆಗೆ ಒಳಗಾಗುವುದರಿಂದ ಶಾಲೆಗೆ ಹೋಗುವುದು ಈ ಮಕ್ಕಳಿಗೆ ಆಗುವುದಿಲ್ಲ. ಇಂತಹ ಸಾವಿರಾರು ಮಕ್ಕಳೇ ಕನ್ನಡ ಶಾಲೆಗೆ ಹೋಗಿ ಕಲಿಯಬೇಕಾಗಿರುವವರು. ನಿರಂತರವಾಗಿ ಶಾಲೆಗಳಿಗೆ ಹೋಗಿ ಕಲಿಯುವುದು ಈ ಮಕ್ಕಳಿಗೆ ಸಾಧ್ಯವಾಗುವುದಿಲ್ಲ. ಹೀಗಾಗಿ ಸಾಕ್ಷರತೆಯ ಪ್ರಮಾಣ ಕುಸಿದಿದೆ."[೨೩]

"ಸರಕಾರ ಈ ಪ್ರಾಂತವನ್ನು ಶೈಕ್ಷಣಿಕವಾಗಿ ಅಭಿವೃದ್ಧಿಪಡಿಸುವ ಸಲುವಾಗಿಯೇ ಪ್ರತ್ಯೇಕ ಶಿಕ್ಷಣ ನಿರ್ದೇಶನಾಲಯಗಳನ್ನು ಸ್ಥಾಪಿಸಿದೆ. ಸ್ಥಾಪಿಸಿದ ಮೊದಲನೇ ವರ್ಷವೇ ಪ್ರಾಥಮಿಕ ಶಾಲೆಯ ಫಲಿತಾಂಶ ಹಿಂದಿಗಿಂತ ಹೆಚ್ಚು ಕುಸಿದಿದೆ. ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಫಲಿತಾಂಶವು ಈ ಪ್ರಾಂತದಲ್ಲಿ ಕೆಳಕ್ಕೆ ಕುಸಿದಿರುವ ಪರಿಣಾಮವಾಗಿ ಪಿ.ಯು.ಸಿ.ಯಲ್ಲಿಯೂ ಕೂಡ ಇದು ಮುಂದುವರಿಯುತ್ತಿದೆ."[೨೪]

ಇಷ್ಟು ಪ್ರಮಾಣದಲ್ಲಿ ಫಲಿತಾಂಶ ಕುಸಿದಿರುವುದು, ತೇರ್ಗಡೆಯಾಗದ ಮಕ್ಕಳನ್ನು ಪುನಃ ಶಾಲೆಗೆ ಬರುವಂತೆ ಮಾಡುವುದು ಈ ಎರಡು ಪ್ರಮುಖ ಸಮಸ್ಯೆಗಳನ್ನು ಸುಧಾರಿಸುವುದು

ಸುಲಭದ ಕೆಲಸವಲ್ಲ. ಸರಕಾರವೇನೋ ಈ ಪ್ರಾಂತಗಳಲ್ಲಿ ಪ್ರತ್ಯೇಕ ಶಿಕ್ಷಣ ನಿರ್ದೇಶನಾಲಯಗಳನ್ನು ಸ್ಥಾಪಿಸಿದೆ. ಮಧ್ಯಾಹ್ನದ ಊಟವನ್ನು ಮಕ್ಕಳಿಗೆ ನೀಡುವ ಯೋಜನೆಯನ್ನು ಜಾರಿಗೆ ತಂದಿದೆ. ಆದರೆ ವಲಸೆ ಹೋಗಿ ಬರುವ ಅಸಂಖ್ಯಾತ ಕುಟುಂಬಗಳಿಗೆ ಈ ಪ್ರಾಂತಗಳಲ್ಲೇ ದುಡಿಯುವ ಅವಕಾಶಗಳು ಸೃಷ್ಟಿಯಾದಾಗ ಮಾತ್ರ ಈ ಕುಟುಂಬಗಳ ಮಕ್ಕಳು ಒಂದು ಕಡೆ ನೆಲೆ ನಿಲ್ಲುವಂತಾಗುತ್ತದೆ. ಆಗ ಅವರ ಕಲಿಕೆ ನಿರಂತರವಾಗಿ ಸಾಗಿದಂತಾಗುತ್ತದೆ. ದುಡಿಯುವ ಕುಟುಂಬಗಳಲ್ಲಿ ಹೆಣ್ಣುಮಕ್ಕಳೂ, ಅನಿವಾರ್ಯವಾಗಿ ದುಡಿಯಬೇಕಾಗಿದೆ. ಈ ಜಿಲ್ಲೆಯಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಅಪಾರವಾಗಿದೆ. ಇದರಿಂದ ಮಕ್ಕಳ ಪಾಲನೆ ಅವರ ಕಲಿಕೆಯ ಕಡೆ ಗಮನ ಕೊಡಬೇಕಾಗಿರುವ ತಾಯಂದಿರೇ ದುಡಿಯುವ ಭಾರದಿಂದ ತತ್ತರಿಸುತ್ತಿದ್ದಾರೆ. ಕುಟುಂಬದಲ್ಲಿ ಮಕ್ಕಳ ಭವಿಷ್ಯದ ದೃಷ್ಟಿಯಿಂದ ಕನಿಷ್ಠ ಪ್ರಮಾಣದ ಕಾಳಜಿ ವಹಿಸಲು ಮಹಿಳೆಯರಿಗೆ ಅವಕಾಶಗಳು ಇಲ್ಲ. ಇದರಿಂದಾಗಿ ಮಕ್ಕಳು ಕಲಿಕೆಯಿಂದ ವಂಚಿತವಾಗುತ್ತಿವೆ. ದುಡಿಯುವ ಕುಟುಂಬಗಳಲ್ಲಿ ಮಕ್ಕಳ ಗತಿ ಹೀಗಾಗುತ್ತಿದ್ದರೆ, ಅನುಕೂಲಸ್ಥರ ಮಕ್ಕಳಿಗೆ ಬೇರೆ ಸಮಸ್ಯೆಗಳಿವೆ.

"ಈ ಹೊತ್ತಿನ ಜಾಗತೀಕರಣವು ಇಂಗ್ಲೀಷ್ ಭಾಷೆಯನ್ನು ಬೇಡುತ್ತದೆ ಎಂದು ಮಧ್ಯಮ ವರ್ಗದಿಂದ ಹಿಡಿದು, ಮೇಲ್ವರ್ಗ ಸೇರಿದಂತೆ ಆರ್ಥಿಕವಾಗಿ ತಕ್ಕ ಮಟ್ಟಿಗೆ ಸುಸ್ಥಿತಿಯಲ್ಲಿರುವ ಬಹುತೇಕ ಕುಟುಂಬಗಳು ಇಂಗ್ಲಿಷ್ ಮಾಧ್ಯಮದಲ್ಲಿ ತಮ್ಮ ಮಕ್ಕಳು ಕಲಿಯಲಿ ಎಂಬ ಹೆಬ್ಬಯಕೆಯನ್ನು ಹೊತ್ತಿವೆ. ಪಡಬಾರದ ಪಾಡುಪಟ್ಟು ಇಂಗ್ಲಿಷ್ ಶಾಲೆಗಳಿಗೆ ಕಳುಹಿಸಲು ಪ್ರಯತ್ನಿಸುತ್ತಾರೆ. ಪಟ್ಟಣ ನಗರವಾಸಿ ಮಕ್ಕಳು ಹೇಗೋ ಇಂಗ್ಲಿಷ್ ಕಲಿಕೆಯನ್ನು ಮುಂದುವರಿಸುತ್ತಾರೆ. ಗ್ರಾಮಾಂತರ ಮಕ್ಕಳಿಗೆ ಇದು ಸಾಧ್ಯವಾಗುವುದಿಲ್ಲ. ಯಾಕೆಂದರೆ ಗ್ರಾಮಾಂತರ ಪ್ರದೇಶಗಳಲ್ಲಿ ತಲೆ ಎತ್ತುತ್ತಿರುವ ಶಾಲೆಗಳಲ್ಲಿ ಇಂಗ್ಲಿಷ್ ಕಲಿಕೆ ಎಂಬುದು ಹೆಸರಿಗೆ ಮಾತ್ರ ಇರುತ್ತದೆ. ಅದು ಪ್ರಾಥಮಿಕ ಹಂತದವರೆಗೆ ಮಾತ್ರ. ಈ ಶಾಲೆಗೆ ಸೇರುವ ಮಕ್ಕಳು ಪ್ರಾಥಮಿಕ ಹಂತದಲ್ಲೇ ಮಾತೃಭಾಷೆಯಿಂದ ವಂಚಿತರಾಗುತ್ತಾರೆ. ಅತ್ತ ಇಂಗ್ಲಿಷ್ ಕಲಿಕೆಯನ್ನು ವ್ಯವಸ್ಥಿತವಾಗಿ ಕಲಿಯುವುದಿಲ್ಲ. ಹೀಗಾಗಿ ಗ್ರಾಮಾಂತರ ಪ್ರದೇಶದ ಮಕ್ಕಳು ಅತ್ತ ಕನ್ನಡ ಕಲಿಕೆಯಿಂದಲೂ, ಇತ್ತ ಇಂಗ್ಲಿಷ್ ಕಲಿಕೆಯಿಂದಲೂ ವಂಚಿತರಾಗಿ ಅತಂತ್ರ ಸ್ಥಿತಿಯಲ್ಲಿ ಉಳಿಯುವ ಪರಿಸ್ಥಿತಿ ನಿರ್ಮಾಣವಾಗಿದೆ. ಗ್ರಾಮಾಂತರ ಪ್ರದೇಶದ ರೈತರ ಮಕ್ಕಳು ಈ ಪರಿಸ್ಥಿತಿಗೆ ಬಲಿಯಾಗುತ್ತಿದ್ದಾರೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ರೈತರ ಮಕ್ಕಳು(ಮಧ್ಯಮವರ್ಗದ ನೌಕರರ ಮಕ್ಕಳು) ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯಲು ಆರಂಭಿಸಿ ಕಾಲೇಜು ತಲುಪುವ ಹೊತ್ತಿಗೆ ಮಧ್ಯಂತರದಲ್ಲಿ ಶಿಕ್ಷಣಕ್ಕೆ ಶರಣು ಹೊಡೆಯುತ್ತಾರೆ."[೨೫] ಇಂತಹ ವಿದ್ಯಾರ್ಥಿ ವರ್ಗವು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗುತ್ತಿದೆ. ಅತ್ತ ಕನ್ನಡವೂ ಬರುವುದಿಲ್ಲ, ಇತ್ತ ಇಂಗ್ಲಿಷ್ ಬರುವುದಿಲ್ಲ.

ಅಕ್ಷರ ಕಲಿತು, ಕೇವಲ ಸಾಕ್ಷರರಾಗುವುದಕ್ಕೆ ಇಷ್ಟು ಸಮಸ್ಯೆಗಳಿರುವಾಗ ಇನ್ನು ಉನ್ನತ ಶಿಕ್ಷಣ ಲಭ್ಯವಾಗುವುದು ಎಷ್ಟು ಜನಕ್ಕೆ? ಈಗ ಜಾಗತೀಕರಣದಿಂದ ನಮ್ಮ ಜಗತ್ತೇ ಬದಲಾಗಿ ಹೋಗಿದೆ. "ಸರಕಾರಿ ಕೆಲಸಗಳು ಮಾಯವಾಗುತ್ತಿವೆ. ಖಾಸಗೀಕರಣದಲ್ಲಿ ಈ ಜಿಲ್ಲೆಯ ವಿದ್ಯಾರ್ಥಿಗಳು ಕೆಲಸ ಪಡೆಯುವುದು ಕನಸಿನ ಮಾತಾಗುತ್ತಿದೆ. ದೊಡ್ಡ ದೊಡ್ಡ ಉದ್ಯಮಗಳು

ಉದಾರೀಕರಣದಿಂದ ಮುಚ್ಚುತ್ತಿವೆ. ದುಡಿವ ವರ್ಗಕ್ಕೆ ದುಡಿಮೆಗೆ ಅವಕಾಶಗಳು ಕಡಿಮೆಯಾಗುತ್ತಿವೆ. ಪದವೀಧರರಿಗೆ ಉದ್ಯೋಗಾವಕಾಶಗಳು ಇಲ್ಲ."[೨೬] ಇಲ್ಲಿನ ವಿದ್ಯಾವಂತರ ಸ್ಥಿತಿ ಹೇಳದಷ್ಟು ದುಸ್ಥಿತಿಯಲ್ಲಿದೆ.

**ನೆಲೆಸಿರುವ ಆಂಧ್ರದ ರೈತರು**

ಯಾದಗಿರಿ ಜಿಲ್ಲಾ ಪ್ರದೇಶಕ್ಕೆ ಆಂಧ್ರಪ್ರದೇಶ ಹೊಂದಿಕೊಂಡಿದೆ. ಯಾದಗಿರಿ ನಗರದಲ್ಲಿ ಮೊದಲಿನಿಂದಲೂ ವ್ಯವಹಾರವು ತೆಲುಗಿನಲ್ಲಿಯೇ ಹೆಚ್ಚು. ದುಡಿಯುವ ಬಹುತೇಕ ವರ್ಗವು ತೆಲುಗನ್ನೇ ಮಾತಾಡುತ್ತದೆ. ಸುಮಾರು ವರ್ಷಗಳಿಂದ ಯಾದಗಿರಿ ಜಿಲ್ಲೆಯ ಶಹಾಪುರ, ಸುರಪುರ ಹಾಗೂ ಯಾದಗಿರಿ ತಾಲ್ಲೂಕುಗಳಲ್ಲಿ ಆಂಧ್ರದ ರೈತರು ನೆಲೆಸಿದ್ದಾರೆ. "ಭೀಮಾ ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ನೀರಾವರಿಯಾಗಿರುವ ಭೂಮಿ ಕೊಂಡುಕೊಂಡು ವಾಸವಾಗಿದ್ದಾರೆ. ಇದರಿಂದ ಗಡಿಯಲ್ಲಿದ್ದ ತೆಲುಗು ಭಾಷೆ–ಸಂಸ್ಕೃತಿ ಈಗ ಜಿಲ್ಲೆಯ ಒಡಲೊಳಗೆ ಸೇರಿಕೊಂಡಿದೆ. ಆಂಧ್ರದ ತೆಲುಗು ಭಾಷೆ, ಊಟ, ಉಡುಗೆ, ತೊಡುಗೆಗಳು ಸ್ಥಳೀಯರ ವ್ಯವಹಾರದಲ್ಲಿ ಸೇರಿಕೊಂಡಿದೆ. ಆಂಧ್ರದ ರೈತರು ಸುಮಾರು ವರ್ಷಗಳಿಂದ ಭತ್ತ ಬೆಳೆಯುತ್ತಿದ್ದಾರೆ. ಭೂಮಾಲೀಕರಾಗಿ ಬೆಳೆದಿದ್ದಾರೆ. ಇಲ್ಲಿಯ ಬಹುಸಂಖ್ಯಾತ ಬಡವರು, ಕೆಳವರ್ಗದವರು ಈ ಆಂಧ್ರ ಭೂಮಾಲೀಕರ ಅಧೀನದಲ್ಲಿ ದುಡಿಯುತ್ತಿದ್ದಾರೆ. ಆಂಧ್ರ ಭೂಮಾಲೀಕರ ಅಧೀನದಲ್ಲಿ ದುಡಿಯುವುದು ದುಡಿವ ವರ್ಗಕ್ಕೆ ಕೇವಲ ಹೊಟ್ಟೆಪಾಡಿನ ಪ್ರಶ್ನೆ ಮಾತ್ರವಾಗಿಲ್ಲ, ಒಂದು ಬಗೆಯ 'ಅಸ್ಪೃಶ್ಯತೆ'ಯನ್ನು ಕಳೆದುಕೊಂಡಂತಾಗಿದೆ. ಜಾತಿಯ ಕಟ್ಟುಪಾಡುಗಳಿವೆ. ಆಂಧ್ರರ ಅಧೀನದಲ್ಲಿ ಕರ್ನಾಟಕದ ಬಡವರು, ಕೆಳವರ್ಗದವರು ದುಡಿಯುತ್ತಿದ್ದಾರೆ. ಇದು ಆಂಧ್ರದ ಸಂಸ್ಕೃತಿಯನ್ನು ಅನುಸರಿಸಲು ಕಾರಣವಾಗಿದೆ."[೨೭] ಹೀಗೆ ದುಡಿಯುವ ವರ್ಗವು ತೆಲುಗು ಭಾಷೆಯನ್ನು ರೂಢಿಸಿಕೊಂಡಿದೆ. ಈ ವರ್ಗದ ಮಕ್ಕಳು ಕನ್ನಡ ಶಾಲೆಗೆ ಹೋಗಿ ಕಲಿಯುವ ಉತ್ಸಾಹವನ್ನೇ ಕಳೆದುಕೊಂಡಿದ್ದಾರೆ.

ಒಂದು ಸಮೀಕ್ಷೆಯ ಪ್ರಕಾರ 'ಕೃಷ್ಣಾ ಅಚ್ಚು ಪ್ರದೇಶದ ಒಟ್ಟು ಭತ್ತದ ಪ್ರದೇಶದಲ್ಲಿ ಆಂಧ್ರದ ರೈತರು ಸುಮಾರು ೨೪ ಸಾವಿರ ಹೆಕ್ಟರ್ ಭತ್ತ ಬೆಳೆಯುತ್ತಿದ್ದಾರೆ. ಸ್ಥಳೀಯರು ಸುಮಾರು ೧೩ ಸಾವಿರ ಹೆಕ್ಟರ್ ಪ್ರದೇಶದಲ್ಲಿ ಭತ್ತ ಬೆಳೆಯುತ್ತಿದ್ದಾರೆ. ಕೃಷ್ಣಾ ಮೇಲ್ದಂಡೆಯ ನೀರಾವರಿ ಪ್ರದೇಶದಲ್ಲಿ ಏಕೆ ಆಂಧ್ರದ ರೈತರು ಬಂದು ಭೂಮಿಯನ್ನು ಕೊಂಡು ವ್ಯವಸಾಯ ಗಾರರಾಗಿ ನೆಲೆ ನಿಲ್ಲುತ್ತಾರೆ? ನೀರಾವರಿ ಬಂದರೂ ಯಾಕೆ ತಮ್ಮ ಭೂಮಿಯನ್ನು ನೀರಾವರಿಗೆ ಹೊಂದಿಸಿಕೊಂಡು ವ್ಯವಸಾಯ ಮಾಡದೇ ಸ್ಥಳೀಯ ಜನರು ಆಂಧ್ರರಿಗೆ ತಮ್ಮ ಭೂಮಿಯನ್ನು ಮಾರುತ್ತಾರೆ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಈ ಪ್ರಶ್ನೆಗೆ ಉತ್ತರ ಸರಳವಾಗಿಲ್ಲ ಎಂದು ಕಾಣುತ್ತದೆ. ಆಂಧ್ರದವರು ಬಂಡವಾಳ ತಂದು ಭೂಮಿಯನ್ನು ಕೊಂಡು, ವ್ಯವಸಾಯಕ್ಕೆ ಅದನ್ನು ಹದಗೊಳಿಸಿ ನೀರಾವರಿ ಮಾಡಿಕೊಂಡು ಭತ್ತವನ್ನು ಬೆಳೆಯುತ್ತಾರೆ. ಈ ಪ್ರಾಂತದ ಸ್ಥಳೀಯರಿಗೆ ತಮ್ಮಲ್ಲಿಯೇ ಇರುವ ಭೂಮಿಯನ್ನು ವ್ಯವಸಾಯಕ್ಕೆ ಹದಗೊಳಿಸಿಕೊಂಡು ನೀರಾವರಿ ಮಾಡಿಕೊಳ್ಳಲು ಬಂಡವಾಳದ ಕೊರತೆ ಇದೆ. ರೈತರನ್ನು ಒಗ್ಗೂಡಿಸಿಕೊಂಡು ಬಂಡವಾಳವನ್ನು ಕ್ರೋಢೀಕರಿಸುವ ಮತ್ತು ಅದನ್ನು ಸಾಲದ ರೂಪದಲ್ಲಿ ವಿತರಿಸುವುದನ್ನು ಮುಖಂಡರಾಗಲಿ, ಶಾಸಕರಾಗಲಿ,

ಸಹಕಾರ ಸಂಘಗಳಾಗಲಿ, ಬ್ಯಾಂಕುಗಳಾಗಲಿ ಮಾಡಲು ಪ್ರಯತ್ನಿಸಿಲ್ಲವೆಂದು ಕಾಣುತ್ತದೆ. ಬ್ಯಾಂಕುಗಳಿಂದ ಬೆಳೆ ಸಾಲ ದೊರೆಯಬಹುದು. ಈಗಾಗಲೇ ಸಾಗುವಳಿ ಇರುವ ಕಡೆ ಸಾಲ ತಕ್ಕ ಮಟ್ಟಿಗೆ ಸಾಕಾಗಬಹುದು. ಆದರೆ ಮೊದಮೊದಲು ಸಾಗುವಳಿ ಮಾಡುವ ಭೂಮಿಗೆ ಹೆಚ್ಚಿನ ಬಂಡವಾಳ ಬೇಕಾಗುತ್ತದೆ. ಕರ್ನಾಟಕದ ಕೃಷ್ಣಾ ಮೇಲ್ದಂಡೆ ನೀರಾವರಿಗೆ ಒಳಪಡುವ ಭೂಮಿಗೆ, ಅದರ ರೈತರಿಗೆ ಹೆಚ್ಚಿನ ಬಂಡವಾಳ ದೊರೆಯದೇ ಇರುವುದರಿಂದ ಇರುವ ತಕ್ಕಮಟ್ಟಿನ ಭೂಮಿಯನ್ನು ಮಾರಿಕೊಳ್ಳುವ ಸ್ಥಿತಿಗೆ ತಲುಪಿದ್ದಾರೆ.

ಇಂಥವರ ಭೂಮಿಯನ್ನು ಈಗ ಆಂಧ್ರದವರು ಕೊಂಡುಕೊಂಡು ನೆಲೆಸತೊಡಗಿದ್ದಾರೆ. ಮೇಲಾಗಿ ಆಂಧ್ರಪ್ರದೇಶದ ನೀರಾವರಿ ಪ್ರದೇಶಗಳಲ್ಲಿ ನೀರಿನ ಬಳಕೆಗೆ ಅನೇಕ ಕಟ್ಟುನಿಟ್ಟಿನ ನಿಯಮಗಳು ಜಾರಿಯಲ್ಲಿವೆ. "ಭೂಮಿಯ ಫಲವತ್ತತೆಯನ್ನು ರಕ್ಷಿಸಲು ಮುಂಗಾರಿನಲ್ಲಿ ಭತ್ತದ ಬೆಳೆಯನ್ನು ಬೆಳೆಯಲು ಮಾತ್ರ ಅವಕಾಶವಿದೆ. ಹಿಂಗಾರಿನಲ್ಲಿ ಭತ್ತವನ್ನು ಬೆಳೆಸಲು ಅವಕಾಶ ಇರುವುದಿಲ್ಲ. ಹಿಂಗಾರಿನಲ್ಲಿ ಒಣಬೆಳೆಯನ್ನು ಬೆಳೆದುಕೊಳ್ಳಬಹುದು. ಈ ನಿಯಮ ಕರ್ನಾಟಕದಲ್ಲಿ ಇದ್ದರೂ ಅದನ್ನು ಅನುಸರಿಸುವುದಿಲ್ಲ. ರೈತರು ತುಂಗಭದ್ರಾ ಮೇಲ್ದಂಡೆಯಲ್ಲಿ ವರ್ಷಕ್ಕೆ ಎರಡು ಸಲ ಭತ್ತವನ್ನು ಬೆಳೆಯುತ್ತಲೇ ಬಂದಿದ್ದಾರೆ. ಈಗ ಕೃಷ್ಣಾ ಮೇಲ್ದಂಡೆಯಲ್ಲಿ ಕೂಡ ಇದು ಮುಂದುವರಿದಿದೆ. ಇದು ಆಂಧ್ರದ ರೈತರನ್ನು ಆಕರ್ಷಿಸುತ್ತಿದೆ."[೨೮] ಹೀಗಾಗಿ ಈಗ ಯಾದಗಿರಿ ಜಿಲ್ಲೆಯ ತಾಲೂಕುಗಳಲ್ಲಿ ಆಂಧ್ರದ ಜನರು ತುಂಬಿಕೊಳ್ಳುತ್ತಿದ್ದಾರೆ.

**ಶಿಕ್ಷಕರ ಕೊರತೆ**

ಯಾದಗಿರಿ ಜಿಲ್ಲೆಯಾದ ನಂತರ ಶಿಕ್ಷಣದಲ್ಲಿ ಮಹತ್ತರವಾದ ಬದಲಾವಣೆಗಳು ಆಗುತ್ತವೆ ಎಂದು ಭಾವಿಸಲಾಗಿತ್ತು. ಉತ್ತಮ ವಿದ್ಯಾಭ್ಯಾಸ ಈ ಜಿಲ್ಲೆಯಲ್ಲಿ ಸಿಗುತ್ತದೆ ಎಂದು ಇಲ್ಲಿನ ಮಕ್ಕಳು ಮತ್ತು ಪೋಷಕರು ಕನಸು ಕಂಡಿದ್ದರು. ಆದರೆ ಯಾದಗಿರಿ ಜಿಲ್ಲೆಯಾಗಿ ೭ ವರ್ಷಗಳು ಕಳೆದರೂ ಇಲ್ಲಿ ಶಿಕ್ಷಕರ ಕೊರತೆ, ಶಾಲಾಕಟ್ಟಡಗಳ ಸಮಸ್ಯೆ, ಸಾರಿಗೆ-ಸಂಪರ್ಕದ ಸಮಸ್ಯೆ ಹೀಗೆ ಹಲವಾರು ಸಮಸ್ಯೆಗಳು ಬಗೆಹರಿಯದೇ ಇರುವುದು ನಿಜಕ್ಕೂ ದೊಡ್ಡ ದುರಂತವೇ ಸರಿ. ಯಾದಗಿರಿ ಜಿಲ್ಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿವೆ ಆದರೆ ಈ ಶಾಲೆಗಳಲ್ಲಿ ಮಾತ್ರ ಬೋಧಕರ ಕೊರತೆ ಎದ್ದು ಕಾಣುತ್ತದೆ. ಹಾಗಾಗಿಯೇ ಕರ್ನಾಟಕ ರಾಜ್ಯದಲ್ಲಿ ಯಾದಗಿರಿ ಜಿಲ್ಲೆ ಶಿಕ್ಷಣ ಕ್ಷೇತ್ರದಲ್ಲಿ ಕೊನೆಯ ಸ್ಥಾನದಲ್ಲಿದೆ.

ಯಾದಗಿರಿ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಶೈಕ್ಷಣಿಕ ವ್ಯವಸ್ಥೆ ತೀರಾ ಹಿಂದುಳಿದಿದ್ದು ಅದರ ಬಲವರ್ಧನೆಗೆ ಹೆಚ್ಚುವರಿ ಶಿಕ್ಷಕರ ನೇಮಕ ಅಗತ್ಯವಿದೆ ಎಂದು ಈ ಜಿಲ್ಲೆಯಲ್ಲಿ ಆಗಾಗ ಹೋರಾಟಗಳು ನಡೆಯುತ್ತಲೇ ಇವೆ. ಈ ಜಿಲ್ಲೆಯಲ್ಲಿ ಸೌಲಭ್ಯಗಳನ್ನು ಕಲ್ಪಿಸುವಂತೆ ಒತ್ತಾಯಿಸಿ ನಾಗರಿಕರು, ಸಂಘಟನೆಗಳು, ಮಹಿಳೆಯರು ಪ್ರತಿಭಟನೆ ನಡೆಸುವುದು ಸಾಮಾನ್ಯ. ಆದರೆ ವಿದ್ಯಾಭ್ಯಾಸ ಮಾಡಬೇಕಾದ ಮಕ್ಕಳೇ ತರಗತಿಗಳನ್ನು ಬಹಿಷ್ಕರಿಸಿ, ಪ್ರತಿಭಟನೆಗೆ ಇಳಿದ ಘಟನೆಗಳು ಇಲ್ಲಿ ಪಡೆದಿವೆ. ಇಲ್ಲಿನ ಅನೇಕ ಸರಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಯ ಮಕ್ಕಳು ಶಾಲೆಗಳಲ್ಲಿ ಶಿಕ್ಷಕರಿಲ್ಲದ ಕಾರಣ ಬೇಸತ್ತು ಪ್ರತಿಭಟನೆಯ ಹಾದಿ ತುಳಿಯುವಂತಾಗಿದೆ. ಜಿಲ್ಲೆಯಾದ ನಂತರ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಬಹುತೇಕ ಶಿಕ್ಷಕರ ಹುದ್ದೆಗಳು ಖಾಲಿ ಉಳಿದಿವೆ.

ಆದರೂ ಭರ್ತಿ ಮಾಡುವ ಕೆಲಸ ಇಲಾಖೆಯಿಂದ ಆಗುತ್ತಿಲ್ಲ. ಇದು ಮಕ್ಕಳ ಶಿಕ್ಷಣದ ಮೇಲೆ ತೀವ್ರ ಪರಿಣಾಮ ಬೀರುತ್ತದೆ. ಬೋಧಕರು ಇಲ್ಲದೇ ಎಸ್ಸೆಸ್ಸೆಲ್ಸಿ ಪರಿಕ್ಷೆ ಎದುರಿಸುವುದು ಹೇಗೆ ಎಂಬ ಚಿಂತೆ ಕಾಡುತ್ತದೆ.

ಪ್ರೌಢಶಾಲೆಗಳಿಗೆ ಸುತ್ತಲಿನ ಹಳ್ಳಿಗಳ ವಿದ್ಯಾರ್ಥಿಗಳು ನಿತ್ಯ ಬರುತ್ತಾರೆ. ಸಮಯಕ್ಕೆ ಸರಿಯಾದ ಬಸ್ ವ್ಯವಸ್ಥೆಯಿಲ್ಲ. ವಿದ್ಯಾರ್ಥಿಗಳು ನಡೆದುಕೊಂಡು ಬರುತ್ತಾರೆ. ಇಂತಹ ಸಮಸ್ಯೆಗಳೆಲ್ಲ ಗೊತ್ತಿದ್ದರೂ ಸಹ ಸಾರಿಗೆ ಇಲಾಖೆ ಅಧಿಕಾರಿಗಳು ಬಸ್ಸಿನ ಸೌಲಭ್ಯ ಒದಗಿಸಿಲ್ಲ. ಕಂಪ್ಯೂಟರ್ ಶಿಕ್ಷಣ ಕೂಡ ಇವರ ಪಾಲಿಗೆ ಗಗನಕುಸುಮವಾಗಿದೆ. ಬಿಸಿ ಊಟದ ಕೋಣೆ ಇಲ್ಲ. ಶಾಲೆಯ ಸುತ್ತ ಕಾಂಪೌಂಡ್ ನಿರ್ಮಾಣ ಮಾಡಿಲ್ಲ. ಶೌಚಾಲಯಕ್ಕಾಗಿ ಪರದಾಡುವಂತಹ ಪರಿಸ್ಥಿತಿ ಇದೆ. ಹೀಗೆ ಹಲವಾರು ಸಮಸ್ಯೆಗಳು ಈ ಜಿಲ್ಲೆಯ ಶಾಲೆಗಳಲ್ಲಿವೆ. "ಶಿಕ್ಷಕರ ನಿಯೋಜನೆಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಒತ್ತಾಯಿಸಿ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಮನವಿ ಸಲ್ಲಿಸಿದರೂ ಏನು ಪ್ರಯೋಜನವಾಗಿಲ್ಲ. ಶಾಲೆಯಲ್ಲಿ ಪಾಠ ಕೇಳಬೇಕಾದ ಮಕ್ಕಳೇ ತರಗತಿ ಬಹಿಷ್ಕರಿಸಿ ಶಿಕ್ಷಕರನ್ನು ನಿಯೋಜಿಸುವಂತೆ ಪ್ರತಿಭಟನೆ ನಡೆಸುವಷ್ಟು ಜಿಲ್ಲೆಯ ಶೈಕ್ಷಣಿಕ ವ್ಯವಸ್ಥೆ ಹದಗೆಟ್ಟಿರುವುದು ದೌರ್ಭಾಗ್ಯ. ಶಿಕ್ಷಕರನ್ನು ನಿಯೋಜಿಸಲು ಸರ್ಕಾರ ಮೊದಲಿನಿಂದಲೂ ತಾತ್ಸಾರ ಮನೋಭಾವ ತೋರಿಸುತ್ತಿದೆ. ಇದು ಎಸ್ಸೆಸ್ಸೆಲ್ಸಿ ಪರೀಕ್ಷೆಯಲ್ಲಿ ಕಳಪೆ ಸಾಧನೆಗೆ ದಾರಿ ತೋರಿದೆ. ಅಧಿಕಾರಿಗಳು ಭರವಸೆ ನೀಡುವ ಮೂಲಕ ಕಾಲಹರಣ ಮಾಡುತ್ತಿದ್ದಾರೆ."[೨೯] ಇಂತಹ ಅಧಿಕಾರಿಗಳಿಂದ ಜಿಲ್ಲೆಯ ಶೈಕ್ಷಣಿಕ ಕ್ಷೇತ್ರ ಪ್ರಗತಿ ಹೊಂದಲು ಸಾಧ್ಯವಿಲ್ಲ.

ಈ ಜಿಲ್ಲೆಯಲ್ಲಿ ಶಿಕ್ಷಣ ಪ್ರಮಾಣ ಕಡಿಮೆ ಇದ್ದುದರಿಂದ ಮೂಢನಂಬಿಕೆಗಳ ಬೀಡಾಗಿದೆ. ಯಾದಗಿರಿ ಜಿಲ್ಲೆಯಲ್ಲಿ ಶಿಕ್ಷಣದ ಕೊರತೆಯಿಂದ ಗ್ರಾಮೀಣ ಪ್ರದೇಶದಲ್ಲಿ ಬಾಲ್ಯವಿವಾಹಗಳು ನಡೆಯುತ್ತಿವೆ. "ಹೆಚ್ಚಾಗಿ ಹೆಣ್ಣುಮಕ್ಕಳನ್ನು ಶಾಲೆ ಬಿಡಿಸಿ ಬಾಲ್ಯವಿವಾಹ ಮಾಡಲಾಗುತ್ತಿದೆ. ಇದು ಹೆಣ್ಣುಮಕ್ಕಳ ಮೇಲೆ ಕೆಟ್ಟ ಪರಿಣಾಮ ಬೀರಿ ಅವರ ಆರೋಗ್ಯಕ್ಕೂ ಅಪಾಯ ತಂದೊಡ್ಡುತ್ತದೆ. ಇದು ಮಕ್ಕಳ ಭವಿಷ್ಯಕ್ಕೆ ಮಾರಕ. ಅಲ್ಲದೆ ಕಾನೂನು ಪ್ರಕಾರ ಅಪರಾಧ. ಬಾಲ್ಯವಿವಾಹ ಮಾಡಿದರೆ ಕಠಿಣ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ."[೩೦] ಇಂಥ ಎಲ್ಲಾ ವಿಷಯಗಳು ಈ ಜಿಲ್ಲೆಯ ಜನರಿಗೆ ತಿಳಿದಿದ್ದರೂ ಕೂಡ ಬಾಲ್ಯವಿವಾಹಗಳು ಇಂದಿಗೂ ಕೂಡ ನಡೆಯುತ್ತಲೇ ಇವೆ. ಬಾಲ್ಯವಿವಾಹಗಳು ಆಗುತ್ತಿರುವುದರಿಂದ ಅಪೌಷ್ಟಿಕ ಮಕ್ಕಳು ಜನಿಸುತ್ತವೆ.

ಯಾದಗಿರಿ ಜಿಲ್ಲೆಯಲ್ಲಿ ವಿದ್ಯಾರ್ಥಿಗಳು ಮತ್ತು ಪೋಷಕರು ೩೭೧(ಜೆ) ಕಲಂ ಅಡಿ ದಾಖಲಾತಿಗಳನ್ನು ಪಡೆಯಲು ಹರಸಾಹಸ ಪಡುತ್ತಿದ್ದು, ನಿಯಮಗಳಲ್ಲಿ ಕೊಂಚ ಸಡಿಲಿಕೆ ತರುವ ಮೂಲಕ ಒಂದೇ ಸೂರಿನಡಿ ಎಲ್ಲಾ ದಾಖಲೆಗಳು ಲಭ್ಯವಾಗುವಂತೆ ನಿಯಮ ರೂಪಿಸಬೇಕೆಂದು ವಿದ್ಯಾರ್ಥಿಗಳು ಮತ್ತು ಪೋಷಕರು ಹೋರಾಟ ಮಾಡಿದರು. "ಪ್ರಸಕ್ತ ನಿಯಮಗಳ ಪ್ರಕಾರ ಒಂದೊಂದು ತಿಂಗಳು ಅಲೆದರೂ ಎಲ್ಲಾ ದಾಖಲೆಗಳನ್ನು ಕಲೆಹಾಕಲು ಆಗುತ್ತಿಲ್ಲ. ಕಾರಣ ಸಮಯದ ಉಳಿತಾಯಕ್ಕೆ ಮಹತ್ವ ನೀಡಿ ಸರ್ಕಾರ ನಿಯಮಗಳನ್ನು

ಸಡಿಲಿಸಬೇಕೆಂದು ಒತ್ತಾಯಿಸಿದರು. ದಾಖಲಾತಿಗಳನ್ನು ಸಂಗ್ರಹಿಸಲು ಶಾಲಾ ಕಾಲೇಜು, ಬಿಇಓ ಕಛೇರಿ ಹಾಗೂ ಕಂದಾಯ ಇಲಾಖೆ ಹೀಗೆ ಕಛೇರಿಗಳಿಗೆ ಸುತ್ತುವುದರಲ್ಲಿಯೇ ವಿದ್ಯಾರ್ಥಿಗಳ ಕಾಲ ಹರಣವಾಗುತ್ತದೆ. ಪ್ರತಿ ಕಛೇರಿಯಲ್ಲೂ ಇಡೀ ದಿನ ಸರದಿಯಲ್ಲಿ ನಿಂತು ಅರ್ಜಿ ಸಲ್ಲಿಸಬೇಕಾದ ಪರಿಸ್ಥಿತಿ ಇದೆ. ಇದರಿಂದ ಪಾಲಕರ ಮತ್ತು ವಿದ್ಯಾರ್ಥಿಗಳ ಗೋಳು ಹೇಳತೀರದು. ಅಲ್ಲದೆ ಶಾಲಾ ಕಾಲೇಜುಗಳ ಪ್ರಾಂಶುಪಾಲರ ಹಾಗೂ ಮುಖ್ಯ ಶಿಕ್ಷಕರ ಕಛೇರಿ ಅಧಿಕಾರಿಗಳಿಗೂ ತೊಂದರೆಯಾಗುತ್ತಿದೆ. ಇದನ್ನು ತಪ್ಪಿಸಲು ಸರ್ಕಾರ ತಕ್ಷಣ ಪರ್ಯಾಯ ಕ್ರಮ ಕೈಗೊಳ್ಳಬೇಕು."[೩೧] ಹೈದರಾಬಾದ್ ಕರ್ನಾಟಕ ಪ್ರದೇಶದಾದ್ಯಂತ ಆಯಾ ಜಿಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಒಂದೇ ಕಡೆ ಎಲ್ಲಾ ದಾಖಲಾತಿಗಳು ಸಿಗುವ ಹಾಗೆ ಮಾಡಿ, ವಿದ್ಯಾರ್ಥಿಗಳಿಗೆ ಹಾಗೂ ಪಾಲಕರಿಗೆ ಆಗುವ ತೊಂದರೆ ತಪ್ಪಿಸಬೇಕಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಶಿಕ್ಷಣ ಸಂಸ್ಥೆಗಳಿದ್ದರೂ ಶಿಕ್ಷಣ ಕ್ಷೇತ್ರದಲ್ಲಿ ಇಡೀ ರಾಜ್ಯದಲ್ಲಿಯೇ ಅತ್ಯಂತ ಹಿಂದುಳಿದಿದೆ. ಇದಕ್ಕೆ ಕಾರಣ ಶಿಕ್ಷಕರ ಕೊರತೆ, ಕಟ್ಟಡಗಳ ಕೊರತೆ, ಸಾರಿಗೆ ಸಂಪರ್ಕ ಕೊರತೆ, ವಿದ್ಯುಚ್ಛಕ್ತಿಯ ಕೊರತೆ ಮತ್ತು ಸರಕಾರದ ಸವಲತ್ತುಗಳು ವಿದ್ಯಾರ್ಥಿಗಳಿಗೆ ಸರಿಯಾದ ರೀತಿಯಲ್ಲಿ ತಲುಪದೇ ಇರುವುದು. ಈ ಜಿಲ್ಲೆಯು ಶಿಕ್ಷಣ ಕ್ಷೇತ್ರದಲ್ಲಿ ಮುಂದುವರಿಯಬೇಕಾದರೆ ಈ ಕ್ಷೇತ್ರಕ್ಕೆ ಸರಕಾರದಿಂದ ಸಿಗಬಹುದಾದ ಸವಲತ್ತುಗಳು ಕಾಲ ಕಾಲಕ್ಕೆ ಸರಿಯಾಗಿ ತಲುಪಿದರೆ ಮಾತ್ರ ಸಾದ್ಯ.

ಯಾದಗಿರಿ ಜಿಲ್ಲೆಯ ಸಾಮಾಜಿಕ ಸಮಸ್ಯೆಗಳ ಹಿನ್ನೆಲೆಯಲ್ಲಿ ಚಳುವಳಿ ಮತ್ತು ಹೋರಾಟ ಗಳು ನಡೆದಿವೆ. ಆದರೆ ಅವು ಮೇಲ್ವರ್ಗದವರ ಹಿತಾಸಕ್ತಿಗೆ ಅನುಗುಣವಾಗಿ ನಡೆದಿವೆ ಎನ್ನ ಬಹುದು. ಕಾರಣ ವಿದ್ಯಾವಂತ ಮೇಲ್ವರ್ಗದ ಜನತೆ ಬಹುಬೇಗ ಸಂಘಟಿತರಾಗಿ ವ್ಯವಸ್ಥೆಯೊಂದಿಗೆ ಪ್ರತಿಭಟಿಸಿ ತಮ್ಮ ಹಕ್ಕು ಬಾಧ್ಯತೆಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದಾರೆ. ಈ ಜಿಲ್ಲೆಯಲ್ಲಿ ದೊಡ್ಡ ಮಟ್ಟದಲ್ಲಿ ಹೋರಾಟಗಳು ನಡೆದದ್ದು ಕಡಿಮೆ. ಆದ ಕಾರಣ ಇಂದಿಗೂ ಶೋಷಿತರ ಪರವಾದ ಹೋರಾಟಗಳು ನಡೆಯುತ್ತಿವೆ. ಏಕೆಂದರೆ ಈ ತೆರನಾದ ಚಳುವಳಿಗಳಿಗೆ ಮೇಲ್ವರ್ಗದವರು ಮೌನ ವಹಿಸಿದ್ದು ಮತ್ತೊಂದು ಕಾರಣವಾಗಿದೆ.

ಯಾವುದೇ ಚಳುವಳಿ ಮತ್ತು ಹೋರಾಟಗಳು ಒಂದೇ ರೀತಿಯಾದ ರೂಪುರೇಷೆಗಳನ್ನು ನಿಖರವಾಗಿ ಇಟ್ಟುಕೊಂಡು ಸಾಗುತ್ತವೆ. ಹಾಗೆಯೇ ಯಾದಗಿರಿ ಜಿಲ್ಲೆಯಲ್ಲಿಯೂ ಸಹ ಅನೇಕ ಹೋರಾಟಗಳು ನಡೆದಿವೆ. ಈ ಜಿಲ್ಲೆಯ ಜನರು ಹೋರಾಟಗಳಲ್ಲಿ ಕೇವಲ ಮೂಲಭೂತ ಹಕ್ಕುಗಳಿಗಾಗಿಯೇ ಭಾಗವಹಿಸಿದ್ದು ಇಲ್ಲಿಯವರೆಗೂ ದಾಖಲಾಗಿವೆ. ಆದ್ದರಿಂದ ಅವರನ್ನು ಇನ್ನು ಮುಂದೆ ಬೇರೆ ಬೇರೆ ಅವಶ್ಯಕತೆಗಳಿಗೆ ಸಂಘಟಿತರನ್ನಾಗಿ ಯಾವ ರೀತಿ ಮಾಡುವುದು ಎಂದು ತಿಳಿಯುವುದು ಮಹತ್ವವಾಗಿದೆ. ಯಾದಗಿರಿ ಜಿಲ್ಲೆ ಸಾಮಾಜಿಕ ಚಳುವಳಿಗಳಿಗೆ ಮೂಲ ವೆಂದು ಕರೆಯಲಾಗುತ್ತಿದೆ. ಅದರಂತೆ ಎಲ್ಲಾ ತಾಲೂಕುವಾರು ವಿವರವಾಗಿ ಚಳುವಳಿಗಳ ಸ್ವರೂಪವನ್ನು ಕಟ್ಟಿಕೊಡುವ ಅಧ್ಯಯಗಳು ನಡೆಯಬೇಕಿವೆ. ಇದರಿಂದಾಗಿ ಪ್ರಸ್ತುತ ಅಧ್ಯಯನದ ಕೊರತೆಗಳನ್ನು ಮುಂದಿನ ದಿನಗಳಲ್ಲಿ ತುಂಬುವುದಕ್ಕೆ ಸಹಕಾರಿಯಾಗುತ್ತದೆ. ಈ ಜಿಲ್ಲೆಯ

ಹೋರಾಟಗಾರ ನಾಯಕರ ವಿಚಾರಗಳನ್ನು, ಜೀವನ ಮತ್ತು ಹೋರಾಟಗಳನ್ನು ಕುರಿತು ಲೇಖನಗಳು, ಕಿರು ಹೊತ್ತಿಗೆಗಳು ಬಂದಿವೆ. ಆದರೆ ಈ ನಾಯಕರ ಜೊತೆಗೆ ಇದ್ದ ಸ್ಥಳೀಯ ಜನ ನಾಯಕರ ಸಂದರ್ಶನಗಳು, ಅವರ ಕನಸುಗಳು, ಹೋರಾಟಗಳ ಸ್ವರೂಪ, ಹೋರಾಟಗಳು ನಡೆದಾಗ ಅಂದಿನ ದಿನಮಾನದ ಸಮಾಜ ಅವರನ್ನು ನಡೆಸಿಕೊಂಡ ಬಗೆಯನ್ನು ಆದಷ್ಟು ಬೇಗ ದಾಖಲಿಸಬೇಕಾಗಿದೆ.

ಜಿಲ್ಲೆಯ ಸಾಮಾಜಿಕ ಹೋರಾಟಗಳು, ಭೂಮಿ ಹೋರಾಟಗಳು, ಸರ್ಕಾರಿ ಸೌಲಭ್ಯಗಳಿಗಾಗಿ ನಡೆದ ಹೋರಾಟಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಬಹುದಾಗಿದೆ. ಇದರಿಂದಾಗಿ ರೈತರು ಎಲ್ಲೆಲ್ಲಿ ಸೌಲಭ್ಯಗಳಿಂದ ವಂಚಿತರಾಗುತ್ತಿದ್ದಾರೆ ಎಂಬುದನ್ನು ಗುರುತಿಸಿ, ಅದಕ್ಕೆ ಪರ್ಯಾಯ ಮಾರ್ಗವನ್ನು ಹುಡುಕಲು ಸಾಧ್ಯವಾಗುತ್ತದೆ. ಕಾರ್ಮಿಕರ ಇಂದಿನ ಜೀವನಮಟ್ಟವನ್ನು ಕುರಿತು ಆರ್ಥಿಕವಾಗಿ, ಸಾಮಾಜಿಕವಾಗಿ ಅಧ್ಯಯನ ನಡೆಸಲು ಸಾಧ್ಯತೆಗಳಿವೆ. ಇದರಿಂದಾಗಿ ಸರ್ಕಾರದ ನೀತಿ ನಿಯಮಗಳು ಇನ್ನೂ ಹೇಗೆ ಬದಲಾಗಬೇಕೆಂಬುದಕ್ಕೆ ಸಹಕಾರಿಯಾಗುತ್ತದೆ. ಯಾದಗಿರಿ ಜಿಲ್ಲೆಯ ಹಿಂದುಳಿದ ವರ್ಗಗಳ ಸಾಂಸ್ಕೃತಿಕ ವಿಶೇಷತೆಗಳನ್ನು ಕಲೆ, ಆಚಾರ–ವಿಚಾರ, ಹಬ್ಬ–ಹರಿದಿನಗಳು, ಸಂಪ್ರದಾಯ, ಹೀಗೆ ಅನೇಕ ವಿಧದಲ್ಲಿ ಅಧ್ಯಯನ ನಡೆಸಲು ಅವಕಾಶಗಳಿವೆ ಎನ್ನುವುದನ್ನು ಸಂಕ್ಷಿಪ್ತವಾಗಿ ತಿಳಿಸಬಹುದಾಗಿದೆ.

**ಕೊನೆ ಟಿಪ್ಪಣಿಗಳು**


೧. ರಮೇಶ ನಾಯಕ, ಯಾದಗಿರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೫, ಪುಟ ೨೧೪.

೨. ಅದೇ ಪುಸ್ತಕ, ಪುಟ ೨೧೫.

೩. ರಂಗರಾಜ ವನದುರ್ಗ(ಸಂ), ಕನ್ನಡ ಸಾಹಿತ್ಯ ಮತ್ತು ಜನಪರ ಚಳುವಳಿ, ಪುಟ ೧೪೦.

೪. ವೆಂಕಟೇಶ್ ಕೆ., ಸರೋಜ.ಬಿ., ಹೈದರಾಬಾದ್ ಕರ್ನಾಟಕದ ವರ್ತಮಾನದ ತಲ್ಲಣಗಳು, ಪುಟ ೫೯.

೫. ಮೀನಾಕ್ಷಿ ಬಾಳಿ(ಸಂ), ಚಿವುಟದಿರಿ ಚಿಗುರ(ಹೆಣ್ಣು ಭ್ರೂಣಹತ್ಯೆ ಕುರಿತು ಲೇಖನಗಳು) ಪುಟ ೪೧.

೬. ಕನ್ನಡಪ್ರಭ ೨೫.೫.೨೦೧೪, ಪುಟ ೩.

೭. ಪ್ರಜಾವಾಣಿ ೭.೧.೨೦೧೨, ಪುಟ ೩.

೮. ಲೇಖನ, ತುರುವಿರಾಳ ಚಂದ್ರು, ವಿಜಯ ಕರ್ನಾಟಕ, ೨೫.೧೨.೨೦೦೯.

೯. ಮಾಹಿತಿ, ನಿರ್ದೇಶಕರು, ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ, ಗುಲ್ಬರ್ಗಾ.

೧೦. ಗೋಪಾಲಕೃಷ್ಣ, ಹೊಸತು, ವಿಶೇಷ ಸಂಚಿಕೆ, ೨೦೦೭, ಜನವರಿ, ಪುಟ ೧೨೩.

೧೧. ಸಂದರ್ಶನ: ಉಮೇಶ್. ಕೆ., ಮುದ್ನಾಳ, ೧೦.೭.೨೦೧೪.

೧೨. ನಾಗರಾಜ್ ಎಂ.ಜಿ., ಕರ್ನಾಟಕ ರೈತ ಚಳುವಳಿ ಸತ್ಯಾಗ್ರಹಗಳು, ಸಂ.೨, ಪುಟ ೧೯೦–೧೯೧.

## ಅಧ್ಯಾಯ : ಎಂಟು

# ಸಮಾರೋಪ

ಶಿಲಾಯುಗ ಕಾಲದಿಂದಲೂ ಮಾನವನ ಚಟುವಟಿಕೆಯ ನೆಲೆಯಾದ ಹೈದರಾಬಾದ್ ಸಂಸ್ಥಾನ, ಅನೇಕ ರಾಜಮನೆತನಗಳ ಉಗಮ ಮತ್ತು ವಿಕಾಸಕ್ಕೆ ಸಾಕ್ಷಿಯಾಗಿದೆ. ಇದು ವಸಹಾತುಶಾಹಿಗಳ ಮತ್ತು ದೇಶೀಯ ಅರಸರ ಸಂಘರ್ಷಗಳ ನಂತರ ಮುಸ್ಲಿಮರ ಆಡಳಿತಕ್ಕೆ ಒಳಪಟ್ಟಿತ್ತು. ಹೈದರಾಬಾದ್ ನಿಜಾಮರ ಆಡಳಿತಕ್ಕೊಳಪಟ್ಟಿದ್ದ ಇದನ್ನು ಸುಮಾರು ಎರಡೂವರೆ ಶತಮಾನಗಳ ಕಾಲ ಆಳಿದರು. ಇಂತಹ ಐತಿಹಾಸಿಕ ಪ್ರದೇಶವಾಗಿರುವ ಹೈದರಾಬಾದ್ ಸಂಸ್ಥಾನವು ೧೬ ಜಿಲ್ಲೆಗಳನ್ನು ಒಳಗೊಂಡಿತ್ತು. ಇಂದು ಹೈದರಾಬಾದ್ ಕರ್ನಾಟಕ ಎಂದು ಕರೆಸಿಕೊಳ್ಳುವ ಈ ಪ್ರದೇಶಗಳಲ್ಲಿ ಬಹಳ ವಿಸ್ತೀರ್ಣವಾದ ಹಾಗೂ ದೊಡ್ಡದಾಗಿರುವುದು ಗುಲ್ಬರ್ಗಾ ಜಿಲ್ಲೆ. ಈ ಜಿಲ್ಲೆಯನ್ನು ಆಡಳಿತದ ಅನುಕೂಲಕ್ಕಾಗಿ ಯಾದಗಿರಿ ತಾಲೂಕನ್ನು ಜಿಲ್ಲೆಯನ್ನಾಗಿ ಮಾಡಲಾಯಿತು. ೩೦.೧೨.೨೦೦೯ರಲ್ಲಿ ಅದು ಪ್ರತ್ಯೇಕ ಜಿಲ್ಲೆಯಾಗಿ ರೂಪು ಪಡೆದಿದೆ. ಯಾದಗಿರಿ ಜಿಲ್ಲೆ ಭೌಗೋಳಿಕತೆ, ಭಾಷೆ, ಸಂಪ್ರದಾಯ ಮುಂತಾದವುಗಳಲ್ಲಿ ಬಹಳ ವಿಭಿನ್ನತೆಯನ್ನು ಹೊಂದಿರುವ ಜಿಲ್ಲೆಯಾಗಿದ್ದು ಚಾರಿತ್ರಿಕ ದೃಷ್ಟಿಯಿಂದ ವಿದ್ವಾಂಸರು ನಿರಂತರವಾಗಿ ಅಧ್ಯಯನ ಮಾಡಬೇಕಾದಂತಹ ಒಂದು ಪ್ರದೇಶವಾಗಿದೆ.

ಯಾದಗಿರಿ ಜಿಲ್ಲೆ ಪ್ರಕೃತಿ ವಿಕೋಪಗಳಿಂದ ಬರಡಾಗುತ್ತಾ, ಬಡತನಕ್ಕೀಡಾಗುತ್ತಾ, ಅಭಿವೃದ್ಧಿ ಕುಂಠಿತಗೊಳ್ಳುತ್ತಾ ಸಾಗಿತು. ಹೀಗಾಗಿ ಇಲ್ಲಿನ ಜನ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ನಂತರ ವಿಶಾಲ ಕರ್ನಾಟಕ ರಾಜ್ಯಕ್ಕೆ ಸೇರಿಕೊಂಡರು. ಆದರೆ ದುರ್ದೈವದ ಸಂಗತಿ ಏನೆಂದರೆ, ಸ್ವಾತಂತ್ರ್ಯದ ನಂತರವೂ ಇಲ್ಲಿನ ಜನರ ಬದುಕು ಬದಲಾಗಲಿಲ್ಲ. ನೈಸರ್ಗಿಕ ವಿಕೋಪಗಳಿಂದ, ಜಮೀನ್ದಾರಿ ವ್ಯವಸ್ಥೆಯಿಂದ, ಸರಕಾರಗಳ ನಿರ್ಲಕ್ಷ್ಯದಿಂದ, ಇವರಿಗೆ ಸಿಗಬೇಕಾದ ಸೌಲಭ್ಯಗಳಿಂದ ವಂಚಿತರಾಗಿ, ಅಭಿವೃದ್ಧಿ ಕಾರ್ಯಗಳು ಕುಂಠಿತಗೊಂಡು ಜನರು ಹತಾಶರಾಗತೊಡಗಿದರು. ಇದುವರೆಗೂ ಆಡಳಿತ ಮಾಡಿಕೊಂಡು ಬಂದಿರುವ ಹೆಚ್ಚು ಕಡಿಮೆ ಎಲ್ಲಾ ಸರಕಾರಗಳ ಆಡಳಿತ ನೀತಿ ಮನೋಸ್ಥಿತಿಯನ್ನು ಅವಲೋಕಿಸಿದರೆ ಅವರ ದೃಷ್ಟಿಯಲ್ಲಿ ಕರ್ನಾಟಕವೆಂದರೆ ಬೆಂಗಳೂರು ಹಾಗೂ ಅಭಿವೃದ್ಧಿ ಎಂದರೆ ಬೆಂಗಳೂರಿನ ಅಭಿವೃದ್ಧಿ ಎನ್ನುವ ಭಾವನೆಗಳನ್ನು ಹೊಂದಿರುವವರಾಗಿದ್ದುದು ಕಂಡುಬರುತ್ತದೆ.

ಇಂತಹ ಸಂಕುಚಿತ ಮನೋಭಾವನೆಯು ಈ ಜಿಲ್ಲೆಯ ನಿರ್ಲಕ್ಷ್ಯಕ್ಕೆ ಕಾರಣವಾಗಿ ಇದು ಎಲ್ಲರ ದೃಷ್ಟಿಯಲ್ಲಿ ಹಿಂದುಳಿದ ಜಿಲ್ಲೆಯೆಂಬ ಹಣೆಪಟ್ಟಿಯನ್ನು ಕಟ್ಟಿಕೊಳ್ಳುವಂತಾಯಿತು. ಈಗಾಗಲೇ ಶತಮಾನಗಳಿಂದ ಸತತ ಹಲ್ಲೆಗೊಳಗಾಗಿರುವಂತಹ, ಶೋಷಣೆಗೊಳಗಾಗಿರುವಂತಹ, ನೊಂದ ಇಲ್ಲಿನ ಜನರ ಮನಸ್ಸು ಬಹಳ ಸೂಕ್ಷ್ಮವಾಗಿತ್ತು. ಹತಾಶೆಗೊಂಡ ಅವಮಾನಗೊಂಡ ಜನರು ಸಿಟ್ಟನ್ನು ಹತ್ತಿಟ್ಟುಕೊಳ್ಳಲಾಗದೆ ಕ್ರಮೇಣ ಇದನ್ನು ಹೊರಹಾಕತೊಡಗಿದರು. ಇದರ ಫಲವಾಗಿ ನಾನಾ ರೀತಿಯ ಪ್ರತಿಭಟನೆ, ಹೋರಾಟ ಚಳುವಳಿಗಳು ಆರಂಭವಾದವು. ಈ ಹಿನ್ನೆಲೆಯಲ್ಲಿ ಇಂತಹ ಪ್ರದೇಶದ ಸ್ವಾತಂತ್ರ್ಯೋತ್ತರ ಕಾಲದಿಂದ ಇಂದಿನವರೆಗಿನ ಸ್ಥಿತಿಗತಿಗಳು, ಹೋರಾಟಗಳು ಅವುಗಳ ಸಫಲತೆ, ವಿಫಲತೆಗಳನ್ನು ಅಧ್ಯಯನ ಮಾಡಿ ವಿಶ್ಲೇಷಣೆಗೆ ಒಳಪಡಿಸಿ ದಾಖಲು ಮಾಡುವಂತಹ ಒಂದು ಪ್ರಯತ್ನದ ಫಲವೇ ಈ ಮಹಾಪ್ರಬಂಧವಾಗಿದೆ.

ಇನ್ನು ಅಧ್ಯಯನದ ವಿಷಯ ಹಾಗೂ ವ್ಯಾಪ್ತಿ ವಿಶಾಲವಾಗಿದ್ದು ಕ್ಷೇತ್ರಕಾರ್ಯದ ಮೇಲೆ ಅವಲಂಬನೆಯಾಗಿರುವುದರಿಂದ ಯಾದಗಿರಿ ಜಿಲ್ಲೆಯ ಅನೇಕ ಸಂಘಟನೆಗಳು, ಮುಖಂಡರು, ಹೋರಾಟಗಾರರು, ಸಾಹಿತಿಗಳು, ಪತ್ರಕರ್ತರು, ರಾಜಕಾರಣಿಗಳು, ಧಾರ್ಮಿಕ ಮುಖಂಡರು, ಮಹಿಳಾ ಹೋರಾಟಗಾರರು ಹಾಗೂ ಈ ಜಿಲ್ಲೆಯ ಚಳುವಳಿಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡವರು, ತಮ್ಮನ್ನೇ ಅರ್ಪಿಸಿಕೊಂಡವರು ಮುಂತಾದವರ ಸಂದರ್ಶನ ತೆಗೆದುಕೊಳ್ಳಲಾಗಿದೆ. ಹೀಗೆ ವಿವಿಧ ಕ್ಷೇತ್ರಗಳಿಗೆ ಸಂಬಂಧ ಪಟ್ಟಂತೆ, ಆಯಾ ವಲಯದ ತಜ್ಞರೊಂದಿಗೆ, ಅನುಭವ ಹೊಂದಿದವರ ಸಂದರ್ಶನ ಕೈಗೊಂಡು ಅವರಿಂದ ಮಾಹಿತಿ ಪಡೆದು ದಾಖಲು ಮಾಡಲಾಗಿದೆ. ಸಂದರ್ಶನಗಳಲ್ಲಿ ಅವರು ಕೊಟ್ಟ ಮಾಹಿತಿಗಳು, ದಾಖಲೆಗಳು, ಅಭಿಪ್ರಾಯಗಳು ಬಹಳ ಉಪಯುಕ್ತವಾಗಿದ್ದು, ಅಲ್ಲಿನ ವಾಸ್ತವ ಪರಿಸ್ಥಿತಿಯನ್ನು ಅರಿಯಲು ಬಹಳ ಸಹಾಯವಾಗಿದೆ. ಹೋರಾಟಗಳಲ್ಲಿ ಅರ್ಪಣಾ ಮನೋಭಾವದಿಂದ ಪಾಲ್ಗೊಂಡವರನ್ನು ಹಾಗೂ ಈ ಜಿಲ್ಲೆಯಲ್ಲಿ ಬೆಳೆದು ಇಲ್ಲಿನ ಸಮಸ್ಯೆಗಳನ್ನು ಅನುಭವಿಸಿದವರನ್ನು ಪ್ರಶ್ನೆ ಮಾಡಿ ಅವರಿಂದ ಸಾಕಷ್ಟು ಮಾಹಿತಿ ಪಡೆಯಲಾಗಿದೆ.

ಅಲ್ಲದೆ ಇವರೆಲ್ಲಾ ಸಂದರ್ಶನಕ್ಕೆ ಒಪ್ಪಿಗೆ ಕೊಟ್ಟು, ಸಹಕರಿಸಿ ಪ್ರಸ್ತುತ ಅಧ್ಯಯನಕ್ಕೆ ಪ್ರೋತ್ಸಾಹ, ನೀಡಿದ್ದು ಸಂಶೋಧನೆಗೆ ಹೆಚ್ಚಿನ ಮಹತ್ವ ಬಂದಿದೆ. ಆದರೆ ಇದೇ ಸಂದರ್ಭದಲ್ಲಿ ಕ್ಷೇತ್ರಕಾರ್ಯ ಮತ್ತು ಸಂದರ್ಶನದ ಸಮಯದಲ್ಲಿ ಅನೇಕ ತೊಂದರೆಗಳನ್ನು, ಸಮಸ್ಯೆಗಳನ್ನು, ಅಸಮಾಧಾನವನ್ನು, ಅಸಹಕಾರವನ್ನು ಅನುಭವಿಸಬೇಕಾಯಿತು. ಕೆಲವರು ಪೂರ್ವಗ್ರಹ ಪೀಡಿತರಾಗಿ ಮಾತನಾಡಿದರೆ ಇನ್ನು ಕೆಲವರು ನಿಷ್ಠುರವಾಗಿ ಯಾವುದನ್ನು ಹೇಳದೆ ಸುರಕ್ಷತಾ ವಲಯದೊಳಗೆ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡರು. ಕೆಲವು ಮುಖಂಡರಂತೂ ಸಂದರ್ಶನ ನೀಡಲು ಮಾಹಿತಿ ನೀಡಲು ಮುಕ್ತವಾಗಿ ಸಹಕರಿಸಲಿಲ್ಲ. ಇದಕ್ಕೆ ಅವರ ವೈಯಕ್ತಿಕ ಸ್ವಾರ್ಥ, ತಿಳುವಳಿಕೆಯ ಕೊರತೆ, ಜಾತೀಯತೆ, ಪಕ್ಷನಿಷ್ಠೆ, ಹೀಗೆ ಇನ್ನೂ ಅನೇಕ ಕಾರಣಗಳನ್ನು ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿ ವಿಸ್ತೃತವಾಗಿರುವುದರಿಂದ ಲಿಖಿತ ಮತ್ತು ಅಲಿಖಿತ ಮಾಹಿತಿಗಳಿಂದ ಇಡೀ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಲಿಖಿತ ಮತ್ತು ಅಲಿಖಿತವಾಗಿ

ಸಿಕ್ಕಂತಹ ಮಾಹಿಗಳಿಂದ ಅಧ್ಯಯನ ಮಾಡುತ್ತಾ ಹೋದಾಗ ಅನೇಕ ಸಮಸ್ಯೆಗಳು ಎದುರಾದವು. ಉದಾಹರಣೆಗೆ ಲಿಖಿತ ದಾಖಲೆಗಳು ವಾಸ್ತವವಾಗಿವೆಯೇ, ಶುದ್ಧವಾಗಿವೆಯೇ ಎನ್ನುವುದನ್ನು ಪರಿಶೀಲಿಸುವುದು ಅತ್ಯಗತ್ಯವಾಗಿದೆ. ಉದಾಹರಣೆಗೆ ರಜಾಕಾರರ ವಿರುದ್ಧ ಹೋರಾಟ ಎಂದರೆ ಹಿಂದೂ ಮುಸ್ಲಿಮರ ನಡುವಿನ ಹೋರಾಟವೆಂದೇ ಅನೇಕ ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ. ಇನ್ನು ಮೌಖಿಕವಾಗಿ ಸಿಕ್ಕಂತಹ ಆಧಾರಗಳು, ಉತ್ಪ್ರೇಕ್ಷೆಯಿಂದ, ವೈಭವೋಪೇತವಾಗಿ ಅಥವಾ ಯಾವುದೇ ದ್ವೇಷ ಮನೋಭಾವನೆಯಿಂದ ಕೂಡಿವೆಯೇ, ತಪ್ಪುಗ್ರಹಿಕೆಗಳಿಂದ ಕೂಡಿವೆಯೇ ಎನ್ನುವುದನ್ನು ಪರಿಶೀಲಿಸುವುದು ಅಧ್ಯಯನದ ಮತ್ತೊಂದು ಉದ್ದೇಶವಾಗಿತ್ತು.

ಇಂತಹ ಎಲ್ಲಾ ಅಂಶಗಳಿಗೆ ನಿರಂತರ ಅಧ್ಯಯನ, ಮುಖತಃ ಭೇಟಿ, ಮಾರ್ಗದರ್ಶಕರೊಂದಿಗಿನ ಚರ್ಚೆ, ದಾಖಲೆಗಳ ವಿಶ್ಲೇಷಣೆ ಹಾಗೂ ತುಲನಾತ್ಮಕ ಅಧ್ಯಯನದಿಂದ ಉತ್ತರ ಸಿಗುತ್ತಾ ಬಂದಿತು. ಹೀಗೆ ವಾಸ್ತವಿಕತೆಯನ್ನು ದಾಖಲಿಸುವ ಉದ್ದೇಶದಿಂದ ವಿವಿಧ ರೀತಿಯಲ್ಲಿ ಮಾಹಿತಿಗಳನ್ನು ಅಧ್ಯಯನ ಮಾಡಿ ಒಂದು ಅಭಿಪ್ರಾಯಕ್ಕೆ ಬರಲು ಪ್ರಯತ್ನಿಸಲಾಗಿದೆ. ಸಂಶೋಧನಾ ವಿಷಯಕ್ಕೆ ಸಂಬಂಧಪಟ್ಟ ಹಾಗೆ ನಿಗದಿತ ಕಾಲಾವಧಿಯ ದೃಷ್ಟಿಕೋನದಲ್ಲಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಅಧ್ಯಯನಕ್ಕೆ ಸಂಬಂಧಪಟ್ಟ ಹಾಗೆ ಕೆಲವು ಮಿತಿಗಳಿವೆ. ಈ ಮಿತಿಗಳಲ್ಲಿ ಅಧ್ಯಯನ ಮಾಡಲಾಗಿದೆ. ಇದುವರೆಗೂ ದಾಖಲಾಗದ, ಬೆಳಕಿಗೆ ಬಾರದ, ಇಲ್ಲಿ ಜನರಿಗೆ ತಿಳಿಯದೆ ಇರುವ ಹೊಸ ಅಂಶಗಳ ಮೇಲೆ ಬೆಳಕು ಚೆಲ್ಲಲಾಗಿದೆ. ಇದರ ಕುರಿತು ಇನ್ನೂ ಹೆಚ್ಚಿ ಅಧ್ಯಯನ ಕೈಗೊಳ್ಳುವ ವಿಷಯಗಳು ಸಾಕಷ್ಟು ಇವೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಕಾಲಮಿತಿ ಇರುವುದರಿಂದ ಹೆಚ್ಚಿನ ವಿಷಯಗಳ ಕಡೆ ಗಮನ ಹರಿಸಲು ಸಾಧ್ಯವಾಗಿಲ್ಲ, ಹೀಗಾಗಿ ಪ್ರಸ್ತುತ ಅಧ್ಯಯನ ಮುಂದಿನ ಸಂಶೋಧನೆಗೆ ದಾರಿದೀಪವಾಗಿದೆ.

ಅಧ್ಯಯನದ ಅವಧಿಯಲ್ಲಿ ಅರಿವಿಗೆ ಬಂದಿದ್ದೇನೆಂದರೆ ನೂರು, ಇನ್ನೂರು ವರ್ಷಗಳ ಹಿಂದಿನ ಯಾದಗಿರಿ ಚಿತ್ರಣ ಮತ್ತು ಪರಿಸ್ಥಿತಿ ಪ್ರಸ್ತುತದಲ್ಲಿ ಇಲ್ಲ. ಇಂದು ಅನೇಕ ಕ್ಷೇತ್ರಗಳಲ್ಲಿ ಯಾದಗಿರಿ ಜಿಲ್ಲೆಯು ಅಬಿವೃದ್ಧಿಹೊಂದಿದೆ. ಹೊಸ ನೀರಾವರಿ ಯೋಜನೆಗಳು, ಕೈಗಾರಿಕೆಗಳು, ವಾಣಿಜ್ಯ ಸಂಸ್ಥೆಗಳು, ಶೈಕ್ಷಣಿಕ ಸಂಸ್ಥೆಗಳು ಹೆಚ್ಚಿವೆ. ಈ ಮೂಲಕ ಉದ್ಯೋಗಾವಕಾಶಗಳು ಹೆಚ್ಚುತ್ತಿವೆ. ಜನರು ವಿವಿಧ ರೀತಿಯ ಯೋಜನೆಗಳ ಲಾಭ ಪಡೆಯುತ್ತಿದ್ದಾರೆ. ರಸ್ತೆ, ರೈಲ್ವೆ, ದೂರಸಂಪರ್ಕ ವ್ಯವಸ್ಥೆಗಳಿಂದ ಈ ಪ್ರದೇಶವು ರಾಜ್ಯದ ಎಲ್ಲೋ ಒಂದು ಮೂಲೆಯಲ್ಲಿದೆ ಎನ್ನುವ ಭಾವನೆಯಿಂದ ಹೊರಬರುತ್ತಿದೆ. ಇಲ್ಲಿಯ ಜನರು ಬೇರೆ ಬೇರೆ ಭಾಗಗಳಿಗೆ ವಲಸೆ ಹೋಗಿ ಬಂದು ಹೊಸ ಅನುಭವಗಳ ಮೂಲಕ ಕೊಡುಕೊಳ್ಳುವಿಕೆಯ ಸಂಬಂಧ ಏರ್ಪಡಿಸಿಕೊಳ್ಳುತ್ತಿದ್ದಾರೆ. ಹೀಗಾಗಿ ನೂರು ವರ್ಷದ ಹಿಂದಿನ ಯಾದಗಿರಿ ಚಿತ್ರಣದ ದೃಷ್ಟಿಯನ್ನಿಟ್ಟುಕೊಂಡು ನಾವು ಇಂದು ಈ ಭಾಗವನ್ನು ನೋಡುವಂತಿಲ್ಲ ಮತ್ತು ಅಧ್ಯಯನ ಮಾಡುವಂತಿಲ್ಲ. ಬದಲಾದ, ಬದಲಾಗುತ್ತಿರುವ, ನಿಧಾನವಾಗಿ ಅಭಿವೃದ್ಧಿ ಹೊಂದುತ್ತಿರುವ ಚಿತ್ರಣವನ್ನು, ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಯಾದಗಿರಿ ಜಿಲ್ಲೆಗೂ, ಚಳವಳಿಗಳಿಗೂ ಅವಿನಾಭಾವ ಸಂಬಂಧವಿದೆ. ಹೀಗಾಗಿ ಜನಚಳವಳಿಯ ಭಾಗವಾಗಿಯೇ ಯಾದಗಿರಿ ಜಿಲ್ಲೆ ಅಸ್ತಿತ್ವಕ್ಕೆ ಬಂದಿದೆ ಮತ್ತು ಗುರುತಿಸಿಕೊಂಡಿದೆ.

ಕರ್ನಾಟಕದ ಇತರ ಭಾಗಗಳಲ್ಲಿ ನಡೆದ ಹೋರಾಟಗಳಿಗಿಂತ ಮುಂಚೆಯೇ ತಮ್ಮ ಹಕ್ಕಿಗಾಗಿ ಹೋರಾಟ ಮಾಡಿದ ದೊಡ್ಡ ಪರಂಪರೆ ಇಲ್ಲಿದೆ. ಆದರೆ ಸ್ವಾತಂತ್ರ್ಯ ಪಡೆದ ನಂತರವೂ ಊಳಿಗಮಾನ್ಯ, ಜಮೀನ್ದಾರಿ ವ್ಯವಸ್ಥೆ ಜೀವಂತ ಇರುವುದು ಈ ಜಿಲ್ಲೆಯ ದುಃಸ್ಥಿತಿಗೆ ಕಾರಣವಾಗಿ ಅನೇಕ ರೀತಿಯ ಹೋರಾಟಗಳು ರೂಪುಗೊಂಡವು. ಆರಂಭದಲ್ಲಿ ಚುನಾವಣೆ ವ್ಯವಸ್ಥೆ ಮೂಲಕ, ನಂತರ ಶಸ್ತ್ರಾಸ್ತ್ರ ಬಳಕೆಯಿಂದ ಕ್ರಾಂತಿಕಾರಕ ಹೋರಾಟಗಳಾದವು. ಮಾರ್ಕ್ಸ್‌ವಾದಿ, ಲೆನಿನ್‌ವಾದಿ ರಾಜಕೀಯ ಸಂಘಟನೆಗಳು ಇಲ್ಲಿ ಜನಚಳವಳಿಯನ್ನು ರೂಪಿಸಿದವು.

ಯಾದಗಿರಿ ಜಿಲ್ಲೆಯ ಪ್ರಸ್ತುತ ಸ್ಥಿತಿಗತಿಗಳನ್ನು ಗಮನಿಸಿದಾಗ, ಈ ಭಾಗದಲ್ಲಿ ಮೇಲ್ನೋಟಕ್ಕೆ ಕಂಡುಬರುವ ಅಂಶವೆಂದರೆ ಇಲ್ಲಿ ಶಿಕ್ಷಣ, ಸಂಘಟನೆ ಮತ್ತು ಹೋರಾಟದ ಕೊರತೆ ಎದ್ದು ಕಾಣುತ್ತಿದೆ. ಇಲ್ಲಿ ಹುಟ್ಟಿ ಬೆಳೆದ ಚಳವಳಿಗಳನ್ನು ಅವಲೋಕಿಸಿದಾಗ ಇಲ್ಲಿನ ಚಳವಳಿಗಳ ವಿಶಿಷ್ಟ ಲಕ್ಷಣವೆಂದರೆ, ಇಲ್ಲಿ ಚಳವಳಿಗಳು ಭರಾಟೆಯಿಂದ ಉಜ್ವಲವಾಗಿ ಹುಟುತ್ತವೆ, ಆದರೆ ಕೆಲ ಕಾಲದಲ್ಲಿಯೇ ಅವು ಜೀವಂತವಾಗಿಲ್ಲ ಎನ್ನುವಷ್ಟರ ಮಟ್ಟಿಗೆ ಸ್ಥಗಿತಗೊಂಡು ಬಿಟ್ಟಿವೆ. ಇದಕ್ಕೆ ಕಾರಣಗಳನ್ನು ನೋಡಿದಾಗ ಇಲ್ಲಿರುವ ಪ್ರತಿಯೊಂದು ಸಂಘಟನೆಗಳ ತತ್ವಸಿದ್ಧಾಂತಗಳಲ್ಲಿ ಭಿನ್ನತೆ ಇರುವುದು ಕಂಡುಬರುತ್ತದೆ. ಇಲ್ಲಿ ಯಾವ ಸಂಘಟನೆಗಳೂ ಶಾಶ್ವತವಾಗಿ ಉಳಿದುರುವುದು ಕಂಡುಬಂದಿಲ್ಲ. ಏಕೆಂದರೆ ಇವು ಶಿಸ್ತುಬದ್ಧವಾಗಿ ಒಂದು ಚೌಕಟ್ಟಿನಡಿಯಲ್ಲಿ, ತತ್ವಗಳಡಿಯಲ್ಲಿ ಹೋರಾಟ ಮಾಡಲು ಸಾಧ್ಯವಾಗುತ್ತಿಲ್ಲ. ಬದಲಾಗಿ ಯಾವ ಸಂಘಟನೆಗಳು ಸ್ಪಷ್ಟ ದೃಷ್ಟಿಕೋನ ಹೊಂದಿ ಹೋರಾಟ ಮಾಡಿವೆಯೋ ಅಂತಹ ಸಂಘಟನೆಗಳು ಒಡೆಯಲಿಲ್ಲ ಎನ್ನುವುದನ್ನು ಗಮನಿಸಬಹುದು. ಅಂದರೆ ಯಾವ ಸಂಘಟನೆಗೆ ಸ್ಪಷ್ಟವಾದ ಸೈದ್ಧಾಂತಿಕ ದೃಷ್ಟಿಕೋನ ಇರುತ್ತದೆಯೋ, ಒಂದು ಮುಂದಾಲೋಚನೆಯ ಕಣ್ಣೋಟ ಇರುತ್ತದೋ ಆ ಸಂಘಟನೆಗಳು ಒಡೆಯುವುದಿಲ್ಲ ಎನ್ನುವುದನ್ನು ಗಮನಿಸಬಹುದು.

ಹಾಗೆಯೇ ಕಾಲಕ್ರಮೇಣ ಸಾಮಾಜಿಕ, ಆರ್ಥಿಕ ಮತ್ತು ಇತರ ಕ್ಷೇತ್ರಗಳಲ್ಲಿ ಬದಲಾಣೆಗಳಾದಂತೆ ಹಾಗೂ ವೈಜ್ಞಾನಿಕತೆ ಬೆಳೆದಂತೆಲ್ಲಾ ಚಳವಳಿಗಳ ಸ್ವರೂಪದಲ್ಲಿಯೂ ಬದಲಾವಣೆ ಕಾಣಬಹುದು. ಮೊದಲು ಚಳವಳಿ ಎಂದರೆ ವ್ಯಕ್ತಿಗಳು ಗುಂಪು ಸೇರಿ ಮಾಡುವ ಹೋರಾಟ ಆಗಿತ್ತು. ಆದರೆ ಈಗ ಕಾಲ ಬದಲಾಗಿದೆ. ವಿಶ್ವದ ಯಾವುದೋ ಮೂಲೆಯಲ್ಲಿ ಕುಳಿತು ಫೇಸ್‌ಬುಕ್, ಇಂಟರ್‌ನೆಟ್, ಟ್ವಿಟರ್, ಮೊಬೈಲ್–ಮೆಸೇಜ್ ಮೂಲಕ ಚಳವಳಿಗಳಲ್ಲಿ ಪಾಲ್ಗೊಳ್ಳಬಹುದು ಮತ್ತು ಅವರ ಅಭಿಪ್ರಾಯ ಹಾಗೂ ಬೆಂಬಲವನ್ನು ವ್ಯಕ್ತಪಡಿಸಬಹುದು. ಇತ್ತೀಚೆಗೆ ನಮ್ಮ ರಾಜ್ಯದ ಕನ್ನಡ ಚಳವಳಿ ಹಾಗೂ ರಾಷ್ಟ್ರದ ಭ್ರಷ್ಟಾಚಾರ ಹಾಗೂ ಕೆಲವು ಗಂಭೀರ ಸಮಸ್ಯೆಗಳ ವಿರುದ್ಧ ಭಾಷಾಭಿಮಾನಿಗಳು, ಸಾಮಾಜಿಕ ಹೋರಾಟಗಾರರು ನಡೆಸಿದ ಹೋರಾಟಗಳಿಗೆ ಮಾಧ್ಯಮಗಳ ಮೂಲಕ ವ್ಯಕ್ತವಾದ, ರಾಷ್ಟ್ರವ್ಯಾಪ್ತಿ ಜನಬೆಂಬಲ ನೋಡಿದರೆ ಚಳವಳಿಯ ಸ್ವರೂಪ ಮತ್ತು ವ್ಯಾಪ್ತಿಯು ತಿಳಿಯುತ್ತದೆ.

ಯಾದಗಿರಿ ಜಿಲ್ಲೆಯಲ್ಲಿರುವ ಭೂಮಾಲೀಕತ್ವದ ವ್ಯವಸ್ಥೆ ಮತ್ತು ಕೃಷಿಯಿಂದಾಗಿ ರೈತ ಚಳವಳಿ ನೆಲೆ ಕಂಡುಕೊಳ್ಳಲು ಸಾಧ್ಯವಾಗಿದೆ. ಈ ಭಾಗದ ರೈತರ ಸ್ಥಿತಿಗತಿಗಳನ್ನು ಗಮನಿಸಿದಾಗ, ಇಲ್ಲಿರುವಂತಹ ರೈತರ ಶೋಚನೀಯ ಪರಿಸ್ಥಿತಿಯನ್ನು ರಾಜ್ಯದ ಇತರ ಯಾವ ಭಾಗದಲ್ಲಿಯೂ

ಕಂಡುಬರುವುದಿಲ್ಲ. ಇಲ್ಲಿ ಬಹಳಷ್ಟು ರೈತರಿಗೆ ಸ್ವಂತ ಭೂಮಿ ಇಲ್ಲ. ಅಲ್ಪ ಸ್ವಲ್ಪ ಭೂಮಿ ಇರುವ ರೈತರಿಗೆ ಕೃಷಿ ಮಾಡಲು ಬಂಡವಾಳವಿಲ್ಲ, ಇನ್ನು ಬೆಳೆದ ಬೆಳೆಗಳಿಗೆ ಮಾರುಕಟ್ಟೆ ಮತ್ತು ಸೂಕ್ತ ಬೆಲೆ ಸಮಸ್ಯೆಯಿದೆ. ಹೀಗಾಗಿ ರೈತರು ಸಾಲದಿಂದ ತತ್ತರಿಸಿ ಭೂಮಿಯನ್ನು ಮಾರಾಟ ಮಾಡುವುದು ಅಥವಾ ಆತ್ಮಹತ್ಯೆಗೆ ಶರಣಾಗುವುದರ ಬಗ್ಗೆ ಆಗಾಗ ಕೇಳುತ್ತಿದ್ದೇವೆ. ಕೃಷಿಗೆ ಸಂಬಂಧಿಸಿದಂತೆ ಇಲ್ಲಿ ಕಂಡುಬರುವ ವಿಚಿತ್ರ ಸಂಗತಿ ಏನೆಂದರೆ ನೂರಾರು ಎಕರೆ ಭೂಮಿ ಹೊಂದಿರುವ ಶ್ರೀಮಂತ ರೈತ ಒಂದು ಕಡೆಯಾದರೆ, ಒಂದೆರಡು ಎಕರೆ ಭೂಮಿ ಹೊಂದಿರುವ ಬಡ ರೈತ ಇನ್ನೊಂದು ಕಡೆ. ಹೀಗಾಗಿ ರೈತರಲ್ಲೇ ಅಂತರ ಬಹಳ ಇದೆ. ಶ್ರೀಮಂತ ರೈತರು ಅಥವಾ ಜಮೀನ್ದಾರರು ಉತ್ಪಾದನಾಂಗಗಳ ಮೇಲೆ ಹತೋಟಿ ಮತ್ತು ಪೂರ್ಣ ನಿಯಂತ್ರಣ ಹೊಂದಿದ್ದಾರೆ. ಹೀಗಾಗಿ ಹಳೇ ಭೂಮಾಲೀಕರು ಇಂದಿನ ಬಂಡವಾಳಗಾರರಾಗಿ ಪರಿವರ್ತನೆ ಆಗುತ್ತಿದ್ದಾರೆ.

ಇದರಿಂದಾಗಿ ಇಂದು ನಿಜವಾದ ಉಳುಮೆದಾರನ ಕೈಯಲ್ಲಿ ಭೂಮಿ ಇಲ್ಲ. ಬದಲಾಗಿ ಹೆಚ್ಚಿನ ಭೂಮಿಯು ಬಂಡವಾಳಶಾಹಿಗಳ, ಶ್ರೀಮಂತರ, ಬಹುರಾಷ್ಟ್ರೀಯ ಕಂಪನಿಗಳ ಪಾಲಾಗಿದೆ. ಯಾರು ನಿಜವಾಗಿ ಉಳುಮೆಯನ್ನು ಮಾಡುತ್ತಾರೋ ಅವರಿಗೆ ಭೂಮಿ ದೊರಕಬೇಕಿರುವುದು ಇಂದಿನ ಅವಶ್ಯಕತೆಯಾಗಿದೆ. ಯಾದಗಿರಿ ಜಿಲ್ಲೆಯ ರೈತರ ಸ್ಥಿತಿಗತಿಗಳನ್ನು ಮತ್ತು ಕೃಷಿ ಚಟುವಟಿಕೆಗಳನ್ನು ಗಮನಿಸಿದಾಗ ಆರ್ಥಿಕ ಉತ್ಪನ್ನಗಳಿಗೆ ಸಂಬಂಧಪಟ್ಟ ಹಾಗೆ ಸಾಂಪ್ರದಾಯಿಕ ಕೃಷಿ ಮುಂದುವರಿದಿದೆ. ದೊಡ್ಡ ಜಮೀನ್ದಾರರು ಮಾತ್ರ ಆಧುನಿಕ ಕೃಷಿ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆದು ಸಬಲರಾಗುತ್ತಿದ್ದಾರೆ. ಆದರೆ ಸಣ್ಣ ರೈತರು ಮಾತ್ರ ಅದೇ ಸ್ಥಿತಿಯಲ್ಲಿದ್ದಾರೆ. ಇದಕ್ಕೆ ಮುಖ್ಯ ಕಾರಣಗಳೆಂದರೆ, ಸಣ್ಣ ರೈತರಿಗೆ ಹಣದ ಕೊರತೆ, ಸಾಲದ ಬಾಧೆ ಬೆಳೆಗೆ ಸರಿಯಾದ ಬೆಂಬಲ ಬೆಲೆ ಸಿಗದಿರುವುದು, ಸರಕಾರದ ಸೌಲಭ್ಯಗಳ ಮಾಹಿತಿಯ ಕೊರತೆ ಇನ್ನು ಮುಂತಾದವುಗಳು ಇರುವುದು ತಿಳಿದುಬರುತ್ತದೆ.

ದಲಿತರ ಬಗ್ಗೆ ಅವರ ಸುಧಾರಣೆ ಬಗ್ಗೆ ಇಂದಿಗೂ ಹೋರಾಟಗಳೂ ನಡೆಯುತ್ತಿವೆ. ಅದಕ್ಕಾಗಿ ಅನೇಕ ತತ್ವಸಿದ್ಧಾಂತಗಳ ಜೊತೆಗೆ ಘೋಷಣೆಗಳು ರೂಪುಗೊಂಡಿವೆ. ಆದರೆ ಇಂತಹ ತತ್ವಸಿದ್ಧಾಂತಗಳನ್ನು ಎಷ್ಟರ ಮಟ್ಟಿಗೆ ದಲಿತ ನಾಯಕರು ಅವರ ಜೀವನದಲ್ಲಿ ಹೋರಾಟದಲ್ಲಿ ಅಳವಡಿಸಿಕೊಂಡಿದ್ದಾರೆ ಎಂಬುದನ್ನು ನೋಡಿದಾಗ ನಿಜಾಂಶ ಬಹಳ ನಿರಾಸೆಯನ್ನು ಉಂಟುಮಾಡುತ್ತದೆ. ಕೆಲವು ದಲಿತ ನಾಯಕರ ವ್ಯಕ್ತಿತ್ವ, ಉದ್ದೇಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಂಘಟನೆಯ ತತ್ವಗಳು, ಸಿದ್ಧಾಂತಗಳು ಅವರ ಜೀವನದ ಭಾಗಗಳಾಗುತ್ತಿಲ್ಲ. ಒಂದರ್ಥದಲ್ಲಿ ದಲಿತ ಚಳವಳಿ ಸೋಲುತ್ತಿರುವುದೇ ಈ ಕಾರಣದಿಂದಾಗಿಯೇ ಆಗಿದೆ. ಎಲ್ಲಿಯವರೆಗೆ ಇವು ಅವರ ಜೀವನದಲ್ಲಿ ಅಳವಡಿಕೆ ಆಗುವುದಿಲ್ಲವೋ ಅಲ್ಲಿಯವರೆಗೆ ಹೋರಾಟಗಳು ಯಶಸ್ವಿಯಾಗುವುದಿಲ್ಲ. ಇನ್ನು ಎಡಗೈ ಮತ್ತು ಬಲಗೈ ಎಂದು ಗುರುತಿಸಿ ಕೊಂಡಿರುವ ಮಾದಿಗರು ಮತ್ತು ಹೊಲೆಯರ ನಡುವಿನ ಅಂತರ ಹೆಚ್ಚಾಗುತ್ತಿದೆ. ಯಾದಗಿರಿ ಜಿಲ್ಲೆಯ ಗಡಿ ಭಾಗಗಳಲ್ಲಿ ಮಾದಿಗರು ಹೆಚ್ಚಾಗಿದ್ದಾರೆ. ಈ ಭಾಗದ ಒಳಭಾಗಗಳಲ್ಲಿ ಹೊಲೆಯರು ಹೆಚ್ಚಾಗಿದ್ದಾರೆ.

ಪ್ರಸ್ತುತ ಇವರಿಬ್ಬರ ಸ್ಥಾನಮಾನಗಳನ್ನು ಅವಲೋಕಿಸಿದಾಗ ಒಂದು ಕಡೆ ಕೃಷಿ, ಶಿಕ್ಷಣ ವ್ಯಾಪಾರದಲ್ಲಿ ಹೆಚ್ಚೆಚ್ಚು ಪಾಲು ಪಡೆದಿರುವ ಮತ್ತು ಪಡೆಯುತ್ತಿರುವ ಹೊಲೆಯರ ಸ್ಥಿತಿ ಬದಲಾಗಿರುವುದು ಗೋಚರಿಸುತ್ತದೆ. ಸರಕಾರಿ ಉದ್ಯೋಗದಲ್ಲಿ ಹಾಗೂ ತಾಂತ್ರಿಕ ಮತ್ತು ವೈದ್ಯಕೀಯ ಕ್ಷೇತ್ರಗಳಲ್ಲಿ ಬಹುಪಾಲು ಇವರಿದ್ದಾರೆ. ಆರ್ಥಿಕವಾಗಿ ಸದೃಢರಾಗಿ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳನ್ನು ಪಡೆದಿದ್ದಾರೆ. ಆದರೆ ಇನ್ನೊಂದು ಕಡೆ ಮಾದಿಗರು ತಮ್ಮ ಮೂಲ ಕಸುಬನ್ನು ಮುಂದುವರಿಸಿಕೊಂಡು ಬರುತ್ತಿರುವುದರಿಂದ ಅವರ ಜೀವನಮಟ್ಟ ಮತ್ತು ಸ್ಥಾನಮಾನ ಸುಧಾರಿಸಿಲ್ಲ. ಹೀಗಾಗಿ ಮಾದಿಗರು ಮತ್ತು ಹೊಲೆಯರ ನಡುವೆಯೇ ಒಂದು ರೀತಿಯ ಅಸಮಾನತೆ ಬೆಳೆದು ದಲಿತರು ಒಗ್ಗೂಡಲು ಸಾಧ್ಯವಾಗದೆ ದಲಿತ ಸಂಘಟನೆಗಳು ಅನೇಕ ಬಣಗಳಾಗಿ ಒಡೆದುಹೋಗಿವೆ. ಮಾದಿಗರು ತಮ್ಮದೇ ಆದ ಪ್ರತ್ಯೇಕ ಬಣಗಳನ್ನು ಮಾಡಿಕೊಂಡು ಮಾದಿಗ ಜನಾಂಗದ ಏಳಿಗೆಗಾಗಿ ದಲಿತರ ಮೀಸಲಾತಿಯಲ್ಲೇ ಒಳಮೀಸಲಾತಿಗಾಗಿ ಬೇಡಿಕೆ ಇಟ್ಟು ತೀವ್ರವಾದ ಹೋರಾಟ ಆರಂಭಿಸಿದ್ದಾರೆ. ಇದನ್ನು ಇಲ್ಲಿನ ಕೆಲವು ವ್ಯಕ್ತಿಗಳು, ರಾಜಕೀಯ ಪಕ್ಷಗಳು ಮತ್ತು ಸ್ವಹಿತಾಸಕ್ತಿಗಳು ಪೋಷಿಸುತ್ತಿವೆ. ಇದನ್ನು ಅರ್ಥ ಮಾಡಿಕೊಳ್ಳುವ ಸ್ಥಿತಿಯಲ್ಲಿ ಇಂದಿನ ದಲಿತರು ಇಲ್ಲ.

ಹಿಂದುಳಿದ ವರ್ಗಗಳ ಚಳವಳಿಗಳ ಬಗ್ಗೆ ಅಧ್ಯಯನ ಮಾಡಿದಾಗ ತಿಳಿದು ಬಂದಿದ್ದೇನೆಂದರೆ ಸಾಮಾಜಿಕವಾಗಿ ಹಿಂದುಳಿದಿರುವ ಅನೇಕ ಸವಲತ್ತುಗಳಿಂದ ವಂಚಿತರಾದ ಇವರು ಸ್ವಾತಂತ್ರ್ಯೋತ್ತರ ಕಾಲಘಟ್ಟದಿಂದ ಇಂದಿನವರೆಗೆ ಒಂದು ಶಕ್ತಿಯಾಗಿ ಒಂದು ಸಂಘಟನೆಯಾಗಿ ಹೋರಾಟ ಮಾಡಿರುವುದೇ ಬಹಳ ವಿರಳ. ವಾಸ್ತವವಾಗಿ ಇಲ್ಲಿ ಹಿಂದುಳಿದ ಜಾತಿಗೆ ಸೇರಿದ ಅನೇಕ ವರ್ಗಗಳಿವೆ. ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಇವರು ಬಹಳ ಅಶಕ್ತರಾಗಿದ್ದಾರೆ. ಈ ನಿಟ್ಟಿನಲ್ಲಿ ಆಲೋಚನೆ ಮಾಡಿದಾಗ ನಿಜವಾಗಿಯೂ ಇವರು ತೀವ್ರವಾಗಿ ಹೋರಾಟವನ್ನು ಮಾಡಬೇಕಿತ್ತು. ಆದರೆ ಆ ರೀತಿಯ ಹೋರಾಟಗಳು ಇಲ್ಲಿ ನಡೆದಿಲ್ಲ. ಈ ವರ್ಗಗಳು ಅನೇಕ ಕಡೆ ಚದುರಿ ಹೋಗಿರುವುದರಿಂದಾಗಿ ಒಂದೆಡೆ ಸೇರಿ ನಿರ್ದಿಷ್ಟ ಗುರಿ ಉದ್ದೇಶಗಳನ್ನಿಟ್ಟುಕೊಂಡು ಹೋರಾಡುವಲ್ಲಿ ವಿಫಲರಾಗುತ್ತಿದ್ದಾರೆ. ಹೀಗಾಗಿ ಈ ಭಾಗದಲ್ಲಿ ಹಿಂದುಳಿದ ವರ್ಗಗಳ ಚಳವಳಿ ಅಂದರೆ ಯಾವುವು ಎನ್ನುವುದನ್ನೇ ನಿರ್ದಿಷ್ಟವಾಗಿ, ಸ್ಪಷ್ಟವಾಗಿ ಗುರುತಿಸಲು ಕಷ್ಟಸಾಧ್ಯವಾಗಿದೆ.

ಯಾದಗಿರಿ ಜಿಲ್ಲೆಯಲ್ಲಿ ಆಗಿಹೋಗಿರುವ ಕಾರ್ಮಿಕ ಚಳವಳಿಗಳು ಮತ್ತು ಅದರಿಂದಾಗಿರುವ ಪರಿಣಾಮಗಳು ಹಾಗೂ ಪ್ರಸ್ತುತ ಕಾರ್ಮಿಕರ ಸ್ಥಿತಿಗತಿಗಳನ್ನು ನೋಡಿದಾಗ ಕಂಡುಬಂದಿರುವುದೇನೆಂದರೆ ಇಲ್ಲಿ ಕಾರ್ಮಿಕ ವರ್ಗ ಅತಿ ಹೆಚ್ಚಿನ ಸಂಖ್ಯೆಯಲ್ಲಿದೆ ಎಂಬುದು. ಇಲ್ಲಿರುವಷ್ಟು ಕಾರ್ಮಿಕರು ಬೇರೆ ಯಾವುದೇ ಭಾಗದಲ್ಲಿ ಇಲ್ಲ. ಅದರಲ್ಲೂ ಕೃಷಿ, ಕೈಗಾರಿಕೆ ಮತ್ತು ದಿನಕೂಲಿ ಕಾರ್ಮಿಕರ ಸಂಖ್ಯೆ ಬಹಳಷ್ಟು ಇದೆ. ಇಲ್ಲಿನ ಭೌಗೋಳಿಕತೆಯ ವಿಭಿನ್ನತೆ, ಅನಕ್ಷರತೆ, ಬಡತನ, ನಿರುದ್ಯೋಗ, ಕೃಷಿಯಲ್ಲಿ ಹೆಚ್ಚಿನ ಪಾಲಿಲ್ಲದಿರುವುದು, ಬೇರೆ ಉದ್ಯೋಗಾವಕಾಶಗಳ ಕೊರತೆಯಿಂದ ಕೂಲಿ ಕೆಲಸ ಇವರಿಗೆ ಅನಿವಾರ್ಯವಾದಂತಿದೆ. ಹೀಗಾಗಿ ಬೃಹತ್ ಸಂಖ್ಯೆಯಲ್ಲಿ ಕಾರ್ಮಿಕರಿಗೆ ನ್ಯಾಯ ದೊರಕಿಸಿಕೊಡಲು ಎಡಪಂಥೀಯ ಸಂಘಟನೆಗಳು ತಲೆ

ಎತ್ತಿವೆ. ಇಲ್ಲಿರುವಷ್ಟು ಎಡಪಂಥೀಯ ಸಂಘಟನೆಗಳು ಕರ್ನಾಟಕದ ಬೇರೆ ಯಾವುದೇ ಜಿಲ್ಲೆಯಲ್ಲಿ ಇಲ್ಲ.

ಇಲ್ಲಿ ಅಸಂಘಟಿತ ವಲಯದ ಕಾರ್ಮಿಕರ ಬದುಕು ತೀರಾ ಶೋಚನೀಯವಾಗಿದೆ. ಇವರಿಗೆ ವರ್ಷದಲ್ಲಿ ೧೦೦ ದಿನವೂ ಉದ್ಯೋಗದ ಖಾತರಿ ಇಲ್ಲ. ಹೀಗಾಗಿ ಗುಳೆ ಹೋಗುವುದು ಇವರಿಗೆ ಅನಿವಾರ್ಯವಾಗಿದೆ. ಇನ್ನು ಇಲ್ಲಿ ಕಾರ್ಮಿಕರು ಮತ್ತು ಸಂಘಟನೆಗಳು ಸಂಘಟನಾ ಕೊರತೆಯಿಂದ ಸಂಘಟಿತರಾಗಿ ರಾಜಕೀಯ ಸ್ಥಾನಮಾನಗಳನ್ನು ಪಡೆಯುವಲ್ಲಿ ವಿಫಲರಾಗುತ್ತಿದ್ದಾರೆ. ರಾಜಕೀಯ ಪಕ್ಷಗಳು ಇವರ ಅಸಹಾಯಕ ಪರಿಸ್ಥಿತಿಯನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿದ್ದಾರೆ. ಹೀಗಾಗಿ ಕಾರ್ಮಿಕ ಹೋರಾಟಗಳು ನಿರೀಕ್ಷಿತ ಫಲವನ್ನು ನೀಡುತ್ತಿಲ್ಲ. ಸದ್ಯಕ್ಕೆ ಕಾರ್ಮಿಕರ ಹಿತರಕ್ಷಣೆಗೆ, ತತ್‌ಕ್ಷಣ ಸರಕಾರ ಕೈಗೊಳ್ಳಬೇಕಾಗಿರುವ ಕಾರ್ಯವೆಂದರೆ, ಕೃಷಿ, ಕೂಲಿ ಕಾರ್ಮಿಕರ ವಲಸೆಗೆ ಕಾರಣ ಕಂಡುಕೊಂಡು ಅಕ್ಷರದಿಂದ ವಂಚಿತರಾದವರ ಕಲಿಕೆಗೆ ವ್ಯವಸ್ಥೆ ಕಲ್ಪಿಸಬೇಕು. ಹಣವಿಲ್ಲದೆ ಶಿಕ್ಷಣದಿಂದ ದೂರ ಉಳಿದವರಿಗೆ ವಿಶೇಷ ಯೋಜನೆ ರೂಪಿಸಬೇಕು, ಉದ್ಯೋಗ ಖಾತರಿ ಯೋಜನೆಗಳು ಸಾರ್ಥಕವಾಗಿ ಕಾರ್ಯರೂಪಕ್ಕೆ ಬರಬೇಕು. ಹೊಟ್ಟೆಪಾಡಿಗಾಗಿ ಕೆಲಸ ಹುಡುಕಿಕೊಂಡು ದೊಡ್ಡ ದೊಡ್ಡನಗರಗಳಿಗೆ ಅಲೆದಾಡುವುದನ್ನು ತಪ್ಪಿಸಲು ಸ್ಥಳೀಯವಾಗಿ ಸಹಸ್ರಾರು ಜನರಿಗೆ ಉದ್ಯೋಗ ನೀಡುವ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸುವುದು ಅತ್ಯಗತ್ಯವಾಗಿದೆ. ಆಗ ಮಾತ್ರ ಕಾರ್ಮಿಕರ ಕೆಲ ಸಮಸ್ಯೆಗಳಿಗಾದರೂ ಉತ್ತರ ದೊರೆತು ಅವರ ಸ್ಥಿತಿ ಸ್ವಲ್ಪವಾದರೂ ಸುಧಾರಿಸಬಹುದು.

ಯಾದಗಿರಿ ಜಿಲ್ಲೆಯ ಚಳವಳಿಗಳ ಪ್ರಭಾವವನ್ನು ಗಮನಿಸಿದರೆ ಮಹಿಳಾ ಚಳವಳಿಗಳು ತಮ್ಮ ಛಾಪು ಮೂಡಿಸುತ್ತಿಲ್ಲ ಎನಿಸುತ್ತದೆ. ಈ ಜಿಲ್ಲೆಯ ಪರಿಸ್ಥಿತಿ, ಹಿನ್ನೆಲೆಯನ್ನು ಅವಲೋಕಿಸಿದರೆ ಎಲ್ಲಕ್ಕಿಂತಲೂ ಪ್ರಬಲವಾದಂತಹ ಮಹಿಳಾ ಚಳವಳಿ ಹುಟ್ಟಬೇಕಾಗಿದ್ದೇ ಗುಲಬರ್ಗಾ ಅಥವಾ ಯಾದಗಿರಿ ಜಿಲ್ಲೆಯಿಂದ. ಈ ಭಾಗದ ಹಿನ್ನೆಲೆಯನ್ನು ತೆಗೆದುಕೊಂಡರೆ ಇಲ್ಲಿ ಮುಸ್ಲಿಂ ಸಂಸ್ಕೃತಿ ಮತ್ತು ಹಿಂದೂ ಸಂಸ್ಕೃತಿ ಹಾಗೂ ಇಷ್ಟೆಲ್ಲಾ ಸಮಸ್ಯೆ ಸಂಕಷ್ಟ ಇಕ್ಕಟ್ಟಿನ ನಡುವೆ ಏಕಕಾಲದಲ್ಲಿಯೇ ನಲುಗುತ್ತಿರುವವರೆಂದರೆ ಮಹಿಳೆಯರು. ಇಂತಹ ಪರಿಸ್ಥಿತಿಯಿಂದ ಬಿಡುಗಡೆ ಹೊಂದುವ ಸಲುವಾಗಿ ದೊಡ್ಡ ಹೋರಾಟ ರೂಪಿಸಬೇಕಾದ ಅಗತ್ಯತೆ ಇತ್ತು. ಆದರೆ ಕ್ಷೇತ್ರಕಾರ್ಯ ಹಾಗೂ ಅಧ್ಯಯನದ ದೃಷ್ಟಿಯಲ್ಲಿ, ಇಲ್ಲಿ ಗಮನಿಸಿದಂತೆ ಇಂತಹ ಹೋರಾಟಗಳನ್ನು ಇವತ್ತಿನ ವರೆಗೂ ಕಟ್ಟಲಿಕ್ಕಾಗಿಲ್ಲ. ಮಹಿಳೆಯರ ಸಬಲೀಕರಣಕ್ಕಾಗಿ ಸರಕಾರ ಸ್ತ್ರೀಶಕ್ತಿ ಸ್ವಸಹಾಯ ಯೋಜನೆಯನ್ನು ಜಾರಿಗೊಳಿಸಿತು. ಆರಂಭದಲ್ಲಿ ಭಾರಿ ಭರವಸೆ ಮೂಡಿಸಿದ್ದ ಸ್ತ್ರೀಶಕ್ತಿ ಸಂಘಗಳು ಸ್ವಸಹಾಯ ಗುಂಪುಗಳು ಇಂದು ರಾಜಕೀಯ ಪಕ್ಷಗಳ ಕಾರ್ಯಕರ್ತರಾಗಿ ರೂಪುಗೊಳ್ಳುತ್ತಿದ್ದಾರೆ ಎನಿಸುತ್ತಿದೆ. ಸಂಘಗಳ ಮೂಲಕ ಆರ್ಥಿಕ ಸುಧಾರಣೆ ಮಾಡಿಕೊಂಡು ಮಹಿಳಾ ಸಬಲೀಕರಣದ ಹಾದಿಯಲ್ಲಿ ಸಾಗಬೇಕಾಗಿದ್ದ ಈ ಸಂಸ್ಥೆಗಳು ಚುನಾವಣಾ ಸಮಯದಲ್ಲಿ ರಾಜಕೀಯ ಪಕ್ಷಗಳ ವೋಟ್ ಬ್ಯಾಂಕ್‌ಗಳಾಗಿ ಮಾರ್ಪಟ್ಟಿರುವುದು ಮಹಿಳಾ ಹೋರಾಟಕ್ಕೆ ದೊಡ್ಡ ಹಿನ್ನಡೆ ಎನ್ನಬಹುದು.

ಒಟ್ಟಿನಲ್ಲಿ ಹೇಳುವುದಾದರೆ ಯಾದಗಿರಿ ಜಿಲ್ಲೆಯ ಮಹಿಳೆಯರು ಅನೇಕ ಸಾಮಾಜಿಕ ಪಿಡುಗುಗಳಿಂದ ನರಳುತ್ತಿದ್ದಾರೆ. ಅಜ್ಞಾನ, ಅನಕ್ಷರತೆ, ಮೌಢ್ಯತೆ, ಲಿಂಗ ಅಸಮಾನತೆಗಳಿಂದ

ಅವರ ಸ್ಥಾನಮಾನಕ್ಕೆ ಧಕ್ಕೆಯಾಗುತ್ತಿದೆಯೇನೋ ಎಂದೆನಿಸುತ್ತದೆ. ಆದರೆ ಇಷ್ಟೆಲ್ಲಾ ಪರಿಸ್ಥಿತಿಯ ಮಧ್ಯೆಯೂ ಎಲ್ಲಾ ವರ್ಗದ ಮಹಿಳೆಯರಲ್ಲಿ ಅದರಲ್ಲೂ ಗ್ರಾಮಾಂತರ ಪ್ರದೇಶದ ಮಹಿಳೆಯರು ಸರಕಾರದ ಕೆಲವು ಸೌಲಭ್ಯಗಳನ್ನು ಪಡೆದು ಸ್ವ-ಉದ್ಯೋಗದಲ್ಲಿ ತೊಡಗಿಕೊಂಡಿರುವುದು ಸ್ವಲ್ಪ ಸಮಾಧಾನ ತರುವಂತಿದೆ. ಯಾದಗಿರಿ ಜಿಲ್ಲೆಯ ಮಠಗಳು, ಮಸೀದಿಗಳು, ಚರ್ಚ್‌ಗಳ ಬಗ್ಗೆ ಅಧ್ಯಯನ ಮಾಡಿದಾಗ ತಿಳಿದುಬಂದುದೇನೆಂದರೆ, ಸಮಾಜದ ಸುಧಾರಣೆಗೆ ಇವು ನಿರ್ವಹಿಸುತ್ತಿರುವ ಪಾತ್ರ ತುಂಬಾ ಪ್ರಶಂಸನೀಯವಾಗಿದೆ. ಕರ್ನಾಟಕದ ಬೇರೆ ಭಾಗಗಳಿಗಿಂತ ಭಿನ್ನ ಭಾಷೆ, ಧರ್ಮ, ಸಂಸ್ಕೃತಿಯನ್ನು ಒಳಗೊಂಡಿರುವ ಈ ಪ್ರದೇಶದಲ್ಲಿ ಹಿಂದೂ, ಮುಸ್ಲಿಂ, ದಲಿತ, ಕ್ರೈಸ್ತರ ನಡುವೆ ಸಾಮರಸ್ಯ ಮೂಡಿಸುವಲ್ಲಿ ಇವು ಸಫಲವಾಗಿವೆ. ಹಿಂದೂ-ಮುಸ್ಲಿಮರು ಸೇರಿ ಜಾತ್ರೆಯನ್ನು, ಉರುಸ್‌ಗಳನ್ನು ಆಚರಿಸುತ್ತಿರುವುದು ಸಮಾಜದ ಶಾಂತಿ, ಸಹಬಾಳ್ವೆಗೆ, ಸಾಮರಸ್ಯಕ್ಕೆ, ಕೈಗನ್ನಡಿಯಂತಿದೆ.

ಇನ್ನು ಶೈಕ್ಷಣಿಕವಾಗಿ ಸಾಕಷ್ಟು ಗೊಂದಲದಲ್ಲಿದ್ದು, ಅಗತ್ಯ ಸೌಲಭ್ಯಗಳಿಂದ ವಂಚಿತವಾಗಿವೆ. ಶಿಕ್ಷಣ ಮನುಷ್ಯರ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ಯಾವ ಪ್ರದೇಶ ಶಿಕ್ಷಣದಿಂದ ಸಮೃದ್ಧವಾಗಿರುತ್ತದೋ ಅಲ್ಲಿನ ಅಭಿವೃದ್ಧಿಯ ವೇಗ ಹೆಚ್ಚುತ್ತದೆ. ಆದರೆ ಬದುಕಿನ ಭಾಗವಾಗಿ ಹೊಟ್ಟೆಗೆ ಅನ್ನ ನೀಡುವ ಮತ್ತು ಔದ್ಯೋಗಿಕ ನೆಲೆಗೆ ದಾರಿ ಮಾಡುವ ಆಧುನಿಕ ಶಿಕ್ಷಣದ ಕೊರತೆ ಈ ಭಾಗದಲ್ಲಿ ಎದ್ದು ಕಾಣುತ್ತದೆ. ೨೦೧೧ರ ಸಮೀಕ್ಷೆಯಂತೆ ಹೈದರಾಬಾದ್ ಕರ್ನಾಟಕದ ಸಾಕ್ಷರತೆಯ ಪ್ರಮಾಣ ಕೇವಲ ಶೇ. ೬೦. ಅದರಲ್ಲಿಯೂ ಯಾದಗಿರಿ ಜಿಲ್ಲೆಯದು ಶೇ.೫೨.೩೬ ಎಂಬುದನ್ನು ಗುರುತಿಸಿದರೆ ಗಂಭೀರವಾಗಿ ಯೋಚನೆ ಮಾಡಬೇಕಾದ ಅವಶ್ಯಕತೆ ಇದೆ.

ಅಷ್ಟೇ ಅಲ್ಲ, ಯಾದಗಿರಿ ಜಿಲ್ಲೆಯಲ್ಲಿ ಹೆಣ್ಣುಮಕ್ಕಳ ಸಾಕ್ಷರತೆ ಪ್ರಮಾಣ ಆತಂಕ ಹುಟ್ಟಿಸುತ್ತದೆ. ಎಷ್ಟೋ ಕುಟುಂಬಗಳಿಗೆ ಹೊಟ್ಟೆ ಹೊರೆಯುವುದೇ ದುಸ್ತರವಾಗಿರುವಾಗ ಉನ್ನತ ಶಿಕ್ಷಣ ಇಲ್ಲಿನ ಮಕ್ಕಳಿಗೆ ಕನಸಾಗಿದೆ. ಹೀಗಾಗಿ ನಿರಂತರ ಬಡತನದಿಂದ ನಲುಗುತ್ತಿರುವ ಈ ಪ್ರದೇಶದ ಶೈಕ್ಷಣಿಕ ವಲಯದ ಏಳಿಗೆಗೆ ಪ್ರತ್ಯೇಕ ಅನುದಾನ ಮಂಜೂರು ಮಾಡುವುದು ಹಾಗೂ ಇಲ್ಲಿನ ಜನರ ಮುಖದಲ್ಲಿ ಅಕ್ಷರದ ಗೆರೆ ಮೂಡಿಸುವುದು ಇಂದಿನ ತುರ್ತು ಅಗತ್ಯ ವಾಗಿದೆ. ಯಾದಗಿರಿ ಜಿಲ್ಲೆಯ ಜಾತಿ ಆಧಾರಿತ ರಾಜಕಾರಣದಿಂದಾಗಿ ಇಲ್ಲಿನ ಸಾಮಾಜಿಕ ಚಳುವಳಿಗಳು ಮುಂಚೂಣಿಗೆ ಬರಲು ಸಾಧ್ಯವಾಗುತಿಲ್ಲವೇನೋ ಎನ್ನಬಹುದಾಗಿದೆ. ಏಕೆಂದರೆ ಮೂರು ನಾಲ್ಕು ದಶಕಗಳಿಂದ ರಾಜಕೀಯ ಮಾಡುತ್ತಾ ನಿರಂತರವಾಗಿ ಏನನ್ನು ದೊರಕಿಸಿಕೊಡ ಬೇಕಿತ್ತೋ, ಯೋಜನೆಗಳನ್ನು ಜಾರಿ ಮಾಡಬೇಕಿತ್ತೋ ಅದನ್ನು ಮಾಡಲು ಇಲ್ಲಿನ ಜನಪ್ರತಿನಿಧಿಗಳಿಗೆ ಸಾಧ್ಯವಾಗಿಲ್ಲ.

ಡಾ. ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿಯ ವರದಿ ಮತ್ತು ಅನುಷ್ಠಾನ ಹಾಗೂ ಅದರಿಂದಾದ ಸುಧಾರಣೆಗಳನ್ನು, ಬದಲಾವಣೆಗಳನ್ನು ನೋಡಿದಾಗ, ಹೈದರಾಬಾದ್ ಕರ್ನಾಟಕದ ಯಾವ ಸ್ಥಿತಿಗತಿಗಳನ್ನು ಸುಧಾರಿಸದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಡಾ. ಡಿ.ಎಂ. ನಂಜುಂಡಪ್ಪ ಉನ್ನತಾಧಿಕಾರ ಸಮಿತಿ ತನ್ನ ವರದಿಯಲ್ಲಿ ಹೈದರಾಬಾದ್

ಕರ್ನಾಟಕ ಪ್ರದೇಶವು ಅಭಿವೃದ್ಧಿಯಲ್ಲಿ ಮೈಸೂರು ಕರ್ನಾಟಕ ಮತ್ತು ಮುಂಬಯಿ ಕರ್ನಾಟಕಕ್ಕೆ ಹೋಲಿಸಿದಾಗ ನೂರು ವರ್ಷದಷ್ಟು ಹಿಂದುಳಿದಿದೆ ಎಂದು ಸ್ಪಷ್ಟವಾಗಿ ಹೇಳಿದೆ. ಆದರೂ ಸರಕಾರಗಳು ಡಾ. ಡಿ.ಎಂ. ನಂಜುಂಡಪ್ಪ ಅವರ ವರದಿಯನ್ನು ಜಾರಿ ಮಾಡುವಲ್ಲಿ ವಿಫಲ ವಾಗಿರುವುದು ಕಂಡುಬರುತ್ತದೆ. ಒಂದು ರೀತಿಯಲ್ಲಿ ವರದಿ ಜಾರಿಯೂ ಆಗಲಿಲ್ಲ, ತಿರಸ್ಕಾರವೂ ಆಗಲಿಲ್ಲ. ಆದರೂ ಅಭಿವೃದ್ಧಿಯೆಂಬುದಕ್ಕೆ ರಸ್ತೆಗಳ ನಿರ್ಮಾಣ ಅಳತೆಗೋಲಲ್ಲ. ಬದಲಾಗಿ ಅಭಿವೃದ್ಧಿಯು ಈ ಭಾಗದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಶಿಕ್ಷಣ ಸಂಸ್ಥೆಗಳಲ್ಲಿ ಸುಲಭ ಪ್ರವೇಶಾವಕಾಶವನ್ನು ಕಲ್ಪಿಸುವ, ಸರಕಾರಿ ನೌಕರಿಗಳಲ್ಲಿ ಮೀಸಲಾತಿ ಮೂಲಕ ಉದ್ಯೋಗವನ್ನು ದೊರಕಿಸಿ, ಇಲ್ಲಿನ ಜನರ ಸ್ಥಾನಮಾನದಲ್ಲಿ ಬದಲಾವಣೆಯನ್ನು ತರುವುದರಲ್ಲಿ ಅರ್ಥವಿದೆ.

ಯಾದಗಿರಿ ಜಿಲ್ಲೆಗೆ ಅನ್ವಯವಾಗುವಂತೆ ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಗಾಗಿ ಒತ್ತಾಯಿಸಿ ಇಲ್ಲಿಯ ಜನರು ಹಲವಾರು ದಶಕಗಳಿಂದ ಬೀದಿಗಿಳಿದು ಹೋರಾಟ ನಡೆಸಿದ್ದರು. ಅನೇಕ ಸಂಘಟನೆಗಳು, ವಿವಿಧ ನಾಯಕರು, ಜನರು ನಡೆಸಿದ ಹೋರಾಟವನ್ನು ಗಂಭೀರವಾಗಿ ಪರಿಗಣಿಸಿದ ಕೇಂದ್ರ ಸರಕಾರ, ಇವರ ಹೋರಾಟಕ್ಕೆ, ಬೇಡಿಕೆಗೆ ಕೊನೆಗೂ ಸ್ಪಂದಿಸಿ, ಗೃಹಸಚಿವರಾದ ಶ್ರೀ ಸುಶೀಲ್ ಕುಮಾರ್ ಶಿಂದೆ ಅವರ ಒಪ್ಪಿಗೆಯ ನಂತರ ಇತ್ತೀಚೆಗೆ ೩೭೧ನೇ ತಿದ್ದುಪಡಿಯಾಗಿ ಜಾರಿಯಾಗಿರುವುದು ಇಲ್ಲಿನ ಜನರಲ್ಲಿ ಹರ್ಷ ಮೂಡಿಸಿದೆ. ಹೀಗಾಗಿ ಸಂವಿಧಾನದ ೩೭೧ನೇ ಕಲಂ ಹೈದರಾಬಾದ್ ಕರ್ನಾಟಕಕ್ಕೆ ಜಾರಿಯಾಗಿ ಇದರಿಂದ ಸಿಗುವ ಸೌಲಭ್ಯಗಳೇನು ಎನ್ನುವುದನ್ನು ಬದಿಗಿಟ್ಟು ಈಗಾಗಲೇ ಇಲ್ಲಿರುವ ವಿವಿಧ ಯೋಜನೆಗಳಿಗೆ ಬೇಡಿಕೆಗಳಿಗೆ ಸರಕಾರ ಮತ್ತು ಇಲ್ಲಿನ ಜನಪ್ರತಿನಿಧಿಗಳು ಸ್ಪಂದಿಸಬೇಕು.

ಇಲ್ಲಿನ ಅಭಿವೃದ್ಧಿಗೆ ಮತ್ತು ಯೋಜನೆಗಳ ಅನುಷ್ಠಾನಕ್ಕೆ ವಿವಿಧ ಸಮಿತಿಗಳನ್ನು ನೇಮಿಸುವುದರ ಮೂಲಕ ಹೈದರಾಬಾದ್ ಕರ್ನಾಟಕದ ಅಭಿವೃದ್ಧಿಯ ಕೆಲಸ ಆಗಬೇಕು. ಒಂದು ವೇಳೆ ಸರಕಾರ ಇದನ್ನು ಗಮನಿಸದೇ ಹೋದರೆ ಪರಿಸ್ಥಿತಿ ಹೀಗೆ ಮುಂದುವರಿದುಕೊಂಡು ಹೋದರೆ ಪ್ರಸಕ್ತ ಪಕ್ಕದ ತೆಲಂಗಾಣದಲ್ಲಿ ಉದ್ಭವಿಸಿರುವಂತಹ ಪರಿಸ್ಥಿತಿ ಇಲ್ಲೂ ಉದ್ಭವಿಸಿದರೆ ಆಶ್ಚರ್ಯವೇನಿಲ್ಲ. ಹೀಗಾಗಿ ಸರಕಾರ ಮತ್ತು ಸ್ಥಳೀಯ ಜನಪ್ರತಿನಿಧಿಗಳು ತಕ್ಷಣ ಇಲ್ಲಿನ ಮೂಲಭೂತ ಅವಶ್ಯಕತೆಗಳಾದ ರಸ್ತೆ, ನೀರು, ಶಿಕ್ಷಣ, ಉದ್ಯೋಗ, ಕೃಷಿಗೆ ಒತ್ತು ನೀಡಬೇಕಾಗಿದೆ. ಇದರ ಮೂಲಕ ಜನರ ಬದುಕಿನಲ್ಲಿ ಈ ಜಿಲ್ಲೆಯಲ್ಲಿ ಬದಲಾವಣೆಯನ್ನು ತರಬೇಕಾಗಿದೆ.

ಒಟ್ಟಾರೆಯಾಗಿ ನೋಡುವುದಾದರೆ ಯಾದಗಿರಿ ಜಿಲ್ಲೆ ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ, ಸಾಂಸ್ಕೃತಿಕವಾಗಿ ಹಿಂದುಳಿದಿರುವುದು ಒಂದು ಕಡೆಯಾದರೆ ಮಾನಸಿಕವಾಗಿಯೂ ಬಹಳ ಎಚ್ಚರ ತಪ್ಪಿದೆ. ತಮ್ಮ ಮೇಲೆ ಆಗುತ್ತಿರುವ ಅನ್ಯಾಯವನ್ನು ಸರಿಪಡಿಸಿಕೊಳ್ಳುವ ಆತ್ಮಪ್ರಜ್ಞೆಯೂ ಇಲ್ಲವಾಗಿದೆ. ಏಕೆಂದರೆ ಇಲ್ಲಿನ ಅನಕ್ಷರತೆಗೆ, ಬಡತನಕ್ಕೆ, ಅನಭಿವೃದ್ಧಿಗೆ, ಹಿಂದುಳಿದಿರುವಿಕೆಗೆ ಬೇರೆಯವರು ಎಷ್ಟು ಕಾರಣರಾಗಿದ್ದಾರೋ ಅದಕ್ಕಿಂತ ಹೆಚ್ಚು ಕಾರಣಕರ್ತರು ಈ ಭಾಗದವರೇ ಆಗಿದ್ದಾರೆ. ಏಕೆಂದರೆ ಹೈದರಾಬಾದ್ ನಿಜಾಮನ ಕಾಲದಲ್ಲಿದ್ದ ಮುಲ್ಕಿ ಕಾನೂನಿನ ಅನ್ವಯ ನೌಕರಿ ಪಡೆಯುತ್ತಿದ್ದ ಜನರು,

ಸ್ವಾತಂತ್ರ್ಯದ ನಂತರ ಮುಲ್ಕಿ ಕಾನೂನನ್ನು ಉಳಿಸಿಕೊಳ್ಳುವುದು ಇವರಿಗೆ ಸಾಧ್ಯವಾಗಿಲ್ಲ. ಇದೇ ಭಾಗದ ಜೊತೆಗಿದ್ದ ಮರಾಠವಾಡದವರು ಮತ್ತು ತೆಲಂಗಾಣದವರು ಮುಲ್ಕಿ ಕಾನೂನಿನ ಪ್ರಯೋಜನ ಪಡೆದಿರುವಾಗ ಆ ಸೌಲಭ್ಯ ನಮಗೇಕೆ ಇಲ್ಲವೆಂದು ಇಲ್ಲಿನ ಜನರೂ ಆಲೋಚಿಸಲಿಲ್ಲ ಹಾಗೂ ಜನನಾಯಕರೂ ಪ್ರಶ್ನಿಸಲಿಲ್ಲ. ಸಮಯ ಮಿಂಚಿದ ಬಳಿಕ ಈಗ ವಿಶೇಷ ಸವಲತ್ತುಗಳಿಗಾಗಿ ಹೋರಾಡುತ್ತಿದ್ದಾರೆ. ಹೋರಾಟಗಳೂ ಕೂಡ ಎಲ್ಲಾ ಜನತೆಯ ಹೋರಾಟಗಳಾಗಿ ಕಂಡುಬರದೇ, ರಾಜಕೀಯ ಬಣ್ಣ ಪಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಬದಲಾಗಿ ಪಕ್ಷಭೇದ, ಜಾತಿಭೇದ ಮರೆತು ಎಲ್ಲರೂ ಒಗ್ಗೂಡಿ ಇನ್ನಾದರೂ ಈ ಜಿಲ್ಲೆಯ ಅಭಿವೃದ್ಧಿಯ ಬಗ್ಗೆ ಯೋಚಿಸುವ ಅಗತ್ಯ ಪ್ರಸ್ತುತ ತುರ್ತಾಗಿ ಆಗಬೇಕಾಗಿದೆ.

### ಅಧ್ಯಯನದ ಫಲಿತಗಳು

ಪ್ರಸ್ತುತ ಪ್ರಬಂಧದಿಂದ ಕಂಡುಕೊಂಡ ಫಲಿತಗಳನ್ನು ಕೆಳಗಿನಂತೆ ಗುರುತಿಸಲಾಗಿದೆ.

* ಅವಿಭಜಿತ ಗುಲಬರ್ಗಾ ಜಿಲ್ಲೆಯಿಂದ ಯಾದಗಿರಿ ಪ್ರದೇಶ ೨೦೧೦ರ ನಂತರ ಪರಿವರ್ತನೆಯಾದ ನಂತರ ಸಂಘಟನೆಗಳಲ್ಲಾದ ಸಾಂಸ್ಕೃತಿಕ ಪಲ್ಲಟಗಳನ್ನು ವಸ್ತುನಿಷ್ಠವಾಗಿ ಮನಗಾಣಲು ಪ್ರಯತ್ನಿಸಲಾಗಿದೆ.

* ಚಾರಿತ್ರಿಕವಾಗಿ ಈ ಪ್ರದೇಶ ಬೌದ್ಧ ನೆಲೆಯಾಗಿತ್ತೆಂಬುದಕ್ಕೆ ಹಲವಾರು ಸಾಕ್ಷಿಗಳು ದೊರಕುತ್ತವೆ. ಇದಕ್ಕೆ ಸಾಕ್ಷಿಯಾಗಿ ಸನ್ನತಿಯಂತ ಐತಿಹಾಸಿಕ ಸ್ಥಳ ಹಾಗೂ ಭೀಮಾನದಿಯ ತಪ್ಪಲಿನಲ್ಲಿ ಬೌದ್ಧ ನೆಲೆಗಳು ಸಾಕ್ಷಿಯಾಗಿವೆ. ಇಂದು ದಲಿತ ಸ್ಥಿತ್ಯಂತರ ಕಾರಣಗಳಿಂದಾಗಿ ಬೌದ್ಧಧರ್ಮದ ಕಡೆ ದಲಿತರು ಇಲ್ಲಿ ಹೆಚ್ಚಿಗೆ ಮುಖ ಮಾಡಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

* ಈ ಭಾಗದ ಸಾಮಾಜಿಕ ಚಳುವಳಿಗಳು ೧೦೦ಕ್ಕೆ ೭೦ರಷ್ಟು ವಿಫಲವಾಗಿರುವುದನ್ನು ಅಧ್ಯಯನದಲ್ಲಿ ಕಂಡುಕೊಂಡಿದ್ದೇನೆ. ಕಾರಣ ಈ ೭೦ರಷ್ಟು ಮುಂಚೂಣಿಯ ನಾಯಕರು ಶೋಷಿತ ಸಮುದಾಯದವರೇ ಆಗಿರುವುದು. ಈ ಶೋಷಿತ ಸಮುದಾಯದವರು ಉಳಿದ ೩೦ ಭಾಗದವರ ರಾಜಕೀಯ ಹಾಗೂ ಸಾಮಾಜಿಕ ಚೌಕಟ್ಟಿನಲ್ಲಿಯೇ ಸಂಕಷ್ಟದಲ್ಲಿ ಬದುಕಿ ತಮ್ಮ ಸಂಘಟನೆ ಮತ್ತು ಚಳುವಳಿಗಳನ್ನು ಸಂಕಷ್ಟದಲ್ಲಿಯೇ ದೂಡುತಿದ್ದಾರೆ ಎಂಬುದನ್ನು ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

* ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳಿಗೆ ಯಾವುದೇ ಪ್ರಸಾರ ಮಾಧ್ಯಮಗಳು ಹೆಚ್ಚಿನ ಪ್ರಸಾರವನ್ನು ಕೊಡದಿರುವುದನ್ನು ನನ್ನ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಉದಾಹರಣೆಗೆ ಯಾವುದೋ ಒಂದು ಕೋಮು ಗಲಭೆ ಹಾಗೂ ಚಿತ್ರ ನಟರ ಬಗ್ಗೆ ದಿನಗಟ್ಟಲೆ ತೋರಿಸುವ ದೃಶ್ಯ ಮಾಧ್ಯಮಗಳು, ಯಾದಗಿರಿಗೆ ಸಂಬಂಧಿಸಿದ ಮೂಲಭೂತ ಸಮಸ್ಯೆಗಳಾದ ಬೇಳೆ ಬೆಳೆಗಾರ ಮತ್ತು ಮಾರುಕಟ್ಟೆ ಸಮಸ್ಯೆ, ಹತ್ತಿ ಬೆಳೆಗಾರರು ಮತ್ತು ಮಾರುಕಟ್ಟೆ, ಯಾದಗಿರಿ ಜಿಲ್ಲೆ ಶೈಕ್ಷಣಿಕ ಹಿಂದುಳಿದಿರುವಿಕೆ, ಆರೋಗ್ಯ ಅಪೌಷ್ಟಿಕತೆ ಈ ಯಾವ ಸಮಸ್ಯೆಗಳನ್ನು ಕುರಿತು ವಸ್ತುನಿಷ್ಠವಾಗಿ ಸರಕಾರಕ್ಕೆ ಮನದಟ್ಟು ಮಾಡುವ ದಿಕ್ಕಿನಲ್ಲಿ ಕೆಲಸ ಮಾಡಿಲ್ಲ ಎಂಬುದನ್ನು ಅಧ್ಯಯನದಲ್ಲಿ ಮನಗಾಣಲಾಗಿದೆ.

* ಸ್ವಾತಂತ್ರ್ಯಪೂರ್ವದ ಸಂದರ್ಭದಲ್ಲಿ ನಾರಾಯಣಪುರ ಮತ್ತು ತುಂಗಭದ್ರಾ ಡ್ಯಾಂ ನಿರ್ಮಾಣವಾಗುವ ಸಂದರ್ಭದಲ್ಲಿ ಸ್ಥಳೀಯ ಬಂಡವಾಳಶಾಹಿಗಳು ಆಂಧ್ರದ ಬಂಡವಾಳಶಾಹಿ ಗಳು ಬಡ ಮತ್ತು ದಲಿತರ ಭೂಮಿಯನ್ನು ಕಡಿಮೆ ದರದ ಹಣಕ್ಕೆ ಕೊಂಡುಕೊಂಡು ಕೃಷಿ ಮಾಡಲು ಪ್ರಾರಂಭಿಸಿದರು. ಅದೇ ಭೂಮಿಯಲ್ಲಿ ಇಲ್ಲಿನ ಬಡ ಮತ್ತು ದಲಿತ ವರ್ಗದವರು ದುಡಿಯುತ್ತಿರುವುದನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಯಿತು.

* ಈ ಪ್ರದೇಶದಲ್ಲಿ ಹಿಂದುಳಿದ, ದಲಿತ ವರ್ಗಗಳಲ್ಲಿ ಬಾಲ್ಯವಿವಾಹ, ದೇವದಾಸಿ ಪದ್ಧತಿಯಂತಹ ಅಮಾನವೀಯ ಆಚರಣೆಗಳು ಇಂದಿಗೂ ಕೂಡ ಜಾರಿಯಲ್ಲಿವೆ. ಈ ಅಮಾನವೀಯ ಆಚರಣೆಗಳು ಹಿಂದುಳಿದ ಮತ್ತು ದಲಿತ ವರ್ಗಗಳು ಮಾತ್ರ ಆಚರಿಸಲು ಕಾರಣ ಅನಕ್ಷರತೆ, ಬಡತನ. ಈ ದೇವದಾಸಿ ಸಮುದಾಯದವರು ಇವುಗಳ ನಿರ್ಮೂಲನೆಗಾಗಿ ಹಲವಾರು ಸಂಘ ಸಂಸ್ಥೆಗಳನ್ನು ಸ್ಥಾಪಿಸಿಕೊಂಡಿದ್ದರೂ ಸಹ ಇವರ ಹೋರಾಟಗಳು ಪ್ರಬಲ ಕೋಮಿನವರ ತೆಕ್ಕೆಯಲ್ಲಿ ಸೋಲುತ್ತಿರುವುದನ್ನು ಅಧ್ಯಯನದಲ್ಲಿ ಕಂಡುಕೊಂಡಿದ್ದೇನೆ.

* ಯಾದಗಿರಿ ಜಿಲ್ಲಾ ಪ್ರದೇಶವಾಗಿ ೯ ವರ್ಷಗಳು ಕಳೆದರೂ ಈ ಪ್ರದೇಶ ಅಭಿವೃದ್ಧಿಯನ್ನು ಕಾಣದಿರಲು ಇಲ್ಲಿನ ರಾಜಕೀಯ ಹಾಗೂ ಒಂದಷ್ಟು ಸರಕಾರಿ ಅಧಿಕಾರಿಗಳೇ ಕಾರಣ. ಉದಾಹರಣೆಗೆ ಬಿಸಿ ಊಟದ ಯೋಜನೆ, ಮಹಿಳಾ ಸ್ವಸಹಾಯ ಸಂಘಟನೆ ಯೋಜನೆ, ಅನ್ನ ಭಾಗ್ಯದಂತಹ ಯೋಜನೆಗಳು ಬೇರೆ ಪ್ರದೇಶಗಳಿಗೆ ಹೋಲಿಸಿಕೊಂಡರೆ ಈ ಭಾಗದಲ್ಲಿ ೬೦ರಷ್ಟು ಅಭಿವೃದ್ಧಿ ಆಗದಿರುವುದು ಸೂಕ್ತ ಕಾರಣಗಳನ್ನು ಅಧ್ಯಯನದಲ್ಲಿ ಕಂಡೊಳ್ಳಲಾಗಿದೆ.

* ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ಜಿಲ್ಲಾಡಳಿತ ಕಾರ್ಯ ನಿರ್ವಹಿಸುತ್ತಿದ್ದರೆ ಅಲ್ಲಿನ ಸಾಮಾಜಿಕ ಸಂಘಟನೆಗಳು ವಿರೋಧ ಪಕ್ಷದ ಮಾದರಿಯಲ್ಲಿ ಜಿಲ್ಲಾಡಳಿತದ ಕಾರ್ಯ ವೈಖರಿಗಳನ್ನು ಪ್ರಶ್ನಿಸುವ ಹಾಗೂ ಉತ್ತರ ಪಡೆಯುವುದು, ತಮಗೆ ದೊರಕುವ ಸರ್ಕಾರಿ ಸೌಲಭ್ಯಗಳನ್ನು ಪಡೆಯುವ ದಿಕ್ಕಿನಲ್ಲಿ ಕಾರ್ಯ ನಿರ್ವಹಿಸಬೇಕಾದದ್ದು ನಿಯಮ. ಆದರೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಈ ರೀತಿಯ ಕಾರ್ಯ ಸಾಧನೆಗೆ ಇಲ್ಲಿನ ಸಾಮಾಜಿಕ ಸಂಘಟನೆಗಾರರು ಮುಂದಾಗದಿರುವುದು ಸಂದರ್ಶನಾಧಾರಿತ ಮಾಹಿತಿಯಿಂದ ಕಂಡು ಕೊಂಡಿದ್ದೇನೆ.

* ಪಕ್ಕದ ಆಂಧ್ರಪ್ರದೇಶದ ಜನರು ಯಾದಗಿರಿ ಜಿಲ್ಲೆಯ ಕೃಷ್ಣಾ ಮತ್ತು ಭೀಮಾ ನದಿ ದಂಡೆಯ ಭೂಮಿಯನ್ನು ಕೊಂಡುಕೊಂಡು ಇಲ್ಲಯೇ ನೆಲೆಸಲು ಪ್ರಾರಂಭಿಸಿದ್ದರಿಂದ ಅವರ ಭಾಷೆ, ಸಂಸ್ಕೃತಿಯಿಂದಾಗಿ ಈ ಜಿಲ್ಲೆಯು ದ್ವಿಭಾಷಿಕ ಪ್ರದೇಶವಾಗಲು ಕಾರಣ ವಾಯಿತೆಂದು ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

* ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಗಳು ಹಾಗೂ ಸಂಘಟನೆಗಳು ಅನೇಕ ವಿಧದ ವಾದಗಳ ಹಿನ್ನೆಲೆಯಲ್ಲಿ ವಿಭಜನೆಗೊಂಡಿವೆ. ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್, ಬಿ.ಶಾಮಸುಂದರ ಮೊದಲಾದವರ ಹೋರಾಟಗಳು ಈ ಜಿಲ್ಲೆಯ ಸಾಮಾಜಿಕ ಚಳುವಳಿಯನ್ನು ಪ್ರಭಾವಿಸಿವೆ ಎನ್ನುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

* ಯಾದಗಿರಿ ಜಿಲ್ಲೆಯ ಸಾಮಾಜಿಕ ಚಳುವಳಿಯಲ್ಲಿ ವಿವಿಧ ಸಂಘಟನೆಗಳ ನಾಯಕರು ಮಾತ್ರವಲ್ಲದೆ ಸಾಮಾನ್ಯ ಜನರು ಚಳುವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರಲ್ಲಿ ರೈತರು, ದಲಿತರು, ಮಹಿಳೆಯರು, ಕಾರ್ಮಿಕರು, ಕೆಳವರ್ಗದವರು ಪ್ರಮುಖರಾಗಿದ್ದಾರೆ ಎನ್ನುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಕೊಳ್ಳಲಾಯಿತು.

* ಯಾದಗಿರಿ ಜಿಲ್ಲೆಯಲ್ಲಿ ರೈತರಿಗೆ ಹಾಗೂ ದಲಿತರಿಗೆ ಸಂಬಂಧಿಸಿದಂತೆ ಅನೇಕ ಹೋರಾಟಗಳು ಇಂದಿಗೂ ನಡೆದರೂ ಬಹುಪಾಲು ಚಳುವಳಿಗಳು ಯಶಸ್ಸನ್ನು ಕಾಣದೆ ಹೋಗುತ್ತಿವೆ. ಇದಕ್ಕೆ ಮುಖ್ಯವಾಗಿ ವಾದಗಳ ಹಿನ್ನೆಲೆಯಲ್ಲಿ ರೈತ, ದಲಿತ ಸಂಘಟನಾಕಾರರು ಒಗ್ಗೂಡದೆ ತಮ್ಮ ತಮ್ಮ ನಿಲುವನ್ನು ಪ್ರತಿಪಾದಿಸಿಕೊಂಡಿರುವುದು ಕಂಡುಬರುತ್ತದೆ. ರೈತ, ದಲಿತ ಸಮುದಾಯ ಹಿತಾಸಕ್ತಿಗೆ ಹಿನ್ನಡೆಯಾಗುತ್ತಿದೆ ಎನ್ನುವುದನ್ನು ಅಧ್ಯಯನದಿಂದ ತಿಳಿದು ಕೊಳ್ಳಲಾಗಿದೆ.

* ಯಾದಗಿರಿ ಜಿಲ್ಲೆಯಲ್ಲಿನ ಸಾಮಾಜಿಕ ಚಳುವಳಿಗಳು ಮತ್ತು ಹೋರಾಟಗಳು ಕೇವಲ ಜಿಲ್ಲಾ ಕೇಂದ್ರಕ್ಕೆ ಮಾತ್ರ ಸೀಮಿತವಾಗಿರದೆ, ಜನಸಾಮಾನ್ಯರಿಗೆ ಸಂಬಂಧಿಸಿದ ನಿಜವಾದ ಸಮಸ್ಯೆಗಳು ತಾಲೂಕು ಮಟ್ಟದಲ್ಲಿ, ಹೋಬಳಿ ಮಟ್ಟದಲ್ಲಿ, ಗ್ರಾಮಮಟ್ಟದಲ್ಲಿವೆ. ಇಂದು ಅಗತ್ಯವಾಗಿ ಆಗಬೇಕಾಗಿರುವುದು ಈ ಸಾಮಾಜಿಕ ಚಟುವಟಿಕೆಗಳನ್ನು ಗ್ರಾಮಗಳಿಗೆ ವಿಸ್ತರಿಸು ವುದು ಅಗತ್ಯವಾಗಿದೆ ಎಂದು ಅಧ್ಯಯನದಲ್ಲಿ ಮನಗಾಣಲಾಗಿದೆ.

* ಯಾದಗಿರಿ ಜಿಲ್ಲೆಯ ಹಲವಾರು ಹಿಂದುಳಿದ, ದಲಿತ ಹಾಗೂ ಅಲ್ಪಸಂಖ್ಯಾತ ಕಾಲೋನಿಗಳು ಅಭಿವೃದ್ಧಿ ಹೊಂದಿದ್ದರೂ ಗ್ರಾಮೀಣ ಪ್ರದೇಶದ ಹಿಂದುಳಿದ, ದಲಿತ, ಅಲ್ಪಸಂಖ್ಯಾತ ಕಾಲೋನಿಗಳು ಇಂದಿಗೂ ಬಡತನ ಸ್ಥಿತಿಯಲ್ಲಿವೆ. ಜಾತಿವ್ಯವಸ್ಥೆಯ ಕಟ್ಟುಪಾಡಿನಲ್ಲಿ ಕೆಲವು ಬಡ ಕುಟುಂಬಗಳು ಸರ್ಕಾರಿ ಸೌಲಭ್ಯಗಳಿಂದ ವಂಚಿತವಾಗಿವೆ. ಜನರು ಕೂಡ ಕಟಿಬದ್ಧರಾಗಿ ಸೌಲಭ್ಯಗಳನ್ನು ಪಡೆದುಕೊಳ್ಳಲಾರದಷ್ಟು ಅಮಾಯಕರಾಗಿದ್ದಾರೆ ಎನ್ನುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

* ಯಾದಗಿರಿ ಜಿಲ್ಲೆಯ ದಲಿತರಲ್ಲಿರುವ ಎಡಗೈ ಮತ್ತು ಬಲಗೈಗಳೆಂಬ ಜಾತಿವ್ಯವಸ್ಥೆಯ ಕಾರಣಗಳೇ ಇನ್ನೂ ದಲಿತರು ಒಗ್ಗೂಡಲು ಸಾಧ್ಯವಿಲ್ಲವಾಗಿದೆ. ಜಾತಿವ್ಯವಸ್ಥೆಯ ಆಚೆಗೆ ಇಲ್ಲದವರು ಒಂದುಗೂಡಿ ವ್ಯವಸ್ಥೆಯಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವುದು ಅನಿವಾರ್ಯ ವಾಗಿದೆ. ಇದರ ಜೊತೆಗೆ ದಲಿತರಲ್ಲಿಯೇ ಕನಿಷ್ಠ ಸ್ಥಿತಿಯಲ್ಲಿರುವ ಸೂಕ್ಷ್ಮ ಅತಿಸೂಕ್ಷ್ಮ ದಲಿತ ಸಮುದಾಯಗಳನ್ನು ಪ್ರಗತಿಯ ನೆಲೆಗೆ ತರುವ ಅನಿರ್ವಾತೆ ಇದೆ ಎಂದು ಅಧ್ಯಯನದಿಂದ ತಿಳಿದುಕೊಂಡಿದ್ದೇನೆ.

* ಈ ಜಿಲ್ಲೆಯಲ್ಲಿ ದಲಿತ ಜನರನ್ನು ದಲಿತರಂತೆ ಕಾಣದೆ ಸಮಾಜದ ಮುಖ್ಯವಾಹಿನಿಗೆ ತಂದು ಸಮಾನರಂತೆ ನಡೆಸಿಕೊಳ್ಳುವ ಅಗತ್ಯವಿದೆ. ಕೇವಲ ಸರ್ಕಾರಿ ಸೌಲಭ್ಯಕ್ಕಾಗಿ ದಲಿತ ಅಥವಾ ಜಾತಿಯನ್ನು ಸೂಚಿಸಿದರೂ ಅದರ ಹೊರತಾಗಿ ಜಾತಿರಹಿತ ಸಮಾನ ಸಮಾಜವನ್ನು ಸೃಷ್ಟಿಸುವ ಅಗತ್ಯವಿದೆ. ದಲಿತರ ನೆಲ ಸಂಸ್ಕೃತಿಯನ್ನು ಇಲ್ಲಿಯವರೆಗೂ ಶ್ರೇಷ್ಠವೆಂದು

ಬಿಂಬಿಸಿಕೊಂಡು ಬರುವ ಸಂಸ್ಕೃತಿಯೊಂದಿಗೆ ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಿ ದಲಿತ ಸಂಸ್ಕೃತಿಯ ಅನನ್ಯತೆಯ ಚಹರೆಗಳನ್ನು ದಾಖಲಿಸಬೇಕಿದೆ ಎನ್ನುವುದನ್ನು ಅಧ್ಯಯನದಲ್ಲಿ ಅರಿತುಕೊಳ್ಳಲಾಗಿದೆ.

* ಸಂವಿಧಾನಾತ್ಮಕ ಕಾನೂನು ಸೌಲಭ್ಯಗಳನ್ನು ಸಮಗ್ರವಾಗಿ ಹಿಂದುಳಿದ ಸಮುದಾಯಕ್ಕೆ ಒದಗಿಸುವಲ್ಲಿ ವ್ಯವಸ್ಥೆ ಇಂದಿಗೂ ವಿಫಲವಾಗಿದೆ. ಆದ್ದರಿಂದ ಹಿಂದುಳಿದ ವರ್ಗದ ನಿರುದ್ಯೋಗಿ ವಿದ್ಯಾವಂತರಿಗೆ ಸರ್ಕಾರದ ವತಿಯಿಂದ ತರಬೇತಿ ಕಾರ್ಯಕ್ರಮಗಳ ಕುರಿತು ವಿಚಾರ ಸಂಕಿರಣ, ಕಾರ್ಯಾಗಾರ, ಅನುದಾನದ ವಾರ್ಷಿಕ ವರದಿ ಬಿಡುಗಡೆ ಮಾಡುವುದು ಮತ್ತು ಬಡ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸಂಸ್ಥೆಗಳಲ್ಲಿ ದೊರೆಯುವ ಅನುದಾನದ ಬಗ್ಗೆ ಮಾಹಿತಿಯನ್ನು ನೀಡುವುದಲ್ಲದೆ, ಸರ್ಕಾರಿ, ಅರೆ ಸರ್ಕಾರಿ, ಖಾಸಗಿ ಸಂಸ್ಥೆಗಳಲ್ಲಿ ತೊಡಗಿಸಿಕೊಂಡು ಉದ್ಯೋಗ ನೀಡಿದರೆ ತಾವು ತಮ್ಮ ವರ್ಗದವರೂ ಮುಂದುವರಿಯುತ್ತಾರೆ ಎನ್ನುವುದನ್ನು ಅಧ್ಯಯನದಲ್ಲಿ ಅರಿತುಕೊಳ್ಳಲಾಗಿದೆ.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು
೨. ಭೂಪಟಗಳು
೩. ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು

೧. ಅಕ್ಕಿ ಡಿ.ಎನ್., ಹಕ್ಕಲು ತೆನೆ, ಕವಿಕುಂಚ ಪ್ರಕಾಶನ ಗೋಗಿ, ಯಾದಗಿರಿ, ೨೦೧೧.

೨. ಅಕ್ಕಿ ಡಿ.ಎನ್., ಗನ್ಧೋದಕ, ಕವಿಕುಂಚ ಪ್ರಕಾಶನ ಗೋಗಿ, ಯಾದಗಿರಿ, ೨೦೧೧.

೩. ಅರುಣಿ ಎಸ್.ಕೆ., ಸುರಪುರ ಸಂಸ್ಥಾನ, ಭಾರತೀಯ ಕಲಾ ಪ್ರಕಾಶನ, ನವದೆಹಲಿ, ೨೦೦೪.

೪. ಅಮರೇಶ ನುಗನೋಣಿ., ಹೈದರಾಬಾದು ಕರ್ನಾಟಕ ಹಾಡು ಹಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೫. ಅಮರೇಶ ನುಗಡೋಣಿ, ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನಾ ಚಳವಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೬. ಅಮರೇಶ ನುಗಡೋಣಿ(ಸಂ), ಬಸವಣ್ಣನ ವಚನಗಳು: ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೭. ಅರವಿಂದ ಮಾಲಗತ್ತಿ(ಸಂ), ೨೦೦೨, ದಲಿತ ಮಾರ್ಗ, ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨.

೮. ಅಲ್ಲಮಪ್ರಭು ಸ್ವಾಮೀಜಿ(ಸಂ), ವಚನ ಸಂಚಯ, ಬಸವ ಯೋಗ ಟ್ರಸ್ಟ್, ಬೆಂಗಳೂರು, ೨೦೦೮.

೯. ಈರಣ್ಣ ಜೆ.ಎಲ್., ಹೈದರಾಬಾದ್ ಕರ್ನಾಟಕದ ಅಸಮಾನತೆ ಸಂವಿಧಾನದ ೩೭೧ನೇ ಕಲಂ ಜಾರಿ: ಸವಾಲು, ಶ್ರೀ ಜಲ ಸೇವಾ ಸಂಸ್ಥೆ, ರಾಯಚೂರು, ೨೦೧೦.

೧೦. ಉಷಾ ಎಂ., ಮಹಿಳಾ ಚಳವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೧೧. ಕವಿತಾ ಮಲ್ಲಪ್ಪ, ಬಿ. ಶ್ಯಾಮಸುಂದರ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೮.

೧೨. ಕೃಷ್ಣೇಗೌಡ ಟಿ.ಎಲ್., ಉಳುವ ಯೋಗಿಯ ನೋಡಿಲ್ಲಿ, ಚಿಂತನ ಪುಸ್ತಕ, ಬೆಂಗಳೂರು, ೨೦೦೯.

೧೩. ಗಂಗಾರಾಮ್ ಚಾಂಡಾಳ, ಕರ್ನಾಟಕ ದಲಿತ ಚಳವಳಿ ಮತ್ತು ಡಾ. ಬಿ.ಆರ್. ಅಂಬೇಡ್ಕರ್, ಚೈತ್ರ ಪ್ರಕಾಶನ, ಚಿಕ್ಕ ತಿರುಪತಿ, ೧೯೯೨.

೧೪. ಗಾಯತ್ರಿ ಎನ್., ಮಹಿಲಾ ಚಳವಳಿಯ ಮಜಲುಗಳು, ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭.

೧೫. ಗೋಪಾಲ್ ಆರ್.(ಸಂ), ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಮೈಸೂರು, ೨೦೦೭.

೧೬. ಗೋಪಾಲರಾವ್ ಎಚ್.ಎಸ್., ಇತಿಹಾಸದ ಅಧ್ಯಯನ ಅಂದು ಇಂದು, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೭.

೧೭. ಗೋಪಾಲರಾವ್ ಎಚ್.ಎಸ್., ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೬.

೧೮. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು, ೨೦೦೧.

೧೯. ಗೋವಿಂದರಾಜು ಸಿ.ಆರ್., ಕರ್ನಾಟಕ ಏಕೀಕರಣ ಚಳವಳಿ ಮತ್ತು ಸಾಹಿತ್ಯ, ಸಪ್ನ ಬುಕ್ ಹೌಸ್, ಬೆಂಗಳೂರು, ೧೯೯೮.

೨೦. ಗೋವಿಂದರಾಜು ಸಿ.ಆರ್.(ಸಂ), ಚಾರಿತ್ರಿಕ ಕರ್ನಾಟಕ, ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನಮಂಡಲ, ವಿಧಾನಸೌಧ, ಬೆಂಗಳೂರು, ೨೦೧೦.

೨೧. ಚಂದ್ರಶೇಖರ ಟಿ.ಆರ್., ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩.

೨೨. ಚಂದ್ರಶೇಖರ ಟಿ.ಆರ್., ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮತ್ತು ಮತ್ತು ಉನ್ನತಾಧಿಕಾರ ಸಮಿತಿ ವರದಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೨೩. ಚಂದ್ರಶೇಖರ ಟಿ.ಆರ್., ವಚನ ಸಂಸ್ಕೃತಿಯ ಸಾಮಾಜಿಕ ಆಯಾಮಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

೨೪. ಚಂದ್ರಶೇಖರ ಟಿ.ಆರ್.(ಸಂ), ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೨೫. ಚಂದ್ರಶೇಖರ್ ಎಸ್., ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಿಳಿಗೆರೆ ತಿಪಟೂರು, ೨೦೦೩.

೨೬. ಚಂದ್ರ ಪೂಜಾರಿ ಎಂ., ಸಂಶೋಧನ ಜವಾಬ್ದಾರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೭. ಚಂದ್ರ ಪೂಜಾರಿ ಎಂ.(ಸಂ), ಜನಾಯೋಜನೆ, ಹೈದರಾಬಾದ್ ಕರ್ನಾಟಕ ಅನುಭವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೮. ಚಾಂದಕವಟೆ ಎಂ.ಎಸ್., ಕಾರ್ಮಿಕ ಚಳುವಳಿ ಮತ್ತು ಸಾಮಾಜಿಕ ಹೊಣೆಗಾರಿಕೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨.

೨೯. ಚಿನ್ನಸ್ವಾಮಿ ಸೋಸಲೆ ಎನ್., ಗಡಿ ಚಳವಳಿಗಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೦. ಚಿನ್ನಸ್ವಾಮಿ ಸೋಸಲೆ ಎನ್., ಗಡಿ ಚಳವಳಿ ಇತ್ತೀಚಿನ ಆಯಾಮಗಳು, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೩೧. ಚಿನ್ನಸ್ವಾಮಿ ಸೋಸಲೆ ಎನ್., ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩೨. ಚಿನ್ನಸ್ವಾಮಿ ಸೋಸಲೆ ಎನ್., ದಲಿತರ ಮೇಲೆ ದೌರ್ಜನ್ಯ ಒಂದು ನೋಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೩೩. ಚಿನ್ನಸ್ವಾಮಿ ಸೋಸಲೆ ಎನ್., ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೩೪. ಚಿನ್ನಸ್ವಾಮಿ ಸೋಸಲೆ ಎನ್., ದಲಿತರು ಮತ್ತು ಮತಾಂತರ: ಒಂದು ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೩೫. ಚಿನ್ನಸ್ವಾಮಿ ಸೋಸಲೆ ಎನ್., ಅಂಬೇಡ್ಕರ್ ದೃಷ್ಟಿಯಲ್ಲಿ ದಲಿತರು ಮತ್ತು ಮತಾಂತರ, ಯಾಜಿ ಪ್ರಕಾಶನ, ಹೊಸಪೇಟೆ, ೨೦೧೨.

೩೬. ಚಿನ್ನಸ್ವಾಮಿ ಸೋಸಲೆ ಎನ್., ದಲಿತರ ಮೇಲಿನ ದೌರ್ಜನ್ಯ ಮತ್ತು ಸಾಮಾಜಿಕ ನ್ಯಾಯದ ಪ್ರಶ್ನೆಗಳು, ಯಾಜಿ ಪ್ರಕಾಶನ, ಹೊಸಪೇಟೆ, ೨೦೧೩.

೩೭. ಚಿನ್ನಸ್ವಾಮಿ ಸೋಸಲೆ ಎನ್.(ಸಂ), ಡಾ. ಬಿ.ಆರ್. ಅಂಬೇಡ್ಕರ್ ಮತ್ತು ಸಮಕಾಲೀನ ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೩೮. ಚಿನ್ನಸ್ವಾಮಿ ಸೋಸಲೆ ಎನ್., ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೩೯. ಚಿನ್ನಸ್ವಾಮಿ ಸೋಸಲೆ ಎನ್., ದಲಿತರ ಬದುಕು-ಮೆಲಕು, ಕನ್ನಡ ಭಾಷಾಭಿವೃದ್ಧಿ ಯೋಜನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೪೦. ಚಿನ್ನಸ್ವಾಮಿ ಸೋಸಲೆ ಎನ್., ಪ್ರಭುತ್ವ ಮತ್ತು ದಲಿತರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೪೧. ಚಿನ್ನಸ್ವಾಮಿ ಸೋಸಲೆ ಎನ್., ನಾಲ್ವಡಿಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

೪೨. ಚಿನ್ನಸ್ವಾಮಿ ಸೋಸಲೆ ಎನ್., ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾ ಪ್ರಶ್ನೆಗಳು, ಗಿತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ೨೦೧೫.

೪೩. ಚಿನ್ನಸ್ವಾಮಿ ಸೋಸಲೆ ಎನ್., ಒನಕೆ ಓಬವ್ವೆ ದಲಿತ ಸಂವೇದನೆಯೊಂದಿಗೆ ಮುಖಾಮುಖಿ, ಗೌತಮ ಬುಕ್ ಹೌಸ್, ಕಮಲಾಪುರ, ೨೦೧೬.

೪೪. ಚುರ್ಚಿಹಾಳಮಠ ಸಿ.ಎಮ್., ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನಾ ಹೋರಾಟ, ಮುಂಡರಗಿ ನಾಡ ಸ್ವಾತಂತ್ರ್ಯ ಯೋಧರ ಸಂಘ, ಮುಂಡರಗಿ, ೧೯೯೯.

೪೫. ಚೆನ್ನಣ್ಣ ವಾಲೀಕಾರ, ಜಾನಪದ ಲೋಕ, ದಲಿತ ಬಂಡಾಯ ವಿಚಾರ ಪ್ರಚಾರ, ಗುಲಬರ್ಗಾ, ೧೯೯೩.

೪೬. ಚೆನ್ನಣ್ಣ ವಾಲೀಕಾರ, ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ, ೧೯೯೮.

೪೭. ಚೆನ್ನಬಸವಪ್ಪ ಬೆಟ್ಟದೂರು, ನನ್ನ ಜೀವನಾನುಭವಗಳು, ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ, ೨೦೦೯.

೪೮. ಜಗನ್ನಾಥ ಸಿಂಧೆ, ದಲಿತ ಚಿಂತಕ ಬಿ. ಶ್ಯಾಮಸುಂದರ, ಪಲ್ಲವಿ ಪ್ರಕಾಶನ, ಗುಲಬರ್ಗಾ, ೨೦೦೫.

೪೯. ಜಯತೀರ್ಥ ರಾಜಪುರೋಹಿತ, ಖಾಜಾ ಬಂದೇ ನವಾಜ್, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೦.

೫೦. ಜಾಗೀರ್ದಾರ್ ಆರ್.ಜೆ., ಲಿಂಗಸೂಗೂರು ವಿಠಲರಾವ್, ಹೈದರಾಬಾದ್ ಕರ್ನಾಟಕ, ಪ್ರೇಮಸಾಗರ ಮುದ್ರಣಾಲಯ, ಹೈದರಾಬಾದ್, ೧೯೪೭.

೫೧. ತಂಬಂಡ ವಿಜಯ್ ಪೂಣಚ್ಚ(ಸಂ), ಚರಿತ್ರೆ ವಿಶ್ವಕೋಶ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫೨. ತಂಬಂಡ ವಿಜಯ್ ಪೂಣಚ್ಚ, ರೈತ ಚಳವಳಿಗಳು(ಏಕೀಕರಣೋತ್ತರ ಕರ್ನಾಟಕದ ಚಳವಳಿ) ಸಂಪುಟ ೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೫೩. ನಾಗಲಕ್ಷ್ಮಿಬಾಯಿ ಕೆ.ಜಿ., ಮಕ್ಕಳಿಲ್ಲಿ ಮಾರಾಟಕ್ಕಿವೆ, ಅನುರಾಗ ಪ್ರಿಂಟರ್ಸ್, ಬೆಂಗಳೂರು, ೨೦೦೨.

೫೪. ನಾಗರಾಜ ಟಿ., ಸಾಮಾಜಿಕ ಚಳವಳಿಗಳು, ಚೇತನ ಬುಕ್ ಹೌಸ್, ಮೈಸೂರು, ೧೯೯೯.

೫೫. ನಾಗರಾಜ ಎಂ.ಜಿ., ಕರ್ನಾಟಕ ರೈತ ಚಳವಳಿ ಸತ್ಯಾಗ್ರಹಗಳು, ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ ವಿಧಾನಸೌಧ, ಬೆಂಗಳೂರು, ೨೦೦೬.

೫೬. ನಾಗರತ್ನ ಟಿ.ಎನ್., ಕನಕದಾಸ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦.

೫೭. ನಾಗಭೂಷಣ ಡಿ.ಎಸ್., ರೈತ ಭಾರತ: ಅವಸಾನದ ಅಂಚಿನಲ್ಲಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೨.

೫೮. ನಾಗೇಶ ಚಡಗ, ಹೈದರಾಬಾದ್-ಕರ್ನಾಟಕ(ವಿಶೇಷ ಸಂಚಿಕೆ), ರೋಹಿತ್ ಪ್ರಕಾಶನ, ಬೆಂಗಳೂರು, ೨೦೦೮.

೫೯. ನಾಗೇಶ್ ಹೆಚ್.ವಿ., ಸಾಮಾಜಿಕ ಚಳವಳಿಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯.

೬೦. ನಿಂಗಣ್ಣ ಸಣ್ಣಕ್ಕಿ, ಜನಪದ ಸಾಹಿತ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಗಳು, ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೬೧. ಪಾಟೀಲ ಬಸನಗೌಡ., ಇತಿಹಾಸ ಪುಟಗಳಲ್ಲಿ ಯಾದಗಿರಿ, ಹುಣಸಗಿ ಪೊಲೀಸ ಪಾಟೀಲ ಪ್ರತಿಷ್ಠಾನ ಹುಣಸಗಿ, ಯಾದಗಿರಿ, ೨೦೧೧.

೬೨. ಪಾಟೀಲ ಬಸನಗೌಡ. ಎಸ್. ಹುಣಸಗಿ., ಯಾದಗಿರಿ ಸಿರಿ, ಹುಣಸಗಿ ಪೊಲೀಸ ಪಾಟೀಲ ಪ್ರತಿಷ್ಠಾನ ಹುಣಸಗಿ, ಯಾದಗಿರಿ, ೨೦೧೧.

೬೩. ಪಾಟೀಲ ಎಂ.ಬಿ.(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಗುಲಬರ್ಗಾ ಜಿಲ್ಲೆ, ಬೆಂಗಳೂರು, ೧೯೯೭.

೬೪. ಪಾಟೀಲ ಎಚ್.ಎಸ್., ಅಲ್ಲಮಪ್ರಭು ಬೆಟ್ಟದೂರು, ವಿಮೋಚನೆ, ಜಿಲ್ಲಾ ಆಡಳಿತ, ಕೊಪ್ಪಳ, ೧೯೯೯.

೬೫. ಪಾಟೀಲ ಹೆಚ್.ಎಸ್., ಕೊಪ್ಪಳ ಶ್ರೀ ಗವಿಸಿದ್ಧೇಶ್ವರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೬೬. ಪಾಟೀಲ್.ಎಂ.ಎಸ್.(ಸಂ), ವಿಕಾಸ(ಕಲಬುರ್ಗಿ ಕಂಪು ೨೦೧೧), ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಗುಲಬರ್ಗಾ, ೨೦೧೦.

೬೭. ಪಾಟೀಲ ಸಿ.ಡಿ., ದ್ರವ ಬಂಗಾರ ನೀರು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭.

೬೮. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೬೯. ಪುಟ್ಟಯ್ಯ ಬಿ.ಎಂ., ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೭೦. ಪುಟ್ಟಪ್ಪ ಕೆ.ವಿ.(ಪ್ರ.ಸಂ), ನಾಗೇಗೌಡ ಹೆಚ್.ಎಲ್.(ಸಂ.ಸಂ.), ಪ್ರವಾಸಿ ಕಂಡ ಇಂಡಿಯಾ, ಸಂಪುಟ–೫, ಐಬಿಎಚ್ ಪ್ರಕಾಶನ, ಬೆಂಗಳೂರು, ೨೦೦೬.

೭೧. ಪೋತೆ ಹೆಚ್.ಟಿ., ಜಗನ್ನಾಥ ಸಿಂಧೆ, ಬಿ. ಶ್ಯಾಮಸುಂದರ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೭೨. ಫಕೀರ್ ಮಹಮ್ಮದ್ ಕಟ್ಪಾಡಿ, ಸೂಫಿ ಮಹಿಳೆಯರು, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ೨೦೧೦.

೭೩. ಬಸವರಾಜ ಎಲ್.(ಸಂ), ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾವರ ಮಹಾದಾಸೋಹ ಸೂತ್ರಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೮.

೭೪. ಬಸವರಾಜ ಸಬರದ, ವಚನ ಚಳವಳಿ, ಪಲ್ಲವಿ ಪ್ರಕಾಶನ, ಗುಲಬರ್ಗಾ, ೧೯೯೨.

೭೫. ಬಸವರಾಜ ಸಬರದ(ಸಂ), ಹೈದರಾಬಾದ್ ಕರ್ನಾಟಕದ ತತ್ವಪದಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೭೬. ಬಸವರಾಜ ಸಬರದ, ವಚನಕಾರರು ಮತ್ತು ದಲಿತ ಸಂವೇದನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೭೭. ಬಸವರಾಜ ಪೊಲೀಸ ಪಾಟೀಲ(ಸಂ), ಗವಿಸಿದ್ಧಪ್ಪ ಎಚ್. ಪಾಟೀಲ(ಸಹ ಸಂ), ಬಿಡುಗಡೆ, ಅಮರ ಪ್ರಕಾಶನ, ಗುಲಬರ್ಗಾ, ೨೦೦೨.

೭೮. ಬಸವರಾಜ ಮಲಶೆಟ್ಟಿ, ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೭೯. ಬಾಡಿಯಾಲ ದೇವೇಂದ್ರಪ್ಪ(ಪ್ರ.ಸಂ), ಕರ್ಮಯೋಗಿ(ಶ್ರೀ ಮಲ್ಲಿಕಾರ್ಜುನ ಖರ್ಗೆ ಅಭಿನಂದನಾ ಗ್ರಂಥ) ಪ್ರಾರ್ಥನಾ ಪ್ರಕಾಶನ, ಗುಲಬರ್ಗಾ, ೨೦೦೫.

೮೦. ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ್ ಕರ್ನಾಟಕ ವಿಮೋಚನಾ ಚಳವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೮೧. ಬಾಬುರಾವ್ ಮುಡಬಿ, ಮಹಿಳಾ ಸಬಲೀಕರಣ, ಅಂಬೇಡ್ಕರ್ ದೃಷ್ಟಿಕೋನ, ಲಕ್ಷ್ಮೀ ಪ್ರಕಾಶ, ಬೆಂಗಳೂರು, ೨೦೦೫.

೮೨. ಭಾಸ್ಕರ್ ಟಿ.ಎಂ., ರಾಜಶೇಖರ ಹತಗುಂದಿ(ಸಂ), ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೮೩. ಭೈರಪ್ಪ ಕೆ., ಪಾಶ್ಚಿಮಾತ್ಯ ಹಾಗೂ ಭಾರತೀಯ ಸಾಮಾಜಿಕ ಚಿಂತನೆ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೧.

೮೪. ಮಲ್ಲಿಕಾರ್ಜುನ ಜೆ. ಆಮ್ಲೆ, ದಲಿತ ತತ್ವಪದಕಾರ ಕಾಶೀನಾಥ ಪಂಚಶೀಲ ಗವಾಯಿ, ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೮೫. ಮಣೂರು ಎಸ್.ಆರ್., ಹೈದರಾಬಾದ್ ಕರ್ನಾಟಕ ವಿಮೋಚನೆ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೬.

೮೬. ಮಹಾದೇವಯ್ಯ ಪಿ.(ಸಂ), ದಲಿತರು ಮತತು ಪರ್ಯಾಯ ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೮೭. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೮.

೮೮. ಮೀನಾಕ್ಷಿ ಬಾಳಿ(ಸಂ), ಚಿವುಟದಿರಿ ಚಿಗುರು(ಹೆಣ್ಣು ಭ್ರೂಣಹತ್ಯೆ ಕುರಿತು ಲೇಖನಗಳು), ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ, ಗುಲಬರ್ಗಾ, ೨೦೦೫.

೮೯. ಮೀನಾಕುಮಾರಿ ಪಾಟೀಲ, ಡಾ. ಚನ್ನಬಸವ ಪಟ್ಟದ್ದೇವರು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೯೦. ಮುಜಾಫರ್ ಅಸ್ಸಾದಿ, ರೈತ ಹೋರಾಟ ಹಾಗೂ ಸಾಮಾಜಿಕ ಚಳವಳಿ, ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು, ೨೦೦೬.

೯೧. ಮುನಿವೆಂಕಟಪ್ಪ ವಿ.(ಸಂ), ದಲಿತ ಚಳವಳಿ ಚರಿತ್ರೆ, ತನು–ಮನು ಪ್ರಕಾಶನ, ಮೈಸೂರು, ೨೦೦೯.

೯೨. ಮುನಿವೆಂಕಟಪ್ಪ ವಿ., ದಲಿತ ಚಳವಳಿ ಒಂದು ಅವಲೋಕನ, ವಿಚಾರವಾದಿ ಪ್ರಕಾಶನ, ಮೈಸೂರು, ೧೯೯೮.

೯೩. ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ(ಸಂ), ರಾಯಚೂರು ಜಿಲ್ಲಾದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪.

೯೪. ಮೊಗಳ್ಳಿ ಗಣೇಶ್, ದಲಿತ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೯೫. ಮೊಗಳ್ಳಿ ಗಣೇಶ, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೯೬. ಮೋಹನ್‌ಕೃಷ್ಣ ರೈ ಕೆ., ಪರಿಸರ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೯೭. ಮೋಹನ್ ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೯೮. ರಘುನಾಥರಾವ್ ಡಿ., ತತ್ವಪದಕಾರರು ಮತ್ತು ವಸಾಹತು ವ್ಯವಸ್ಥೆ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಬೆಂಗಳೂರು, ೨೦೦೮.

೯೯. ರಝಾಕ ಉಸ್ತಾದ, ಹೈದರಾಬಾದ್ ಕರ್ನಾಟಕ ಕಥೆ–ವ್ಯಥೆ(ಸಂವಿಧಾನದ ೩೭೧ ಕಲಂ ತಿದ್ದುಪಡಿ ಹೋರಾಟದ ಇತಿಹಾಸ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧.

೧೦೦. ರವೀಂದ್ರನಾಥ ಕೆ.(ಸಂ), ಬಳ್ಳಾರಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪.

೧೦೧. ರವೀಂದ್ರನಾಥ ಕೆ.(ಸಂ), ಅಧ್ಯಯನದ ವಿಧಿವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೦೨. ರಹಮತ್ ತರೀಕೆರೆ, ಕರ್ನಾಟಕದಲ್ಲಿ ಸೂಫಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೦೩. ರಹಮತ್ ತರೀಕೆರೆ, ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦೪. ರಹಮತ್ ತರೀಕೆರೆ(ಸಂ), ಧರ್ಮ, ವಿಶ್ವಕೋಶ–೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೦೫. ರಕ್ಷಿತ್ ಎಂ.ಆರ್.(ಅನು), ರೋಮಿಲಾ ಥಾಪರ್(ಮೂಲ), ಚಾರಿತ್ರಿಕ ವ್ಯಾಖ್ಯಾನಗಳು ಮತ್ತು ಭಾರತಿಯ ಸಮಾಜದ ಧರ್ಮ ನಿರಪೇಕ್ಷೀಕರಣ ವಿಸ್ತಾರ, ಬೆಂಗಳೂರು, ೧೯೯೯.

೧೦೬. ರಾಮಕೃಷ್ಣ ಜಿ.(ಪ್ರಸಂ.), ಮಣಿಪಾಲ ಆರ್ಕೆ(ಸಂ.ಸಂ), ಸಾಮಾಜಿಕ ಚಳವಳಿಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯.

೧೦೭. ರಾಜ್ ಎಂ.ಸಿ., ದಲಿತತತ್ವ ದಲಿತ ಧರ್ಮ ಗ್ರಂಥ, ಅಂಬೇಡ್ಕರ್ ಸಂಪನ್ಮೂಲ ಕೇಂದ್ರ, ತುಮಕೂರು, ೨೦೦೨.

೧೦೮. ರೂಪಾ ಹಾಸನ, ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೦೯. ರಂಗರಾಜ ವನದುರ್ಗ, ದಲಿತ ಸಂವೇದನೆ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

೧೧೦. ರಂಜಾನ್ ದುರ್ಗಾ, ಬಸವ ಧರ್ಮದ ವಿಶ್ವಸಂದೇಶ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೭.

೧೧೧. ಲಕ್ಷ್ಮಣ ದಸ್ತಿ, ನಮ್ಮ ಇತಿಹಾಸ ಕೈಫಿಯತ್, ಹೈದರಾಬಾದ್ ಕರ್ನಾಟಕ ವಿಮೋಚನಾ ಮತ್ತು ಅಭಿವೃದ್ಧಿ ಸಮಿತಿ, ಗುಲಬರ್ಗಾ, ೨೦೦೯.

೧೧೨. ಲಕ್ಷ್ಮಣ್ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೧೩. ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೧೧೪. ವರದರಾಜರಾವ್ ಜಿ., ಪುರಂದರದಾಸರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.

೧೧೫. ವಾಸುದೇವ ಸಗ್ನಿಹೋತ್ರಿ(ಸಂ), ಕೀರ್ತನೆ ತತ್ವಪದಗಳು ಸಂಗ್ರಹ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೮.

೧೧೬. ವಿರೂಪಾಕ್ಷಿ ಪೂಜಾರಹಳ್ಳಿ, ದಲಿತರು ಮತ್ತು ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೧೧೭. ವಿಠಲಮೂರ್ತಿ ಆರ್.ಟಿ., ದಲಿತ ಚಳವಳಿಯ ನಾಳೆಗಳು, ಪ್ರಭೆ ಪ್ರಕಾಶನ, ಬೆಂಗಳೂರು, ೨೦೦೫.

೧೧೮. ವಿಜಯ್ ಪೂಣಚ್ಚ ತಂಬಂಡ (ಪ್ರಸಂ.), ಚಿನ್ನಸ್ವಾಮಿ ಸೋಸಲೆ ಎನ್,(ಸಂ.ಸಂ.), ಸಮಕಾಲೀನ ಕರ್ನಾಟಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೧೯. ವಿಜಯ್ ಪೂಣಚ್ಚ ತಂಬಂಡ, ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೨೦. ವಿಜಯಕುಮಾರಿ ಎಸ್. ಕರಿಕಲ್, ಮಹಿಳೆ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೧೨೧. ವಿರೂಪಾಕ್ಷಿ ಪೂಜಾರಹಳ್ಳಿ, ಜಲಸಂಬಂಧಿ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೨೨. ವಿರೂಪಾಕ್ಷಿ ಪೂಜಾರಹಳ್ಳಿ, ಏಕೀಕರಣ ಚಳವಳಿ ಮತ್ತು ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೧೨೩. ವೀರಸಂಗಯ್ಯ ಜೆ.ಎಂ., ರೈತರ ಆತ್ಮಹತ್ಯೆ ತಡೆ ಹೇಗೆ, ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ, ಹಗರಿಬೊಮ್ಮನಹಳ್ಳಿ, ೨೦೦೭.

೧೨೪. ವೆಂಕಟರತ್ನಂ ಎಂ.ಬಿ., ಪದ್ಮಾ ಎಂ.ನಿ., ಇತಿಹಾಸ ಸಂಶೋಧನಾ ಮಾರ್ಗ, ಪ್ರಿಂಟಿಂಗ್ ಆಂಡ್ ಪಶಿಂಗ್ ಕಂ.ಲಿ., ಬೆಂಗಳೂರು, ೧೯೮೫.

೧೨೫. ವೆಂಕಟೇಶ್ ಕೆ., ಸರೋಜಾ ಬಿ.(ಸಂ), ಹೈದರಾಬಾದ್ ವರ್ತಮಾನದ ತಲ್ಲಣಗಳು, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೦೬.

೧೨೬. ವೈಜನಾಥ ಪಾಟೀಲ, ಹೈದರಾಬಾದ್ ಕರ್ನಾಟಕ ಅಸಮಾನತೆಯ ಒಂದು ನೋಟ, ಕಲ್ಯಾಣ ಕರ್ನಾಟಕ ಸಾಂಸ್ಕೃತಿಕ ಪರಿಷತ್ತು, ಕಲಬುರ್ಗಿ, ೨೦೦೫.

೧೨೭. ವೈಜನಾಥ ಪಾಟೀಲ(ಸಂ), ಹೈದರಾಬಾದ್ ಕರ್ನಾಟಕ ಪರ ಹೋರಾಟ ಏಕೆ, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೦೭.

೧೨೮. ಶರ್ಮಾ ಎ.ಆರ್., ಸಾಮಾಜಿಕ ಬದಲಾವಣೆ ಮತ್ತು ಚಳವಳಿ, ಅಖಿಲಾ ಏಜನ್ಸೀಸ್, ಮೈಸೂರು, ೨೦೦೭.

೧೨೯. ಶರಭಯ್ಯ ಎಂ., ಮಾನವ ಮಹಾದೇವ ಬಸವಣ್ಣ, ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನ ಮಠ, ಹಂಪಿ, ೧೯೯೧.

೧೩೦. ಶಿವರಾಜ ಪಾಟೀಲ, ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ, ಮಹಾಂತೇಶ ಪ್ರಕಾಶನ ಸಂಸ್ಥೆ, ಗುಲಬರ್ಗಾ, ೨೦೦೫.

೧೩೧. ಶಿವು ಎಸ್. ಕಾಲೇಭಾಗ, ಕನ್ನಡ ನಾಡಿನ ಕಣ್ಮಣಿ ಶ್ರೀಮಾನ್ ಮಲ್ಲಿಕಾರ್ಜುನ ಖರ್ಗೆ, ಸಹನ ಪ್ರಕಾಶನ, ಸಿಂದಗಿ, ೨೦೦೩.

೧೩೨. ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು ಜನಾಂದೋಲನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೧೩೩. ಷೇಕ್‌ಅಲಿ ಬಿ.(ಪ್ರ.ಸಂ.), ಸೆಬಾಸ್ಟಿಯನ್ ಜೋಸೆಫ್(ಸಂ.ಸಂ) ಕರ್ನಾಟಕ ಚರಿತ್ರೆ ಮಾಲೆ-೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೧೩೪. ಸಿದ್ಧಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ, ಮೇಘನಾ ಪ್ರಕಾಶನ, ಕೊಪ್ಪಳ, ೨೦೧೦.

೧೩೫. ಸುಬ್ರಮಣ್ಯ ಜಿ., ಸಾಮಾಜಿಕ ಸಮಸ್ಯೆಗಳು, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೩.

೧೩೬. ಸೂರ್ಯನಾಥ ಯಳವಾರ, ಪ್ರೇಮಾ ಸಿರ್ಶೆ(ಸಂ), ಬೀದರ್ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೧೩೭. ಹಾಲತಿ ಸೋಮಶೇಖರ್, ಮಹಿಳಾ ಚಳವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು, ೨೦೦೭.

## ೨. ಇಂಗ್ಲಿಷ್ ಗ್ರಂಥಗಳು

೧. ಅನಿಲ್ ಸಕ್ಸೇನಾ, ಎನ್‌ಸೈಕ್ಲೋಪಿಡಿಯಾ ಆಫ್ ಇಂಡಿಯನ್ ಹಿಸ್ಟರಿ, ಸಂಪುಟ-೨೯, ಅನಮೋಲ್ ಪಬ್ಲಿಕೇಶನ್ ಪ್ರೈ.ಲಿ., ನ್ಯೂ ಡೆಲ್ಲಿ, ೨೦೦೬.

೨. ಅಂಬೇಡ್ಕರ್ ಬಿ.ಆರ್., ದಿ ಬುದ್ಧ ಆ್ಯಂಡ್ ಹಿಸ್ ದಮ್ಮ, ಸಿದ್ಧಾರ್ಥ ಪಬ್ಲಿಕೇಷನ್, ಬಾಂಬೆ, ೧೯೭೫.

೩. ಅಹಿರ್ ಡಿ.ಸಿ., ಡಾ. ಅಂಬೇಡ್ಕರ್ ಆ್ಯಂಡ್ ದಿ ಇಂಡಿಯನ್ ಕಾನ್‌ಸ್ಟಿಟ್ಯೂಷನ್, ಬುದ್ಧವಿಹಾರ, ಲಕ್ನೋ, ೧೯೭೩.

೪. ಅರ್ಥರ್ ಜೆ. ಅರ್‌ಬೆರ‍್ರಿ, ಹಿಸ್ಟರಿ ಆಫ್ ಸೂಫಿಸಂ, ಆಕ್ಸ್‌ಪರ್ಡ್ ಯೂನಿವರ್ಸಿಟಿ ಪ್ರೆಸ್, ೧೯೭೫.

೫. ಬಿಪಿನ್‌ಚಂದ್ರ, ಅಮಲೇಶ್ ತ್ರಿಪಾಠಿ, ಬರುನ್ ಡೇ, ಫ್ರೀಡಂ ಸ್ಟ್ರಗಲ್, ನ್ಯಾಷನಲ್ ಬುಕ್ ಟ್ರಸ್ಟ್, ನ್ಯೂ ಡೆಲ್ಲಿ, ೧೯೭೪.

೬. ಬಿಪಿನ್‌ಚಂದ್ರ, ಇಂಡಿಯಾ ಆಫ್ಟರ್ ಇಂಡಿಪೆಂಡೆನ್ಸ್, ಪೆಂಗ್ವಿನ್ಸ್ ಬುಕ್ಸ್ ಇಂಡಿಯಾ ಪ್ರೈ.ಲಿ., ನ್ಯೂ ಡೆಲ್ಲಿ, ೧೯೯೯.

೭. ಕಾರ್ಲ್ ಮಾರ್ಕ್ಸ್, ನೋಟ್ಸ್ ಆನ್ ಇಂಡಿಯನ್ ಹಿಸ್ಟರಿ, ಮಾಸ್ಕೋ, ೧೯೬೦.

೮. ಡೇವಿಡ್ ಅರ್ನಾಲ್ಡ್, ಡೇವಿಡ್ ಹಾರ್ಡಿಮ್ಯಾನ್, ಸಬಾಲ್ಟರ್ನ್ ಸ್ಟಡೀಸ್, ಸಂಪುಟ-೮, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ, ೧೯೯೨.

೯. ದೇವಲ್ಗಾಂವಕರ್ ವಿ.ಪಿ., ಸ್ವಾಮಿ ರಮಾನಂದ್ ತೀರ್ಥ ಆ್ಯನ್ ಎಪೋಚ್ಮೇಕರ್, ಪ್ರಸಾರಾಂಗ, ಗುಲಬರ್ಗಾ ಯೂನಿವರ್ಸಿಟಿ, ಗುಲಬರ್ಗಾ, ೧೯೮೫.

೧೦. ಇರ್ಫಾನ್ ಹಬೀಬ್, ಎಸ್ಸೇಸ್ ಆನ್ ಇಂಡಿಯನ್ ಹಿಸ್ಟರಿ, ಟಲಿಕಾ, ನ್ಯೂ ಡೆಲ್ಲಿ, ೧೯೯೫.

೧೧. ಗೌರಿ ವಿಶ್ವನಾಥನ್, ಔಟ್‌ಸೈಡ್ ದಿ ಪೋಲ್ಡ್: ಕನ್‌ವರ್‌ಶನ್, ಮಾಡರ್‌ನಿಟಿ ಆ್ಯಂಡ್ ಬಿಲೀಫ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ, ೧೯೯೮.

೧೨. ಹರ್ಬರ್ಟ್ ಬ್ಲೂಮರ್, ಸೋಷಿಯಲ್ ಮೂವ್‌ಮೆಂಟ್ಸ್ ಪ್ರಿನ್ಸಿಪಲ್ಸ್ ಆಫ್ ಸೋಷಿಯಾಲಜಿ, ಲಿಬಾರ್‌ನೆಸ್ ನೋಬಲ್, ನ್ಯೂಯಾರ್ಕ್, ೧೯೫೫.

೧೩. ಹರೀಶ್ ಕೆ. ಪುರಿ(ಸಂ), ದಲಿತ್ಸ್ ಇನ್ ರೀಜನಲ್ ಕಂಟೆಕ್ಸ್ಟ್, ರಾವತ್ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ, ೨೦೦೪.

೧೪. ಹರೀಶ್ ಕೆ. ಪುರಿ ಪರಮಜಿತ್ ಎಸ್. ಜಡ್ಜ್, ಸೋಷಿಯಲ್ ಆ್ಯಂಡ್ ಪೊಲಿಟಿಕಲ್ ಮೂವ್‌ಮೆಂಟ್, ರಾವತ್ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ, ೧೯೬೫.

೧೫. ಹಿರೇಮಠ ಆರ್.ಸಿ., ಬುದ್ಧಿಸಂ ಇನ್ ಕರ್ನಾಟಕ, ಡಿ.ಕೆ. ಪ್ರಿಂಟ್ ವರ್ಲ್ಡ್ ಲಿ., ನ್ಯೂ ಡೆಲ್ಲಿ, ೧೯೯೪.

೧೬. ಜಾತವ ಖಿ.ಆರ್., ದಿ ಬುದ್ಧ ಆ್ಯಂಡ್ ಕಾರ್ಲ್ ಮಾರ್ಕ್ಸ್, ಫಯೋನಿಕ್ಸ್ ಪಬ್ಲಿಷಿಂಗ್ ಹೌಸ್, ಆಗ್ರ, ೧೯೬೮.

೧೭. ಕರಣ್‌ಸಿಂಗ್, ದಿ ಇಂಟರ್‌ಫೇತ್ ಮೂವ್‌ಮೆಂಟ್, ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್, ಬೆಂಗಳೂರು, ೨೦೦೨.

೧೮. ಕಾಶೀನಾಥ ಕೆ. ಕವಲೇಕರ್, ನಾನ್ ಬ್ರಾಹ್ಮೀನ್ ಮೂವ್‌ಮೆಂಟ್ ಇನ್ ಸದರ್ನ್ ಇಂಡಿಯ, ಶಿವಾಜಿ ಯೂನಿವರ್ಸಿಟಿ, ಕೊಲ್ಲಾಪುರ, ೧೯೭೯.

೧೯. ಮನೋಹರ ಯಾದವ, ಸೋಶಿಯೋ–ಎಕನಾಮಿಕ್ ಸರ್ವೇ ಆಫ್ ಶೆಡ್ಯೂಲ್ಡ್ ಕಾಸ್ಟ್ಸ್ ಆ್ಯಂಡ್ ಶೆಡ್ಯೂಲ್ಡ್ ಟ್ರೈಬ್ಸ್ ಇನ್ ಕರ್ನಾಟಕ: ಎ ಕ್ರಿಟಿಕಲ್ ಅನಾಲಿಸಿಸ್, ಇನ್‌ಸ್ಟಿಟ್ಯೂಟ್ ಫಾರ್ ಸೋಶಿಯಲ್ ಆ್ಯಂಡ್ ಎಕನಾಮಿಕ್ ಚೇಂಜ್, ಬೆಂಗಳೂರು, ೨೦೦೩.

೨೦. ಮುನ್ಷಿ ಕೆ.ಎನ್., ದಿ ಎಂಡ್ ಆಫ್ ಆನ್ ಎರ, ಭಾರತೀಯ ವಿದ್ಯಾಭವನ್, ಬಾಂಬೆ, ೧೯೫೭.

೨೧. ಮ್ಯಾಕ್ಸೆವೆಲ್ ರಿಚರ್ಡ್ ಈಟನ್, ಸೂಫೀಸ್ ಆಫ್ ಬಿಜಾಪುರ, ಯೂನಿವರ್ಸಿಟಿ ಪ್ರೆಸ್, ಪ್ರಿನ್ಸ್‌ಟನ್, ೧೯೭೮.

೨೨. ನರೈನ್ ಎ.ಕೆ., ಅಹೀರ್ ಡಿ.ಸಿ., ಡಾ. ಅಂಬೇಡ್ಕರ್ ಬುದ್ಧಿಸಂ ಆ್ಯಂಡ್ ಸೋಶಿಯಲ್ ಚೇಂಜ್, ಬಿ.ಆರ್. ಪಬ್ಲಿಷಿಂಗ್ ಕಾರ್ಪೋರೇಶನ್, ದೆಹಲಿ, ೧೯೯೪.

೨೩. ಓಂವೆಡ್ಟ್‌ಗಾಲಿ, ದಲಿತ್ಸ್ ಅಂಡ್ ಡೆಮೊಕ್ರೆಟಿಕ್ ರೆವೆಲ್ಯೂಶನ್ಸ್, ಸಾಗಾ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ, ೧೯೯೪.

೨೪. ಪಾರ್ಥ ಚಟರ್ಜಿ, ಜ್ಞಾನೇಂದ್ರ ಪಾಂಡೆ(ಸಂ), ಸಬಾಲ್ಟರ್ನ್ ಸ್ಟಡೀಸ್, ಸಂಪುಟ–೭, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ, ೧೯೯೨.

೨೫. ಪಾಲೇಕರ್ ಎಸ್. ಎ., ಇಂಡಿಯನ್ ಕಾನ್‌ಸ್ಟಿಟ್ಯೂಷನ್, ಸುಹಾಸ್ ಪಬ್ಲಿಕೇಶನ್, ಬೆಂಗಳೂರು, ೨೦೦೫.

೨೬. ಪಾರ್ಥಸಾರಥಿ ಗುಪ್ತಾ, ಇಂಪೀರಿಯಲಿಸಂ ಆ್ಯಂಡ್ ಲೇಬರ್ ಮೂವ್‌ಮೆಂಟ್, ಸಾಗಾ ಪಬ್ಲಿಕೇಷನ್, ನ್ಯೂ ಡೆಲ್ಲಿ, ೨೦೦೨.

೨೭. ಪೈಲೀ ಎಂ.ವಿ., ಇಂಡಿಯನ್ ಕಾನ್‌ಸ್ಟಿಟ್ಯೂಶನ್, ಎಸ್. ಚಾಂದ್ ಅಂಡ್ ಕಂ, ನ್ಯೂ ಡೆಲ್ಲಿ, ೨೦೦೩.

೨೮. ರಣಜಿತ್ ಗುಹಾ(ಸಂ), ಸಬಾಲ್ಟರ್ನ್ ಸ್ಟಡೀಸ್, ಸಂಪುಟಗಳು ೧ ಮತ್ತು ೨, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೈಸ್, ನ್ಯೂ ಡೆಲ್ಲಿ.

೨೯ ರಾವ್ ಎಂ.ಎಸ್.ಎ.(ಸಂ), ಸೋಷಿಯಲ್ ಮೂವ್‌ಮೆಂಟ್ಸ್ ಇನ್ ಇಂಡಿಯಾ, ಮನೋಹರ ಪಬ್ಲಿಕೇಷನ್ಸ್, ನ್ಯೂ ಡೆಲ್ಲಿ, ೧೯೮೪.

೩೦. ರಾಜಶೇಖರ್ ವಿ. ಟಿ., ದಲಿತ್ ಮೂವ್‌ಮೆಂಟ್ ಇನ್ ಕರ್ನಾಟಕ, ದಿ ಕ್ರಿಶ್ಚಿಯನ್ ಲಿಟರೇಚರ್ ಸೊಸೈಟಿ, ಮದ್ರಾಸ್, ೧೯೭೮.

೩೧. ಸಜಲ್ ಬಸು, ರೀಜನಲ್ ಮೂವ್‌ಮೆಂಟ್ಸ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್ಡ್ ಸ್ಟಡಿ, ಮನೋಹರ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ, ೧೯೯೨.

೩೨. ಸರಫ್ ಡಿ. ಅನ್ಸರಿ, ಸೂಫಿ ಸೇಂಟೆಸಸ ಆ್ಯಂಡ್ ಸ್ಟೇಟ್ ಪವರ್, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ೧೯೯೨.

೩೩. ಸರೋಜಾ ಬಿ, ರಿಟ್‌ರಾಸ್ಪೆಕ್ಟ್ ಆ್ಯಂಡ್ ಪ್ರಾಸ್ಪೆಕ್ಟ್, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೦೫.

೩೪. ಸಯ್ಯದ್ ಅತ್ತರ್ ಅಬ್ಬಾಸ್ ರಿಜ್ವಿ, ಎ ಹಿಸ್ಟರಿ ಆಫ್ ಸೂಫಿಸಂ ಇನ್ ಇಂಡಿಯಾ, ಸಂಪುಟ-೨, ಮುನ್ಷೀರಾಂ ಮನೋಹಲಾಲ್ ಪ್ರೈ.ಲಿ., ನ್ಯೂ ಡೆಲ್ಲಿ,೧೯೮೩.

೩೫. ಸೂರ್ಯನಾಥ ಕಾಮತ್(ಮು.ಸಂ.), ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್, ಪಾರ್ಟ್-೧, ಗೌರ್ನ್‌ಮೆಂಟ್ ಆಫ್ ಕರ್ನಾಟಕ, ಬೆಂಗಳೂರು, ೧೯೮೨.

೩೬. ಶಹ ಗ್ಯಾನ್‌ಶಾಮ್(ಸಂ), ಕಲ್ಚರಲ್ ಸಬಾರ್ಡಿನೇಶನ್ ಆ್ಯಂಡ್ ದಿ ದಲಿತ್ ಚಾಲೆಂಜಸ್, ಸಾಗ ಪಬ್ಲಿಕೇಶನ್, ನ್ಯೂಡೆಲ್ಲಿ, ೨೦೦೦.

೩೭. ಶಾಲೀನಿ ರಜನೀಶ್, ಛಾಯಾ ದೇಗಾಂವಕರ್, ಸಂಗೀತ ಎನ್. ಕಟ್ಟಿಮನಿ, ಇನ್‌ಕ್ಲೂಸಿವ್ ಗ್ರೋತ್-ಆರ್ಟಿಕಲ್-೩೭೧ ಇನ್ ಹೈದರಾಬಾದ್ ಕರ್ನಾಟಕ ರೀಜನ್, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ೨೦೧೧.

೩೮. ಶಾಹೀದ್ ಅಮೀನ್, ದಿಪೇಶ್ ಚಕ್ರಬೋರ್ತಿ(ಸಂ), ಸಬಾಲ್ಟರ್ನ್ ಸ್ಟಡೀಸ್, ಸಂಪುಟ-೯, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೯೬.

೩೯. ಶೌತನ್ ಜೆ.ಪಿ., ರೆವಲ್ಯೂಷನ್ ಆಫ್ ಮಿಸ್ಟಿಕ್ಸ್: ಆನ್ ಸಮ್ ಸೋಷಿಯಲ್ ಆಸ್ಪೆಕ್ಟಸ್ ಆಫ್ ವೀರಶೈವಿಸಂ, ಎಂಬಿಡಿ, ನ್ಯೂ ಡೆಲ್ಲಿ, ೧೯೯೫.

೪೦. ಸಿಂಗ್ ಕೆ.ಎಸ್., ಟ್ರೈಬಲ್ ಮೂವ್‌ಮೆಂಟ್ಸ್ ಇನ್ ಇಂಡಿಯಾ, ಮನೋಹರ್ ಪಬ್ಲಿಕೇಷನ್ಸ್, ದೆಹಲಿ, ೨೦೦೬.

೪೧. ವಾಲ್ಟರ್ ಫರ್ನಾಂಡೀಸ್, ದಿ ಎಮರ್‌ಜಿಂಗ್ ದಲಿತ್ ಐಡಿಂಟಿಟಿ, ದಿ ರಿಅಸರ್ಷನ್ ಆಫ್ ದಿ ಸಬಾಲ್ಟರ್ನ್ಸ್, ಇಂಡಿಯನ್ ಸೋಶಿಯಲ್ ಇನ್‌ಸ್ಟಿಟ್ಯೂಟ್, ನ್ಯೂ ಡೆಲ್ಲಿ, ೧೯೯೬.

೪೨. ವಿಲ್ಕಿನ್‌ಸನ್ ಟಿ.ಎಸ್. ಆ್ಯಂಡ್ ಥಾಮಸ್, ಅಂಬೇಡ್ಕರ್ ಅಂಡ್ ಎ ನಿಯೋ-ಬುದ್ಧಿಸ್ಟ್ ಮೂವ್‌ಮೆಂಟ್, ದಿ ಕ್ರಿಶ್ಚಿಯನ್ ಲಿಟರೇಚರ್ ಸೊಸೈಟಿ, ಮದ್ರಾಸಾ, ೧೯೭೨.

೪೩. ಯಾಜ್ದಾನಿ ಜಿ., ಬೀದರ್ ಇಟ್ಸ್ ಹಿಸ್ಟರಿ ಆ್ಯಂಡ್ ಮಾನುಮೆಂಟ್ಸ್, ಆಕ್ಸ್‌ಫರ್ಡ್ ಯೂನಿವರ್ಸಿಟಿ, ಲಂಡನ್, ೧೯೪೭.

## ೩. ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು

೧. ಅಕ್ಕಮ್ಮ ಟಿ., ಅಸಂಘಟಿತ ವಲಯದಲ್ಲಿ ಮಹಿಳಾ ಕೆಲಸಗಾರರು: ಒಂದು ಅಧ್ಯಯನ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯-೧೦.

೨. ಅಜ್ಜಯ್ಯ ಸಿ, ಹೈದರಾಬಾದ್ ಕರ್ನಾಟಕದ ಅಲೆಮಾರಿಗಳ ಸಮಾಜೋ-ಆರ್ಥಿಕ ವ್ಯವಸ್ಥೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೩. ಅನುಸೂಯ ಕಾಂಬಳೆ, ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಅಂಬೇಡ್ಕರ್ ಪ್ರಭಾವ, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೨೦೦೨.

೪. ಅಶ್ವಥ್ ಡಿ.ಎಸ್., ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫. ಉಷಾ ದೇಸಾಯಿ, ಫ್ರೀಡಂ ಮೂವ್‌ಮೆಂಟ್ ಇನ್ ರಾಯಚೂರ್ ಡಿಸ್ಟ್ರಿಕ್ಟ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪.

೬. ಕರಿಬಸಪ್ಪ ಎ., ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೭. ಕುಮಾರ್‌ಸ್ವಾಮಿ ಹೆಚ್., ದಲಿತ ಚಳವಳಿ ಮತ್ತು ಸಾಮಾಜಿಕ ನ್ಯಾಯ, ಕನ್ನಡ ವಿಭಾಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬.

೮. ಕುಮಾರ್ ಬಿ.ಪಿ., ದಾವಣಗೆರೆ ಹತ್ತಿ ಗಿರಣಿ ಕಾರ್ಮಿಕರ ಚಳವಳಿಗಳು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೯. ಗಾಂಧೀಜಿ ಚಂದ್ರಪ್ಪ, ಡಾ. ಬಿ.ಆರ್. ಅಂಬೇಡ್ಕರ್ ಆ್ಯಂಡ್ ವುಮೆನ್ ಎಂಪ್ಲಾಯ್‌ಮೆಂಟ್, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೭.

೧೦. ತುಕಾರಾಮ, ಸ್ವಾತಂತ್ರ್ಯಪೂರ್ವ ಹೈದರಾಬಾದ್ ಕರ್ನಾಟಕದ ಸಾಹಿತ್ಯ ಅಧ್ಯಯನ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೧. ನಾಗಭೂಷಣ ಗೌಡ, ಪ್ರಿನ್ಸ್‌ಲಿ ಸ್ಟೇಟ್ಸ್ ಆಫ್ ಹೈದರಾಬಾದ್ ಆ್ಯಂಡ್ ಮೈಸೂರು: ಪೊಲಿಟಿಕಲ್ ಮೂಮೆಂಟ್ಸ್ ಫಾರ್ ಇಂಟಿಗ್ರೇಶನ್ ಇನ್ ಟು ದಿ ಯೂನಿಯನ್ ಆ್ಯಂಡ್ ದಿ ಸ್ಟೇಟ್, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೯.

೧೨. ಪ್ರಭಾತ್ ಪದ್ಮಾ ನೈನಾ, ಫ್ರೀಡಂ ಮೂವ್‌ಮೆಂಟ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೨.

೧೩. ಮಲ್ಲಿಕಾರ್ಜುನ ನ. ಜಾಬಾ, ಗುಲಬರ್ಗಾ ಜಿಲ್ಲೆಯ ದಲಿತ ತತ್ವಪದಕಾರರು: ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨.

೧೪. ಮಹಾಬಲೇಶ್ವರಪ್ಪ ಬಿ.ಸಿ., ಇಂಟಿಗ್ರೇಶನ್ ಆಫ್ ಹೈದರಾಬಾದ್ ಕರ್ನಾಟಕ, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೨.

೧೫. ರಾಜಶೇಖರ ವಿ. ಬೀರನಹಳ್ಳಿ, ಇಂಪ್ಯಾಕ್ಟ್ ಆಫ್ ಬ್ಯಾಂಕ್ ಇರಿಗೇಷನ್ ಆನ್ ಅಗ್ರೀಕಲ್ಚರ್: ಎ ಕೇಸ್ ಸ್ಟಡೀ ಆಫ್ ಗುಲಬರ್ಗಾ ಡಿಸ್ಟ್ರಿಕ್ಟ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೦.

೧೬. ರಾಜಾ ಎಂ., ಫ್ರೀಡಂ ಫೈಟರ್ಸ್ ಆಫ್ ಗುಲಬರ್ಗಾ ಡಿಸ್ಟ್ರಿಕ್ಟ್, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬.

೧೭. ಸಂತೋಷ ಕುಮಾರ್ ಹೆಚ್.ಬಿ. ಹೈದರಾಬಾದ್ ಕರ್ನಾಟಕದಲ್ಲಿ ಸಾಮಾಜಿಕ ಚಳವಳಿಗಳು(ಸಮಕಾಲೀನ ಹಿನ್ನೆಲೆಯ ಅಧ್ಯಯನ), ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೧೮. ವಿಜಯಕುಮಾರ ಹೆಚ್. ಸಾಲಿಮನಿ, ಇರ್ರ್ಯಾಡಿಕೇಶನ್ ಆಫ್ ಅನ್‌ಟಚಬಿಲಿಟಿ ಇನ್ ಪೋಸ್ಟ್ ಇಂಡಿಪೆಂಡೆನ್ಸ್ ಕರ್ನಾಟಕ, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪.

೧೯. ವೆಂಕಟರಾವ್ ಪಾಲಟಿ, ರೋಲ್ ಆಫ್ ಫ್ರೀಡಂ ಫೈಟರ್ಸ್ ಇನ್ ಬೀದರ್ ಡಿಸ್ಟ್ರಿಕ್ಟ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨.

೨೦. ವೆಂಕಟೇಶಮೂರ್ತಿ, ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳವಳಿ ಮತ್ತು ಸಾಹಿತ್ಯ, ಭಾಷಾಂತರ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೧. ಶರಣಬಸವೇಶ್ವರ ವೀರಭದ್ರಪ್ಪ ಡಾಣಿ, ಪ್ರತಿಭಟನಾ ಸಿದ್ಧಾಂತಗಳ ನೆಲೆಯಲ್ಲಿ ಬುದ್ಧ, ಬಸವ, ಅಂಬೇಡ್ಕರ್, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೨. ಶಿವರಾಮ, ದಲಿತ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಲೋಕ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪.

೨೩. ಸಂಘ ಸೇನಾವರ್ಧನ್, ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ(ದಲಿತ ವಿಮೋಚನೆಯ, ಪರಿಕಲ್ಪನೆಗಳ ನೆಲೆಯಲ್ಲಿ), ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೪. ಸುಮಿತ್ರಾಬಾಯಿ ಎಸ್. ನಿರ್ಣಿ, ವುಮೆನ್ಸ್ ರೋಲ್ ಇನ್ ಕರ್ನಾಟಕ ಫ್ರೀಡಮ್ ಸ್ಟ್ರಗಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨.

೨೫. ಹುಚ್ಚೂಸಾಬ್ ಪಿ., ಬಳ್ಳಾರಿ ಜಿಲ್ಲಾ ಗಣಿ ಕಾರ್ಮಿಕರ ಸಮಾಜೋ–ಆರ್ಥಿಕ ಅಧ್ಯಯನ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

**೪. ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

೧. ಜಗನ್ನಾಥ ಸಿಂಧೆ, ಆರ್ಗನೈಸೇಷನ್ಸ್ ಆಫ್ ಶೆಡ್ಯೂಲ್ಡ್ ಕಾಸ್ಟ್ ಆ್ಯಂಡ್ ಸೋಷಿಯಲ್ ಚೇಂಜ್: ಎ ಶೋಷಿಯಲಾಜಿಕಲ್ ಸ್ಟಡಿ ಆಫ್ ಗುಲಬರ್ಗಾ, ಸಮಾಜಶಾಸ್ತ್ರ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨.

೨. ಮಂಜುಳಾ ಬಿ. ಚಿಂಚೋಳಿ, ಡಿಪ್ರೆಸ್ಡ್ ಕ್ಲಾಸಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ ಅಂಡರ್ ನಿಜಾಂ ಡಾಮಿನಿಯನ್ಸ್, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೯.

೩. ಮೀನಾಕ್ಷಿ ಬಾಳಿ, ಅನುಭಾವಿ ಕವಿ ಕಡಕೋಳ ಮಡಿವಾಳಪ್ಪ ಮತ್ತು ಅವರ ಶಿಷ್ಯರು: ಒಂದು ಅಧ್ಯಯನ, ಕನ್ನಡ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೫.

### ೫. ಅಪ್ರಕಟಿತ ಎಂ.ಫಿಲ್. ನಿಬಂಧಗಳು

೧. ಆಶಾಬಾಬು ಯಂಕಪ್ಪಗೋಳ, ಬಾಗಲಕೋಟೆ ಜಿಲ್ಲೆಯ ದಲಿತ ಚಳವಳಿ: ಒಂದು ಅವಲೋಕನ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೨. ಉಮಾದೇವಿ, ದಲಿತ ಚಿಂತನೆಗಳ ವಿಶ್ಲೇಷಣೆ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬-೦೭.

೩. ಗೀತಾ ಅಣ್ಣೆಪ್ಪ, ಕಮ್ಯೂನಿಸ್ಟ್ ಇನ್ ಗುಲಬರ್ಗಾ ಡಿಸ್ಟ್ರಿಕ್ಟ್, ರಾಜ್ಯಶಾಸ್ತ್ರ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೧೦.

೪. ಜೋಗಿನಕಟ್ಟೆ ವಿಠಲ, ಹೊಸಪೇಟೆ ತಾಲೂಕಿನ ಬಾಲಕಾರ್ಮಿಕರ ಸಾಮಾಜಿಕ ಸ್ಥಿತಿಗತಿಗಳು, ಮಾನವಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮-೦೯.

೫. ದೇಶಮಾನ್ಯ ಜಗ್ರಾತಿ ಬಿ., ಎ ಸ್ಟಡೀ ಆಫ್ ಫಿಮೇಲ್ ಅಗ್ರಿಕಲ್ಚರಲ್ ಲೇಬರರ್ಸ್ ಇನ್ ಗುಲಬರ್ಗಾ ಡಿಸ್ಟ್ರಿಕ್ಟ್, ಅರ್ಥಶಾಸ್ತ್ರ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೧.

೬. ನಾನಾಗೌಡ ಜಿ. ಮಾಲಿಪಾಟೀಲ್, ಗುಲಬರ್ಗಾ ಜಿಲ್ಲೆಯ ಜನಪದ ವೃತ್ತಿಗಾರರು: ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪-೯೫.

೭. ನಿವೇದಿತಾ ಎಸ್. ಸ್ವಾಮಿ, ಚಿತ್ತಾಪುರ ತಾಲೂಕಿನ ಶಾಸನಗಳು: ಸಾಂಸ್ಕೃತಿಕ ಅಧ್ಯಯನ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೮. ಪ್ರಹ್ಲಾದ್ ರೆಡ್ಡಿ ಬಿ., ಹೈದರಾಬಾದ್ ಕರ್ನಾಟಕ ಜೈನ ಕೇಂದ್ರಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೯.

೯. ಬಿರಾದಾರ ಸರೋಜಾ ವಿಶ್ವನಾಥ, ಬೀದರ್ ಜಿಲ್ಲೆಯ ಪುಣ್ಯಕ್ಷೇತ್ರಗಳು, ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನಾ ಕೇಂದ್ರ, ಬೀದರ್, ೨೦೦೯.

೧೦. ಮಹಾಬಲೇಶ್ವರಪ್ಪ ಬಿ.ಸಿ., ಪ್ರೊಫೈಲ್ ಆಫ್ ಚಂದ್ರಶೇಖರ ಪಾಟೀಲ, ಚರಿತ್ರೆ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೮.

೧೧. ಮಹೇಶ ಕುಮಾರ್ ಎಸ್. ಸಂಕನೂರು, ಗುಲ್ಬರ್ಗಾ ಎಂ.ಎಸ್.ಕೆ. ಮಿಲ್: ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೧೨. ರಾಜಶೇಖರ, ಚರಿತ್ರೆ ಲೇಖನಶಾಸ್ತ್ರ: ಗುಲಬರ್ಗಾ ಪ್ರದೇಶದ ಅಧ್ಯಯನ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯-೧೦.

೧೩. ವಿಜಯಲಕ್ಷ್ಮೀ, ಹಟ್ಟಿ ಚನ್ನದ ಗಣಿ: ಚಾರಿತ್ರಿಕ ಹಾಗೂ ಸಮಾಜೋ-ಆರ್ಥಿಕ ಅಧ್ಯಯನ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೧೪. ವಿಷ್ಣುವರ್ಧನ ಅರ್ಜುನ್ ಎಂ., ದಿ ರೋಲ್ ಆಫ್ ಡಿಎಸ್ಎಸ್ ಇನ್ ಕರ್ನಾಟಕ ಅಂಡರ್ ದಿ ಲೀಡರ್‌ಶಿಪ್ ಆಫ್ ಡಿ.ಜಿ. ಸಾಗರ್, ರಾಜ್ಯಶಾಸ್ತ್ರ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೭.

೧೫. ಶರಣಪ್ಪ ಉಮಚಗಿ, ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆ ಶಿಬಿರಗಳು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೧೬. ಶಶಿಧರ ಮಲ್ಲಪ್ಪ, ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ(ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕನ್ನು ಅನುಲಕ್ಷಿಸಿ), ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬-೦೭.

೧೭. ಶಶಿಕಾಂತ ಅಮಲಪ್ಪ ಬಿಲ್ಲವ, ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೧೮. ಶ್ರೀದೇವಿ ಎಸ್. ಹರ್‌ವಾಲ, ಅಗ್ರೀಕಲ್ಚರಲ್ ಡೆವಲಪ್‌ಮೆಂಟ್ ಇನ್ ಗುಲಬರ್ಗಾ ಡಿಸ್ಟ್ರಿಕ್ಟ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪.

೧೯. ಸವಿತ ಬಿ.ಸಿ., ರೈತ ಹೋರಾಟಗಾರ ಪ್ರೊ. ಎಂ.ಡಿ. ನಂಜುಂಡಸ್ವಾಮಿ: ಚಿಂತನೆಗಳ ವಿಶ್ಲೇಷಣೆ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮-೦೯.

೨೦. ಸುರೇಶಗೌಡ ಹೆಚ್., ವರದಕ್ಷಿಣೆ: ಒಂದು ಅಧ್ಯಯನ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೧. ಸುಭಾಷಚಂದ್ರ ದೊಡ್ಮನಿ, ಹೈದರಾಬಾದ್ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨೨. ಹಣಮಂತ್ರಾಯ, ಗುಲಬರ್ಗಾ ಜಿಲ್ಲೆಯ ರೈತ ಚಳವಳಿಗಳು: ಚಾರಿತ್ರಿಕ ಅಧ್ಯಯನ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯-೧೦.

## ೬. ಲೇಖನಗಳು

೧. ಆಶಾದೇವಿ ಎಂ.ಎಸ್., ಅಭಿನವ ದುರ್ಗೆ, ಮುಕ್ತಛಂದ, ಪ್ರಜಾವಾಣಿ, ೧೨.೦೭.೨೦೧೫.

೨. ಉಡುಪಿರಾವ್ ತಿಳಿಗೋಳ, ತುಂಗಭದ್ರಾ ಯೋಜನೆ ರೈತರ ಪಾಲಿಗೆ ಅಭದ್ರ, ಹೈದರಾಬಾದ್ ಕರ್ನಾಟಕ ವಿಶೇಷ ಪುರವಾಣಿ, ಸಂಯುಕ್ತ ಕರ್ನಾಟಕ, ೧೯.೧೧.೨೦೧೧.

೩. ಉಮಾಪತಿ ಡಿ., ಕಾಡುತ್ತಲೇ ಇದೆ ಕರಾಳ ಪರ್ವ, ಮುಕ್ತಛಂದ, ಪ್ರಜಾವಾಣಿ, ೨೫.೬.೨೦೧೭.

೪. ಓಂಕಾರ ಕಾಕಡೆ, ಸ್ತ್ರೀ-ಸ್ವಸಹಾಯ ಗುಂಪುಗಳು-ಮಹಿಳಾ ಸಬಲೀಕರಣದತ್ತ ದಾಪುಗಾಲು, ಜನಪದ, ಮಾರ್ಚ್ ೨೦೧೦.

